# ಶ್ರೀಮದಧ್ಯಾತ್ಮರಾಮಾಯಣೇ-ಸುಂದರಕಾಂಡ

## ಪ್ರಾರಂಭಃ.

ಶ್ರೀರಸ್ತು.

ರಾಮಚಂದ್ರ ಪರಬ್ರಹ್ಮಣೇನಮಃ.

# ಶ್ರೀಮದಧ್ಯಾತ್ಮರಾಮಾಯಣ್-ಸುಂದರಕಾಂಡ ಪ್ರಾರಂಭಃ.

ಮೂ॥ ಶ್ರೀಮಹಾದೇವಉವಾಚ ॥ ೧ ॥ ಶತಯೋಜನವಿಸ್ತೀರ್ಣಂಸಮುದ್ರಂಮಕರಾಲಯಂ । ಲಿಲಂಘಯಿಷುರಾನಂದ ಸಂದೋಹೋಮಾರುತಾತ್ಮಜಃ ॥ ೨ ॥ ಧ್ಯಾತ್ವಾರಾಮಂಪರಾತ್ಮಾನಮಿದಂವಚನಮಬ್ರವೀತ್ । ಪಶ್ಯಂತುವಾನರಾಸ್ಸರ್ವೇ

ಟೀ ॥ ಶ್ರೀಮಹಾದೇವೊವಾಚ-ಈಶ್ವರನು ಹೇಳುತ್ತಲಿದ್ದಾನೆ ॥ ೧ ॥ ಶತ-ನೂರು, ಯೋಜನ-ಗಾವುದದ, ವಿಸ್ತೀರ್ಣಂ-ವಿಸ್ತಾರವುಳ್ಳ, ಮಕರ-ಮೊಸಳೆಗಳಿಗೆ, ಆಲಯಂ-ಆವಾಸಸ್ಥಾನವಾದ, ಸಮುದ್ರಂ-ಸಮುದ್ರವನ್ನು, ಲಿಲಂಘಯಿಷುಃ-ದಾಟಲಿಚ್ಛೆಯುಳ್ಳವನಾಗಿ, ಆನಂದ-ಸಂತೋಷದ, ಸಂದೋಹಃ-ಸಮೂಹ ರೂಪನಾದ, ಮಾರುತ-ವಾಯುವಿಗೆ, ಆತ್ಮಜಃ-ಮಗನಾದ (ಆಂಜನೇಯನು,) ॥ ೨ ॥ ಪರಾತ್ಮಾನಂ-ಪರಮಾತ್ಮನಾದ, ರಾಮಂ-ರಾಮಚಂದ್ರನನ್ನು, ಧ್ಯಾತ್ವಾ-ಧ್ಯಾನ ಮಾಡಿ, ಇದಂ-ಈ, ವಚನಂ-ಮಾತನ್ನು, ಅಬ್ರ

ಗಚ್ಛಂತಂಮಾಂನಿಹಾಂಪುಸಾ ॥೩॥ ಅಮೋಘಂರಾಮನಿರ್ಮುಕ್ತಂಮಹಾಬಾಣಮಿವಾಖಿಲಾಃ। ಪಶ್ಯಾಮ್ಯದ್ಯೈವರಾಮ
ಸ್ಯಪತ್ನೀಂಜನಕನಂದಿನೀಂ ॥ ೪ ॥ ಕೃತಾರ್ಥೋಹಂಕೃತಾರ್ಥೋಹಂಪುನಃಪಶ್ಯಾಮಿರಾಘವಂ । ಪ್ರಾಣಪ್ರಯಾಣಸಮ
ಯೇಯಸ್ಯನಾಮಸಕೃತ್ಸ್ಮರೇತ್ ॥ ೫ ॥ ನರಸ್ತೀರ್ತ್ವಾಭವಾಂಬೋಧಿಮಪಾರಂಯಾತಿತತ್ಪದಂ । ಕಿಂಪುನಸ್ತಸ್ಯದೂತೋ
ಹಂತದಂಗಾಂಗುಳಿಮುದ್ರಿತಃ ॥ ೬ ॥ ಇತ್ಯುಕ್ತ್ವಾಹನೂಮಾನ್ಬಾಹೂಪ್ರಸಾರ್ಯಯತವಾಲಧಿಃ ॥ ೭ ॥ ಋಜುಗ್ರೀ
ವೋರ್ಧ್ವದೃಷ್ಟಿಸ್ಸನ್ನಾಕುಂಚಿತಪದದ್ವಯಃ । ದಕ್ಷಿಣಾಭಿಮುಖಸ್ತೂರ್ಣಂಪುಪ್ಲುವೇನಿಲವಿಕ್ರಮಃ ॥ ೮ ॥ ಆಕಾಶಾತ್ತ್ವೇ

ವೀತ-ಹೇಳಿದನು, ಸರ್ವೇ-ಎಲ್ಲಾ, ವಾನರಾಃ-ಕಪಿಗಳು, ವಿಹಾಯಸಾ-ಅಂತರಿಕ್ಷ ಮಾರ್ಗವಾಗಿ, ಗಚ್ಛಂತಂ-ಹೋಗುತ್ತಿರುವ, ಮಾಂ-ನನ್ನನ್ನು, ಪಶ್ಯಂತು-ನೋಡಲಿ ॥ ೩ ॥ ಅಮೋಘಂ-ವ್ಯರ್ಥವಲ್ಲದ, ರಾಮ-ರಾಮಚಂದ್ರನಿಂದ, ನಿರ್ಮುಕ್ತಂ-ಬಿಡಲ್ಪಟ್ಟ, ಮಹಾಬಾಣಮಿವ-ಉತ್ತಮವಾದ ಬಾಣದಂತೆ ಹೋಗುತ್ತಿರುವ ನನ್ನನ್ನು, ಅಖಿಲಾಃ-ಎಲ್ಲಾ ಕಪಿಗಳೂ (ನೋಡಲಿ,) ಅದ್ಯೈವ-ಈಗಲೇ, ರಾಮಸ್ಯ-ರಾಮಚಂದ್ರನಿಗೆ, ಪತ್ನೀಂ-ಹೆಂಡತಿಯಾದ, ಜನಕನಂದಿನೀಂ-ಸೀತೆಯನ್ನು, ಪಶ್ಯಾಮಿ-ನೋಡುತ್ತೇನೆ ॥ ೪ ॥ ಅಹಂ-ನಾನು, ಕೃತಾರ್ಥಃ-ಜಗನ್ಮಾತೆಯಾದ ಸೀತಾ ದರ್ಶನದಿಂದುಂಟಾದ ಐಹಿಕಾಮುಷ್ಮಿಕ ಪ್ರಯೋಜನ ವುಳ್ಳವನಾಗಿ, (ಕೃತಾರ್ಥಃ-ಕೃತ-ಮಾಡಲ್ಪಟ್ಟ, ಅರ್ಥಃ-ರಾಮಕಾರ್ಯವೆಂಬ ಫಲವುಳ್ಳವನಾಗಿ,) ಪುನಃ-ತಿರಿಗಿ, ರಾಘವಂ-ರಾಮಚಂದ್ರನನ್ನು, ಪಶ್ಯಾಮಿ-ನೋಡುತ್ತೇನೆ, ಪ್ರಾಣ-ಪ್ರಾಣಗಳ, ಪ್ರಯಾಣ-ಹೋಗುವ, ಸಮಯೇ-ಹೊತ್ತಿನಲ್ಲಿ, ಯಸ್ಯ-ಯಾವ ರಾಮಚಂದ್ರನ, ನಾಮ-ಹೆಸರನ್ನು, ಸಕೃತ್-ಒಂದಾವರ್ತಿ ಮಾತ್ರ, ಸ್ಮರೇತ್-ನೆನಸಿದವನಾಗಿ ॥ ೫ ॥ ನರಃ-ಮನುಷ್ಯನು, ಭವ-ಸಂಸಾರವೆಂಬ, ಅಂಬೋಧಿಂ-ಸಮುದ್ರವನ್ನು, ತೀರ್ತ್ವಾ-ದಾಟಿ, ಅಪಾರಂ-ಪಾರವಿಲ್ಲದ, ಅಂದರೆ ದೇಶ ಕಾಲ ವಸ್ತು ಪರಿಚ್ಛೇದ ಶೂನ್ಯವಾದ, ತತ್ಪದಂ-ಪರಮಾತ್ಮ ಸ್ವರೂಪವನ್ನು, ಯಾತಿ-ಹೊಂದುತ್ತಲಿದ್ದಾನೋ, ತಸ್ಯ-ಆ ರಾಮಚಂದ್ರನಿಗೆ, ದೂತಃ-ಸೇವಕನಾದ, ತದಂಗಾಗುಳಿ-ಆ ರಾಮಚಂದ್ರನ ಅಂಗವಾದ ಬೆರಳಿನಲ್ಲಿ ಇರುತ್ತಿದ್ದ, ಮುದ್ರಿಕಃ-ಉಂಗರ ವುಳ್ಳವನಾದ, ಅಹಂ-ನಾನು, ಕಿಂಪುನಃ-ಸಮುದ್ರವನ್ನು ದಾಟುವದಕ್ಕೆ ಹೇಳತಕ್ಕದ್ದೇನು ॥ ೬ ॥ ತಮೇವ-ಆ ರಾಮಚಂದ್ರನನ್ನೇ, ಹೃದಯೇ-ಮನಸ್ಸಿನಲ್ಲಿ, ಧ್ಯಾತ್ವಾ-ಧ್ಯಾನ ಮಾಡಿ, ಅಲ್ಪವಾರಿಧಿಂ-ಸ್ವಲ್ಪವಾದ ಸಮುದ್ರವನ್ನು, ಲಘಯಾಮಿ-ದಾಟುವವನಾಗುತ್ತೇನೆ, ಇತ್ಯುಕ್ತ್ವಾ-ಈ ಮಾತನ್ನು ಹೇಳಿ, ಹನುಮಾನ್-ಆಂಜನೇಯನು, ಬಾಹೂ-ತೋಳುಗಳನ್ನು, ಪ್ರಸಾರ್ಯ-ಚಾಚಿ, ಯತ-ಎತ್ತಲ್ಪಟ್ಟ, ವಾಲಧಿಃ-ಬಾಲವುಳ್ಳವನಾಗಿ ॥ ೭ ॥ ಋಜು-ಸಮವಾದ, ಗ್ರೀವಃ-ಕುತ್ತಿಗೆಯುಳ್ಳವನಾಗಿ, ಊರ್ಧ್ವ-ಮೇಲುಗಡೆಯಲ್ಲಿ, ದೃಷ್ಟಿಃ-ನೋಟವುಳ್ಳವನಾಗಿ, ಆಕುಂಚಿತ-ಸಂಕೋಚ ಮಾಡಲ್ಪ

ರಿತಂಪಶ್ಯೈರ್ವೀಕ್ಷ್ಯಮಾಣೋಜಗಾಮಸಃ । ದೃಷ್ಟ್ವಾನಿಲಸುತಂವೇಗಾದ್ಗಚ್ಛಂತಂವಾಯುವೇಗತಃ ॥ ೯ ॥ ಪರೀಕ್ಷಣಾ ರ್ಥಂಸತ್ವಸ್ಯವಾನರಸ್ಯೇದಮಬ್ರುವನ್ । ಗಚ್ಛತ್ಯೇಷಮಹಾಸತ್ವೋವಾನರೋವಾಯುವಿಕ್ರಮಃ ॥೧೦॥ ಲಂಕಾಂಪ್ರವೇಷ್ಟುಂ ಶಕ್ತೋವಾನವಾಜಾನೀಮಹೇಬಲಂ । ಏವಂವಿಚಾರ್ಯನಾಗಾನಾಂಮಾತರಂಸುರಸಾಭಿದಾಂ ॥ ೧೧ ॥ ಅಬ್ರುವೀದ್ದೇವತಾ ಬೃಂದಃಕೌತೂಹಲಸಮನ್ವಿತಃ । ಗಚ್ಛತ್ವಂವಾನರೇಂದ್ರಸ್ಯಕಿಂಚಿದ್ವಿಘ್ನಂಸಮಾಚರ ॥ ೧೨ ॥ ಜ್ಞಾತ್ವಾತಸ್ಯಬಲಂಬು ದ್ಧಿಂಪುನರೇಹಿತ್ವರಾನ್ವಿತಾ । ಇತ್ಯುಕ್ತಾಸಾಯಯೌಶೀಘ್ರಂ ಹನೂಮದ್ವಿಘ್ನಕಾರಣಾತ್ ॥ ೧೩ ॥ ಆವೃತ್ಯಮಾರ್ಗಂ

ತೂರ್ಣಂ-ಜಾಗ್ರತೆಯಾಗಿ, ಪುಷ್ಪವೃಷ್ಟಿ-ಹಾರಿದನು ॥ ೮ ॥ ಸಃ-ಆ ಆಂಜನೇಯನು, ಆಕಾಶಾತ್-ಆಕಾಶ ದೇಶದ ಕಡೆಯಿಂದ, ದೈವೈಃ-ದೇವತೆಗಳಿಂದ, ವೀಕ್ಷ್ಯಮಾಣಃ-ನೋಡಲ್ಪಟ್ಟವನಾಗಿ, ಜಗಾಮ-ಹೊರಟು ಹೋದನು, ವಾಯುವೇಗತಃ-ಗಾಳಿಯ ವೇಗದಂತೆ, ವೇಗಾತ್-ವೇಗವಾಗಿ, ಗಚ್ಛಂತಂ-ಹೋಗುತ್ತಲಿರುವ, ಅನಿಲ-ವಾಯುವಿಗೆ, ಸುತಂ-ಮಗನಾದ ಆಂಜನೇಯನನ್ನು, ದೃಷ್ಟ್ವಾ-ನೋಡಿ ॥ ೯ ॥ ವಾನರಸ್ಯ-ಕಪಿಯಾದ ಆಂಜನೇಯನ, ಸತ್ವಸ್ಯ-ಬಲದ, ಪರೀಕ್ಷಣಾರ್ಥಂ-ಪರೀಕ್ಷೆ ಮಾಡುವದಕ್ಕೋಸ್ಕರವಾಗಿ, ಇದಂ-ಈ ಮಾತನ್ನು, ಅಬ್ರುವನ್-ದೇವತೆಗಳು ಹೇಳಿದರು, ಮಹಾಸತ್ವಃ-ಅಧಿಕ ಬಲನಾದ, ವಾಯು-ಗಾಳಿಯಂತೆ, ವಿಕ್ರಮಃ-ಸಾಮರ್ಥ್ಯ ಉಳ್ಳವನಾದ, ಏಷಃ-ಈ, ವಾನರಃ-ಆಂಜನೇಯನು, ಗಚ್ಛತಿ-ಲಂಕಾ ಪಟ್ಟಣವನ್ನು ಕುರಿತು ಹೋಗುತ್ತಲಿದ್ದಾನೆ ॥ ೧೦ ॥ ಲಂಕಾಂ-ಲಂಕಾ ಪಟ್ಟಣವನ್ನು, ಪ್ರವೇಷ್ಟುಂ-ಪ್ರವೇಶಿಸುವದಕ್ಕೆ, ಶಕ್ತೋವಾನವಾ-ಸಮರ್ಥನಾದವನೋ ಅಲ್ಲವೋ, ಬಲಂ-ಈತನ ಬಲವನ್ನು, ಜಾನೀಮಹೇ-ತಿಳಿಯೋಣ, ಏವಂ-ಈ ರೀತಿಯಾಗಿ, ವಿಚಾರ್ಯ-ಆಲೋಚಿಸಿ, ಸುರಸಾಭಿದಾಂ-ಸುರಸೆ ಯೆಂಬ ಹೆಸರುಳ್ಳ, ನಾಗಾನಾಂ-ಸರ್ಪಗಳಿಗೆ, ಮಾತರಂ-ತಾಯಿಯನ್ನು ಕುರಿತು ॥ ೧೧ ॥ ಕೌತೂಹಲ-ಆಂಜನೇಯನ ಬಲವನ್ನು ಪರೀಕ್ಷಿಸಬೇಕೆಂಬ ಕುತುಕದಿಂದ, ಸಮನ್ವಿತಃ-ಕೂಡಿರುವ, ದೇವತಾಬೃಂದಃ-ದೇವ ಸಮೂಹವು, ಅಬ್ರುವೀತ್-ಹೇಳಿತು, ತ್ವಂ-ನೀನು, ಗಚ್ಛ-ಹೋಗು, ವಾನರೇಂದ್ರಸ್ಯ-ಕಪಿಶ್ರೇಷ್ಠನಾದ ಆಂಜನೇಯನಿಗೆ, ಕಿಂಚಿತ್-ತುಸವಾಗಿ, ವಿಘ್ನಂ-ಪ್ರಯಾಣಕ್ಕೆ ಅಡ್ಡಿಯನ್ನು, ಸಮಾಚರ-ಮಾಡು ॥ ೧೨ ॥ ತಸ್ಯ-ಆಂಜನೇಯನ, ಬಲಂ-ಶಕ್ತಿಯನ್ನೂ, ಬುದ್ಧಿಂ-ಜ್ಞಾನವನ್ನೂ, ಜ್ಞಾತ್ವಾ-ತಿಳಿದು, ತ್ವರಾ-ಜಾಗ್ರತೆಯಿಂದ, ಅನ್ವಿತಾ-ಕೂಡಿದವಳಾಗಿ, ಪುನಃ-ತಿರಿಗಿ, ಏಹಿ-ಬಾ, ಇತ್ಯುಕ್ತಾ-ಹೀಗೆ ಹೇಳಲ್ಪಟ್ಟವಳಾಗಿ, ಸಾ-ಆ ಸುರಸೆಯು, ಹನೂಮತ್-ಆಂಜನೇಯನಿಗೆ, ವಿಘ್ನ-ಪ್ರಯಾಣ ವಿಘ್ನವನ್ನು ಮಾಡುವ, ಕಾರಣಾತ್-ನಿಮಿತ್ತದಿಂದ, ಶೀಘ್ರಂ-ಬೇಗನೆ, ಯಯೌ-ಹೊರಟು ಹೋದಳು ॥ ೧೩ ॥ ಮಾರ್ಗ-ದಾರಿಯನ್ನು, ಆವೃತ್ಯ-ಆವರಿಸಿಕೊಂಡು, ಪುರತಃ-ಮುಂದುಗಡೆ, ಸ್ಥಿತ್ವಾ-ಇದ್ದು, ವಾನರಂ-ಆಂಜನೇಯನನ್ನು ಕುರಿತು, ಅಬ್ರುವೀತ್-ಹೇಳಿದಳು, ಮಹಾಮತೇ-ಮಹಾ ಬುದ್ಧಿವಂತನಾದ ಆಂಜನೇಯನೇ, ಏಹಿ-ಬಾ, ಮೇ-ನನ್ನ, ವದನಂ-ಮುಖವನ್ನು, ಶೀಘ್ರಂ-ಬೇಗನೆ, ಪ್ರವಿಶ-ಹೋಗು

ಪುರತಃಸ್ಥಿತ್ವಾವಾನರಮಬ್ರವೀತ್ । ಏಹಿಮೆವದನಂಶೀಘ್ರಂಪ್ರವಿಶಸ್ವಮಹಾಮತೆ ॥ ೧೪ ॥ ದೇವೈಸ್ತ್ವಂಕಲ್ಪಿತೋಭಕ್ಷ್ಯಃ ಕ್ಷುಧಾಸಂಪೀಡಿತಾತ್ಮನಃ । ತಾಮಾಹಹನುಮಾನ್ಮಾತರಹಂರಾಮಸ್ಯಶಾಸನಾತ್ ॥೧೫॥ ಗಚ್ಛಾಮಿಜಾನಕೀಂದ್ರಷ್ಟುಂ ಪುನರಾಗಮ್ಯಸತ್ವರಃ । ರಾಮಾಯಕುಶಲಂತಸ್ಯಾಃಕಥಯಿತ್ವಾತ್ವದಾನನಂ ॥ ೧೬॥ ನಿವೇಕ್ಷ್ಯೇದೇಹಿಮೆಮಾರ್ಗಂಸುರಸಾ ಯೈನಮೊಸ್ತುತೆ । ಇತ್ಯುಕ್ತಾಪುನರೇವಾಹಸುರಸಾಕ್ಷುಧಿತಾಸ್ಮ್ಯಹಂ ॥ ೧೭ ॥ ಪ್ರವಿಶ್ಯಗಚ್ಛಮೆವಕ್ತ್ರಂನೋಚೆತ್ವಾಂ ಭಕ್ಷಯಾಮ್ಯಹಂ । ಇತ್ಯುಕ್ತೋಹನುಮಾನಾಹ ಮುಖಂಶೀಘ್ರಂವಿದಾರಯ ॥ ೧೮ ॥ ಪ್ರವಿಶ್ಯವದನಂತೆದ್ಯಗಚ್ಛಾಮಿತ್ವ ರಯಾನ್ವಿತಃ । ಇತ್ಯುಕ್ತ್ವಾಯೋಜನಾಯಾಮದೆಹೋಭೂತ್ವಾಪುರಸ್ಥಿತಃ ॥ ೧೯ ॥ ದೃಷ್ಟ್ವಾಹನುಮತೋರೂಪಂಸುರ

ಸನಾಗು ॥ ೧೪ ॥ ಕ್ಷುಧಾ-ಹಸಿವಿನಿಂದ, ಸಂಪೀಡಿತ-ಬಾಧೆ ಪಡುವ, ಆತ್ಮನಃ-ಜೀವಾತ್ಮನುಳ್ಳ (ನನಗೆ,) ತ್ವಂ-ನೀನು, ದೇವೈಃ-ದೇವತೆಗಳಿಂದ, ಕಲ್ಪಿತಃ-ನನಗಾಗಿ ಉಂಟುಮಾ ಡಲ್ಪಟ್ಟ, ಭಕ್ಷ್ಯಃ-ಆಹಾರವಾಗಿದ್ದೀ, ತಾಂ-ಆ ಸುರಸೆಯನ್ನು ಕುರಿತು, ಹನೂಮಾನ್-ಆಂಜನೇಯನು, ಆಹ-ಹೇಳಿದನು, ಮಾತಃ-ಎಲೈ ತಾಯಿಯೇ, ಅಹಂ-ನಾನು, ರಾಮಸ್ಯ-ರಾಮಚಂದ್ರನ, ಶಾಸನಾತ್-ಅಪ್ಪಣೆಯಿಂದ ॥ ೧೫ ॥ ಜಾನಕೀಂ-ಸೀತೆಯನ್ನು, ದ್ರಷ್ಟುಂ-ನೋಡಲು, ಗಚ್ಛಾಮಿ-ಹೋಗುತ್ತಲಿದ್ದೇನೆ, ಪುನಃ-ತಿರಿಗಿ, ಸತ್ವರಃ-ಜಾಗ್ರತೆಯುಳ್ಳವನಾಗಿ, ಆಗಮ್ಯ-ಬಂದು, ತಸ್ಯಾಃ-ಆ ಸೀತೆಯ, ಕುಶಲಂ-ಕ್ಷೇಮವನ್ನು, ರಾಮಾಯ-ರಾಮಚಂದ್ರನಿಗೆ, ಕಥಯಿತ್ವಾ-ಹೇಳಿ, ತ್ವತ್-ನಿನ್ನ, ಆನನಂ-ಬಾಯಿಯನ್ನು ॥ ೧೬ ॥ ನಿವೇಕ್ಷ್ಯೇ-ಪ್ರವೇಶಿಸುತ್ತೇನೆ, ಮೆ-ನನಗೆ, ಮಾರ್ಗಂ-ದಾರಿಯನ್ನು, ದೇಹಿ-ಕೊಡು, ಸುರಸೆಯೆಂಬ ಹೆಸರುಳ್ಳ, ತೆ-ನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ, ಇತ್ಯುಕ್ತ್ವಾ-ಹೀಗೆ ಹೇಳಲ್ಪಟ್ಟವಳಾದ, ಸುರಸಾ, ಸುರಸೆಯು, ಪುನರೇವ-ತಿರಿಗಿಯೇ, ಆಹ-ಹೇಳಿದಳು, ಅಹಂ-ನಾನು, ಕ್ಷುಧಿತಾ-ಹಸಿವಿಯುಳ್ಳವಳು, ಅಸ್ಮಿ-ಆಗಿದ್ದೇನೆ ॥ ೧೭ ॥ ಮೆ-ನನ್ನ, ವಕ್ತ್ರಂ-ಬಾಯಿಯನ್ನು, ಪ್ರವಿಶ್ಯ-ಹೊಕ್ಕು, ಗಚ್ಛ-ಹೋಗು, ನೋಚೆತ್-ಹಾಗೆ ಮಾಡದೆ ಇದ್ದರೆ, ತ್ವಾಂ-ನಿನ್ನನ್ನು, ಅಹಂ-ನಾನು, ಭಕ್ಷ್ಯಾಮಿ-ತಿನ್ನುತ್ತೇನೆ, ಇತ್ಯುಕ್ತಃ-ಹೀಗೆ ಹೇಳಲ್ಪಟ್ಟವನಾಗಿ, ಹನೂಮಾನ್-ಆಂಜನೇಯನು, ಶೀಘ್ರಂ-ತ್ವರೆಯಾಗಿ, ಮುಖಂ-ಮುಖವನ್ನು, ವಿದಾರಯ-ವಿಸ್ತಾರ ಮಾಡು ॥ ೧೮ ॥ ತೆ-ನಿನ್ನ, ವದನಂ-ಬಾಯಿಯನ್ನು, ಪ್ರವಿಶ್ಯ-ಹೊಕ್ಕು, ತ್ವರಯಾ-ಜಾಗ್ರತೆಯಿಂದ, ಅನ್ವಿತಃ-ಕೂಡಿದವನಾಗಿ, ಗಚ್ಛಾಮಿ-ಹೋಗುತ್ತಲಿದ್ದೇನೆ, ಇತಿ-ಹೀಗೆ, ಉಕ್ತ್ವಾ-ಹೇಳಿ, ಯೋಜನ-ಗಾವುದ ವಿಸ್ತಾರವಾದ, ದೇಹಃ-ಶರೀರವುಳ್ಳವನು, ಭೂತ್ವಾ-ಆಗಿ, ಪುರಃ-ಮುಂನುಗಡೆ, ಸ್ಥಿತಃ-ಇದ್ದವನಾದನು ॥೧೯॥ ಹನುಮತಃ-ಆಂಜನೇಯನ, ರೂಪಂ-ಆಕಾರವನ್ನು, ದೃಷ್ಟ್ವಾ-ನೋಡಿ, ಸುರಸಾ-ಸುರಸೆಯು, ಮುಖಂ-ಬಾಯಿಯನ್ನು, ಪಂಚಯೋಜನಂ-ಐದು ಗಾವುದದ ವಿಸ್ತಾರವಾಗಿ, ಚಕಾರ-ಮಾಡಿದಳು, ಹನುಮಾನ್-ಆಂಜನೇಯನು, ದ್ವಿಗುಣಂ-ಸುರಸೆಯ ರೂಪಕ್ಕೆ ಇಮ್ಮಡಿಯಾದ,

ಸಾ ಪಂಚಯೋಜನಂ । ಮುಖಂ ಚಕಾರ ಹನುಮಾನ್ ದ್ವಿಗುಣಂ ರೂಪಮಾದಧತ್ ॥ ೨೦ ॥ ತತಶ್ಚಕಾರ ಸುರಸಾ ಯೋಜನಾನಾಂ ಚ ವಿಂಶತಿಂ । ವಕ್ತ್ರಂ ಚಕಾರ ಹನುಮಾನ್ ತ್ರಿಂಶದ್ಯೋಜನಸಮ್ಮಿತಂ ॥ ೨೧ ॥ ತತಶ್ಚಕಾರ ಸುರಸಾ ಪಂಚಾಶದ್ಯೋಜನಾಯತಂ । ವಕ್ತ್ರಂ ತದಾ ಹನೂಮಾಂಸ್ತು ಬಭೂವಾಂಗುಷ್ಠಸನ್ನಿಭಃ ॥ ೨೨ ॥ ಪ್ರವಿಶ್ಯ ವದನಂ ತಸ್ಯಾಃ ಪುನರೇತ್ಯ ಪುರಸ್ಥಿತಃ । ಪ್ರವಿಷ್ಟೋ ನಿರ್ಗತೋಽಹಂ ತೇ ವದನಂ ದೇವಿ ತೇ ನಮಃ ॥ ೨೩ ॥ ಏವಂ ವದಂತಂ ದೃಷ್ಟ್ವಾ ಸಾ ಹನೂಮಂತಮಥಾಬ್ರವೀತ್ । ಗಚ್ಛ ಸಾಧಯ ರಾಮಸ್ಯ ಕಾರ್ಯಂ ಬುದ್ಧಿಮತಾಂ ವರ ॥ ೨೪ ॥ ದೇವೈಸ್ಸಂಪ್ರೇಷಿತಾಹಂ ತೇ ಬಲಂ ಜಿಜ್ಞಾಸುಭಿಃ ಕಪೇ । ದೃಷ್ಟ್ವಾ ಸೀತಾಂ ಪುನರ್ಗತ್ವಾ ರಾಮಂ ದ್ರಕ್ಷ್ಯಸಿ ಗಚ್ಛ ಭೋ ॥ ೨೫ ॥ ಇತ್ಯುಕ್ತ್ವಾ ಸಾ ಯಯೌ ದೇವಲೋಕಂ ವಾ

ರೂಪಂ-ಹತ್ತು ಯೋಜನದ ಆಕೃತಿಯನ್ನು, ಆದಧತ್-ಧರಿಸಿದನು ॥ ೨೦ ॥ ತತಃ-ಆ ಬಳಿಕ, ಸುರಸಾ-ಸುರಸೆಯು, ಯೋಜನಾನಾಂ ಚ-ಯೋಜನಗಳ, ವಿಂಶತಿಂ-ಇಪ್ಪತ್ತು ಗಾವುದ ವಿಸ್ತಾರವಾದದ್ದನ್ನಾಗಿ, ವಕ್ತ್ರಂ-ಬಾಯಿಯನ್ನು, ಚಕಾರ-ಮಾಡಿದಳು, ಹನುಮಾನ್-ಆಂಜನೇಯನು, (ತನ್ನ ರೂಪವನ್ನು) ತ್ರಿಂಶದ್ಯೋಜನ-ಮುವ್ವತ್ತು ಗಾವುದ ಪ್ರಮಾಣದ ವರೆಗೆ, ಸಮ್ಮಿತಂ-ವಿಸ್ತಾರವಾದದ್ದನ್ನಾಗಿ, ಚಕಾರ-ಮಾಡಿದನು ॥ ೨೧ ॥ ತತಃ-ಆ ಬಳಿಕ, ಸುರಸಾ-ಸುರಸೆಯು, ವಕ್ತ್ರಂ-ತನ್ನ ಬಾಯಿಯನ್ನು, ಪಂಚಾಶತ್-ಐವತ್ತು ಯೋಜನ-ಗಾವುದದ, ಆಯತಂ-ವಿಸ್ತಾರವುಳ್ಳದ್ದನ್ನಾಗಿ, ಚಕಾರ-ಮಾಡಿದಳು, ತದಾ-ಆಗ, ಹನೂಮಾನ್-ಆಂಜನೇಯನು, ಅಂಗುಷ್ಠಸನ್ನಿಭಃ-ಹೆಬ್ಬೆಟ್ಟಿಗೆ ಸಮವಾದ ಆಕಾರವುಳ್ಳವನು, ಬಭೂವ-ಆದನು ॥ ೨೨ ॥ ತಸ್ಯಾಃ-ಆ ಸುರಸೆಯು, ವದನಂ-ಬಾಯಿಯೊಳಗೆ, ಪ್ರವಿಶ್ಯ-ಪ್ರವೇಶಿಸಿ, ಪುನಃ-ತಿರಿಗಿ, ಏತ್ಯ-ಈಚೆಗೆ ಬಳಿಗಿಂದ ಬಂದು, ಪುರಃ-ಮುಂದೆ, ಸ್ಥಿತಃ-ಇರತಕ್ಕವನು, ಹೇದೇವಿ-ಎಲೈ ಸುರಸೆಯೇ, ಅಹಂ-ನಾನು, ತೇ-ನಿನ್ನ, ವದನಂ-ಬಾಯಿಯನ್ನು, ಪ್ರವಿಷ್ಟಃ-ಹೊಕ್ಕವನಾಗಿ, ನಿರ್ಗತಃ-ಈಚೆಗೆ ಬಂದವನಾಗಿದ್ದೇನೆ, ತೇ-ನಿನಗೆ, ನಮಃ-ನಮಸ್ಕಾರವು ॥ ೨೩ ॥ ಏವಂ-ಈ ಪ್ರಕಾರವಾಗಿ, ವದಂತಂ-ಹೇಳುತ್ತಿರುವ, ಹನೂಮಂತಂ-ಆಂಜನೇಯನನ್ನು, ಸಾ-ಆ ಸುರಸೆಯು, ದೃಷ್ಟ್ವಾ-ನೋಡಿ, ತಂ-ಆಂಜನೇಯನನ್ನು ಕುರಿತು, ಅಥ-ಆ ಮೇಲೆ, ಅಬ್ರವೀತ್-ಹೇಳಿದಳು, ಬುದ್ಧಿಮತಾಂ-ಜ್ಞಾನಿಗಳೊಳಗೆ, ವರ-ಶ್ರೇಷ್ಠನಾದ (ಆಂಜನೇಯನೇ) ಗಚ್ಛ-ಹೋಗು, ರಾಮಸ್ಯ-ರಾಮಚಂದ್ರನ, ಕಾರ್ಯಂ-ಕೆಲಸವನ್ನು, ಸಾಧಯ-ಸಾಧಿಸು ॥ ೨೪ ॥ ಅಹಂ-ನಾನು, ತೇ-ನಿನ್ನ, ಬಲಂ-ಸಾಮರ್ಥ್ಯವನ್ನು, ಜಿಜ್ಞಾಸುಭಿಃ-ತಿಳಿಯಲಿಚ್ಛೆಯುಳ್ಳ, ದೇವೈಃ-ದೇವತೆಗಳಿಂದ, ಸಂಪ್ರೇಷಿತಾ-ಕಳುಹಿಸಲ್ಪಟ್ಟವಳಾಗಿದ್ದೇನೆ, ಭೋ ಕಪೇ-ಮಹನೀಯನಾದ ಅಂಜನೇಯನೇ, ಸೀತಾಂ-ಸೀತೆಯನ್ನು, ದೃಷ್ಟ್ವಾ-ನೋಡಿ, ಪುನಃ-ತಿರಿಗಿ, ಗತ್ವಾ-ಹೋಗಿ, ರಾಮಂ-ರಾಮಚಂದ್ರನನ್ನು, ದ್ರಕ್ಷ್ಯಸಿ-ನೋಡುತ್ತಲಿದ್ದೀ, ಗಚ್ಛ-ಹೋಗು ॥ ೨೫ ॥ ಇತಿ-ಹೀಗೆಂದು, ಉಕ್ತ್ವಾ-ಹೇಳಿ, ಸಾ-ಆ ಸುರಸೆಯು, ದೇವಲೋಕಂ-ಸ್ವರ್ಗಲೋಕವನ್ನು ಕುರಿತು, ಯಯೌ-ಹೊರ

ಯುಸುತಃಪುನಃ । ಜಗಾಮವಾಯುಮಾರ್ಗೇಣಗರುತ್ಮಾನಿವಪಕ್ಷಿರಾಟ್ ॥ ೨೬ ॥ ಸಮುದ್ರೋಪ್ಯಾಹಮೈನಾಕಂ ಮಣಿ
ಕಾಂಚನಪರ್ವತಂ । ಗಚ್ಛತ್ಯೇಷಮಹಾಸತ್ವೋ ಹನೂಮಾನ್ಮಾರುತಾತ್ಮಜಃ ॥ ೨೭ ॥ ರಾಮಸ್ಯಕಾರ್ಯಸಿದ್ಧ್ಯರ್ಥಂ ತ
ಸ್ಯತ್ವಂಸಚಿವೋಭವ । ಸಗರೈರ್ವರ್ಧಿತೋಯಸ್ಮಾತ್ಪುರಾಹಂಸಾಗರೋಭವಂ ॥ ೨೮ ॥ ತಸ್ಯಾನ್ವಯೇಬಭೂವಾಸೌ ರಾ
ಮೋದಾಶರಥಿಃಪ್ರಭುಃ । ತಸ್ಯಕಾರ್ಯಾರ್ಥಸಿದ್ಧ್ಯರ್ಥಂಗಚ್ಛತ್ಯೇಷಮಹಾಕಪಿಃ ॥ ೨೯ ॥ ತ್ವಮುತ್ತಿಷ್ಠಜಲಾತ್ತೂರ್ಣಂ
ತ್ವಯಿವಿಶ್ರಮ್ಯಗಚ್ಛತು । ಸತಥೇತಿಪ್ರಾದುರಭೂಜ್ಜಲಮಧ್ಯಾನ್ಮಹೋನ್ನತಃ ॥ ೩೦ ॥ ನಾನಾಮಣಿಮಯೈಶ್ಶೃಂಗೈ

ಟು ಹೋದಳು, ವಾಯುಸುತಃ-ವಾಯುಪುತ್ರನಾದ ಆಂಜನೇಯನು, ಪುನಃ-ತಿರಿಗಿ, ವಾಯುಮಾರ್ಗೇಣ-ಆಕಾಶ ಮಾರ್ಗದಿಂದ, ಪಕ್ಷಿರಾಟ್-ಪಕ್ಷಿಗಳಿಗೆ ದೊರೆಯಾದ, ಗರುತ್ಮಾನಿವ-ಗರುಡನಂತೆ, ಜಗಾಮ-ಹೊರಟು ಹೋದನು ॥ ೨೬ ॥ ಮಣಿ-ರತ್ನ ಮಯವಾದ, ಕಾಂಚನ-ಸ್ವರ್ಣ ಮಯವಾದ, ಪರ್ವತಂ-ಬೆಟ್ಟವಾಗಿರುವ, ಮೈನಾಕಂ-ಮೈನಾಕ ಪರ್ವತವನ್ನು ಕುರಿತು, ಸಮುದ್ರೋಪಿ-ಸಮುದ್ರನೂ, ಆಹ-ಹೇಳಿದನು, ಮಹಾಸತ್ವಃ-ಮಹಾ ಬಲನಾದ, ಮಾರುತಾತ್ಮಜಃ-ವಾಯು ಪುತ್ರನಾದ, ಏಷಃ-ಈ, ಹನುಮಾನ್-ಆಂಜನೇಯನು ॥ ೨೭ ॥ ರಾಮಸ್ಯ-ರಾಮಚಂದ್ರನ, ಕಾರ್ಯ-ಸೀತೆಯನ್ನು ಗೊತ್ತು ಮಾಡುವ ಕೆಲಸದ, ಸಿದ್ಧ್ಯರ್ಥಂ-ಆಗುವಿಕೆಗಾಗಿ, ಗಚ್ಛತಿ-ಹೋಗುತಲಿದ್ದಾನೆ, ತಸ್ಯ-ಆಂಜನೇಯನಿಗೆ, ತ್ವಂ-ನೀನು, ಸಚಿವಃ-ಸಹಾಯ ಮಾಡುವ ಮಿತ್ರನು, ಭವ-ಆಗು, ಪುರಾ-ಹಿಂದಕ್ಕೆ, ಸಗರೈಃ-ಸಗರ ಚಕ್ರವರ್ತಿಯ ಮಕ್ಕಳಿಂದ, ವರ್ಧಿತಃ-ವೃದ್ಧಿಯನ್ನು ಹೊಂದಿದವನು, ಯಸ್ಮಾತ್-ಯಾವ ಕಾರಣದಿಂದ (ಆಗಿದ್ದೇನೋ) (ತಸ್ಮಾತ್-ಆ ನಿಮಿತ್ತದಿಂದ,) ಅಹಂ-ನಾನು, ಸಾಗರಃ-ಸಾಗರನೆಂಬ ಹೆಸರುಳ್ಳವನು, ಅಭವಂ-ಆಗಿದ್ದೇನೆ ॥ ೨೮ ॥ ಪ್ರಭುಃ-ಸ್ವಾಮಿಯಾದ, ಅಸೌ-ಈ, ರಾಮಃ-ರಾಮಚಂದ್ರನು, ತಸ್ಯ-ಆ ಸಗರ ಚಕ್ರವರ್ತಿಯ, ಅನ್ವಯೇ-ವಂಶದಲ್ಲಿ, ದಾಶರಥಿಃ-ದಶರಥ ರಾಯನಿಗೆ ಮಗನು, ಬಭೂವ-ಆದನು, ಏಷಃ-ಈ, ಮಹಾಕಪಿಃ-ಆಂಜನೇಯನು, ತಸ್ಯ-ಆ ರಾಮಚಂದ್ರನ, ಕಾರ್ಯ-ಕೆಲಸದ, ಅರ್ಥ-ಪ್ರಯೋಜನದ, ಸಿದ್ಧ್ಯರ್ಥಂ-ಆಗುವಿಕೆಗೋಸ್ಕರ, ಗಚ್ಛತಿ-ಹೋಗುತಲಿದ್ದಾನೆ ॥ ೨೯ ॥ ತ್ವಂ-ನೀನು, ತೂರ್ಣಂ-ಬೇಗನೆ, ಜಲಾತ್-ನೀರಿನೊಳಗಿನಿಂದ, ಉತ್ತಿಷ್ಠ-ಮೇಲಕ್ಕೆ ಏಳು, ತ್ವಯಿ-ನಿನ್ನಲ್ಲಿ, ವಿಶ್ರಮ್ಯ-ಆಯಾಸವನ್ನು ಪರಿಹಾರ ಮಾಡಿಕೊಂಡು, ಗಚ್ಛತು-ಹೋಗಲಿ, ಸಃ-ಆ ಮೈನಾಕ ಪರ್ವತವು, ಮಹೋನ್ನತಃ-ಅತಿ ಉದ್ದವಾದವನಾಗಿ, ತಥೇತಿ-ಹಾಗೆಯೇ ಆಗಲೆಂದು, ಜಲಮಧ್ಯಾತ್-ನೀರಿನೊಳಗಿನಿಂದ, ಪ್ರಾದುರಭೂತ್-ಎದ್ದು ಕಾಣಿಸಿಕೊಂಡನು ॥ ೩೦ ॥ ನಾನಾ-ಬಗೆ ಬಗೆಯಾದ, ಮಣಿಮಯೈಃ-ಮಣಿ ವಿಕಾರಗಳಾದ, ಶೃಂಗೈಃ-ಶಿಖರಗಳಿಂದ (ಕೂಡಿದ ಪರ್ವತ ರೂಪವಾಗಿ,) ತಸ್ಯ-ಆ ಪರ್ವತದ, ಉಪರಿ-ಮೇಲೆ,

ಸ್ತ್ವನ್ಯೋಪರಿನರಾಕೃತಿಃ । ಪ್ರಾಹಯಾಂತಂಹನೂಮಂತಂ ಮೈನಾಕೋಹಂಮಹಾಕಪೇ ॥೩೦॥ ಸಮುದ್ರೇಣಸಮಾದಿಷ್ಟ ಸ್ತ್ವದ್ವಿಶ್ರಾಮಾಯಮಾರುತೇ । ಆಗಚ್ಛಾಮೃತಕಲ್ಪಾನಿಜಗ್ಧ್ವಾಪಕ್ವಫಲಾನಿಮೇ ॥ ೩೧ ॥ ವಿಶ್ರಮ್ಯಾತ್ರಕ್ಷಣಂಪಶ್ಚಾ ದ್ಗಮಿಷ್ಯಸಿಯಥಾಸುಖಂ । ಏವಮುಕ್ತೋಥತಂಪ್ರಾಹ ಹನೂಮಾನ್ಮಾರುತಾತ್ಮಜಃ ॥ ೩೨ ॥ ಗಚ್ಛತೋರಾಮಕಾ ರ್ಯಾರ್ಥಂ ಭಕ್ಷಣಂಮೇಕಥಂಭವೇತ್ । ವಿಶ್ರಾಮೋವಾಕಥಂಮೇಸ್ಯಾ ದ್ಗಂತವ್ಯಂತ್ವರಿತಂಮಯಾ ॥ ೩೪ ॥ ಇತ್ಯು ಕ್ತ್ವಾಸ್ಪೃಷ್ಟಶಿಖರಃ ಕರಾಗ್ರೇಣಯಯೌಕಪಿಃ । ಕಿಂಚಿದ್ದೂರಂಗತಸ್ಯಾಸ್ಯ ಛಾಯಾಂಛಾಯಾಗ್ರಹೋಗ್ರಹೀ ತ್ ॥ ೩೫ ॥ ಸಿಂಹಿಕಾನಾಮಸಾಘೋರಾಜಲಮಧ್ಯೇಸ್ಥಿತಾಸದಾ । ಆಕಾಶಗಾಮಿನಾಂಛಾಯಾಮಾಕ್ರಮ್ಯಾಕೃಷ್ಯಭಕ್ಷ

ನರಾಕೃತಿಃ-ಮನುಷ್ಯನ ರೂಪವನ್ನು ಧರಿಸಿರುವವನಾಗಿ, ಯಾಂತಂ-ಹೋಗುತ್ತಿರುವ, ಹನೂಮಂತಂ-ಆಂಜನೇಯನನ್ನು ಕುರಿತು, ಮಹಾಕಪೇ-ಆಂಜನೇಯನೇ, ಅಹಂ-ನಾನು, ಮೈನಾಕ ಪರ್ವತವು ॥ ೩೦ ॥ ಮಾರುತೇ-ಆಂಜನೇಯನೇ, ತ್ವದ್ವಿಶ್ರಾಮಾಯ-ನಿನ್ನ ಆಯಾಸ ಪರಿಹಾರವಾಗುವದಕ್ಕಾಗಿ, ಸಮುದ್ರೇಣ-ಸಮುದ್ರನಿಂದ, ಸಮಾದಿಷ್ಟಃ-ಆಜ್ಞಪ್ತ ನಾಗಿ (ಬಂದಿದ್ದೇನೆ) ಆಗಚ್ಛ-ಬಾ, ಮೇ-ನನ್ನ (ಪರ್ವತದಲ್ಲಿರುವ,) ಅಮೃತ-ಅಮೃತಕ್ಕೆ, ಕಲ್ಪಾನಿ-ಸಮಗಳಾದ, ಪಕ್ವ-ಮಾಗಿರುವ, ಫಲಾನಿ-ಹಣ್ಣುಗಳನ್ನು, ಜಗ್ಧ್ವಾ-ತಿಂ ದು ॥ ೩೧ ॥ ಅತ್ರ-ಈ ಪರ್ವತದಲ್ಲಿ, ಕ್ಷಣಂ-ನಿಮಿಷ ಮಾತ್ರನು, ವಿಶ್ರಮ್ಯ-ಆಯಾಸವನ್ನು ಕಳೆದುಕೊಂಡು, ಪಶ್ಚಾತ್-ಆಮೇಲೆ, ಯಥಾಸುಖಂ-ನಿನಗೆ ಹ್ಯಾಗೆ ಸುಖವೋ ಹಾಗೆ, ಗಮಿಷ್ಯಸಿ-ಹೋಗುವಿ, ಏವಂ-ಈ ರೀತಿಯಾಗಿ, ಉಕ್ತಃ-ಹೇಳಲ್ಪಟ್ಟವನಾದ, ಮಾರುತಾತ್ಮಜಃ-ವಾಯುಪುತ್ರನಾದ, ಹನೂಮಾನ್-ಆಂಜನೇಯನು, ತಂ-ಆ ಮೈನಾಕನನ್ನು ಕು ರಿತು, ಪ್ರಾಹ-ಹೇಳಿದನು ॥ ೩೩ ॥ ರಾಮ-ರಾಮಚಂದ್ರನ, ಕಾರ್ಯಾರ್ಥಂ-ಕೆಲಸಕ್ಕಾಗಿ, ಗಚ್ಛತಃ-ಹೋಗುತ್ತಲಿರುವ, ಮೇ-ನನಗೆ, ಭಕ್ಷಣಂ-ಈ ಪರ್ವತದಲ್ಲಿ ಕಾಲವನ್ನು ಕಳೆಯು ತ್ತಾ ಆಹಾರವನ್ನು ತಿನ್ನುವಿಕೆಯು, ಕಥಂ-ಹ್ಯಾಗೆ, ಭವೇತ್-ಆದೀತು, ವಿಶ್ರಾಮೋವಾ-ಆಯಾಸ ಪರಿಹಾರಕ್ಕಾಗಿ ನಿಲ್ಲುವಿಕೆಯು, ಮೇ-ನನಗೆ, ಕಥಂ-ಹ್ಯಾಗೆ, ಸ್ಯಾತ್-ಆದೀತು, ತ್ವ ರಿತಂ-ಜಾಗ್ರತೆಯಾಗಿ, ಮಯಾ-ನನ್ನಿಂದ, ಗಂತವ್ಯಂ-ಹೋಗಬೇಕಾಗಿರುತ್ತೆ ॥ ೩೪ ॥ ಇತಿ-ಹೀಗೆಂದು, ಉಕ್ತ್ವಾ-ಹೇಳಿ, ಕರಾಗ್ರೇಣ-ಹಸ್ತಾಗ್ರದಿಂದ, ಸ್ಪೃಷ್ಟ-ಮುಟ್ಟಲ್ಪಟ್ಟ, ಶಿಖರಃ-ಶೃಂಗ ಉಳ್ಳವನಾಗಿ, ಕಪಿಃ-ಆಂಜನೇಯನು, ಯಯೌ-ಹೊರಟು ಹೋದನು, ಕಿಂಚಿದ್ದೂರಂ-ಆ ಮೇಲೆ ಕೆಲವು ದೂರದ ವರಿವಿಗೂ, ಗತಸ್ಯ-ಹೋದವನಾದ, ಅಸ್ಯ-ಆಂಜ ನೇಯನ, ಛಾಯಾಂ-ನೆರಳನ್ನು, ಛಾಯಾಗ್ರಹಃ-ನೆರಳನ್ನು ಹಿಡಿದು ಜನರನ್ನು ಸೆಳೆದುಕೊಂಡು ತಿನ್ನುವ ಶಕ್ತಿಯುಳ್ಳ ಸಿಂಹಿಕೆಯೆಂಬ ಗ್ರಹವು, ಅಗ್ರಹೀತ್-ಹಿಡಿದುಕೊಂಡಳು॥೩೫॥ ಘೋರಾ-ಕ್ರೂರಳಾದ, ಸಿಂಹಿಕಾನಾಮ-ಸಿಂಹಿಕೆಯೆಂಬ ಹೆಸರುಳ್ಳವಳು, ಸದಾ-ಯಾವಾಗಲೂ, ಜಲ-ನೀರಿನ, ಮಧ್ಯೇ-ನಡುವೆ, ಸ್ಥಿತಾ-ಇರುವವಳಾಗಿ, ಆಕಾಶ-ಅಂತರಿಕ್ಷದಲ್ಲಿ, ಗಾ

ಯತ್ ॥ ೩೬ ॥ ತಯಾಗ್ರೃಹೀತೋಹನುಮಾನ್ ಚಿಂತಯಾಮಾಸವೀರ್ಯವಾನ್ । ಕಸೇದಂಮ್ಮೆಕೃತಂವೇಗರೋಧನಂವಿಘ್ನ
ಕಾರಿಣಂ ॥ ೩೭ ॥ ದೃಶ್ಯತೇನೈವಕೋಪ್ಯತ್ರವಿಸ್ಮಯೋಮೆಪ್ರಜಾಯತೇ । ಏವಂವಿಚಿಂತ್ಯಹನುಮಾನಥೋದೃಷ್ಟಿಂಪ್ರಸಾರ
ಯತ್ ॥ ೩೮ ॥ ತತ್ರದೃಷ್ಟ್ವಾಮಹಾಕಾಯಾಂಸಿಂಹಿಕಾಂಘೋರರೂಪಿಣೀಂ । ಪಪಾತಸಲಿಲೇತೂರ್ಣಂಪದ್ಭ್ಯಾಮೆವಾಹ
ನದ್ರುಷಾ ॥೩೯ ॥ ಪುನರುತ್ಪ್ಲುತ್ಯಹನುಮಾನ್ ದಕ್ಷಿಣಾಭಿಮುಖೋಯಯೌ । ತತೋದಕ್ಷಿಣಮಾಸಾದ್ಯಕೂಲಂನಾನಾಫಲ
ದ್ರುಮಂ ॥೪೦ ॥ ನಾನಾಪಕ್ಷಿಮೃಗಾಕೀರ್ಣಂ ನಾನಾಪುಷ್ಪಲತಾವೃತಂ । ತತೋದದರ್ಶನಗರಂತ್ರಿಕೂಟಾಚಲಮೂರ್ಧ
ನಿ ॥ ೪೧ ॥ ಪ್ರಾಕಾರೈರ್ಬಹುಭಿರ್ಯುಕ್ತಂಪರಿಖಾಭಿಶ್ಚಸರ್ವತಃ । ಪ್ರವೇಕ್ಷ್ಯಾಮಿಕಥಂಲಂಕಾಮಿತಿಚಿಂತಾಪರೋಭವ

ಮಿನಾಂ-ಸಂಚರಿಸುವ ಪ್ರಾಣಿಗಳ, ಛಾಯಾಂ-ನೆರಳನ್ನು, ಆಕೃಷ್ಯ-ಹಿಡಿದು, ಆಕೃಷ್ಯ-ಶೆಳೆದುಕೊಂಡು, ಭಕ್ಷಯೇತ್-ತಿನ್ನುವವಳಾಗಿದ್ದಳು ॥೩೬॥ ತಯಾ-ಆ ಸಿಂಹಿಕೆಯಿಂದ, ಗೃಹೀತಃ-ಹಿಡಿಯಲ್ಪಟ್ಟವನಾಗಿ, ವೀರ್ಯವಾನ್-ಪರಾಕ್ರಮಿಯಾದ, ಹನೂಮಾನ್-ಆಂಜನೇಯನು, ಚಿಂತಯಾಮಾಸ-ಯೋಚಿಸಿದನು, ಮೆ-ನನಗೆ, ವಿಘ್ನಕಾರಿಣಂ-ಪ್ರಯಾಣಕ್ಕೆ ಅಡ್ಡಿಯಾದ, ವೇಗರೋಧನಂ-ವೇಗ-ಹೋಗುವ ಗತಿಗೆ, ರೋಧನಂ-ಅಡ್ಡಿಯು, ಕಸ್ಯ-ಯಾರಿಂದ, ಕೃತಂ-ಮಾಡಲ್ಪಟ್ಟಿತು ॥ ೩೭ ॥ ಅತ್ರ-ಇಲ್ಲಿ, ಕೋಪಿ-ಯಾರಾದರೂ, ನೈವ ದೃಶ್ಯತೇ-ಕಾಣುವದಿಲ್ಲ, ಮೆ-ನನಗೆ, ವಿಸ್ಮಯಃ-ಆಶ್ಚರ್ಯವು, ಪ್ರಜಾಯತೇ-ಉಂಟಾಗುತ್ತಲಿದೆ, ಏವಂ-ಈ ಪರಿಯಾಗಿ, ವಿಚಿಂತ್ಯ-ಯೋಚಿಸಿ, ಹನೂಮಾನ್-ಆಂಜನೇಯನು, ಅಧಃ-ಕೆಳಗೆ, ದೃಷ್ಟಿಂ-ದೃಷ್ಟಿಯನ್ನು, ಪ್ರಸಾರಯತ್-ವಿಸರಿಸಿದನು ॥ ೩೮ ॥ ತತ್ರ-ಕೆಳಗೆ, ಮಹಾಕಾಯಾಂ-ಬೃಹದ್ದೇಹವುಳ್ಳವಳಾದ, ಘೋರ-ಕ್ರೂರವಾದ, ರೂಪಿಣೀಂ-ಆಕಾರ ಉಳ್ಳ, ಸಿಂಹಿಕಾಂ-ಸಿಂಹಿಕೆಯನ್ನು, ದೃಷ್ಟ್ವಾ-ನೋಡಿ, ತೂರ್ಣಂ-ಬೇಗನೆ, ಸಲಿಲೆ-ಉದಕದಲ್ಲಿ, ಪಪಾತ-ಬಿದ್ದನು, ಪದ್ಭ್ಯಾಮೆವ-ಕಾಲುಗಳಿಂದಲೇ, ರುಷಾ-ಕೋಪದಿಂದ ಅಹನತ್-ಕೊಂದು ಹಾಕಿದನು ॥ ೩೯ ॥ ಪುನಃ-ತಿರಿಗಿ, ಉತ್ಪ್ಲುತ್ಯ-ನೆಗೆಸಿಂದ ಮೇಲಕ್ಕೆ ಹಾರಿ, ದಕ್ಷಿಣಾ-ದಕ್ಷಿಣ ದಿಕ್ಕಿಗೆ, ಅಭಿಮುಖಃ-ಎದುರಾದವನಾಗಿ, ಯಯೌ-ಹೊರಟು ಹೋದನು, ತತಃ-ಆ ಬಳಿಕ, ನಾನಾ-ವಿಧವಿಧವಾದ, ಫಲದ್ರುಮಂ-ಫಲ ವೃಕ್ಷಗಳುಳ್ಳ, ದಕ್ಷಿಣಂ-ದಕ್ಷಿಣವಾದ, ಕೂಲಂ-ತೀರವನ್ನು, ಆಸಾದ್ಯ-ಸೇರಿ ॥ ೪೦ ॥ ನಾನಾ-ನಾನಾ ಪ್ರಕಾರವಾದ, ಪಕ್ಷಿ-ಹಕ್ಕಿಗಳಿಂದಲೂ, ಮೃಗ-ಮೃಗಗಳಿಂದಲೂ, ಆಕೀರ್ಣಂ-ವ್ಯಾಪ್ತವಾದ, ನಾನಾ-ಬಗೆಬಗೆಯಾದ, ಪುಷ್ಪ-ಹುವ್ವುಗಳಿಂದಲೂ, ಲತಾ-ಬಳ್ಳಿಗಳಿಂದಲೂ, ಆವೃತಂ-ಆವರಿಸಿ ಇರುವ, ತ್ರಿಕೂಟ-ಮೂರು ಶಿಖರಗಳುಳ್ಳ, ಅಚಲ-ತ್ರಿಕೂಟ ಪರ್ವತದ, ಮೂರ್ಧನಿ-ಶಿಖರದಲ್ಲಿ (ಇರುವ) ನಗರಂ-ಲಂಕಾ ಪಟ್ಟಣವನ್ನು, ತತಃ-ಆ ಬಳಿಕ, ದದರ್ಶ-ನೋಡಿದನು ॥ ೪೧ ॥ ಬಹುಭಿಃ-ಅನೇಕಗಳಾದ, ಪ್ರಾಕಾರೈಃ-ಕೋಟೆ ಗೋಡೆಗಳಿಂದ, ಸರ್ವತಃ-ಕೋಟೆಯ ಸುತ್ತಲೂ, ಪರಿಖಾಭಿಃ-ಅಗಳೆಗಳಿಂದಲೂ, ಯುಕ್ತಂ-ಕೂಡಿರುವ,

ತ್ ॥೪೧॥ ರಾತ್ರೌವೀಕ್ಷ್ಯಾಮಿಸೂಕ್ಷ್ಮೋಹಂಲಂಕಾಂರಾವಣಪಾಲಿತಾಂ । ಏವಂವಿಚಿಂತ್ಯತತ್ರೈವಸ್ಥಿತ್ವಾಲಂಕಾಂಜಗಾಮಸಃ । ೪೨ ॥ ಧೃತ್ವಾಸೂಕ್ಷ್ಮಂವಪುರ್ದ್ವಾರಂಪ್ರವಿವೇಶಪ್ರತಾಪವಾನ್ । ತತ್ರಲಂಕಾಪುರೀಸಾಕ್ಷಾದ್ರಾಕ್ಷಸೀವೇಷಧಾರಿಣೀ ॥ ೪೪ ॥ ಪ್ರವಿಶಂತಂಹನೂಮಂತಂದೃಷ್ಟ್ವಾಲಂಕಾವ್ಯತರ್ಜಯತ್ । ಕಸ್ತ್ವಂವಾನರರೂಪೇಣಮಾಮನಾದೃತ್ಯಲಂಕಿನೀಂ ॥ ೪೫ ॥ ಪ್ರವಿಶ್ಯಚೋರವದ್ರಾತ್ರೌಕಿಂಭವಾನ್ಕರ್ತುಮಿಚ್ಛತಿ । ಇತ್ಯುಕ್ತ್ವಾರೋಷತಾಮ್ರಾಕ್ಷೀಪಾದೇನಾಭಿಜಘಾನತಂ ॥ ೪೬ ॥ ಹನೂಮಾನಪಿತಾಂವಾಮಮುಷ್ಟಿನಾವಜ್ಞಯಾಹನತ್ ।ತದೈವಪತಿತಾಭೂಮೌರಕ್ತಮುದ್ವಮತೀಭೃಶಂ ॥ ೪೭ ॥ ಉತ್ಥಾಯಪ್ರಾಹಸಾಲಂಕಾಹನೂಮಂತಂಮಹಾಬಲಂ । ಹನೂಮನ್ಗಚ್ಛಭದ್ರಂತೇಜಿತಾಲಂ

(ನಗರಂ-ಲಂಕಾ ಪಟ್ಟಣವನ್ನು ನೋಡಿದನು,) ಲಂಕಾಂ-ಲಂಕಾ ಪಟ್ಟಣವನ್ನು, ಕಥಂ-ಹ್ಯಾಗೆ, ಪ್ರವೇಕ್ಷ್ಯಾಮಿ-ಪ್ರವೇಶಿಸುವನಾದೇನು, ಇತಿ-ಹೀಗೆಂದು, ಚಿಂತಾಪರಃ-ಆಲೋಚನೆ ಮಾಡುತ್ತಿರುವವನು, ಅಭವತ್-ಆದನು ॥೪೧॥ ಅಹಂ-ನಾನು, ರಾತ್ರೌ-ರಾತ್ರಿಯಲ್ಲಿ, ಸೂಕ್ಷ್ಮಃ-ಸೂಕ್ಷ್ಮ ರೂಪ ಉಳ್ಳವನಾಗಿ, ರಾವಣ-ರಾವಣನಿಂದ, ಪಾಲಿತಾಂ-ಕಾಪಾಡಲ್ಪಡುವ, ಲಂಕಾಂ-ಲಂಕಾ ಪಟ್ಟಣವನ್ನು, ವೀಕ್ಷ್ಯಾಮಿ-ನೋಡುತ್ತೇನೆ, ಏವಂ-ಹೀಗೆ, ವಿಚಿಂತ್ಯ-ಆಲೋಚಿಸಿ, ತತ್ರೈವ-ಸಮುದ್ರ ತೀರದಲ್ಲಿಯೇ, ಸ್ಥಿತ್ವಾ-ಸಾಯಂಕಾಲವಾಗುವ ಪರಿಯಂತರವೂ ಇದ್ದು, ಸಃ-ಆಂಜನೇಯನು, ಲಂಕಾಂ-ಲಂಕಾ ಪಟ್ಟಣವನ್ನು ಕುರಿತು, ಜಗಾಮ-ಹೊರಟು ಹೋದನು ॥ ೪೩ ॥ ಸೂಕ್ಷ್ಮಂ-ಅಣು ಮಾತ್ರವಾದ, ವಪುಃ-ದೇಹವನ್ನು, ಧೃತ್ವಾ-ಧರಿಸಿ, ಪ್ರತಾಪವಾನ್-ಸಾಮರ್ಥ್ಯವುಳ್ಳ ಆಂಜನೇಯನು, ದ್ವಾರಂ-ಲಂಕಾ ಪಟ್ಟಣದ ಬಾಗಿಲನ್ನು, ಪ್ರವಿವೇಶ-ಹೊಕ್ಕನು, ತತ್ರ-ಆ ಬಾಗಿಲಲ್ಲಿ, ಸಾಕ್ಷಾತ್-ಪ್ರತ್ಯಕ್ಷವಾಗಿ, ಲಂಕಾಪುರೀ-ಲಂಕಾ ಪಟ್ಟಣವು, ರಾಕ್ಷಸೀವೇಷ-ರಾಕ್ಷಸ ಸ್ತ್ರೀ ರೂಪವನ್ನು, ಧಾರಿಣೀ-ಧರಿಸಿರುವವಳಾಗಿ ॥೪೪॥ ಪ್ರವಿಶಂತಂ-ಪುರದ್ವಾರದಲ್ಲಿ ಹೋಗುತ್ತಿರುವ, ಹನೂಮಂತಂ-ಆಂಜನೇಯನನ್ನು ದೃಷ್ಟ್ವಾ-ನೋಡಿ, ಲಂಕಾ-ಲಂಕೆಯು, ವ್ಯತರ್ಜಯತ್-ಝುಬರಿಸಿದಳು, ಕಸ್ತ್ವಂ-ನೀನ್ಯಾರು, ವಾನರರೂಪೇಣ-ಕಪಿ ರೂಪದಿಂದ, ಲಂಕಿನೀಂ-ಲಂಕಿನಿಯಾದ ನನ್ನನ್ನು, ಅನಾದೃತ್ಯ-ಸಡ್ಡೆಮಾಡದೆ ॥ ೪೫ ॥ ರಾತ್ರೌ-ನಿಸಿಯಲ್ಲಿ, ಚೋರವತ್-ಕಳ್ಳನ ಹಾಗೆ, ಪ್ರವಿಶ್ಯ-ಹೊಕ್ಕು, ಭವಾನ್-ನೀನು, ಕಿಂಕರ್ತುಂ-ಏನು ಮಾಡುವದಕ್ಕೆ, ಇಚ್ಛತಿ-ಅಪೇಕ್ಷಿಸುತ್ತೀದ್ದೀ, ಇತಿ-ಹೀಗೆ, ಉಕ್ತ್ವಾ-ಹೇಳಿ, ರೋಷ-ಕೋಪದಿಂದ, ತಾಮ್ರ-ಕೆಂಪಾದ, ಅಕ್ಷೀ-ಕಣ್ಣುಗಳುಳ್ಳವಳಾಗಿ, ತಂ-ಆಂಜನೇಯನನ್ನು, ಪಾದೇನ-ಕಾಲಿಂದ, ಅಭಿಜಘಾನ-ಒದ್ದಳು ॥ ೪೬ ॥ ಹನೂಮಾನಪಿ-ಆಂಜನೇಯನು, ತಾಂ-ಆ ಲಂಕಿನಿಯನ್ನು, ಅವಜ್ಞಯಾ-ಉದಾಸೀನತೆಯಿಂದ, ವಾಮಮುಷ್ಟಿನಾ-ಯೆಡಕೈ ಗುದ್ದಿನಿಂದ, ಹನತ್-ಹೊಡೆದನು, ತದೈವ-ಆಗಲೇ, ರಕ್ತಂ-ರಕ್ತವನ್ನು, ಭೃಶಂ-ಅತ್ಯಂತವಾಗಿ, ಉದ್ವಮಂತೀ-ಕಾರುತ್ತಿರುವವಳಾಗಿ, ಪತಿತಾಂ-ಬಿದ್ದವಳಾಗಿ ॥ ೪೭ ॥ ಉತ್ಥಾಯ-ಯೆದ್ದು, ಸಾಲಂಕಾ-ಆ ಲಂಕೆಯು, ಮಹಾಬಲಂ-ಅಧಿಕ ಬಲನಾ

ಕಾತ್ಯಾಯನಘ ॥ ೪೮ ॥ ಪುರಾಹಂಬ್ರಹ್ಮಣಾಪ್ರೋಕ್ತಾ ಹ್ಯಷ್ಟಾವಿಂಶತಿಪರ್ಯಯೇ । ತ್ರೇತಾಯುಗೇದಾಶರಥೀ ರಾಮೋನಾ
ರಾಯಣೋವ್ಯಯಃ ॥ ೪೯ ॥ ಜನಿಷ್ಯತೇಯೋಗಮಾಯಾಸೀತಾಜನಕವೇಶ್ಮನಿ । ಭೂಭಾರಹರಣಾರ್ಥಾಯಪ್ರಾರ್ಥಿತೋ
ಯಂಮಯಾಕ್ವಚಿತ್ ॥ ೫೦ ॥ ಸಭಾರ್ಯೋರಾಘವೋಭ್ರಾತ್ರಾಗಮಿಷ್ಯತಿಮಹಾವನಂ । ತತ್ರಸೀತಾಂಮಹಾಮಾ
ಯಾಂರಾವಣೋಪಹರಿಷ್ಯತಿ ॥ ೫೧ ॥ ಪಶ್ಚಾದ್ರಾಮೋಣಸಾಚಿವ್ಯಂಸುಗ್ರೀವಸ್ಯಭವಿಷ್ಯತಿ । ಸುಗ್ರೀವೋಜಾನಕೀಂದ್ರ
ಷ್ಟುಂವಾನರಾನ್ಪ್ರೇಷಯಿಷ್ಯತಿ ॥ ೫೨ ॥ ತತ್ರೈಕೋವಾನರೋರಾತ್ರಾವಾಗಮಿಷ್ಯತಿತೇಂತಿಕಂ । ತ್ವಯಾಚಭರ್ತ್ಸಿತಸ್ಸೋ
ಪಿತ್ವಾಂಹನಿಷ್ಯತಿಮುಷ್ಟಿನಾ ॥೫೩॥ ತೇನಾಹತಾತ್ವಂವ್ಯಥಿತಾಭವಿಷ್ಯಸಿಯದಾನಘೇ । ತದೈವರಾವಣಸ್ಯಾಂತೋಭವಿಷ್ಯ

ದ, ಹನೂಮಂತಂ-ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದಳು, ಅನಘ-ನಿರ್ದೋಷಿಯಾದ, ಹನುಮನ್-ಆಂಜನೇಯನೇ, ಗಚ್ಛ-ಹೊಟ್ಟು ಹೋಗು, ತೇ-ನಿನಗೆ, ಭದ್ರಂ-ಶುಭವು (ಆಗಲಿ,) ಲಂಕಾ-ಲಂಕೆಯು, ತ್ವಯಾ-ನಿನ್ನಿಂದ, ಜಿತಾ-ಜಯಿಸಲ್ಪಟ್ಟಿತು ॥ ೪೮ ॥ ಅಹಂ-ನಾನು, ಪುರಾ-ಪೂರ್ವದಲ್ಲಿ, ಬ್ರಹ್ಮಣಾ-ಬ್ರಹ್ಮದೇವರಿಂದ, ಪ್ರೋಕ್ತಾ-ಹೇಳಲ್ಪಟ್ಟವಳಾಗಿದ್ದೇನೆ, ಅಷ್ಟಾವಿಂಶತಿ-ಇಪ್ಪತ್ತೆಂಟನೆಯ ಸಾರಿ ಸುತ್ತಿ ಬರುವ, ತ್ರೇತಾಯುಗೇ-ತ್ರೇತಾಯುಗದಲ್ಲಿ, ಅವ್ಯಯಃ-ನಾಶರಹಿತನಾದ, ನಾರಾಯಣಃ-ನಾರಾಯಣ ಮೂರ್ತಿಯು, ದಾಶರಥಿಃ-ದಶರಥ ರಾಯನ ಮಗನಾದ ರಾಮಃ-ರಾಮನಾಗಿ ॥ ೪೯ ॥ ಜನಿಷ್ಯತೇ-ಹುಟ್ಟುವವನಾಗುತ್ತಾನೆ, ಯೋಗಮಾಯಾ-ಆ ವಿಷ್ಣುವಿನ ಮಾಯಾ ಶಕ್ತಿಯು, ಜನಕ-ಜನಕರಾಯನ, ವೇಶ್ಮನಿ-ಮನೆಯಲ್ಲಿ, ಸೀತಾ-ಸೀತೆಯಾಗಿ, (ಜನಿಷ್ಯತೇ-ಹುಟ್ಟುವಳು,) ಕ್ವಚಿತ್-ಒಂದು ಕಾಲದಲ್ಲಿ, ಭೂ-ಭೂಮಿಯ, ಭಾರ-ಹೊರೆಯನ್ನು, ಹರಣಾರ್ಥಾಯ-ಹೋಗಲಾಡಿಸುವದಕ್ಕಾಗಿ, ಮಯಾ-ನನ್ನಿಂದ, ಅಯಂ-ಈ ನಾರಾಯಣ ಮೂರ್ತಿಯು, ಪ್ರಾರ್ಥಿತಃ-ಬೇಡಿಕೊಳ್ಳಲ್ಪಟ್ಟನು ॥ ೫೦ ॥ ಸಭಾರ್ಯಃ-ಹೆಂಡತಿಯಿಂದ ಕೂಡಿದವನಾಗಿ, ಭ್ರಾತ್ರಾಸಹ-ತಮ್ಮನಿಂದ ಕೂಡಿದವನಾಗಿ, ರಾಘವಃ-ರಾಮಚಂದ್ರನು, ಮಹಾವನಂ-ದೊಡ್ಡ ಅರಣ್ಯವನ್ನು ಕುರಿತು, ಗಮಿಷ್ಯತಿ-ಹೋಗುತ್ತಲಿದ್ದಾನೆ, ತತ್ರ-ಆ ಕಾಡಿನಲ್ಲಿ, ಮಹಾಮಾಯಾಂ-ಮಾಯಾಶಕ್ತಿಯಾದ, ಸೀತಾಂ-ಸೀತೆಯನ್ನು, ರಾವಣಃ-ರಾವಣನೆಂಬ ರಾಕ್ಷಸನು, ಅಪಹರಿಷ್ಯತಿ-ಕದ್ದೊಯ್ಯುವನು ॥ ೫೧ ॥ ಪಶ್ಚಾತ್-ಆ ಬಳಿಕ, ರಾಮೇಣ-ರಾಮಚಂದ್ರನ ಸಂಗಡ, ಸುಗ್ರೀವಸ್ಯ-ಸುಗ್ರೀವನಿಗೆ, ಸಾಚಿವ್ಯಂ-ಮಿತ್ರತ್ವವು, ಭವಿಷ್ಯತಿ-ಆಗುತ್ತಲಿದೆ, ಸುಗ್ರೀವಃ-ಸುಗ್ರೀವನು, ಜಾನಕೀಂ-ಸೀತೆಯನ್ನು, ದ್ರಷ್ಟುಂ-ನೋಡುವದಕ್ಕೆ, ವಾನರಾನ್-ಕಪಿಗಳನ್ನು, ಪ್ರೇಷಯಿಷ್ಯತಿ-ಕಳುಹಿಸುತ್ತಲಿದ್ದಾನೆ ॥ ೫೨ ॥ ತತ್ರ-ಆ ಕಪಿ ಸಮೂಹದೊಳಗೆ, ಏಕಃ-ಒಬ್ಬನಾದ, ವಾನರಃ-ಕಪಿಯು, ತೇ-ನಿನ್ನ, ಅಂತಿಕಂ-ಸಮೀಪಕ್ಕೆ, ರಾತ್ರೌ-ರಾತ್ರಿಯಲ್ಲಿ, ಆಗಮಿಷ್ಯತಿ-ಬರುತ್ತಲಿದ್ದಾನೆ, ತ್ವಯಾಚ-ನಿನ್ನಿಂದ, ಭರ್ತ್ಸಿತಃ-ಜಭರಿಸಲ್ಪಟ್ಟವನಾಗಿ, ಸೋಪಿ-ಆ ಕಪಿಯು, ಮುಷ್ಟಿನಾ-ಗುದ್ದಿನಿಂದ, ತ್ವಾಂ-ನಿನ್ನನ್ನು, ಹನಿಷ್ಯ ತಿ

ತಿನಸಂಶಯಃ ॥ ೫೪ ॥ ತಸ್ಮಾತ್ತ್ವಯಾಜಿತಾಲಂಕಾಜಿತಂಸರ್ವಂತ್ವಯಾನಘ । ರಾವಣಾಂತಃಪುರವರೇಕ್ರೀಡಾಕಾನನಮು
ತ್ತಮಂ ॥ ೫೫ ॥ ತನ್ಮಧ್ಯೇಶೋಕವನಿಕಾ ದಿವ್ಯಪಾದಪಸಂಕುಲಾ । ಅಸ್ತಿತಸ್ಯಾಂಮಹಾವೃಕ್ಷಃಶಿಂಶುಪಾನಾಮಮಧ್ಯ
ಗಃ ॥ ೫೬ ॥ ತತ್ರಾಸ್ತೇಜಾನಕೀಘೋರರಾಕ್ಷಸೀಭಿಸ್ಸುರಕ್ಷಿತಾ । ದೃಷ್ಟ್ವೈವಗಚ್ಛತ್ವರಿತಂರಾಘವಾಯನಿವೇದಯ ॥ ೫೭ ॥
ಧನ್ಯಾಹಮಪ್ಯದ್ಯಚಿರಾಯರಾಘವ ಸ್ಮೃತಿರ್ಮಮಾಸೀದ್ಭವಪಾಶಮೋಚನೀ । ತದ್ಭಕ್ತಸಂಗೋಪ್ಯತಿದುರ್ಲಭೋಮಮ
ಪ್ರಸೀದತಾಂದಾಶರಥಿಸ್ಸದಾಹೃದಿ । ೫೮ ॥ ಉಲ್ಲಂಘಯತ್ಯಬ್ಧಿಂಪವನಾತ್ಮಜೇನಧರಾಸುತಾಯಾಶ್ಚ ದಶಾನನಸ್ಯ । ಪ್ರಸ್ಫುರ

ತಿ-ಕೊಲ್ಲುತ್ತಾನೆ ॥೫೩॥ ತೇನ-ಆ ಕಪಿಯಿಂದ, ಆಹತಾ-ಹೊಡೆಯಲ್ಪಟ್ಟವಳಾಗಿ, ಅನಘೇ-ಲಂಕಿನಿಯೇ, ಯದಾ-ಯಾವಾಗ, ವ್ಯಥಿತಾ-ವ್ಯಸನೆಯುಳ್ಳವಳಾಗುತ್ತೀಯೋ, ತದೈವ-ಆಗಲೇ, ರಾವಣಸ್ಯ-ರಾವಣನಿಗೆ, ಅಂತಃ-ನಾಶವು, ಭವಿಷ್ಯತಿ-ಆಗುತ್ತೆ, ಸಂಶಯಃ-ಸಂದೇಹವು, ನ-ಇಲ್ಲ ॥೫೪॥ ಅನಘ-ನಿರ್ದೋಷಿಯಾದ ಆಂಜನೇಯನೇ, (ಯಸ್ಮಾತ್-ಯಾವ ಕಾರಣದಿಂದ,) ಲಂಕಾ-ಲಂಕೆಯು, ಜಿತಾ-ಜಯಿಸಲ್ಪಟ್ಟಿತೋ, ತಸ್ಮಾತ್-ಆ ಕಾರಣದಿಂದ, ಸರ್ವಂ-ಎಲ್ಲವೂ, ತ್ವಯಾ-ನಿನ್ನಿಂದ, ಜಿತಂ-ಜಯಿಸಲ್ಪಟ್ಟಿತು, ರಾವಣ-ರಾವಣನ, ಅಂತಃಪುರವರೇ-ಶ್ರೇಷ್ಠವಾದ ಅಂತಃಪುರದೊಳಗೆ, ಕ್ರೀಡಾ-ವಿಲಾಸಾರ್ಥವಾದ, ಕಾನನಂ-ತೋಟವು, ಉತ್ತಮಂ-ಶ್ರೇಷ್ಠವಾಗಿ (ಇದೆ) ॥೫೫॥ ತನ್ಮಧ್ಯೇ-ಆ ತೋಟದ ನಡುವೆ, ದಿವ್ಯ-ದೇವತಾ ಯೋಗ್ಯವಾದ, ಪಾದಪ-ವೃಕ್ಷಗಳಿಂದ, ಸಂಕುಲಾ-ಕೂಡಿರುವ, ಅಶೋಕವನಿಕಾ-ಅಶೋಕ ವೃಕ್ಷಗಳ ವನವು (ಇದೆ) ತಸ್ಯಾಂ-ಅಶೋಕ ವನಿಕೆಯಲ್ಲಿ, ಮಧ್ಯಗಃ-ವೃಕ್ಷಗಳ ನಡುವೆ ಇರುವ, ಶಿಂಶುಪಾನಾಮ-ಶಿಂಶುಪಾ ಯೆಂಬ ಹೆಸರುಳ್ಳ, ಮಹಾವೃಕ್ಷಃ-ದೊಡ್ಡ ಮರವು, ಅಸ್ತಿ-ಇದೆ ॥೫೬॥ ತತ್ರ-ಆ ಶಿಂಶುಪಾ ವೃಕ್ಷದ ಬಳಿಯಲ್ಲಿ, ಘೋರಾ-ಕ್ರೂರರಾದ, ರಾಕ್ಷಸೀಭಿಃ-ರಾಕ್ಷಸ ಸ್ತ್ರೀಯರಿಂದ, ಸುರಕ್ಷಿತಾ-ಕಾವಲು ಮಾಡಲ್ಪಟ್ಟಿರುವ, ಜಾನಕೀ-ಸೀತೆಯು, ಅಸ್ತೇ-ಇದ್ದಾಳೆ, ದೃಷ್ಟ್ವಾ-ಅಲ್ಲಿರುವ ಸೀತೆಯನ್ನು ನೋಡಿ, ತ್ವರಿತಂ-ಜಾಗ್ರತೆಯಾಗಿ, ಗಚ್ಛ-ಹೋಗು, ರಾಘವಾಯ-ರಾಮಚಂದ್ರನಿಗೆ, ನಿವೇದಯ-ಸೀತಾ ವೃತ್ತಾಂತವನ್ನು ತಿಳಿಸು ॥೫೭॥ ಚಿರಾಯ-ಬಹು ಕಾಲಕ್ಕೆ, ಭವ-ಸಂಸಾರವೆಂಬ, ಪಾಶ-ಹಗ್ಗವನ್ನು, ಮೋಚನೀ-ಬಿಡಿಸುವಂಥಾದ, ರಾಘವ-ರಾಮಚಂದ್ರನ, ಸ್ಮೃತಿಃ-ಸ್ಮರಣೆಯು, ಮಮ-ನನಗೆ, ಆಸೀತ್-ಆಯಿತು, (ಆದ್ದರಿಂದ) ಅಹಮಪಿ-ನಾನೂ, ಧನ್ಯಾ-ಕೃತಾರ್ಥಳಾದೆನು, ತದ್ಭಕ್ತ-ರಾಮಚಂದ್ರನ ಸೇವೆ ಮಾಡುವವನ, ಸಂಗಃ-ಸಂಬಂಧವು, ಅತಿದುರ್ಲಭಃ-ಲಭ್ಯವಾಗತಕ್ಕದಲ್ಲ, ಮಮ-ನನ್ನ, ಹೃದಿ-ಹೃದಯದಲ್ಲಿ, ಸದಾ-ಯಾವಾಗಲೂ, ದಾಶರಥಿಃ-ರಾಮಚಂದ್ರನು, ಪ್ರಸೀದತಾಂ-ಪ್ರಸನ್ನನಾಗಲಿ ॥೫೮॥ ಪವನಾತ್ಮಜೇನ-ಆಂಜನೇಯನಿಂದ, ಅಬ್ಧಿಂ-ಸಮುದ್ರವನ್ನು, ಉಲ್ಲಂಘಯತಿ-ದಾಟುತ್ತಿರುವಾಗ, ಧರಾ-ಭೂಮಿಗೆ, ಸುತಾಯಾಃ-ಮಗಳಾದ (ಸೀತೆಗೆ) ದಶಾನನಸ್ಯ-ಹತ್ತು ತಲೆಗಳುಳ್ಳ (ರಾವಣನಿಗೂ) ತೀವ್ರಂ-ವೇಗವಾಗಿ, ವಾಮಾಕ್ಷಿ-ಎಡ ಕಣ್ಣು, ಭುಜಶ್ಚ-ಎಡ ಭುಜವು, ಪ್ರಸ್ಫೋ

ಪಾದಾಕ್ಷಿಭುಜಶ್ಚ ತೀವ್ರಂ ರಾಮಸ್ಯ ದಕ್ಷಾಂಗಮತೀಂದ್ರಿಯಸ್ಯ ... ... ... ... ॥೫೯॥

—** ಇತಿ ಶ್ರೀಮದಧ್ಯಾತ್ಮರಾಮಾಯಣೇ-ಉಮಾಮಹೇಶ್ವರಸಂವಾದೇ, ಸುಂದರಕಾಂಡೇ ಪ್ರಥಮಸ್ಸರ್ಗಃ **—

ಮಹಾದೇವಉವಾಚ ॥೧॥ ತತೋಜಗಾಮಹನುಮಾನ್ ಲಂಕಾಂಪರಮಶೋಭನಾಂ । ರಾತ್ರೌಸೂಕ್ಷ್ಮತನುರ್ಭೂತ್ವಾ ಬಭ್ರಾಮಪರಿತಃಪುರೀಂ ॥೨॥ ಸೀತಾನ್ವೇಷಣಕಾರ್ಯಾರ್ಥೀ ಪ್ರವಿವೇಶನೃಪಾಲಯಂ । ತತ್ರಸರ್ವಪ್ರದೇಶೇಷುವಿಚಿತ್ಯಹನುಮಾನ್ ಕಪಿಃ ॥೩॥ ನಾಪಶ್ಯಜ್ಜಾನಕೀಂಸ್ಮೃತ್ವಾತತೋಲಂಕಾಭಿಭಾಷಿತಂ । ಜಗಾಮಹನುಮಾನ್ ಶೀಘ್ರಮಶೋಕವನಿಕಾಂಶುಭಾಂ ॥೪॥ ಸುರಪಾದಪಸಂಬಾಧಾಂರತ್ನಸೋಪಾನವಾಪಿಕಾಂ । ನಾನಾಪಕ್ಷಿಮೃಗಾಕೀರ್ಣಾಂಸ್ವರ್ಣಪ್ರಾಸಾದ

ರ-ಅರಿತು, ಅತೀಂದ್ರಿಯಸ್ಯ-ಇಂದ್ರಿಯ ಗೋಚರನಲ್ಲದವನಾದ, ರಾಮಸ್ಯ-ಪರಬ್ರಹ್ಮ ಸ್ವರೂಪನಾದ ರಾಮಚಂದ್ರನಿಗೆ, ದಕ್ಷಾಂಗಂ-ಬಲಭಾಗದ ಅಂಗವು, ಪ್ರಸ್ಫುರ-ಅದರಿತು॥೫೯॥

—..* ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದೊಳ್ ಸುಂದರಕಾಂಡದಲ್ಲಿ ಮೊದಲನೆಯ ಸರ್ಗವು. *...—

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ ॥೧॥ ತತಃ-ಆ ಬಳಿಕ, ಹನೂಮಾನ್-ಆಂಜನೇಯನು, ರಾತ್ರೌ-ಸಾಯಂಕಾಲದಲ್ಲಿ, ಸೂಕ್ಷ್ಮ-ಸಣ್ಣದಾದ, ತನುಃ-ಶರೀರಾಕೃತಿಯುಳ್ಳವನಾಗಿ, ಭೂತ್ವಾ-ಉಳ್ಳವನಾಗಿ, ಪರಮ-ಉತ್ಕೃಷ್ಟವಾದ, ಶೋಭನಾಂ-ಅಲಂಕೃತವಾದ, ಲಂಕಾಂ-ಲಂಕಾಪಟ್ಟಣವನ್ನು ಕುರಿತು, ಜಗಾಮ-ಹೊರಟು ಹೋದನು, ಪರಿತಃ-ಸುತ್ತಲೂ, ಪುರೀಂ-ಲಂಕಾಪಟ್ಟಣದೊಳಗೆ, ಬಭ್ರಾಮ-ಸಂಚಾರ ಮಾಡುತ್ತಿದ್ದನು ॥೨॥ ಸೀತಾ-ಸೀತೆಯನ್ನು, ಅನ್ವೇಷಣ-ಹುಡುಕುವದೆಂಬ, ಕಾರ್ಯ-ಕೆಲಸವೆಂಬ, ಅರ್ಥೀ-ಪ್ರಯೋಜನಾಪೇಕ್ಷೆಯುಳ್ಳವನಾಗಿ, ನೃಪ-ದೊರೆಯಾದ ರಾವಣನ, ಆಲಯಂ-ಮನೆಯನ್ನು ಕುರಿತು, ಪ್ರವಿವೇಶ-ಹೊಕ್ಕನು, ಕಪಿಃ-ಕಪಿಯಾದ, ಹನುಮಾನ್-ಆಂಜನೇಯನು, ತತ್ರ-ರಾವಣನ ಮನೆಯನ್ನು, ಸರ್ವ-ಸಮಸ್ತವಾದ, ಪ್ರದೇಶೇಷು-ಸ್ಥಳಗಳಲ್ಲಿ, ವಿಚಿತ್ಯ-ಹುಡುಕಿ ॥೩॥ ಜಾನಕೀಂ-ಸೀತೆಯನ್ನು, ನಾಪಶ್ಯತ್-ನೋಡಲಿಲ್ಲ, ತತಃ-ಆ ಬಳಿಕ, ಲಂಕಾಭಿಭಾಷಿತಂ-ಲಂಕಾ-ಲಂಕೆಯಿಂದ, ಅಭಿಭಾಷಿತಂ-ಹೇಳಲ್ಪಟ್ಟದ್ದ ಮಾತನ್ನು, ಸ್ಮೃತ್ವಾ-ನೆನಸಿಕೊಂಡು, ಹನುಮಾನ್-ಆಂಜನೇಯನು, ಶುಭಾಂ-ಮಂಗಳಕರವಾದ, ಅಶೋಕವನಿಕಾಂ-ಅಶೋಕ ವನವೆಂಬ ತೋಟವನ್ನು ಕುರಿತು, ಶೀಘ್ರಂ-ಜಾಗ್ರತೆಯಾಗಿ, ಜಗಾಮ-ಹೊರಟು ಹೋದನು ॥೪॥ ಸುರ-ದೇವತೆಗಳ ಸಂಬಂಧವಾದ, ಪಾದಪ-ಮರಗಳಿಂದ, ಸಂಬಾಧಾಂ-ಕಿಕ್ಕಿರಿದಿರುವ, ರತ್ನ-ರತ್ನಗಳಿಂದ ಮಾಡಿರುವ, ಸೋಪಾನ-ಮೆಟ್ಟಿಲುಗಳುಳ್ಳ, ವಾಪಿಕಾಂ-ಕೊಳಗಳುಳ್ಳ, ನಾನಾ-ವಿಧವಿಧವಾದ, ಪಕ್ಷಿ-ಪಕ್ಷಿಗಳಿಂದಲೂ, ಮೃಗ-ಮೃಗಗಳ

ಶೋಭಿತಾಂ ॥ ೫ ॥ ಫಲೈರಾನಮ್ರಶಾಖಾಗ್ರಪಾದಪೈಃಪರಿವಾರಿತಾಂ । ವಿಚಿನ್ವನ್ಜಾನಕೀಂತತ್ರ ಪ್ರತಿವೃಕ್ಷಂಮರುತ್ಸುತಃ ॥ ೬ ॥ ದದರ್ಶಾಭ್ರಂಲಿಹಂತತ್ರ ಚೈತ್ಯಪ್ರಾಸಾದಮುತ್ತಮಂ । ದೃಷ್ಟ್ವಾವಿಸ್ಮಯಮಾಪನ್ನೋ ಮಣಿಸ್ತಂಭಶತಾನ್ವಿತಂ ॥ ೭ ॥ ಸಮುತ್ತೀರ್ತ್ಯಪುನರ್ಗತ್ವಾಕಿಂಚಿದ್ದೂರಂಸಮಾರುತಿಃ । ದದರ್ಶಶಿಂಶುಪಾವೃಕ್ಷಮತ್ಯಂತನಿಬಿಡಚ್ಛದಂ ॥ ೮ ॥ ಅದೃಷ್ಟಾತಪಮಾಕೀರ್ಣಂ ಸ್ವರ್ಣವರ್ಣವಿಹಂಗಮೈಃ । ತನ್ಮೂಲೇರಾಕ್ಷಸೀಮಧ್ಯೇಸ್ಥಿತಾಂಜನಕನಂದಿನೀಂ ॥ ೯ ॥ ದದರ್ಶಹನುಮಾನ್ವೀರೋದೇವತಾಮಿವಭೂತಲೇ । ಏಕವೇಣೀಂಕೃಶಾಂದೀನಾಂಮಲಿನಾಂಬರಧಾರಿಣೀಂ ॥ ೧೦ ॥ ಭೂಮೌಶಯು

ಳಿಂದಲೂ, ಆಕೀರ್ಣಾಂ-ವ್ಯಾಪ್ತವಾದ, ಸ್ವರ್ಣ-ಭಂಗಾರ ಮಯವಾದ, ಪ್ರಾಸಾದ-ಉಪ್ಪರಿಗೆಗಳಿಂದ, ಶೋಭಿತಾಂ-ಪ್ರಕಾಶಿಸುತ್ತಿರುವ ॥೫॥ ಫಲೈಃ-ಹಣ್ಣುಗಳಿಂದ, ಆನಮ್ರ-ಬೊಗ್ಗಿರುವ, ಶಾಖಾ-ಕೊಂಬೆಗಳ, ಅಗ್ರ-ಕೊನೆಗಳುಳ್ಳ, ಪಾದಪೈಃ-ಮರಗಳಿಂದ, ಪರಿವಾರಿತಾಂ-ಸುತ್ತಲ್ಪಟ್ಟಿರುವ (ಅಶೋಕ ವನಿಕೆಯನ್ನು,) (ಪ್ರವಿಶ್ಯ-ಹೊಕ್ಕು.) ಮರುತ್ಸುತಃ-ವಾಯುಪುತ್ರನಾದ ಆಂಜನೇಯನು, ತತ್ರ-ಆ ವನದಲ್ಲಿ, ಪ್ರತಿವೃಕ್ಷಂ-ಗಿಡ ಗಿಡದಲ್ಲಿಯೂ, ಜಾನಕೀಂ-ಸೀತೆಯನ್ನು, ವಿಚಿನ್ವನ್-ಹುಡುಕುತ್ತಿರುವವನಾಗಿ ॥ ೬ ॥ ತತ್ರ-ಆ ವನದಲ್ಲಿ, ಅಭ್ರಂಲಿಹಂ-ಆಕಾಶವನ್ನು ಮುಟ್ಟುವದೋ ಯೆಂಬಂತೆ ಅತ್ಯಂತ ಉದ್ದವಾಗಿರುವ, ಉತ್ತಮಂ-ಶ್ರೇಷ್ಠವಾದ, ಚೈತ್ಯಪ್ರಾಸಾದಂ-ದೇವಾಲಯವನ್ನು, ದದರ್ಶ-ನೋಡಿದನು, ಮಣಿ-ಮಣಿವಿಕಾರವಾದ, ಸ್ತಂಭಶತ-ನೂರು ಕಂಭಗಳಿಂದ, ಅನ್ವಿತಂ-ಕೂಡಿರುವ ಪ್ರಾಸಾದವನ್ನು, ದೃಷ್ಟ್ವಾ-ಹುಡುಕಿ ನೋಡಿ, ವಿಸ್ಮಯಂ-ಆಶ್ಚರ್ಯವನ್ನು, ಆಪನ್ನಃ-ಹೊಂದಿದವನಾಗಿ ॥೭॥ ಸಮುತ್ತೀರ್ತ್ಯ-ಆ ದೇವಾಲಯವನ್ನು ದಾಟಿ, ಕಿಂಚಿದ್ದೂರಂ-ಕೊಂಚ ದೂರದ ವರಿಗೆ, ಗತ್ವಾ-ಹೋಗಿ, ಸಃ-ಆ, ಮಾರುತಿಃ-ಆಂಜನೇಯನು, ಅತ್ಯಂತ-ಅತಿಶಯವಾಗಿ, ನಿಬಿಡ-ಒತ್ತಾಗಿ ಬೆಳೆದಿರುವ, ಛದಂ-ಯಲೆಗಳುಳ್ಳ, ಶಿಂಶುಪಾವೃಕ್ಷಂ-ಶಿಂಶುಪವೆಂಬ ಹೆಸರುಳ್ಳ ಮರವನ್ನು, ದದರ್ಶ-ನೋಡಿದನು ॥ ೮ ॥ ಅದೃಷ್ಟಾತಪಂ-ಅತ್ಯಂತ ಒತ್ತಾಗಿ ಬೆಳೆದಿರುವ ಎಲೆಗಳುಳ್ಳದ್ದರಿಂದ ಬಿಸಲೇ ಕಾಣದೇ ಇರುವಂಥಾದ್ದಾದ, ಸ್ವರ್ಣವರ್ಣವಿಹಂಗಮೈಃ-ಸ್ವರ್ಣ-ಭಂಗಾರದ, ವರ್ಣ-ಬಣ್ಣದಂತೆ ಬಣ್ಣವುಳ್ಳ, ವಿಹಂಗಮೈಃ-ಪಕ್ಷಿಗಳಿಂದ, ಆಕೀರ್ಣಾಂ-ತುಂಬಿರುವ (ಶಿಂಶುಪಾ ವೃಕ್ಷವನ್ನು ನೋಡಿ,) ತನ್ಮೂಲೇ-ಆ ವೃಕ್ಷದ ಬುಡದಲ್ಲಿ, ರಾಕ್ಷಸೀ-ರಾಕ್ಷಸ ಸ್ತ್ರೀಯರ, ಮಧ್ಯೇ-ನಡುವೆ, ಸ್ಥಿತಾಂ-ಇರುತ್ತಿರುವ, ಜನಕನಂದಿನೀಂ-ಸೀತೆಯನ್ನು ॥ ೯ ॥ ಭೂತಲೇ-ಭೂಮಿಯಲ್ಲಿರುವ, ದೇವತಾಮಿವ-ದೇವತೆಯಂತೆ, ವೀರಃ-ಶೂರನಾದ, ಹನುಮಾನ್-ಆಂಜನೇಯನು, ದದರ್ಶ-ನೋಡಿದನು, ಏಕವೇಣೀಂ-ರಾವಣನು ತಂದ ಮೊದಲಾಗಿ ಬಾಚದೆ ಇರುವದರಿಂದ ಒಂದೇ ಜಡೆಯಾಗಿರುವ ಕೂದಲುಗಳುಳ್ಳವಳಾದ, ಕೃಶಾಂ-ಆಹಾರವಿಲ್ಲದೆ ಬಡ ದೇಹ ಉಳ್ಳವಳಾದ, ದೀನಾಂ-ರಾವಣನ ಭಯದಿಂದ ದೈನ್ಯ ಉಳ್ಳವಳಾದ, ಮಲಿನ-ಮಾಸಿದ, ಅಂಬರ-ಬಟ್ಟೆಯನ್ನು, ಧಾರಿಣೀಂ-ಉಟ್ಟಿರುವವಳಾದ ॥ ೧೦ ॥ ಭೂಮೌ-ನೆಲದಲ್ಲಿ, ಶಯನಾನಾಂ-ವಿರಕ್ತಿಯಿಂದ ಮಲಗಿರುವ, ಶೋಚಂತೀಂ-

ಸಾಂಶೋಚಂತೀಂರಾಮರಾಮೇತಿಭಾಷಿಣೀಂ । ತ್ರಾತಾರಂನಾಧಿಗಚ್ಛಂತೀಂ ಉಪವಾಸಕೃಶಾಂಶುಭಾಂ ॥ ೧೧ ॥ ಶಾಖಾಂ ತಚ್ಛದಮಧ್ಯಸ್ಥೋದದರ್ಶಕಪಿಕುಂಜರಃ । ಕೃತಾರ್ಥೋಹಂಕೃತಾರ್ಥೋಹಂದೃಷ್ಟ್ವಾಜನಕನಂದಿನೀಂ॥ ೧೨ ॥ ಮಯೈ ವಸಾಧಿತಂಕಾರ್ಯಂ ರಾಮಸ್ಯಪರಮಾತ್ಮನಃ ! ತತಃಕಿಲಕಿಲಾಶಬ್ದೋಬಭೂವಾಂತಃಪುರಾದ್ಬಹಿಃ ॥ ೧೩ ॥ ಕಿಮೇತದಿತಿಸಂ ಲೀನೋವೃಕ್ಷಪತ್ರೇಷುಮಾರುತಿಃ । ಆಯಾಂತಂರಾವಣಂತತ್ರ ಸ್ತ್ರೀಜನೈಃಪರಿವಾರಿತಂ ॥ ೧೪ ॥ ದಶಾಸ್ಯಂವಿಂಶತಿಭು ಜಂನೀಲಾಂಜನಚಯೋಪಮಂ । ದೃಷ್ಟ್ವಾವಿಸ್ಮಯಮಾಪನ್ನಃಪತ್ರಖಂಡೇಷ್ವಲೀಯತ ॥೧೫॥ ರಾವಣೋರಾಘವೇಣಾ ಶುಮರಣಂಮೇಕಥಂಭವೇತ್ ॥ ೧೬ ॥ ಇತ್ಯೇವಂಚಿಂತಯನ್ನಿತ್ಯಂರಾಮಮೇವಸದಾಹೃದಿ । ತಸ್ಮಿನ್ದಿನೇಪರೇರಾತ್ರೌರಾವಣೋ

ರಾಮ ದರ್ಶನ ವಿಲ್ಲದ್ದರಿಂದ ವ್ಯಥೆಯನ್ನು ಪಡುತ್ತಲಿರುವ, ರಾಮರಾಮೇತಿ-ರಾಮಚಂದ್ರನಲ್ಲಿಯೇ ಇರಿಸಲ್ಪಟ್ಟ ಮನಸ್ಸುಳ್ಳವಳಾದ್ದರಿಂದ ರಾಮ ರಾಮ ಯೆಂಬದಾಗಿ, ಭಾಷಿಣೀಂ-ಹೇಳುತ್ತಿರುವ, ತ್ರಾತಾರಂ-ತನ್ನನ್ನು ರಾವಣನ ನಿರ್ಬಂಧದಿಂದ ಬಿಡಿಸುವಂಥವನನ್ನು, ನಾಧಿಗಚ್ಛಂತೀಂ-ಹೊಂದದೇ ಇರುವವಳಾದ, ಉಪವಾಸ-ಅಶನ ವ್ರತದಿಂದ, ಕೃಶಾಂ-ಬಡವೆಯಾದ, ಶುಭಾಂ-ಮಂಗಳ ಕರಳಾದ॥ ೧೧ ॥(ಸೀತೆಯನ್ನು,) ಕಪಿಕುಂಜರಃ-ಆನೆಗೆ ಸಮನಾದ ಆಂಜನೇಯನು, ಶಾಖಾಂತಚ್ಛದಮಧ್ಯಸ್ಥಃ-ಶಾಖಾ-ರೆಂಬೆಗಳ, ಅಂತಃ-ಒಳಗೆ,ಛದ-ಎಲೆಗಳ, ಮಧ್ಯಸ್ಥಃ-ನಡುವೆಇರುವವನಾಗಿ, ದದರ್ಶ-ನೋಡಿದನು, ಅಹಂ-ನಾನು, ಜನಕನಂದಿನೀಂ-ಸೀತೆಯನ್ನು, ದೃಷ್ಟ್ವಾ-ನೋಡಿ, ಅಹಂಕೃತಾರ್ಥಃ-ಕೃತಾರ್ಥಃ-ನಾನು ಕೃತಾರ್ಥನಾದೆನು ನಾನು ಕೃತಾರ್ಥನಾದೆನು ॥ ೧೨ ॥ ಪರಮಾತ್ಮನಃ-ಪರಮಾತ್ಮನಾದ, ರಾಮಸ್ಯ-ರಾಮಚಂದ್ರನ, ಕಾರ್ಯಂ-ಕೆಲಸವು, ಮಯೈವ-ನನ್ನಿಂದಲೇ, ಸಾಧಿತಂ-ಸಾಧಿಸಲ್ಪಟ್ಟಿತು, ತತಃ-ಆ ಬಳಿಕ, ಅಂತಃ-ಪುರಾತ್-ಅಂತಃಪುರದ ದೆಸೆಯಿಂದ, ಬಹಿಃ-ಹೊರಗೆ, ಕಿಲಕಿಲಾಶಬ್ದಃ-ಕಿಲಕಿಲ ಶಬ್ದವು, ಬಭೂವ-ಉಂಟಾಯಿತು ॥ ೧೩ ॥ ಮಾರುತಿಃ-ಆಂಜನೇಯನು, ಕಿಮೇತದಿತಿ-ಇದೇನೆಂದು, ವೃಕ್ಷ-ಮರದ, ಪತ್ರೇಷು-ಎಲೆಗಳಲ್ಲಿ, ಸಂಲೀನಃ-ಮರೆಯಾಗಿದ್ದವನಾದನು, ತತ್ರ-ಆ ವನಕ್ಕೆ, ಆಯಾಂತಂ-ಬರುತ್ತಿರುವ, ಸ್ತ್ರೀಜನೈಃ-ಹೆಣ್ಣು ಜನರಿಂದ, ಪರಿವಾರಿತಂ-ಸುತ್ತಲ್ಪಟ್ಟಿರುವ ॥ ೧೪ ॥ ದಶಾಸ್ಯಂ-ಹತ್ತು ಮುಖಗಳುಳ್ಳವನಾದ, ವಿಂಶತಿಭುಜಂ-ಇಪ್ಪತ್ತು ಭುಜಗಳುಳ್ಳವನಾದ, ನೀಲ-ಕಪ್ಪಾದ, ಅಂಜನ-ಕಾಡಿಗೆಯ, ಚಯ-ರಾಶಿಗೆ, ಉಪಮಂ-ಸಮವಾದ ಕಾಂತಿಯುಳ್ಳವನಾದ, ರಾವಣಂ-ರಾವಣನನ್ನು, ದೃಷ್ಟ್ವಾ-ನೋಡಿ, ವಿಸ್ಮಯಂ-ಆಶ್ಚರ್ಯವನ್ನು, ಆಪನ್ನಃ-ಹೊಂದಿದವನಾಗಿ, ಪತ್ರ-ಎಲೆಗಳ, ಖಂಡೇಷು-ರಾಶಿಯಲ್ಲಿ, (ಪತ್ರಷಂಡೇಷು-ಎಲೆಗಳ ಸಮೂಹದಲ್ಲಿ,) ಅಲೀಯತ-ಮರೆಯಾಗಿದ್ದನು ॥ ೧೫ ॥ ರಾವಣಃ-ರಾವಣನು, ರಾಘವೇಣ-ರಾಮಚಂದ್ರನಿಂದ, ಮೇ-ನನಗೆ, ಮರಣಂ-ಸಂಹಾರವು, ಆಶು-ಜಾಗ್ರತೆಯಾಗಿ, ಕಥಂ-ಹ್ಯಾಗೆ, ಭವೇತ್-ಆದೀತು, ಸೀತಾರ್ಥೇಮಪಿ-ಸೀತೆಯನ್ನು ಹುಡುಕುವದಕ್ಕೋಸ್ಕರವಾದಾಗ್ಯಾದರೂ, ರಾಮಃ-ರಾಮ

ರಾಕ್ಷಸಾಧಿಪಃ ॥ ೧೭ ॥ ಸ್ವಪ್ನೇ ರಾಮೇಣಸಂದಿಷ್ಟಃಕಶ್ಚಿದಾಗತ್ಯವಾನರಃ । ಕಾಮರೂಪಧರಸ್ಸೂಕ್ಷ್ಮೋವೃಕ್ಷಾಗ್ರಸ್ಥೋ ನುಪಶ್ಯತಿ ॥ ೧೮ ॥ ಇತಿದೃಷ್ಟ್ವಾದ್ಭುತಂಸ್ವಪ್ನಂಸ್ವಾತ್ಮನ್ಯೇವಾನುಚಿಂತ್ಯಸಃ । ಸ್ವಪ್ನಃಕದಾಚಿತ್ಸತ್ಯಸ್ಸ್ಯಾದೇವಂತತ್ಕರೋಮ್ಯಹಂ ॥ ೧೯ ॥ ಜಾನಕೀಂವಾಕ್ಯಶರೈರ್ವಿದ್ಧ್ವಾದುಃಖಿತಾಂನಿತರಾಮಹಂ । ಕರೋಮಿದೃಷ್ಟ್ವಾರಾಮಾಯನಿವೇದಯತುವಾನರಃ ॥ ೨೦ ॥ ಇತ್ಯೇವಂಚಿಂತಯನ್ಸೀತಾಸಮೀಪಮುಗಮದ್ದ್ರುತಂ। ನೂಪುರಾಣಾಂಕಿಂಕಿಣೀನಾಂಶ್ರುತ್ವಾಸಿಂಜಿತಮಂಗನಾ ॥ ೨೧ ॥ ಸೀತಾಭೀತಾಲೀಯಮಾನಾ ಸ್ವಾತ್ಮನ್ಯೇವಸುಮಧ್ಯಮಾ । ಅಧೋಮುಖ್ಯಶ್ರುನಯನಾ ಸ್ಥಿತಾರಾಮಾ

ಚಂದ್ರನು, ನಾಯಾತಿ-ಬರುವದಿಲ್ಲ, ಕಾರಣಂ-ನಿಮಿತ್ತವು, ಕಿಂ-ಏನು, ಭವೇತ್-ಉಂಟಾಗಿದ್ದೀತು ॥ ೧೬ ॥ ಇತ್ಯೇವಂ-ಈ ಪ್ರಕಾರವಾಗಿ, ನಿತ್ಯಂ-ಪ್ರತಿ ದಿನವೂ, ಹೃದಿ-ಮನಸ್ಸಿನಲ್ಲಿ, ರಾಮಮೇವ-ರಾಮಚಂದ್ರನನ್ನೇ, ಚಿಂತಯನ್-ಧ್ಯಾನಿಸುತ್ತಿರುವವನಾಗಿ, ತಸ್ಮಿನ್-ಆ, ದಿನೆ-ದಿವಸದಲ್ಲಿ, ಅಪರರಾತ್ರೌ-ಆಂಜನೇಯನು ಲಂಕಾ ಪ್ರವೇಶ ಮಾಡಿದ ದಿನದ ರಾತ್ರಿ ಇಪ್ಪತ್ತು ಘಳಿಗೆಯ ಮೇಲೆ, ರಾಕ್ಷಸ-ರಾಕ್ಷಸರಿಗೆ, ಅಧಿಪಃ-ಸ್ವಾಮಿಯಾದ, ರಾವಣಃ-ರಾವಣನು ॥ ೧೭ ॥ ಸ್ವಪ್ನೇ-ತನಗಾದ ಕನಸಿನಲ್ಲಿ, ರಾಮೇಣ-ರಾಮಚಂದ್ರನಿಂದ, ಸಂದಿಷ್ಟಃ-ಕಳ ಹಿಸಲ್ಪಟ್ಟವನಾದ, ಕಶ್ಚಿತ್-ಒಬ್ಬಾನೊಬ್ಬನಾದ, ವಾನರಃ-ಕಪಿಯು, ಕಾಮರೂಪ-ಇಚ್ಛಾ ರೂಪವನ್ನು, ಧರಃ-ವಹಿಸಿರುವವನಾಗಿ, ಸೂಕ್ಷ್ಮಃ-ಅಲ್ಪಾಕೃತಿಯುಳ್ಳವನಾಗಿ, ಆಗತ್ಯ-ಲಂಕೆಯನ್ನು ಕುರಿತು ಬಂದು, ವೃಕ್ಷ-ಮರದ, ಅಗ್ರ-ತುದಿಯಲ್ಲಿ, ಸ್ಥಃ-ಇರುತ್ತಿರುವವನಾಗಿ, (ಸೀತಾಂ-ಸೀತೆಯನ್ನು,) ಅನುಪಶ್ಯತಿ-ನೋಡುತ್ತಲಿದ್ದಾನೆ ॥ ೧೮ ॥ ಇತಿ-ಹೀಗೆ, ಅದ್ಭುತಂ-ಆಶ್ಚರ್ಯಕರವಾದ, ಸ್ವಪ್ನಂ-ಕನಸನ್ನು, ದೃಷ್ಟ್ವಾ-ನೋಡಿ, ಸಃ-ಆ ರಾವಣನು, ಸ್ವಾತ್ಮನ್ಯೇವ-ತನ್ನೊಳಗೇನೆ, ಅನುಚಿಂತ್ಯ-ತಾನು ಆಲೋಚನೆ ಮಾಡಿ, ಕದಾಚಿತ್-ಬಂದುವೇಳೆ, ಸ್ವಪ್ನಃ-ಕನಸು, ಸತ್ಯಃ-ನಿಜವು, ಸ್ಯಾತ್-ಆದರೆ, ಅಹಂ-ನಾನು, ಏವಂ-ಹೀಗೆ, ಕರೋಮಿ-ಮಾಡುತ್ತೇನೆ, ॥ ೧೯ ॥ ಜಾನಕೀಂ-ಸೀತೆಯನ್ನು, ವಾಕ್ಯೈಃ-ಮಾತು, ಗಳೆಂಬ ಬಾಣಗಳಿಂದ, ವಿದ್ಧ್ವಾ-ಹೊಡದು, ನಿತರಾಂ-ಅತ್ಯಂತವಾಗಿ, ದುಃಖಿತಾಂ-ವ್ಯಥೆವುಳ್ಳವಳನ್ನಾಗಿ, ಅಹಂ-ನಾನು, ಕರೋಮಿ-ಮಾಡುತ್ತೇನೆ, ವಾನರಃ-ಕನಸಿನಲ್ಲಿ ಕಂಡ ಕಪಿಯು ದೃಷ್ಟ್ವಾ-ನನ್ನ ನಡತೆಯನ್ನುನೋಡಿ, ರಾಮಾಯ-ರಾಮಚಂದ್ರನಿಗೆ, ನಿವೇದಯತು-ತಿಳಿಸಲಿ ॥ ೨೦ ॥ ಇತ್ಯೇವಂ-ಈ ರೀತಿಯಾಗಿ, ಚಿಂತಯನ್-ಆಲೋಚನೆಮಾಡುತ್ತಿರುವವನಾಗಿ, ದ್ರುತಂ-ಬೇಗನೆ, ಸೀತಾ-ಸೀತಾದೇವಿಯ, ಸಮೀಪಂ-ಬದಿಯನ್ನು, ಅಗಮತ್-ಹೊಂದಿದನು, ಅಂಗನಾ-ಹೆಂಗಸಾದ, ಸೀತಾ-ಸೀತೆಯು, ನೂಪುರಾಣಾಂ-ಪಾದಾಭರಣಗಳ, ಕಿಂಕಿಣೀನಾಂ-ಗಜ್ಜೆಗಳ, ಸಿಂಜಿತಂ-ಧ್ವನಿಯನ್ನು, ಶ್ರುತ್ವಾ-ಕೇಳಿ, ॥ ೨೧ ॥ ಭೀತಾ-ಭಯಪಟ್ಟವಳಾಗಿ, ಸ್ವಾತ್ಮನ್ಯೇವ-ತನ್ನಲ್ಲಿಯೇ ತಾನು, ಲೀಯಮಾನಾ-ಅಡಗಿಕೊಂಡವಳಾಗಿ, ಸುಮಧ್ಯಮಾ-ಒಳ್ಳೇ ಮಧ್ಯಪ್ರದೇಶವುಳ್ಳ, (ಸೀತೆಯು,) ಅಧೋಮುಖೀ-ತಲೆಬಗ್ಗಿಸಿಕೊಂಡವಳಾಗಿ, ರಾಮ-ರಾಮಚಂದ್ರನಲ್ಲಿ, ಅರ್ಪಿತ-ಇರಿಸಲ್ಪಟ್ಟ, ಅಂತರಾ-ಮನೋ

ರ್ಪಿತಾಂತರಾ ॥ ೨೦ ॥ ರಾವಣೋಪಿತದಾಸೀತಾ ಮಾಲೋಕ್ಯಾಹಸುಮಧ್ಯಮೆ । ಮಾಂಪೃಷ್ಟ್ವಾ ಕಿಂವೃಥಾಸುಭ್ರು ಸ್ವಾತ್ಮನ್ಯೇವವಿಲೀಯ್ಯಸೆ ॥ ೨೩ ॥ ರಾಮೋವನಚರಾಣಾಂಹಿ ಮಧ್ಯೇತಿಷ್ಠತಿಸಾನುಜಃ । ಕದಾಚಿದ್ದೃಶ್ಯತೇಕಸ್ಮಿತ್ಕದಾಚಿನ್ನೈವದೃಶ್ಯತೆ ॥ ೨೪ ॥ ಮಯಾತುಬಹುಧಾಲೋಕಾಃ ಪ್ರೇಷಿತಾಸ್ತಸ್ಯದರ್ಶನೆ । ನಪಶ್ಯಂತಿಪ್ರಯತ್ನೇನವೀಕ್ಷ್ಯಮಾಣಾಸ್ಸಮಂತತಃ॥೨೫॥ ಕಿಂಕರಿಷ್ಯಸಿರಾಮೇಣನಿಸ್ಸ್ಪೃಹೇಣಸದಾತ್ವಯಿ । ತ್ವಯಾಸಹಾಲಿಂಗಿತೋಪಿಸವಿಹಾಪಸ್ಥೋಪಿಸರ್ವದಾ॥೨೬॥ ಹೃದಯೆಸ್ಯನಚಸ್ನೇಹಸ್ತ್ವಯಿರಾಮಸ್ಯಜಾಯತೆ । ತ್ವತ್ಕೃತಾನ್ಸರ್ವಭೋಗಾಂಶ್ಚ ತ್ವದ್ಗುಣಾನಪಿರಾಘವಃ ॥೨೭॥ ಭುಂಜಾನೋಪಿನಜಾನಾತಿ ಕೃತಘ್ನೋ ನಿರ್ಗುಣೋಧಮಃ । ತ್ವಮಾನೀತಾಮಯಾಸಾಧ್ವೀ ದುಃಖಶೋಕಸಮಾಕುಲಾ ॥ ೨೮ ॥

ವೃತ್ತಿಶೆಲ್ಲವಳಾಗಿ, ಸ್ಥಿತಾ-ಇದ್ದಳು, ॥ ೨೦ ॥ ರಾವಣೋಪಿ-ರಾವಣನು, ಸೀತಾಂ-ಸೀತೆಯನ್ನು, ಆಲೋಕ್ಯ-ನೋಡಿ, ಆಹ-ಹೇಳಿದನು, ಸುಮಧ್ಯಮೇ-ಸೀತೆಯೇ, ಮಾಂದೃಷ್ಟ್ವಾ-ನನ್ನನ್ನು ನೋಡಿ, ಸುಭ್ರು-ಒಳ್ಳೇ ಕಣ್ಣು ಹುಬ್ಬುಗಳುಳ್ಳವಳೇ, ಸ್ವಾತ್ಮನ್ಯೇವ-ನಿನ್ನಲ್ಲಿ ನೀನೆ, ವೃಥಾ-ಸುಮ್ಮನೆ, ಕಿಂವಿಲೀಯಸೇ-ನಿನ್ನ ಅಂಗಗಳನ್ನು ಏನು ಮರೆಮಾಡಿಕೊಳ್ಳುತ್ತೀ ॥ ೨೩ ॥ ರಾಮಃ-ರಾಮಚಂದ್ರನು, ಸಾನುಜಃ-ತಮ್ಮನಿಂದ ಕೂಡಿದವನಾಗಿ, ವನಚರಾಣಾಂ-ಮೃಗಗಳ, ಮಧ್ಯೇ-ನಡುವೆ, ತಿಷ್ಠತಿ-ಇದ್ದಾನೆ, ಕದಾಚಿತ್-ಒಂದುವೇಳೆ, ದೃಶ್ಯತೇ-ಕಾಣಲ್ಪಡುತ್ತಾನೆ, ಕದಾಚಿತ್-ಒಂದುವೇಳೆ, ಕಸ್ಮಿದಪಿ-ಅಣ್ಣತಮ್ಮಂದಿರೊಳಗೊಬ್ಬನಾದರೂ, ನೈವದೃಶ್ಯತೇ-ಕಾಣಲ್ಪಡುವದೇ ಇಲ್ಲ, ॥ ೨೪ ॥ ಮಯಾತು-ನನ್ನಿಂದ, ಬಹುಧಾ-ಅನೇಕ ವಿಧವಾಗಿ, ಲೋಕಾಃ-ಜನರು, ತಸ್ಯ-ರಾಮಚಂದ್ರನ, ದರ್ಶನೇ-ನೋಡುವ ವಿಷಯದಲ್ಲಿ, ಪ್ರೇಷಿತಾಃ-ಕಳುಹಿಸಲ್ಪಟ್ಟರು, ಪ್ರಯತ್ನೇನ-ಪ್ರಯತ್ನದಿಂದ, ಸಮಂತತಃ-ಯಲ್ಲಾ ಕಡೆಯಲ್ಲಿಯೂ, ವೀಕ್ಷ್ಯಮಾಣಾಃ-ಹುಡಿಕಿ ನೋಡುತ್ತಿರುವವರಾದಾಗ್ಯೂ, ನಪಶ್ಯಂತಿ-ನೋಡಿದವರಾಗಲಿಲ್ಲ, ॥ ೨೫ ॥ ತ್ವಯಿ-ನಿನ್ನಮೇಲೆ, ನಿಸ್ಸ್ಪೃಹೇಣ-ಇಚ್ಛೆಯಿಲ್ಲದೇ ಇರುವ, ರಾಮೇಣ-ರಾಮಚಂದ್ರನಿಂದ, ಕಿಂಕರಿಷ್ಯಸಿ-ಏನು ಮಾಡುತ್ತೀ, ತ್ವಯಾ-ನಿನ್ನಿಂದ, ಸದಾ-ಯಾವಾಗಲೂ, ಆಲಿಂಗಿತೋಪಿ-ಆಲಿಂಗಿಸಲ್ಪಟ್ಟವನಾದಾಗ್ಯೂ, ಸರ್ವದಾ-ಯಾವಾಗಲೂ, ಸವಿಹಾಪಸ್ಥೋಪಿ- ಹತ್ರ ಯಿದ್ದವನಾದಾಗ್ಯೂ, ॥ ೨೬ ॥ ತ್ವಯಿ-ನಿನ್ನಮೇಲೆ, ಅಸ್ಯ-ಈ, ರಾಮಸ್ಯ-ರಾಮಚಂದ್ರನಿಗೆ, ಸ್ನೇಹಃ-ವಿಶ್ವಾಸವು, ನಜಾಯತೇ-ಹುಟ್ಟುವದಿಲ್ಲ, ತ್ವತ್ಕೃತಾನ್-ನಿನ್ನಿಂದ ಯುಂಟಾಗಿದ್ದ, ಸರ್ವ-ಯೆಲ್ಲಾ, ಭೋಗಾನ್ಶ್ಚ-ಸುಖಗಳನ್ನು, ತ್ವದ್ಗುಣಾನಪಿ-ನಿನ್ನ ಸದ್ಗುಣಗಳನ್ನು, ರಾಘವಃ-ರಾಮಚಂದ್ರನು, ॥ ೨೭ ॥ ಭುಂಜಾನೋಪಿ-ಅನುಭವಿಸಿದವನಾದಾಗ್ಯೂ, ನಜಾನಾತಿ-ತಿಳಿದವನಾಗಲಿಲ್ಲ, (ಆದ್ದರಿಂದ) ಕೃತಘ್ನಃ-ಉಪಕಾರವನ್ನು ಎಣಿಸದೇ ಇರತಕ್ಕವನು, ನಿರ್ಗುಣಃ-ಗುಣ ಹೀನನು, ಅಧಮಃ-ನೀಚನು. (ಆಗಿರುತ್ತಾನೆ) ದುಃಖ-ದುಃಖದಿಂದಲೂ, ಶೋಕ-ವ್ಯಥೆಯಿಂದಲೂ, ಸಮಾಕುಲಾ-ಕೂಡಿದವಳಾದ, ಸಾಧ್ವೀ-ಪತಿವ್ರತೆಯಾದ, ತ್ವಂ-ನೀನು, ಮಯಾ-ನನ್ನಿಂದ, ಆನೀ

ಇಹಾಸೀಮುಪಿನಾಯಾತಿಭಕ್ತಿಹೀನಃಕಥಂವ್ರಜೇತ್ । ನಿಸ್ಸತ್ವೋನಿರ್ಮಮೋಮಾನೀ ಮೂಢಃಪಂಡಿತಮಾನವಾನ್ ॥ ೨೯ ॥ ನರಾಧಮಂತ್ವದ್ವಿಮುಖಂಕಿಂಕರಿಷ್ಯಸಿಭಾಮಿನೀ । ತ್ವಯ್ಯತೀವಸಮಾಸಕ್ತಂಮಾಂಭಜಸ್ವಾಸುರೋತ್ತಮಂ ॥ ೩೦ ॥ದೇವಗಂಧರ್ವನಾಗಾನಾಂ ಯಕ್ಷಕಿನ್ನರಯೋಷಿತಾಂ । ಭವಿಷ್ಯಸಿನಿಯೋಕ್ತ್ರೀತ್ವಂಯದಿಮಾಂಪ್ರತಿಪದ್ಯಸೆ ॥ ೩೧ ॥ ರಾವಣಸ್ಯವಚಶ್ಶ್ರುತ್ವಾ ಸೀತಾಮರ್ಷಸಮನ್ವಿತಾ । ಉವಾಚಾಧೋಮುಖೀಭೂತ್ವಾ ನಿಧಾಯತೃಣಮಂತರೆ ॥ ೩೨ ॥ ರಾಘವಾದ್ಬಿಭ್ಯತಾನೂನಂಭಿಕ್ಷುರೂಪಂತ್ವಯಾಧೃತಂ । ರಹಿತೇರಾಘವಾಭ್ಯಾಂತ್ವಂಶುನೀವಹವಿರಧ್ವರೆ ॥ ೩೩ ॥ ಹೃತವಾನಸಿಮಾಂನೀಚತತ್ಫಲಂಪ್ರಾಪ್ಸ್ಯಸೆಚಿರಾತ್ । ಯದಾರಾಮಶರಾಘಾತ ವಿದಾರಿತವಪುರ್ಭವಾನ್ ॥ ೩೪ ॥ ಜ್ಞಾಸ್ಯಸೆಮಾನು

ಷಾ-ತರಲ್ಪಟ್ಟವನಾಗಿದ್ದೀ ॥ ೨೮ ॥ ಇಹಾಸೀಮುಪಿ-ಈಗಲಾದರೂ, ನಾಯಾತಿ-ಬರುವಂಥಾವನಾಗಲಿಲ್ಲ, ಭಕ್ತಿಹೀನಃ-ಭಕ್ತಿಯಿಲ್ಲದವನು, ಕಥಂ-ಹ್ಯಾಗೆ, ವ್ರಜೇತ-ಹೋಗಿಬರತ್ತಾನೆ, ನಿಸ್ಸತ್ವಃ-ನಿರ್ಬಲನಾದವನು, ನಿರ್ಮಮಃ-ಮಮತೆಯಿಲ್ಲದವನು, ಮಾನೀ-ಅಭಿಮಾನವುಳ್ಳವನು, ಮೂಢಃ-ಮುಗ್ಧನು, ಪಂಡಿತಮಾನವಾನ್-ಪಂಡಿತನೆಂತ ಅಭಿಮಾನವುಳ್ಳವನು,ಆಗಿದ್ದಾನೆ ॥ ೨೯ ॥ ಭಾಮಿನೀ-ಸೀತೆಯೇ, ನರಾಧಮಂ-ಮನುಷ್ಯರಲ್ಲಿ ನೀಚನಾದ, ತ್ವದ್ವಿಮುಖಂ-ನಿನ್ನಮೇಲೆ ಅಪೇಕ್ಷೆ ಯಿಲ್ಲದ, (ರಾಮಚಂದ್ರನನ್ನು) (ಕುರಿತು) ಕಿಂಕರಿಷ್ಯಸಿ-ಏನುಮಾಡುತ್ತೀ, ತ್ವಯಿ-ನಿನ್ನಮೇಲೆ, ಅತೀವ-ಹೆಚ್ಚಾಗಿ, ಸಮಾಸಕ್ತಂ-ಅನುರಾಗವುಳ್ಳ, ಅಸುರ-ರಾಕ್ಷಸರೊಳಗೆ, ಉತ್ತಮಂ-ಶ್ರೇಷ್ಠನಾದ, ಮಾಂ-ನನ್ನನ್ನು, ಭಜಸ್ವ-ಹೊಂದುವವಳಾಗು, ॥ ೩೦ ॥ ದೇವ-ದೇವತೆಗಳ, ಗಂಧರ್ವ-ಗಂಧರ್ವರ, ನಾಗಾನಾಂ-ಸರ್ಪಗಳ, ಯಕ್ಷ-ಯಕ್ಷರ, ಕಿನ್ನರ-ಕಿನ್ನರರ, ಯೋಷಿತಾಂ-ಹೆಂಗಸರಿಗೆ, ಮಾಂ-ನನ್ನನ್ನು, ಪ್ರತಿಪದ್ಯಸೆಯದಿ-ಹೊಂದಿದವಳಾದರೆ, ನಿಯೋಕ್ತ್ರೀ-ನಿಯಾಮಕಳಾದವಳು, ತ್ವಂ-ನೀನು, ಭವಿಷ್ಯಸಿ-ಆಗುತ್ತಲಿದ್ದೀ, ॥ ೩೧ ॥ ರಾವಣಸ್ಯ-ರಾವಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಸೀತಾ-ಸೀತೆಯು, ಅಮರ್ಷ-ಕೋಪದಿಂದ, ಸಮನ್ವಿತಾ-ಕೂಡಿದವಳಾಗಿ, ತೃಣಂ-ಹುಲ್ಲುಕಡ್ಡಿಯನ್ನು, ಅಂತರೆ-ನಡುವೆ, ನಿಧಾಯ-ಇರಿಸಿ, ಅಧೋಮುಖೀ-ಕೆಳಮೊಗ ಸಿಕೊಂಡವಳು, ಭೂತ್ವಾ-ಆಗಿ, ಉವಾಚ-ಹೇಳಿದಳು, ॥ ೩೨ ॥ ರಾಘವಾತ್-ರಾಮಚಂದ್ರನಿಂದ, ಬಿಭ್ಯತಾ-ಭಯಪಡುತ್ತಿರುವ, ತ್ವಯಾ-ನಿನ್ನಿಂದ, ಭಿಕ್ಷುರೂಪಂ-ಯತಿರೂಪವು, ಕೃತಂ-ಮಾಡಲ್ಪಟ್ಟಿತು, ರಾಘವಾಭ್ಯಾಂ-ರಾಮಲಕ್ಷ್ಮಣರಿಂದ, ರಹಿತೆ-ಇಲ್ಲದ ಸಮಯದಲ್ಲಿ, ಅಧ್ವರೆ-ಯಜ್ಞದಲ್ಲಿ, ಹವಿಃ-ಹವಿರ್ದ್ರವ್ಯವು, ಶುನೀವ-ನಾಯಿಯಿಂದ ಕಡಿಯಲ್ಪಟ್ಟರೆ ಹ್ಯಾಗೊ ಆ ನಾಯಿಯಂತಾಗೆ, ॥ ೩೩ ॥ ಮಾಂ-ನನ್ನನ್ನು, ಹೃತವಾನ್-ಅಪಹರಿಸಿದವನು, ಅಸಿ-ಆಗಿದ್ದೀ, ನೀಚ-ನೀಚನಾದ ರಾವಣನೇ, ತತ್ಫಲಂ-ಅದರ ಫಲವನ್ನು, ಅಚಿರಾತ್-ಜಾಗ್ರತೆಯಾಗಿ, ಪ್ರಾಪ್ಸ್ಯಸೆ-ಹೊಂದುತ್ತಲಿದ್ದೀ, ಯದಾ-ಯಾವಾಗ, ರಾಮ-ರಾಮಚಂದ್ರನ, ಶರ-ಬಾಣದ, ಆಘಾತ-ಪೆಟ್ಟಿನಿಂದ, ವಿದಾರಿತ-ಸೀಳಲ್ಪಟ್ಟ, ವಪುಃ-ಶರೀರವುಳ್ಳವನು, ಭ

ಷಂರಾಮಂಗಮಿಷ್ಯಸಿಯಮಾತಿಕಂ । ಸಮುದ್ರಂಶೋಷಯಿತ್ವಾವಾ ಶರೈರ್ಬಧ್ವಾಥವಾರಿಧಿಂ ॥ ೩೫ ॥ ಹಂತುಂತ್ವಾಂಸ
ಮರೇರಾಮೊ ಲಕ್ಷ್ಮಣೇನಸಮನ್ವಿತಃ । ಆಗಮಿಷ್ಯತ್ಯಸಂದೇಹೊ ದ್ರಕ್ಷ್ಯಸೇರಾಕ್ಷಸಾಧಮ ॥ ೩೬ ॥ ತ್ವಾಂಸಪುತ್ರಂಸಹಬಲಂ
ಹತ್ವಾನೆಷ್ಯತಿಮಾಂಪುರಂ ॥ ಶ್ರುತ್ವಾರಕ್ಷಃಪತಿಂಕ್ರುದ್ಧೊ ಜಾನಕ್ಯಾಃಪರುಷಾಕ್ಷರಂ ॥ ೩೭ ॥ ವಾಕ್ಯಂಕ್ರೊಧಸಮಾವಿಷ್ಟ
ಖಡ್ಗಮುದ್ಯಮ್ಯಸತ್ವರಃ । ಹಂತುಂಜನಕರಾಜಸ್ಯತನಯಾಂತಾಮ್ರಲೊಚನಃ ॥ ೩೮ ॥ ಮಂಡೊದರೀನಿವಾರ್ಯಾಹ
ಪತಿಂಪತಿಹಿತೇರತಾ । ತ್ಯಜೆನಾಂಮಾನುಷೀಂಹೀನಾಂದುಃಖಿತಾಂಕೃಪಣಾಂಕೃಶಾಂ ॥ ೩೯ ॥ ದೇವಗಂಧರ್ವನಾಗಾನಾಂ

ವರ್ಷ-ನೀನು, ಆಗುತ್ತೀಯೊ, ॥ ೩೪ ॥ (ಶಿಪಾ-ಅಗ,) ರಾಮಂ-ರಾಮಚಂದ್ರನನ್ನು, ಮಾನುಷಂ-ಮನುಷ್ಯನನ್ನಾಗಿ, ಜ್ಞಾಸ್ಯಸೆ-ತಿಳಿಯುತ್ತೀ, ಯಮಾಂತಿಕಂ-ಯಮನ ಸವಿಾಪವನ್ನುಕುರಿತು, ಗಮಿಷ್ಯಸಿ-ಹೋಗುತ್ತಲಿದ್ದೀ, ಸಮುದ್ರಂ-ಸಮುದ್ರವನ್ನು, ಶೋಷಯಿತ್ವಾವಾ-ನೀರೇ ಇಲ್ಲದಂತೆಮಾಡಿ, ವಾರಿಧಿಂ-ಸಮುದ್ರವನ್ನು, ಶರೈಃ-ಬಾಣಗಳಿಂದ, ಬಧ್ವಾವಾ-ಸೇತುವೆಯನ್ನಾದರೂ ಕಟ್ಟಿ, ॥ ೩೫ ॥ ಸಮರೆ-ಯುದ್ಧದಲ್ಲಿ, ತ್ವಾಂ-ನಿನ್ನನ್ನು, ಹಂತುಂ-ಕೊಲ್ಲುವದಕ್ಕೆ, ರಾಮಃ-ರಾಮಚಂದ್ರನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಸಮನ್ವಿತಃ-ಕೂಡಿದವನಾಗಿ, ಆಗಮಿಷ್ಯತಿ-ಬರುತ್ತಲಿದ್ದಾನೆ, ರಾಕ್ಷಸ-ರಾಕ್ಷಸರೊಳ್ಳಗೆ, ಅಧಮ-ನೀಚನಾದ, (ರಾವಣನೇ,) ದ್ರಕ್ಷ್ಯಸೆ-ರಾಮನನ್ನುನೋಡುವಿ, ಅಸಂದೇಹಃ-ಸಂಶಯವಿಲ್ಲವು, ॥ ೩೬ ॥ ಸಪುತ್ರಂ-ಮಕ್ಕಳಿಂದೊಡಗೂಡಿದ, ಸಬಲಂ-ಸೇನೆಯಿಂದಯುಕ್ತನಾದ, ತ್ವಾಂ-ನಿನ್ನನ್ನು, ಹತ್ವಾ-ಕೊಂದು, ಮಾಂ-ನನ್ನನ್ನು, ಪುರಂ-ಅಯೋಧ್ಯಾ ಪುರವನ್ನುಕುರಿತು, ನೇಷ್ಯತಿ-ಕರಕೊಂಡು ಹೋಗುತ್ತಾನೆ, ರಕ್ಷಃಪತಿಃ-ರಾಕ್ಷಸರಿಗೆ ಸ್ವಾಮಿಯಾದ ರಾವಣನು, ಜಾನಕ್ಯಾಃ-ಸೀತೆಯ, ಪರುಷ-ಕ್ರೂರವಾದ, ಅಕ್ಷರಂ-ವರ್ಣಗಳುಳ್ಳ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಕ್ರುದ್ಧಃ-ಕೋಪಿಷ್ಠನಾಗಿ, ॥ ೩೭ ॥ ಕ್ರೋಧ-ಕೋಪದಿಂದ, ಸಮಾವಿಷ್ಟಃ-ಕೂಡಿರುವ ರಾವಣನು, ಸತ್ವರಃ-ಜಾಗ್ರತೆಯುಳ್ಳವನಾಗಿ, ಖಡ್ಗಂ-ಕತ್ತಿಯನ್ನು, ಉದ್ಯಮ್ಯ-ಎತ್ತಿ, ತಾಮ್ರ-ಕೆಂಪಾಗಿರುವ, ಲೋಚನಃ-ಕಣ್ಣುಗಳುಳ್ಳವನಾಗಿ, ಜನಕರಾಜಸ್ಯ-ಜನಕನೆಂಬ ಧೊರೆಗೆ, ತನಯಾಂ-ಮಗಳಾದ ಸೀತೆಯನ್ನು, ಹಂತುಂ-ಕೊಲ್ಲುವದಕ್ಕೆ, (ಉದ್ಯತಃ-ಉದ್ಯುಕ್ತನು, ಅಭವತ್-ಆದನು) ॥ ೩೮ ॥ ಪತಿ-ಗಂಡನಾದ ರಾವಣನ, ಹಿತೆ-ಕ್ಷೇಮಚಿಂತೆಯಲ್ಲಿ, ರತಾ-ತಾತ್ಪರ್ಯ ಉಳ್ಳವಳಾದ, ಮಂಡೋದರೀ-ಮಂಡೋದರಿಯೆಂಬ ಹೆಸರುಳ್ಳ ರಾವಣನ ಪಟ್ಟದ ಹೆಂಡತಿಯು, ಪತಿಂ-ರಾವಣನನ್ನು, ನಿವಾರ್ಯ-ಸೀತೆಯನ್ನು ಕೊಲ್ಲುವ ಕೆಲಸದಿಂದ ಅಡ್ಡಿಮಾಡಿ, ಆಹ-ಹೇಳಿದಳು, ಮಾನುಷೀಂ-ಮನುಷ್ಯಳಾದ, ಹೀನಾಂ-ಸುಖದಿಂದ ಹೀನಳಾದ, ದುಃಖಿತಾಂ-ರಾಮ ವಿಯೋಗದಿಂದ ದುಃಖಿತಳಾದ, ಕೃಪಣಾಂ-ಅನ್ಯಾನುರಾಗದಿಂದ ದೀನಳಾದ, ಕೃಶಾಂ-ಅನಶನದಿಂದ ಬಡವಾದ ದೇಹವುಳ್ಳವಳಾದ, ಏನಾಂ-ಈ ಸೀತೆಯನ್ನು, ತ್ಯಜ-ಬಿಡು, ॥ ೩೯ ॥ ದೇವ-ದೇವತೆಗಳ, ಗಂಧರ್ವ-ಗಂಧರ್ವರ, ನಾಗಾನಾಂ-ಸರ್ಪಗಳ. ಬಹ್ವ್ಯಃ-ಅನೇಕರಾದ, ವರ-ಶ್ರೇಷ್ಠರಾದ, ಅಂಗನಾಃ-ಹೆಂಗಸರು, ಸಂಹೃಷ್ಟಾಃ-ಬಹಳ ಸಂತೋಷವುಳ್ಳವರಾಗಿ, ಮದ-ಪ್ರಾಯಮದದಿಂದ-ಮತ್ತಪ್ರಚಿತವಾದ, ವಿಲೋಚನಾಃ-ಕಣ್ಣುಗಳುಳ್ಳ (ದೇವಗಂಧರ್ವಾದಿಗಳ ಹೆಂಗಸರು) ತ್ವಾಮೇವ-ನಿನ್ನನ್ನೇ, ಉಚೆತ್ಕಃ-ಉತ್ಕೃಷ್ಟವಾಗಿ

ಬಹ್ವ್ಯಃಸಂತಿವರಾಂಗನಾಃ। ತ್ವಾಮೇವವರಯಂತ್ವಚ್ಛ್ರೈರ್ಮದಮತ್ತವಿಲೋಚನಾಃ ॥ ೪೦ ॥ ತತೋಬ್ರುವಿದ್ದಶಗ್ರೀವೋ
ರಕ್ಷಸೀರ್ವಿಕೃತಾನನಾಃ। ಯಥಾಮೇವಶಗಾಸೀತಾಭವಿಷ್ಯತಿಸಕಾಮನಾ। ತಥಾಯತಧ್ವಂತ್ವರಿತಂ ತರ್ಜನಾದರಣಾದಿ
ಭಿಃ ॥ ೪೧ ॥ ದ್ವಿಮಾಸಾಭ್ಯಂತರೇಸೀತಾ ಯದಿಮೇವಶಗಾಭವೇತ್। ತದಾಸರ್ವಸುಖೋಪೇತಾ ರಾಜ್ಯಂಭೋಕ್ಷ್ಯತಿಸಾಮ
ಯಾ ॥ ೪೨ ॥ ಯದಿಮಾಸದ್ವಯಾದೂರ್ಧ್ವಂ ಮಚ್ಛಯ್ಯಾಂನಾಭಿನಂದತಿ ॥ ತದಾಮೇಪ್ರಾತರಾಶಾಯ ಹತ್ವಾಕುರುತ
ಮಾನುಷೀಂ ॥ ೪೩ ॥ ಇತ್ಯುಕ್ತ್ವಾಪ್ರಯಯೌಸ್ತ್ರೀಭಿಃ ರಾವಣೋಂತಃಪುರಾಲಯಂ। ರಾಕ್ಷಸ್ಯೋಜಾನಕೀಂಮೈತ್ಯಭೀ
ಷಯಂತ್ಯಃಸ್ವತರ್ಜನೈಃ ॥ ೪೪ ॥ ತತ್ರೈಕಾಜಾನಕೀಂಮಾಹ ಯೌವ್ವನಂತೇವೃಥಾಗತಂ। ರಾವಣೇನಸಮಾಸಾದ್ಯಸಫ

ವರಯಂತಿ-ಕೋರುತ್ತಲಿದ್ದಾರೆ, ॥ ೪೦ ॥ ತತಃ-ಆಬಳಿಕ, ದಶಗ್ರೀವಃ-ರಾವಣನು, ವಿಕೃತಾ-ವಿಕಾರವಾದ, ಆನನಾಃ-ಮುಖಗಳುಳ್ಳ, ರಾಕ್ಷಸೀಃ-ರಾಕ್ಷಸಸ್ತ್ರೀಯರನ್ನು ಕುರಿತು, ಅಬ್ರುವೀತ-ಹೇಳಿದನು, ಸಕಾಮನಾ-ನನ್ನಮೇಲೆ ಮೋಹವುಳ್ಳವಳಾಗಿ, ಸೀತಾ-ಸೀತೆಯು, ಮೇ-ನನಗೆ, ವಶಗಾ-ಸ್ವಾಧೀನಳು, ಯಥಾಭವಿಷ್ಯತಿ-ಹ್ಯಾಗೆ ಆಗುತ್ತಾಳೋ, ತರ್ಜನ-ಭಯಪಡಿಸುವ ಕ್ರೂರಗಳಾದ ಉಪಾಯಗಳಿಂದಲೂ, ಆದರಣ-ವಿಶ್ವಾಸಸೂಚಕವಾದ ಸಮಾಧಾನ ಉಪಾಯದಿಂದಲೂ, ಆದಿ-ಇವೇ ಮೊದಲಾದ ಉಪಾಯಗಳಿಂದ, ತ್ವರಿತಂ-ಶೀಘ್ರವಾಗಿ, ತಥಾಯತಧ್ವಂ-ಹಾಗೆ ಪ್ರಯತ್ನಮಾಡಿರಿ, ॥ ೪೧ ॥ ದ್ವಿಮಾಸ-ಎರಡುತಿಂಗಳುಗಳ, ಅಭ್ಯಂತರೇ-ಮಧ್ಯದೊಳಗೆ, ಸೀತಾ-ಸೀತೆಯು, ಮೇ-ನನಗೆ, ವಶಗಾ-ಸ್ವಾಧೀನಳಾದವಳು, ಯದಿಭವೇತ್-ಆದವಳಾದರೆ, ತದಾ-ಆಗ, ಸರ್ವ-ಸಮಸ್ತವಾದ, ಸುಖ-ರಾಜಸುಖಗಳಿಂದ, ಉಪೇತಾ-ಕೂಡಿದವಳಾಗಿ, ಸಾ-ಆ ಸೀತೆಯು, ಮಯಾ-ನನ್ನಿಂದ ಕೂಡಿದವಳಾಗಿ, ರಾಜ್ಯಂ-ರಾಜ್ಯಸುಖವನ್ನು, ಭೋಕ್ಷ್ಯತಿ-ಅನುಭವಿಸುತ್ತಾಳೆ, ॥ ೪೨ ॥ ಮಾಸದ್ವಯಾತ್-ಎರಡುತಿಂಗಳಿಗಿಂತ. ಊರ್ಧ್ವಂ-ಆ ಮೇಲೆ, ಮಚ್ಛಯ್ಯಾಂ-ನನ್ನ ಹಾಸಿಗೆಯನ್ನು ಕುರಿತು, ನಾಭಿನಂದತಿಯದಿ-ಸಂತೋಷಿಸದೇ ಹೋದರೆ, ತದಾ-ಆಗ, ಮಾನುಷೀಂ-ಮನುಷ್ಯಳಾದ ಸೀತೆಯನ್ನು, ಹತ್ವಾ-ಕೊಂದು, ಮೇ-ನನ್ನ, ಪ್ರಾತರಾಶಾಯ-ಬೆಳಗಿನ ಭೋಜನಕ್ಕಾಗಿ, ಕುರುತ-ಪಕ್ವವಾಗಿ ಅಡಿಗೆ ಮಾಡಿರಿ, ॥ ೪೩ ॥ ಇತಿ-ಹೀಗೆ, ಉಕ್ತ್ವಾ-ಹೇಳಿ, ರಾವಣಃ-ರಾವಣನು, ಸ್ತ್ರೀಭಿಃ-ಹೆಂಗಸರಿಂದ ಕೂಡಿದವನಾಗಿ, ಅಂತಃಪುರ-ಅಂತಃಪುರದ,ಆಲಯಂ-ಮನೆಯನ್ನು ಕುರಿತು, ಯಯೌ-ಹೊರಟು ಹೋದನು, ರಾಕ್ಷಸ್ಯಃ-ರಾಕ್ಷಸಸ್ತ್ರೀಯರುಗಳು, ಏತ್ಯ-ಸೀತೆಯ ಹತ್ತರಕ್ಕೆ ಬಂದು, ಸ್ವತರ್ಜನೈಃ-ತಮ್ಮ ಭಯಂಕರವಾದ ಉಪಾಯಗಳಿಂದ, ಜಾನಕೀಂ-ಸೀತೆಯನ್ನು, ಭೀಷಯಂತ್ಯಃ-ಭಯಪಡಿಸುತ್ತಿರುವವರಾಗಿ, ॥ ೪೪ ॥ ತತ್ರ-ಆ ರಕ್ಕಸಸ್ತ್ರೀ ಮಧ್ಯದೊಳಗೆ, ಏಕಾ-ಒಬ್ಬಳು. ಜಾನಕೀಂ-ಸೀತೆಯನ್ನು ಕುರಿತು, ಆಹ-ಹೇಳಿದಳು.ತೇ-ನಿನ್ನ, ಯೌವ್ವನಂ-ಪ್ರಾಯವು, ವೃಥಾ-ವ್ಯರ್ಥವಾಗಿ, ಗತಂ-ಹೋಯಿತು, ರಾವಣೇನ-ರಾವಣನಿಂದ, ಸಮಾಸಾದ್ಯತೇ-ಹೊಂದುವದಾದರೆ, ಸಫಲಂ-ಸಾರ್ಥಕವು, ಭವಿ

ಲಂತುಭವಿಷ್ಯತಿ || ೪೫ || ಅಪರಾ ಚಾಹಕೋಪೇನಕಿಂವಿಲಂಬೇನಜಾನಕೀ | ಇದಾನೀಂಛಿದ್ಯತಾಮಂಗಂವಿಭಜ್ಯಚಪೃಥಕ್ಪೃ
ಥಕ್ || ೪೬ || ಅನ್ಯಾತುಖಡ್ಗಮುದ್ಯಮ್ಯಜಾನಕೀಂಹಂತುಮುದ್ಯತಾ | ಅನ್ಯಾಕರಾಳವದನಾವಿದಾರ್ಯಾಸ್ಯಮಭೀಷ
ಯತ್ || ೪೭ || ಏವಂತಾಂಭೀಷಯಂತೀಸ್ತಾ ರಾಕ್ಷಸೀರ್ವಿಕೃತಾನನಾಃ | ನಿವಾರ್ಯತ್ರಿಜಟಾವೃದ್ಧಾರಾಕ್ಷಸೀವಾಕ್ಯಮ
ಬ್ರವೀತ್ || ೪೮ || ಶೃಣುಧ್ವಂದುಷ್ಟರಾಕ್ಷಸ್ಯೋಮದ್ವಾಕ್ಯಂವೋಹಿತಂಭವೇತ್ || ೪೯ || ನಭೀಷಯಧ್ವಂರುದತೀಂನಮ
ಸ್ಕುರುತಜಾನಕೀಂ || ಇದಾನೀಮೇವಮೇಸ್ವಪ್ನೇ ರಾಮಃಕಮಲಲೋಚನಃ || ೫೦ || ಆರುಹ್ಯೈರಾವತಂಶುಭ್ರಂಲಕ್ಷ್ಮಣೇನ
ಸಮಾಗತಃ | ದಗ್ಧ್ವಾಲಂಕಾಂಪುರೀಂಸರ್ವಾಂ ಹತ್ವಾರಾವಣಮಾಹವೇ || ೫೧ || ಆರೋಪ್ಯಜಾನಕೀಂಸ್ವಾಂಕೇಸ್ಥಿತೋಹ್ಯ

ದ್ರಿ-ಆಗುತ್ತೆ || ೪೫ || ಅಪರಾ-ಮತ್ತೊಬ್ಬಳು, ಕೋಪೇನ-ಸಿಟ್ಟಿನಿಂದ, ಆಹ-ಹೇಳಿದಳು, ವಿಲಂಬೇನ-ತಾಮಸಮಾಡಿದ್ದರಿಂದ, ಕಿಂ-ಏನು ಪ್ರಯೋಜನವು, ಜಾನಕೀ-ಸೀತೆಯೇ, ಇದಾನೀಂ-ಈಗಲೇ, ಛೇದ್ಯತಾಂ-ಕತ್ತರಿಸಲ್ಪಡಲಿ, ಪೃಥಕ್ಪೃಥಕ್-ಬ್ಯಾರೆ ಬ್ಯಾರೆ, ಅಂಗಂ-ಅವಯವವನ್ನು, ವಿಭಜ್ಯ-ಭಾಗ ಮಾಡಿಕೊಂಡು, ಪಚ್ಯತಾಂ-ಪಕ್ವಮಾಡಲ್ಪಡಲಿ, || ೪೬ || ಅನ್ಯಾ-ಬೇರೊಬ್ಬಳು, ಖಡ್ಗಂ-ಕತ್ತಿಯನ್ನು, ಉದ್ಯಮ್ಯ-ಎತ್ತಿ, ಜಾನಕೀಂ-ಸೀತೆಯನ್ನು, ಹಂತುಂ-ಕೊಲ್ಲುವದಕ್ಕೆ, ಉದ್ಯತಾ-ಸಿದ್ಧಳಾದಳು, ಕರಾಳ-ಕೋರೆಗಳು ಮುಂತಾದವು ಇರುವ ದ್ದರಿಂದ ಭಯಂಕರವಾದ, ವದನಾ-ಮುಖವುಳ್ಳವಳಾದ, ಅನ್ಯಾ-ಇನ್ನೊಬ್ಬಳು, ಆಸ್ಯ-ಬಾಯಿಯನ್ನು, ವಿದಾರ್ಯ-ವಿಸ್ತರಿಸಿ, ಅಭೀಷಯತ-ಭಯಪಡಿಸಿದಳು || ೪೭ || ವಿಕೃತ-ವಿಕಾರವಾದ, ಆನನಾಃ-ಮುಖಗಳುಳ್ಳವರಾದ, ಏವಂ-ಈ ರೀತಿಯಾಗಿ, ತಾಂ-ಆ ಸೀತೆಯನ್ನು, ಭೀಷಯಂತೀಃ-ಭಯಪಡಿಸುತ್ತಿರುವವರಾದ, ತಾಃ-ಆ, ರಾಕ್ಷಸೀಃ-ರಾಕ್ಷಸ ಸ್ತ್ರೀಯರನ್ನು, ವೃದ್ಧಾ-ಮುದುಕಿಯಾದ, ರಾಕ್ಷಸೀ-ರಾಕ್ಷಸಿಯಾದ, ತ್ರಿಜಟಾ-ತ್ರಿಜಟೆಯು, ನಿವಾರ್ಯ-ತಿರಸ್ಕರಿಸಿ, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದಳು || ೪೮ || ದುಷ್ಟ-ಕೆಟ್ಟವರಾದ, ರಾಕ್ಷಸ್ಯಃ-ರಾಕ್ಷಸ ಹೆಂಗಸರೇ, ಮದ್ವಾಕ್ಯಂ-ನನ್ನ ಮಾತನ್ನು, ಶೃಣುಧ್ವಂ-ಕೇಳಿರಿ, ವಃ-ನಿಮಗೆ, ಹಿತಂ-ಆ ಮಾತನ್ನು ಕೇಳಿದರೆ ಕ್ಷೇಮವಾಗುತ್ತೆ || ೪೯ || ರುದತೀಂ-ಅಳುತ್ತಿರುವ, ಜಾನಕೀಂ-ಸೀತೆಯನ್ನು, ನಭೀಷಯಧ್ವಂ-ಭಯ ಪಡಿಸಬೇಡಿರಿ, ನಮಸ್ಕುರುತ-ನಮಸ್ಕಾರವನ್ನು ಮಾಡಿ, ಇದಾನೀಮೇವ-ಈಗಲೇ, ಮೇ-ನನ್ನ, ಸ್ವಪ್ನೇ-ಕನಸಿನಲ್ಲಿ, ಕಮಲ-ಪದ್ಮ ದಂತೆ, ಲೋಚನಃ-ಕಣ್ಣುಗಳುಳ್ಳವನಾದ, ರಾಮಃ-ರಾಮಚಂದ್ರನು || ೫೦ || ಲಕ್ಷ್ಮಣೇನ-ಲಕ್ಷ್ಮಣನ ಸಂಗಡ, ಶುಭ್ರಂ-ಬಿಳುಪಾದ, ಐರಾವತಂ-ಐರಾವತವೆಂಬ ಆನೆಯನ್ನು, ಆರುಹ್ಯ-ಏರಿ, ಸಮಾಗತಃ-ಬಂದನು, ಸರ್ವಾಂ-ವಿಶಿಷ್ಟವಾದ, ಲಂಕಾಂ-ಲಂಕೆಯೆಂಬ, ಪುರೀಂ-ಪಟ್ಟಣವನ್ನು, ದಗ್ಧ್ವಾ-ಸುಟ್ಟು, ಆಹವೇ-ಯುದ್ಧದಲ್ಲಿ, ರಾವಣಂ-ರಾವಣನನ್ನು, ಹ ತ್ವಾ-ಕೊಂದು || ೫೧ || ಸ್ವಾಂಕೇ-ತನ್ನ ತೊಡೆಯ ಮೇಲೆ, ಜಾನಕೀಂ-ಸೀತೆಯನ್ನು, ಆರೋಪ್ಯ-ಕೂಡಿಸಿಕೊಂಡು, ಅಗ-ಪರ್ವತದ, ಮೂರ್ಧನಿ-ಶಿಖರದ ಮೇಲೆ, ಹೃಷ್ಟಃ-ಸಂ

ಷ್ಟೋಗವಮೂರ್ಧನಿ । ರಾವಣೋಗೋಮಯಹ್ರದೇತೈಲಾಭ್ಯಕ್ತೋದಿಗಂಬರಃ ||೫೨ || ಅಗಾಹತ್ಪುತ್ರಪೌತ್ರೈಶ್ಚಕೃತ್ವಾವದನೆ ಮಾಲಿಕಾಂ । ವಿಭೀಷಣಸ್ತುರಾಮಸ್ಯಸನ್ನಿಧೌಹೃಷ್ಟಮಾನಸಃ || ೫೩ || ಸೇವಾಂಕರೋತಿರಾಮಸ್ಯಪಾದಯೋರ್ಭಕ್ತಿಸಂಯುತಃ । ಸರ್ವಥಾರಾವಣಂರಾಮೋ ಹತ್ವಾಸಕುಲಮಂಜಸಾ || ೫೪ || ವಿಭೀಷಣಾಯಾಧಿಪತ್ಯಂದತ್ವಾಸೀತಾಂಶುಭಾನನಾಂ । ಅಂಕೇನಿಧಾಯಸ್ವಪುರೀಂಗಮಿಷ್ಯತಿನಸಂಶಯಃ || ೫೫ || ತ್ರಿಜಟಾಯಾವಚಃಶ್ರುತ್ವಾಭೀತಾಸ್ತಾರಾಕ್ಷಸಸ್ತ್ರಿಯಃ || ತೂಷ್ಣೀಮಾಸನ್ಸ್ತತ್ರತತ್ರನಿದ್ರಾವಶಮುಪಾಗತಾಃ || ೫೬ || ತರ್ಜಿತಾರಾಕ್ಷಸೀಭಿಸ್ಸಾಸೀತಾಭೀತಾತಿವಿಹ್ವಲಾ । ತ್ರಾತಾರಂನಾಧಿಗಚ್ಛಂತಿದುಃಖೇನಪರಿಮೂರ್ಛಿತಾ || ೫೭ || ಅಶ್ರುಭಿಃಪೂರ್ಣನಯನಾಚಿಂತಯಂತೀದಮಬ್ರ

ತುಪಸ್ಥನಾಗಿ, ಸ್ಥಿತಃ-ಇದ್ದನು, ರಾವಣಃ-ರಾವಣನು- ತೈಲಾಭ್ಯಕ್ತಃ-ಶರೀರಕ್ಕೆಲ್ಲಾ ಎಣ್ಣೆ ಪೂಸಿಕೊಂಡವನಾಗಿ, ದಿಗಂಬರಃ-ಬೆತ್ತಲೆಯಾಗಿದ್ದವನಾಗಿ ||೫೨|| ವದನೆ-ಮುಖಗಳ್ಳ, ಮಾಲಿಕಾಂ-ಸರವನ್ನು, ಕೃತ್ವಾ-ಹಿಡಿದುಕೊಂಡು, ಪುತ್ರ-ಮಕ್ಕಳಿಂದಲೂ, ಪೌತ್ರೈಶ್ಚ-ಮಕ್ಕಳ ಮಕ್ಕಳಿಂದಲೂ (ಕೂಡಿದವನಾಗಿ,) ಗೋಮಯ-ಸಗಣೀ ಕೆಸರಿನಿಂದ ಮಾಡಿರುವ, ಹ್ರದೇ-ಮಡುವಿನಲ್ಲಿ, ಅಗಾಹತ-ಮುಣುಗಿದನು, ವಿಭೀಷಣಸ್ತು-ವಿಭೀಷಣನು ಮಾತ್ರ, ರಾಮಸ್ಯ-ರಾಮಚಂದ್ರನ, ಸನ್ನಿಧೌ-ಸಮೀಪದಲ್ಲಿ, ಹೃಷ್ಟ-ಸಂತುಷ್ಟವಾದ, ಮಾನಸಃ-ಚಿತ್ತವುಳ್ಳವನಾಗಿ ||೫೩|| ರಾಮಸ್ಯ-ರಾಮಚಂದ್ರನ, ಪಾದಯೋಃ-ಚರಣಗಳ, ಸೇವಾಂ-ಸೇವೆಯನ್ನು, ಭಕ್ತಿ-ಭಕ್ತಿಯಿಂದ, ಸಂಯುತಃ-ಕೂಡಿದವನಾಗಿ, ಕರೋತಿ-ಮಾಡುತ್ತಾನೆ, ರಾಮಃ-ರಾಮಚಂದ್ರನು, ಸರ್ವಥಾ-ಯಾವ ವಿಧದಲ್ಲಾದರೂ, ಸಕುಲಂ-ರಾಕ್ಷಸ ಕುಲ ಸಮೇತನಾದ, ರಾವಣಂ-ರಾವಣನನ್ನು, ಅಂಜಸಾ-ಶೀಘ್ರವಾಗಿ, ಹತ್ವಾ-ಕೊಂದು ||೫೪|| ವಿಭೀಷಣಾಯ-ವಿಭೀಷಣನಿಗೆ, ಆಧಿಪತ್ಯಂ-ಲಂಕಾ ರಾಜ್ಯಾಧಿಪತ್ಯವನ್ನು, ದತ್ವಾ-ಕೊಟ್ಟು, ಶುಭ-ಮಂಗಳ ಕರವಾದ, ಆನನಾಂ-ಮುಖ ಉಳ್ಳವಳಾದ, ಸೀತಾಂ-ಸೀತೆಯನ್ನು, ಅಂಕೇ-ತೊಡೆಯಲ್ಲಿ, ನಿಧಾಯ-ಕೂಡಿಸಿಕೊಂಡು, ಸ್ವಪುರೀಂ-ತನ್ನ ಪಟ್ಟವಾದ ಅಯೋಧ್ಯಾ ಪುರವನ್ನು ಕುರಿತು, ಗಮಿಷ್ಯತಿ-ಹೋಗುತ್ತಲಿದ್ದಾನೆ, ನಸಂಶಯಃ-ಸಂದೇಹವಿಲ್ಲ ||೫೫|| ತ್ರಿಜಟಾಯಾಃ-ತ್ರಿಜಟೆಯ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಭೀತಾಃ-ಭಯ ಪಟ್ಟವರಾದ, ತಾಃ-ಆ, ರಾಕ್ಷಸಸ್ತ್ರಿಯಃ-ರಾಕ್ಷಸರ ಹೆಂಗಸರು, ತೂಷ್ಣೀಂ-ಸುಮ್ಮನೆ, ಆಸನ್-ಇದ್ದರು, ತತ್ರತತ್ರ-ಅಲ್ಲಲ್ಲಿ, ನಿದ್ರಾ-ನಿದ್ರೆಯ, ವಶಂ-ಸ್ವಾಧೀನವನ್ನು, ಉಪಾಗತಾಃ-ಹೊಂದಿದವರಾದರು ||೫೬|| ರಾಕ್ಷಸೀಭಿಃ-ರಾಕ್ಷಸ ಸ್ತ್ರೀಯರಿಂದ, ತರ್ಜಿತಾ-ಜಬರಿಸಲ್ಪಟ್ಟವಳಾದ, ಭೀತಾ-ಭಯಪಡುತ್ತಿರುವವಳಾದ, ಅತಿವಿಹ್ವಲಾ-ಅತ್ಯಂತವಾಗಿ ಸಂಕಟ ಪಡುತ್ತಿರುವವಳಾದ, ಸಾಸೀತಾ-ಆ ಸೀತೆಯು, ತ್ರಾತಾರಂ-ತನ್ನನ್ನು ಈ ಸೆರೆಯಿಂದ ಬಿಡಿಸುವವನನ್ನು, ನಾಧಿಗಚ್ಛಂತೀ-ಹೊಂದದೆ ಇರುವವಳಾಗಿ, ದುಃಖೇನ-ವ್ಯಥೆಯಿಂದ, ಪರಿಮೂರ್ಛಿತಾ-ಪ್ರಜ್ಞೆ ಇಲ್ಲದವಳಾಗಿ ||೫೭|| ಅಶ್ರುಭಿಃ-ಕಣ್ಣೀರಿನಿಂದ,

ವೀತ್ | ಪ್ರಭಾತೇಭಕ್ಷಯಿಷ್ಯಂತಿರಾಕ್ಷಸ್ಯೋಮಾಂನಸಂಶಯಃ || ೫೮ || ಇದಾನೀಮೇವಮರಣಂಕೇನೋಪಾಯೇನಮೇಭವೇ
ತ್ || ೫೯ || ಏವಂಸುದುಃಖೇನಪರಿಪ್ಲುತಾಸಾವಿಮುಕ್ತಕಂಠಾರುದತೀಚಿರಾಯ | ಆಲಂಬ್ಯಶಾಖಾಂಕೃತನಿಶ್ಚಯಾಸ್ಥಿ
ತಾನಜಾನತೀಕಿಂಚಿದುಪಾಯಮಂಗನಾ ... ... ... ... ... ... ||೬೦||

—* ಇತಿ ಶ್ರೀಮದಧ್ಯಾತ್ಮರಾಮಾಯಣೇ–ಉಮಾಮಹೇಶ್ವರಸಂವಾದೇ–ಸುಂದರಕಾಂಡೇ–ದ್ವಿತೀಯಃಸ್ಸರ್ಗಃ *—

ಶ್ರೀಮಹಾದೇವ ಉವಾಚ || ೧ || ಉದ್ಬಂಧನೇನವಾಮೋಕ್ಷ್ಯೇಶರೀರಂರಾಘವಂವಿನಾ | ಜೀವಿತೇನಫಲಂಕಿಂಸ್ಯಾನ್ಮಮರ
ಕ್ಷೋಧಿಮಧ್ಯತಃ || ೨ || ದೀರ್ಘಾವೇಣೀಮಮಾತ್ಯರ್ಥಮುದ್ಬಂಧಾಯಭವಿಷ್ಯತಿ | ಏವಂನಿಶ್ಚಿತಬುದ್ಧಿಂತಾಂಮರಣಾ

ಪೂರ್ಣ-ತುಂಬಿದ, ನಯನಾ-ಕಣ್ಣುಗಳುಳ್ಳವಳಾಗಿ, ಚಿಂತಯಂತೀ-ಯೋಚಿಸುತ್ತಾ, ಇದಂ-ಈ ಮಾತನ್ನು, ಅಬ್ರವೀತ್-ಹೇಳಿದಳು, ಪ್ರಭಾತೇ-ಬೆಳಿಗ್ಗೆ, ರಾಕ್ಷಸ್ಯಃ-ರಾಕ್ಷಸಿಯರು, ಮಾಂ-ನನ್ನನ್ನು, ಭಕ್ಷಯಿಷ್ಯಂತಿ-ತಿನ್ನುತ್ತಲಿದ್ದಾರೆ, ನಸಂಶಯಃ-ಸಂದೇಹವಿಲ್ಲ || ೫೮ || ಇದಾನೀಮೇವ-ಈಗಲೇನೇ, ಮೇ-ನನಗೆ, ಮರಣಂ-ಸಾವು, ಕೇನ-ಯಾವ, ಉಪಾಯೆನ-ಯುಕ್ತಿಯಿಂದ, ಭವೇತ್-ಆದೀತು || ೫೯ || ಏವಂ-ಈ ಪ್ರಕಾರವಾಗಿ, ಸುದುಃಖೇನ-ಅತ್ಯಂತ ದುಃಖದಿಂದ, ಪರಿಪ್ಲುತಾ-ಕೂಡಿದವಳಾದ, ಚಿರಾಯ-ಬಹಳವಾಗಿ, ರುದತೀ-ಅಳುತ್ತಿರುವವಳಾದ, ವಿಮುಕ್ತಕಂಠಾ-ವಿಮುಕ್ತ-ಬಿಡಲ್ಪಟ್ಟ, ಕಂಠಾ-ಕುತ್ತಿಗೆಯುಳ್ಳವಳಾದ, ಸಾಅಂಗನಾ-ಆ ಹೆಂಗಸಾದ ಸೀತೆಯು, ಶಾಖಾಂ-ರೆಂಬೆಯನ್ನು, ಆಲಿಂಗ್ಯ-ಹಿಡಿದುಕೊಂಡು, ಮೃತೌ-ಮರಣದಲ್ಲಿ, ಕೃತ-ಗೊತ್ತುಮಾಡಲ್ಪಟ್ಟ, ನಿಶ್ಚಯಾ-ನಿಷ್ಕರ್ಷೆಯುಳ್ಳವಳಾಗಿ, ಕಿಂಚಿತ್-ಕೊಂಚವಾಗಿ, ಉಪಾಯಂ-ಸಾಯುವದಕ್ಕೆ ಅನುಕೂಲವಾದ ಯುಕ್ತಿಯನ್ನು, ನಜಾನಾತಿ-ತಿಳಿಯದೇ ಇರುವವಳಾಗಿ, (ಸ್ಥಿತಾ-ಇದ್ದಳು.) ... ... ... ... ... ... ... ||೬೦||

—* ಇಂತು ಅಧ್ಯಾತ್ಮರಾಮಾಯಣದೊಳುಮಾಮಹೇಶ್ವರ ಸಂವಾದದೊಳು ಸುಂದರ ಕಾಂಡದಲ್ಲಿ ಎರಡನೆಯ ಸರ್ಗವು. *—

ಶ್ರೀಮಹಾದೇವೊವಾಚ-ಈಶ್ವರನು ಹೇಳುತ್ತಲಿದ್ದಾನೆ || ೧ || ಉದ್ಬಂಧನೇನವಾ-ನೇಣು ಹಾಕಿಕೊಳ್ಳುವದರಿಂದಲಾದರೂ, ಶರೀರಂ-ದೇಹವನ್ನು, ಮೋಕ್ಷ್ಯೇ-ಬಿಡುತ್ತೇನೆ, ರಾಘವಂ-ರಾಮಚಂದ್ರನನ್ನು, ವಿನಾ-ಬಿಟ್ಟು, ರಕ್ಷೋಧಿಮಧ್ಯತಃ-ರಾಕ್ಷಸರ ಮಧ್ಯದಲ್ಲಿ, ಜೀವಿತೇನ-ಬದುಕುವದರಿಂದ, ಮಮ-ನನಗೆ, ಫಲಂ-ಪ್ರಯೋಜನವು, ಕಿಂಸ್ಯಾತ್-ಏನಾದೀತು || ೨ || ಮಮ-ನನ್ನ, ದೀರ್ಘಾ-ಉದ್ದವಾದ, ವೇಣೀ-ಹೆರಳು, ಉದ್ಬಂಧಾಯ-ನೇಣು ಹಾಕಿಕೊಳ್ಳುವದಕ್ಕೆ, ಅತ್ಯರ್ಥಂ-ಅತ್ಯಂತವಾಗಿ, ಭವಿಷ್ಯತಿ-ಆಗುತ್ತೆ, ಮರಣಾ

ಯಾಥಜಾನಕೀಂ ॥೩॥ ವಿಲೋಕ್ಯಹನುಮಾನ್ಕಿಂಚಿದ್ವಿಚಾರ್ಯೈತದಭಾಷತ। ಶನೈಶ್ಶನೈಸ್ಸೂಕ್ಷ್ಮರೂಪೋಜಾನಕ್ಯಾಃಶ್ರೋತ್ರಗಂವಚಃ ॥ ೪ ॥ ಇಕ್ಷ್ವಾಕುವಂಶಸಂಭೂತೋರಾಜಾದಶರಥೋಮಹಾನ್ ॥ ಅಯೋಧ್ಯಾಧಿಪತಿಸ್ತಸ್ಯಚತ್ವಾರೋಲೋಕವಿಶ್ರುತಾಃ ॥ ೫ । ಪುತ್ರಾದೇವಸಮಾಸ್ಸರ್ವೇಲಕ್ಷಣೈರುಪಲಕ್ಷಿತಾಃ । ರಾಮಶ್ಚಲಕ್ಷ್ಮಣಶ್ಚೈವಭರತಶ್ಚೈವಶತ್ರುಹಾ ॥ ೬ ॥ ಜ್ಯೇಷ್ಠೋರಾಮಃಪಿತುರ್ವಾಕ್ಯಾದ್ದಂಡಕಾರಣ್ಯಮಾಗತಃ ।ಲಕ್ಷ್ಮಣೇನಸಹಭ್ರಾತ್ರಾಸೀತಯಾಭಾರ್ಯಯಾಸಹ ॥ ೭ ॥ ಉವಾಸಗೌತಮೀತೀರೇಪಂಚವಟ್ಯಾಂಮಹಾಬಲಃ । ತತ್ರಸೀತಾಮಹಾಭಾಗಾ ಸೀತಾಜನಕನಂದಿನೀ ॥ ೮ ॥ ರಹಿತೇರಾಮ

ಯ-ಸಾಯುವದಕ್ಕೆ, ಏವಂ-ಈ ಪ್ರಕಾರವಾಗಿ, ಸ್ಥಿತ-ಗೊತ್ತು ಮಾಡಲ್ಪಟ್ಟ, ಬುದ್ಧಿಂ-ಜ್ಞಾನ ಉಳ್ಳವಳಾದ, ಜಾನಕೀಂ-ಸೀತೆಯನ್ನು, ವಿಲೋಕ್ಯ-ನೋಡಿ ॥ ೩ ॥ ಹನುಮಾನ್-ಆಂಜನೇಯನು, ಕಿಂಚಿತ್-ಕೊಂಚವಾಗಿ, ವಿಚಾರ್ಯ-ಆಲೋಚಿಸಿ, ಏತತ್-ಈ ಮಾತನ್ನು, ಅಭಾಷತ-ಹೇಳಿದನು, ಸೂಕ್ಷ್ಮ-ಸಣ್ಣದಾದ, ರೂಪಃ-ಆಕಾರ ಉಳ್ಳವನಾಗಿ, ಶನೈಶ್ಶನೈಃ-ಮೆಲ್ಲ ಮೆಲ್ಲಗೆ, ಜಾನಕ್ಯಾಃ-ಸೀತೆಯ, ಶ್ರೋತ್ರಗಂ-ಕಿವಿಗಳಿಗೆ ಬೀಳುವ, ವಚಃ-ಮಾತನ್ನು, (ಅಭಾಷತ-ಹೇಳಿದನು,) ॥ ೪ ॥ ಇಕ್ಷ್ವಾಕು-ಇಕ್ಷ್ವಾಕುವೆಂಬ ಹೆಸರುಳ್ಳ ದೊರೆಯ, ವಂಶ-ಕುಲದಲ್ಲಿ, ಸಂಭೂತಃ-ಹುಟ್ಟಿದವನಾದ, ಮಹಾನ್-ದೊಡ್ಡವನಾದ, ದಶರಥಃ-ದಶರಥನೆಂಬ ಹೆಸರುಳ್ಳ, ರಾಜಾ-ದೊರೆಯು, ಅಯೋಧ್ಯಾಧಿಪತಿಃ-ಅಯೋಧ್ಯೆಯೆಂಬ ಪಟ್ಟಣಕ್ಕೆ ಸ್ವಾಮಿಯಾಗಿದ್ದನು, ತಸ್ಯ-ಆ ದಶರಥ ರಾಜನಿಗೆ, ಲೋಕ-ಪ್ರಪಂಚದಲ್ಲಿ, ವಿಶ್ರುತಾಃ-ಪ್ರಸಿದ್ಧರಾದ, ದೇವಸಮಾಃ-ದೇವತೆಗಳಿಗೆ ಸಮರಾದ, ಸರ್ವೇ-ಎಲ್ಲರೂ, ಲಕ್ಷಣೈಃ-ಲಕ್ಷಣಗಳಿಂದ, ಉಪಲಕ್ಷಿತಾಃ-ಕೂಡಿದವರಾದ, ಚತ್ವಾರಃ-ನಾಲ್ಕು ಮಂದಿಯಾದ, ಪುತ್ರಾಃ-ಮಕ್ಕಳು, ರಾಮಶ್ಚ-ರಾಮನೆಂದು, ಲಕ್ಷ್ಮಣಶ್ಚ-ಲಕ್ಷ್ಮಣನೆಂದು, ಭರತಶ್ಚ-ಭರತನೆಂದು, ಶತ್ರುಹಾ-ಶತ್ರುಘ್ನನೆಂದು ಕರೆಯಲ್ಪಡುವರು ॥ ೬ ॥ ಜ್ಯೇಷ್ಠಃ-ಮೊದಲನೆಯ ಮಗನಾದ, ರಾಮಃ-ರಾಮಚಂದ್ರನು, ಲಕ್ಷ್ಮಣೇನ-ಲಕ್ಷ್ಮಣನೆಂಬ ಭ್ರಾತ್ರಾ-ತಮ್ಮನಿಂದ, ಸೀತಯಾಸಹ-ಸೀತೆಯೆಂಬ ಹೆಂಡತಿಯಿಂದಲೂ ಕೂಡಿದವನಾಗಿ, ಪಿತುಃ-ತಂದೆಯ, ವಾಕ್ಯಾತ್-ಮಾತಿನಿಂದ, ದಂಡಕಾರಣ್ಯಂ-ದಂಡಕಾರಣ್ಯವನ್ನು ಕುರಿತು, ಆಗತಃ-ಬಂದನು ॥ ೭ ॥ ಮಹಾಬಲಃ-ಅಧಿಕ ಬಲ ಉಳ್ಳ, ರಾಮ-ರಾಮಚಂದ್ರನು, ಪಂಚವಟ್ಯಾಂ-ಐದು ಆಲದ ಗಿಡಗಳುಳ್ಳ ಸ್ಥಳದಲ್ಲಿ, ಗೌತಮೀ-ಗೋದಾವರೀ ನದಿಯ, ತೀರೇ-ದಡದಲ್ಲಿ ಉವಾಸ-ವಾಸಮಾಡಿಕೊಂಡಿದ್ದನು, ತತ್ರ-ಆ ಪಂಚವಟಿಯಲ್ಲಿ, ಮಹಾಭಾಗ-ಮಹನೀಯಳಾದ, ಜನಕ-ಜನಕ ರಾಯನಿಗೆ, ನಂದಿನೀ-ಸಂತೋಷ ಮಾಡುವ ಮಗಳಾದ, ಸೀತಾ-ಸೀತೆಯು ॥ ೮ ॥ ರಾಮಚಂದ್ರೇಣ-ರಾಮಚಂದ್ರನಿಂದ, ರಹಿತೇ-ಇಲ್ಲದ ಕಾಲವಾದದ್ದರಿಂದಾಗಿ ದುರಾತ್ಮನಾ-ದುರ್ಬುದ್ಧಿಯುಳ್ಳ, ರಾವಣೇನ-ರಾವಣನಿಂದ, ನೀತಾ-ಅಪಹರಿಸಿ ತರಲ್ಪಟ್ಟಳು, ತತ್ರ-ಆ ಬ

ಚಂದ್ರಣರಾವಣೇನದುರಾತ್ಮನಾ ॥ ತತೋರಾಮೋತಿದುಃಖಾರ್ತೋ ಮಾರ್ಗಮಾಣೋಥಜಾನಕೀಂ ॥ ೯ ॥ ಜಟಾಯುಷಂಪ
ಕ್ಷಿರಾಜಮುಪಶ್ಯತ್ಪತಿತಂಭುವಿ । ತಸ್ಮೈದತ್ವಾದಿವಂಶೀಘ್ರಂ ಋಶ್ಯಮೂಕಮುಪಾಗಮತ್ ॥ ೧೦ ॥ ಸುಗ್ರೀವೇಣಾಕೃತಾ
ಮೈತ್ರೀರಾಮಸ್ಯವಿದಿತಾತ್ಮನಃ । ತದ್ಭಾರ್ಯಾಹಾರಿಣಂಹತ್ವಾವಾಲಿನಂರಘುನಂದನಃ ॥ ೧೧ ॥ ರಾಜ್ಯೇಭಿಷಿಚ್ಯಸುಗ್ರೀವಂ
ಮಿತ್ರಕಾರ್ಯಂಚಕಾರಸಃ । ಸುಗ್ರೀವಸ್ತುಸಮಾನಾಯ್ಯವಾನರಾನ್ವಾನರಪ್ರಭುಃ ॥ ೧೨ ॥ ಪ್ರೇಷಯಾಮಾಸಪರಿತೋ
ವಾನರಾನ್ಪರಿಮಾರ್ಗಣೇ । ಸೀತಾಯಾಸ್ತತ್ರಚೈಕೋಹಂ ಸುಗ್ರೀವಸಚಿವೋಹರಿಃ ॥ ೧೩ ॥ ಸಂಪಾತಿವಚನಾಚ್ಛೀಘ್ರಮು
ಲ್ಲಂಘ್ಯಶತಯೋಜನಂ । ಸಮುದ್ರಂನಗರೀಂಲಂಕಾಂವಿಚಿನ್ವನ್ಜಾನಕೀಂಶುಭಾಂ ॥ ೧೪ ॥ ಶನೈರಶೋಕವನಿಕಾಂವಿಚಿನ್ವ

ಳಿಕ, ರಾಮಃ-ರಾಮಚಂದ್ರನು, ಅತಿ-ಅತ್ಯಂತವಾಗಿ, ದುಃಖ-ದುಃಖದಿಂದ, ಆರ್ತಃ-ಬಾಧೆಪಡುವವನಾಗಿ, ಅಥ-ಅನಂತರ, ಜಾನಕೀಂ-ಸೀತೆಯನ್ನು, ಮಾರ್ಗಮಾಣಃ-ಹುಡುಕು ತ್ತಿರುವವನಾಗಿ ॥ ೯ ॥ ಭುವಿ-ನೆಲದಲ್ಲಿ, ಪತಿತಂ-ಬಿದ್ದಿರುವ, ಪಕ್ಷಿರಾಜಂ-ಹಕ್ಕಿಗಳಿಗೆ ದೊರೆಯಾದ, ಜಟಾಯುಷಂ-ಜಟಾಯುವನ್ನು, ಅಪಶ್ಯತ್-ನೋಡಿದನು, ತಸ್ಮೈ-ಆ ಜಟಾಯುವಿಗೆ, ದಿವಂ-ಸ್ವರ್ಗವನ್ನು, ದತ್ವಾ-ಕೊಟ್ಟು, ಶೀಘ್ರಂ-ಜಾಗ್ರತೆಯಾಗಿ, ಋಶ್ಯಮೂಕಂ-ಋಶ್ಯಮೂಕ ಪರ್ವತವನ್ನು, ಉಪಾಗಮತ್-ಸೇರಿದನು ॥ ೧೦ ॥ ವಿದಿತ-ತಿಳಿದ, ಆತ್ಮನಃ-ಪ್ರಯತ್ನ ಉಳ್ಳವನಾದ, ರಾಮಸ್ಯ-ರಾಮಚಂದ್ರನಿಂದ, ಸುಗ್ರೀವೇಣ-ಸುಗ್ರೀವನ ಸಂಗಡ, ಮೈತ್ರೀ-ಮಿತ್ರತ್ವವು, ಕೃತಾ-ಮಾಡಲ್ಪಟ್ಟಿತು, ರಘುನಂದನಃ-ರಾಮಚಂದ್ರನು, ತದ್ಭಾರ್ಯಾಹಾರಿಣಂ-ತತ್-ಸುಗ್ರೀವನ, ಭಾರ್ಯಾ-ಹೆಂಡತಿಯನ್ನು, ಹಾರಿಣಂ-ಅಪಹರಿಸಿಕೊಂಡಿರುವ, ವಾಲಿನಂ-ವಾಲಿಯನ್ನು, ಹತ್ವಾ-ಕೊಂದು ॥ ೧೧ ॥ ರಾಜ್ಯೇ-ಕಪಿ ರಾಜ್ಯದಲ್ಲಿ, ಸುಗ್ರೀವಂ-ಸುಗ್ರೀವನನ್ನು, ಅಭಿಷಿಚ್ಯ-ಪಟ್ಟಾಭಿಷೇಕ ಮಾಡಿ, ಮಿತ್ರ-ಸ್ನೇಹಿತನ, ಕಾರ್ಯಂ-ಕೆಲಸವನ್ನು, ಸಃ-ರಾಮಚಂದ್ರನು, ಚಕಾರ-ಮಾಡಿದನು, ವಾನರ-ಕಪಿಗಳಿಗೆ, ಪ್ರಭುಃ-ದೊರೆಯಾದ, ಸುಗ್ರೀವಃ-ಸುಗ್ರೀವನು, ವಾನರಾನ್-ಕಪಿಗಳನ್ನು, ಸಮಾನಾಯ್ಯ-ಕರೆಸಿ ॥ ೧೨ ॥ ಪರಿತಃ-ಸುತ್ತಲೂ, ಪರಿಮಾರ್ಗಣೇ-ಸೀತೆಯನ್ನು ಹುಡುಕುವದಕ್ಕೆ, ವಾನರಾನ್-ಕಪಿಗಳನ್ನು, ಪ್ರೇಷಯಾಮಾಸ-ಕಳುಹಿಸಿದನು, ತತ್ರ-ಆ ಕಪಿ ಸಮೂಹದೊಳಗೆ, ಏಕಃ-ಒಬ್ಬನಾದ, ಸುಗ್ರೀವಸಚಿವಃ-ಸುಗ್ರೀವ-ಸುಗ್ರೀವನಿಗೆ, ಸಚಿವಃ-ಮಂತ್ರಿಯಾದ, ಹರಿಃ-ಕಪಿಯಾದ ನಾನು, ಸೀತಾಯಾಃ-ಸೀತಾದೇವಿಯ, (ಮಾರ್ಗಣೇ-ಹುಡುಕುವ ಕೆಲಸದಿಂದ,) ॥ ೧೩ ॥ ಸಂಪಾತಿ-ಸಂಪಾತಿಯೆಂಬ ಪಕ್ಷಿಯ, ವಚನಾತ್-ಮಾತಿನಿಂದ, ಶತಯೋಜನಂ-ನೂರು ಗಾವುದದ ದೂರವುಳ್ಳ, ಸಮುದ್ರಂ-ಸಮುದ್ರವನ್ನು, ಉಲ್ಲಂಘ್ಯ-ದಾಟಿ, ಲಂಕಾಂ-ಲಂಕೆಯೆಂಬ, ನಗರೀಂ-ಪುರವನ್ನು, (ಪ್ರವಿಶ್ಯ-ಹೊಕ್ಕು,) ಶುಭಾಂ-ಮಂಗಳಕರಳಾದ, ಜಾನಕೀಂ-ಸೀತೆಯನ್ನು, ವಿಚಿನ್ವನ್-ಹುಡುಕುತ್ತಾ ॥ ೧೪ ॥ ಶನೈಃ-ಮೆಲ್ಲ ಮೆಲ್ಲಗೆ, ಅಶೋಕವನಿಕಾಂ-ಅಶೋಕ ವನವನ್ನು, ವಿಚಿನ್ವನ್-ಹುಡುಕುತ್ತಿರುವವನಾಗಿ,

ನ್ನಿಂಶುಪಾತರುಂ । ಅದ್ರಾಕ್ಷಂಜಾನಕೀಮತ್ರಶೋಚಂತೀಂದುಃಖಸಂಪ್ಲುತಾಂ ॥ ೧೫ ॥ ರಾಮಸ್ಯಮಹಿಷೀಂದೇವೀಂಕೃ
ತಕೃತ್ಯೋಹಮಾಗತಃ । ಇತ್ಯುಕ್ತ್ವಾವಿರರಾಮಾಥಮಾರುತಿರ್ಬುದ್ಧಿಮತ್ತರಃ ॥ ೧೬ ॥ ಸೀತಾಕ್ರಮೇಣತತ್ಸರ್ವಂಶ್ರು
ತ್ವಾವಿಸ್ಮಯಮಾಯಯೌ । ಕಿಮಿದಂಮೆಶ್ರುತಂವ್ಯೋಮ್ನಿವಾಯುನಾಸಮುದೀರಿತಂ ॥ ೧೭ ॥ ಸ್ವಪ್ನೋವಾಮೆಮನೋ
ಭ್ರಾಂತಿರ್ಯದಿವಾಸತ್ಯಮೇವತತ್ । ನಿದ್ರಾಮೇನಾಸ್ತಿದುಃಖೇನಜಾನಾಮ್ಯೇತತ್ಕುತೋಭ್ರಮಃ ॥ ೧೮ ॥ ಯೇನಮೇಕರ್ಣಪಿ
ಯೂಷಂವಚನಂಸಮುದೀರಿತಂ । ಸದೃಶ್ಯತಾಂಮಹಾಭಾಗಃಪ್ರಿಯವಾದೀಮಮಾಗ್ರತಃ ॥ ೧೯ ॥ ಶ್ರುತ್ವಾತಜ್ಜಾನಕೀ
ವಾಕ್ಯಂಹನೂಮಾನ್ಪತ್ರಖಂಡತಃ । ಅವತೀರ್ಯಶನೈಸ್ಸೀತಾಪುರತಸ್ಸಮವಸ್ಥಿತಃ ॥ ೨೦ ॥ ಕಲವಿಂಕಪ್ರಮಾಣಾಂಗೋ

ಶಿಂಶುಪಾತರುಂ-ಶಿಂಶುಪಾ ವೃಕ್ಷವನ್ನು, ಅದ್ರಾಕ್ಷಂ-ನೋಡಿದವನಾದೆನು, ಅತ್ರ-ಈ ಶಿಂಶುಪಾವೃಕ್ಷದ ಕೆಳಗೆ, ಶೋಚಂತೀಂ-ಯೋಚನೆ ಮಾಡುತ್ತಿರುವವಳಾದ, ದುಃಖ-ವ್ಯಥೆಯಿಂದ, ಸಂಪ್ಲುತಾಂ-ಕೂಡಿರುವವಳಾದ, ಜಾನಕೀಂ-ಜನಕರಾಯನ ಮಗಳಾದ ॥ ೧೫ ॥ ದೇವೀಂ-ದೇವತೆಯಂತೆ ಇರುವ, ರಾಮಸ್ಯ-ರಾಮಚಂದ್ರನಿಗೆ, ಮಹಿಷೀಂ-ಹೆಂಡತಿಯಾದ, (ಸೀತೆಯನ್ನು, ಅದ್ರಾಕ್ಷಂ-ನೋಡಿದೆನು, ಆಗತಃ-ಸೀತೆಯನ್ನು ನೋಡಲು ಬಂದವನಾದ, ಅಹಂ-ನಾನು, ಕೃತಕೃತ್ಯಃ-ಮಾಡಬೇಕಾದ ಕೆಲಸವನ್ನು ಮಾಡಿದವನು, ಆದೆನು) ಇತ್ಯುಕ್ತ್ವಾ-ಹೀಗೆ ಹೇಳಿ, ಬುದ್ಧಿಮತ್ತರಃ-ಬುದ್ಧಿಶಾಲಿಯಾದ, ಮಾರುತಿಃ-ಆಂಜನೇಯನು, ಅಥ-ಆ ಬಳಿಕ, ವಿರರಾಮ ಸುಮ್ಮನಾದನು, ॥ ೧೬ ॥ ಸೀತಾ-ಸೀತೆಯು, ಕ್ರಮೇಣ-ಪ್ರಾಜ್ಞವಾಗಿ, ತತ್ಸರ್ವಂ-ಅದೆಲ್ಲವನ್ನೂ, ಶ್ರುತ್ವಾ-ಕೇಳಿ, ವಿಸ್ಮಯಂ-ಆಶ್ಚರ್ಯವನ್ನು, ಆಯಯೌ-ಹೊಂದಿದಳು, ವ್ಯೋಮ್ನಿ-ಆಕಾಶದಲ್ಲಿ, ವಾಯುನಾ-ಘಾಳಿಯಿಂದ, ಸಮುದೀರಿತಂ-ಹೇಳಲ್ಪಟ್ಟ, ಮೆ-ನನ್ನಿಂದ, ಶ್ರುತಂ-ಕೇಳಲ್ಪಟ್ಟ, ಇದಂ-ಈ ಮಾತು, ಕಿಂ-ಏನ ॥ ೧೭ ॥ ಮೇ-ನನಿಗೆ, ಸ್ವಪ್ನೋವಾ-ಕನಸೇ, (ಅಥವಾ) ಮನೋಭ್ರಾಂತಿಃ-ಮನಸ್ಸಿನ ಭ್ರಮೆಯೇ, ತತ್-ಕೇಳಿದ ಮಾತು, ಸತ್ಯಂಯದಿವಾ-ನಿಶ್ಚಯವಾದದ್ದೇನೆ, ಮೆ-ನನಿಗೆ, ನಿದ್ರಾನಾಸ್ತಿ-ಸ್ವಪ್ನವು ಅನ್ಯೋನ್ಯವೇ ನಿದ್ರೆಯೇ ಇಲ್ಲ, ದುಃಖೇನ-ವ್ಯಥೆಯಿಂದ, ಜಾನಾಮಿ-ಎಚ್ಚರವಾಗಿಯೇ ಇದ್ದೇನೆ, ಭ್ರಮಃ-ಭ್ರಾಂತಿಯು, ಕುತಃ-ಎಲ್ಲಿಂದ ಬರುವದು, ॥ ೧೮ ॥ ಯೇನ-ಯಾವನಿಂದ, ಮೇ-ನನ್ನ, ಕರ್ಣ-ಕಿವಿಗಳಿಗೆ, ಪಿಯೂಷಂ-ಅಮೃತದಂತಿರುವ, ವಚನಂ-ಮಾತು, ಸಮುದೀರಿತಂ-ಹೇಳಲ್ಪಟ್ಟಿತೋ, ಸಃ-ಆ, ಮಹಾಭಾಗಃ-ಮಹನೀಯ್ಯನಾದ, ಪ್ರಿಯವಾದೀ-ನನಿಗೆ ಇಷ್ಟವಾದದ್ದನ್ನು ಹೇಳಿದವನು, ಮಮ-ನನ್ನ, ಅಗ್ರತಃ-ಮುಂದೆ, ದೃಶ್ಯತಾಂ-ಕಾಣಲ್ಪಡಲಿ, ॥ ೧೯ ॥ ತತ್-ಆ, ಜಾನಕೀ-ಸೀತಾದೇವಿಯ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಹನೂಮಾನ್-ಆಂಜನೆಯನು, ಪತ್ರ-ಎಲೆಗಳ, ಖಂಡತಃ-ಸಮೂಹದ್ದೆಸೆಯಿಂದ, ಅವತೀರ್ಯ-ಇಳಿದು, ಶನೈಃ-ಮೆಲ್ಲಗೆ, ಸೀತಾ-ಸೀತಾದೇವಿಯ, ಪುರತಃ-ಎದುರಾಗಿ ಬಂದು, ಸಮವಸ್ಥಿತಃ-ನಿಂತವನಾದನು ॥ ೨೦ ॥ ಕಲವಿಂಕ-ಕಲಿಂಗ ಪಕ್ಷಿಯ, ಪ್ರಮಾಣ-ಗಾತ್ರದಂತೆ ಇರುವ, ಅಂಗಃ-ದೇಹವುಳ್ಳವನಾಗಿ, ರ

ರಕ್ತಾಸ್ಯಃಪೀತವಾಸರಃ । ಸನಾಮಶನಕೈಸ್ಸೀತಾಂಪ್ರಾಂಜಲಿಃಪುರತಸ್ಥಿತಃ ॥ ೨೧ ॥ ದೃಷ್ಟ್ವಾತಂಜಾನಕೀಭೀತಾರಾವಣೋಯಮುಪಾಗತಃ । ಮಾಂಮೋಹಯಿತುಮಾಯಾತೋಮಾಯಯಾವಾನರಾಕೃತಿಃ॥ ೨೨ ॥ ಇತ್ಯೇವಂಚಿಂತಯಿತ್ವಾಸಾತೂಷ್ಣೀಮಾಸೀದಧೋಮುಖೀ । ಪುನರಪ್ಯಾಹತಾಂಸೀತಾಂದೇವಿಯತ್ತ್ವಂವಿಶಂಕಸೆ ॥ ೨೩ ॥ ನಾಹಂತಥಾವಿಧೋಮಾತಸ್ತ್ಯಜಶಂಕಾಂಮಯಿಸ್ಥಿತಾಂ । ದಾಸೋಹಂಕೋಸಲೇಂದ್ರಸ್ಯರಾಮಸ್ಯಪರಮಾತ್ಮನಃ ॥ ೨೪ ॥ ಸಚಿವೋಹಂಕಪೀಂದ್ರಸ್ಯಸುಗ್ರೀವಸ್ಯಶುಭಪ್ರದೆ । ವಾಯೋಃಪುತ್ರೋಹಮಖಿಲಪ್ರಾಣಭೂತಸ್ಯಶೋಭನೆ ॥ ೨೫ ॥ ತಚ್ಛ್ರುತ್ವಾಜಾನಕೀಪ್ರಾಹಹನೂಮಂತಂಕೃತಾಂಜಲಿಂ । ವಾನರಾಣಾಂಮನುಷ್ಯಾಣಾಂಸಂಗತಿರ್ಘಟತೇಕಥಂ ॥ ೨೬ ॥ ಯಥಾತ್ವಂರಾಮ

ರಕ್ತಾಸ್ಯ-ಕೆಂಪಾದ ಮುಖವುಳ್ಳವನಾದ, ಪೀತ-ಹಚ್ಚಗೆ ಇರುವ, ವಾಸರಃ-ಬಣ್ಣವುಳ್ಳ ಕಪಿಯಾದ ಆಂಜನೇಯನು, ಪುರತಃ-ಮುಂದೆ, ಪ್ರಾಂಜಲಿಃ-ಕೈಮುಗಿದುಕೊಂಡು, ಸ್ಥಿತಃ-ಇರುವವನಾಗಿ, ಶನಕೈಃ-ಮೆಲ್ಲಗೆ,ಸೀತಾ-ಸೀತೆಯನ್ನು ಕುರಿತು, ಸನಾಮ-ನಮಸ್ಕಾರ ಮಾಡಿದನು॥೨೧॥ತಂ-ಆ ಕಪಿಯಾದ ಅಂಜನೇಯನನ್ನು ದೃಷ್ಟ್ವಾ-ನೋಡಿ. ಜಾನಕೀ-ಸೀತೆಯು, ಭೀತಾ-ಭಯಪಟ್ಟವಳಾಗಿ, ರಾವಣಃ-ರಾವಣನು, ಅಯಂ-ಈ ಕಪಿಯಾಗಿ, ಉಪಾಗತಃ-ಬಂದಿದ್ದಾನೆ, ಮಾಯಯಾ-ಮೋಸನಾಗಿ ಕಲ್ಪಿತರೂಪದಿಂದ, ವಾನರಾಕೃತಿಃ-ಕಪಿಯ ರೂಪವನ್ನು ಧರಿಸಿದವನಾಗಿ, ಮಾಂ-ನನ್ನನ್ನು, ಮೋಹಯಿತುಂ-ಮೋಸಮಾಡುವದಕ್ಕೆ, ಆಯಾತಃ-ಬಂದವನಾಗಿದ್ದಾನೆ॥೨೨॥ಇತ್ಯೇವಂ-ಈಪ್ರಕಾರವಾಗಿ, ಸಾ-ಆಸೀತೆಯು, ಚಿಂತಯಿತ್ವಾ-ಯೋಚಿಸಿ, ಅಧೋಮುಖೀ-ಮುಖವನ್ನು ಬೊಗ್ಗಿಸಿಕೊಂಡವಳಾಗಿ, ತೂಷ್ಣೀಂ-ಸುಮ್ಮನೆ, ಆಸೀತ-ಆದಳು,(ಆಗಲಂಜನೇಯನು,)ಪುನರಪಿ-ಮತ್ತೆ,ತಾಂಸೀತಾಂ-ಆ ಸೀತೆಯನ್ನು ಕುರಿತು,ಆಹ-ಹೇಳಿದನು, ದೇವಿ-ಸೀತಾದೇವಿಯೆ, ಯತ-ಯಾವದನ್ನುಕುರಿತು, ತ್ವಂ-ನೀನು,ವಿಶಂಕಸೆ-ಸಂಶಯಪಡುತ್ತೀಯೋ॥೨೩॥ಮಾತಃ-ತಾಯಿಯಾದಸೀತೆಯೇ, ಅಹಂ-ನಾನು, ತಥಾ-ವಿಧಃ-ಅಂಥಾ ಸಂಶಯಾರ್ಹನಾದ ಮನುಷ್ಯನು ಅಲ್ಲ, ಮಯಿ-ನನ್ನಲ್ಲಿ, ಸ್ಥಿತಾಂ-ನಿನಗೆ ಉಂಟಾಗಿರತಕ್ಕ, ಶಂಕಾಂ-ಸಂದೇಹವನ್ನು, ತ್ಯಜ-ಬಿಡು, ಕೋಸಲ-ಕೋಸಲದೇಶಕ್ಕೆ, ಇಂದ್ರಸ್ಯ-ಪ್ರಭುವಾದ,ಪರಮಾತ್ಮನಃ-ಪರಮಾತ್ಮನಾದ, ರಾಮಸ್ಯ-ರಾಮಚಂದ್ರನಿಗೆ, ಅಹಂ-ನಾನು, ದಾಸಃ-ದೂತನಾಗಿದ್ದೇನೆ॥೨೪॥ಶುಭೆ-ಮಂಗಳವನ್ನು, ಪ್ರದೆ-ಕೊಡುವವಳಾದ, ಶೋಭನೆ-ಮಂಗಳಸ್ವರೂಪಿಯಾದ (ಸೀತೆಯೇ) ಕಪೀಂದ್ರಸ್ಯ-ಕಪಿಗಳಿಗೆ ದೊರೆಯಾದ, ಸುಗ್ರೀವಸ್ಯ-ಸುಗ್ರೀವನಿಗೆ ಸಚಿವಃ-ಮಂತ್ರಿಯಾದವನು, ಅಖಿಲ-ಎಲ್ಲಾ ಜೀವಿಗಳಿಗೆ ಪ್ರಾಣಭೂತಸ್ಯ-ಪ್ರಾಣವಾಯುರೂಪನಾಗಿರುವ, ವಾಯೋಃ-ವಾಯುವಿಗೆ, ಪುತ್ರಃ-ಮಗನೂ ಆಗಿದ್ದೇನೆ,॥೨೫॥ತತ್ -ಆಂಜನೇಯನ ಮಾತನ್ನು, ಶ್ರುತ್ವಾ-ಕೇಳಿ, ಜಾನಕೀ-ಸೀತೆಯು, ಕೃತಾಂಜಲಿಂ-ಅಂಜಲಿ ಬದ್ಧನಾದ, ಹನೂಮಂತಂ-ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದಳು, ವಾನರಾಣಾಂ-ಕಪಿಗಳಿಗೂ, ಮನುಷ್ಯಾಣಾಂ-ಮನುಜರಿಗೂ, ಸಂಗತಿಃ-ಕೂಟ

ಚಂದ್ರಸ್ಯದಾಸೋಹಮಿತಿಭಾಷಸೆ । ತಾಮಾಹಮಾರುತಿಃಪ್ರೀತೋಜಾನಕೀಂಪುರತಸ್ಥಿತಃ ॥ ೨೭ ॥ ಋಶ್ಯಮೂಕಮಗಾದ್ರಾಮಶ್ಶಬರ್ಯಾಮೋದಿತಸ್ಸುಧೀಃ।ಸುಗ್ರೀವೋಋಶ್ಯಮೂಕಸ್ಥೋದೃಷ್ಟ್ವಾರಾಮಲಕ್ಷ್ಮಣೌ ॥೨೮ ॥ಭೀತೋಮಾಂಪ್ರೇಷಯಾಮಾಸ ಜ್ಞಾತುಂರಾಮಸ್ಯಹೃದ್ಗತಂ । ಬ್ರಹ್ಮಚಾರಿವಪುರ್ಧೃತ್ವಾಗತೋಹಂರಾಮಸನ್ನಿಧಿಂ ॥ ೨೯ ॥ಜ್ಞಾತ್ವಾರಾಮಸ್ಯಸದ್ಭಾವಂ ಸ್ಕಂಧೋಪರಿನಿಧಾಯತೌ । ನೀತ್ವಾಸುಗ್ರೀವಸಾಮೀಪ್ಯಂಸಖ್ಯಂಚಾಕರವಂತಯೋಃ ॥ ೩೦ ॥ ಸುಗ್ರೀವಸ್ಯಹೃತಾಭಾರ್ಯಾವಾಲಿನಾತಂರಘೂತ್ತಮಃ । ಜಘಾನೈಕೇನಬಾಣೇನ ತತೋರಾಜ್ಯೇಭ್ಯಷೇಚಯತ್ ॥ ೩೧ ॥ ಸುಗ್ರೀವೋ

ವು, ಕಥಂ-ಹ್ಯಾಗೆ, ಘಟಿತೆ-ಲಭಿಸುವದು ॥೨೬॥ ರಾಮಸ್ಯ-ರಾಮಚಂದ್ರನಿಗೆ, ಅಹಂ-ನಾನು, ದಾಸಃ-ದೂತನು, ಇತಿ-ಎಂಬದಾಗಿ, ಯಥಾ-ಹ್ಯಾಗೆ, ಭಾಷಸೆ-ಮಾತನಾಡುತ್ತೀ, ಪುರತಃ-ಮುಂದೆ, ಸ್ಥಿತಃ-ನಿಂತಿರುವವನಾದ, ಮಾರುತಿಃ-ಆಂಜನೇಯನು, ತಾಂ-ಆ, ಜಾನಕೀಂ-ಸೀತೆಯನ್ನು ಕುರಿತು, ಪ್ರೀತಃ-ಸಂತೋಷವುಳ್ಳವನಾಗಿ, ಆಹ-ಹೇಳಿದನು ॥೨೭॥ ಶಬರ್ಯಾ-ಶಬರಿಯಿಂದ, ಆಮೋದಿತಃ-ಸೇವೆಯಿಂದ ಸಂತೋಷಿಸಲ್ಪಟ್ಟ, ಸುಧೀಃ-ಒಳ್ಳೇ ಬುದ್ಧಿಯುಳ್ಳವನಾದ, ರಾಮಃ-ರಾಮಚಂದ್ರನು, ಋಶ್ಯಮೂಕಂ-ಋಶ್ಯಮೂಕ ಪರ್ವತವನ್ನು ಕುರಿತು, ಅಗಾತ್-ಬಂದವನಾದನು, ಋಶ್ಯಮೂಕಸ್ಥಃ-ಋಶ್ಯಮೂಕ ಪರ್ವತದಲ್ಲಿ ಇರುವ, ಸುಗ್ರೀವಃ-ಸುಗ್ರೀವನು, ರಾಮಲಕ್ಷ್ಮಣೌ-ರಾಮ ಲಕ್ಷ್ಮಣರನ್ನು, ದೃಷ್ಟ್ವಾ-ನೋಡಿದವನಾದನು ॥ ೨೮ ॥ ಭೀತಃ-ಭಯಪಟ್ಟವನಾದ ಸುಗ್ರೀವನು, ರಾಮಸ್ಯ-ರಾಮಚಂದ್ರನ, ಹೃದ್ಗತಂ-ಮನಸ್ಸಿನಲ್ಲಿರುವ (ಅಭಿಪ್ರಾಯವನ್ನು,) ಜ್ಞಾತುಂ-ತಿಳಿಯಲು, ಮಾಂ-ನನ್ನನ್ನು (ರಾಮಚಂದ್ರನ ಬಳಿಗೆ,) ಪ್ರೇಷಯಾಮಾಸ-ಕಳುಹಿಸಿದನು, ಅಹಂ-ನಾನು, ಬ್ರಹ್ಮಚಾರಿ-ವಟುವಿನ, ವಪುಃ-ರೂಪವನ್ನು, ಧೃತ್ವಾ-ಧರಿಸಿ, ರಾಮಸನ್ನಿಧಿಂ-ರಾಮಚಂದ್ರನ ಸಮೀಪವನ್ನು ಕುರಿತು, ಗತಃ-ಹೋದವನಾದೆನು ॥ ೨೯ ॥ ರಾಮಸ್ಯ-ರಾಮಚಂದ್ರನ, ಸದ್ಭಾವಂ-ಉತ್ತಮವಾದ ಅಭಿಪ್ರಾಯವನ್ನು, ಜ್ಞಾತ್ವಾ-ತಿಳಿದು, ತೌ-ಆ ರಾಮ ಲಕ್ಷ್ಮಣರನ್ನು, ಸ್ಕಂಧೋಪರಿ-ಭುಜಗಳ ಮೇಲೆ, ನಿಧಾಯ-ಕೂಡಿಸಿಕೊಂಡು, ಸುಗ್ರೀವ-ಸುಗ್ರೀವನ, ಸಾಮೀಪ್ಯಂ-ಬದಿಯನ್ನು, ನೀತ್ವಾ-ಸೇರಿಸಿ, ತಯೋಃ-ರಾಮಲಕ್ಷ್ಮಣರಿಗೆ, ಸಖ್ಯಂ ಚ-ಮಿತ್ರತ್ವವನ್ನು, ಅಕರವಂ-ಮಾಡಿಸಿದೆನು ॥ ೩೦ ॥ ಸುಗ್ರೀವಸ್ಯ-ಸುಗ್ರೀವನ, ಭಾರ್ಯಾ-ಹೆಂಡತಿಯಾದ ರುಮೆಯು, ವಾಲಿನಾ-ವಾಲಿಯಿಂದ, ಹೃತ-ಅಪಹರಿಸಲ್ಪಟ್ಟವಳಾಗಿದ್ದಳು, ರಘೂತ್ತಮಃ-ರಾಮಚಂದ್ರನು, ತಂ-ಆ ವಾಲಿಯನ್ನು, ಏಕೇನಬಾಣೇನ-ಒಂದೇ ಬಾಣದಿಂದ, ಜಘಾನ-ಹೊಡೆದನು, ತತಃ-ಆ ಬಳಿಕ, ರಾಜ್ಯೇ-ಕಪಿ ರಾಜ್ಯದಲ್ಲಿ, ಅಭ್ಯಷೇಚಯತ್-ಸುಗ್ರೀವನಿಗೆ ಪಟ್ಟಾಭಿಷೇಕ ಮಾಡಿದನು ॥ ೩೧ ॥ ವಾನರಾಣಾಂ-ಕಪಿಗಳ, (ರಾಜ್ಯೇ-ಆಧಿಪತ್ಯದಲ್ಲಿ,) (ಅಭಿಷಿಕ್ತಃ-ಪಟ್ಟಾಭಿಷಿಕ್ತನಾದ,) ಸಃ-ಆ, ಸುಗ್ರೀವಃ-ಸುಗ್ರೀವನು, ಭವತ್ಯಾಃ-ನಿಮ್ಮ, ಪರಿಮಾರ್ಗಣೇ-ಹುಡುಕುವ ಕೆಲಸದಲ್ಲಿ, ಮಹಾಬಲಾನ್-ಅಧಿಕ ಸಾಮರ್ಥ್ಯರಾದ, ವೀರಾನ್-ಶೂರರಾದ, ವಾನರಾನ್-ಕಪಿಗಳನ್ನು, ದಿಕ್ಷು-ದಿಕ್ಕುಗಳಿಗೆ, ಪ್ರೇಷ

ವಾನರಾಣಾಂಸಃಪ್ರೇಷಯಾಮಾಸವಾನರಾನ್ । ದಿಗ್ಭ್ಯೋಮಹಾಬಲಾನ್ಸೀರಾಸ್ತ್ವತ್ಸ್ಯಾಃಪರಿಮಾರ್ಗಣೇ ॥ ೩೨ ॥ ಗಚ್ಛಂತಂರಾಘವೋ ದೃಷ್ಟ್ವಾಮಾಮಭಾಷತಸಾದರಂ ॥ ೩೩ ॥ ತ್ವಯಿಕಾರ್ಯಮಶೇಷಂಮೇ ಸ್ಥಿತಂಮಾರುತನಂದನ । ಬ್ರೂಹಿಮೇಕುಶಲಂಸರ್ವಂ ಸೀತಾಯೈಲಕ್ಷ್ಮಣಸ್ಯಚ ॥೩೪॥ ಅಂಗುಳೀಯಕಮೇತನ್ಮೇ ಪರಿಜ್ಞಾನಾರ್ಥಮುತ್ತಮಂ । ಸೀತಾಯೈದೀಯತಾಂಸಾಧು ಮನ್ನಾಮಾಕ್ಷರಮುದ್ರಿತಂ ॥ ೩೫ ॥ ಇತ್ಯುಕ್ತ್ವಾಪ್ರದದೌಮಹ್ಯಂಕರಾಗ್ರಾದಂಗುಳೀಯಕಂ। ಪ್ರಯತ್ನೇನಮಯಾನೀತಂ ದೇವಿಪಶ್ಯಾಂಗುಳೀಯಕಂ ॥ ೩೬ ॥ ಇತ್ಯುಕ್ತ್ವಾಪ್ರದದೌ ದೇವ್ಯೈಮುದ್ರಿಕಾಂಮಾರುತಾತ್ಮಜಃ। ನಮಸ್ಕೃತ್ವಾಸ್ಥಿತೋದೂರಾದ್ಬದ್ಧಾಂಜಲಿಪುಟೋಹರಿಃ ॥ ೩೭ ॥ ದೃಷ್ಟ್ವಾಸೀತಾಪ್ರಮುದಿತಾರಾಮನಾಮಾಂ

ಯಾಮಾಸ-ಕಳುಹಿಸಿದನು, ಗಚ್ಛಂತಂ-ನಿಮ್ಮನ್ನು ಹುಡುಕುವದಕ್ಕೆ ದಕ್ಷಿಣ ದಿಕ್ಕಿಗೆ ಹೋಗುತ್ತಿರುವ, ಮಾಂ-ನನ್ನನ್ನು, ರಾಘವಃ-ರಾಮಚಂದ್ರನು, ದೃಷ್ಟ್ವಾ-ನೋಡಿ, ಸಾದರಂ-ಆದರ ಪೂರ್ವಕವಾಗಿ, ಅಭಾಷತ-ಹೇಳಿದನು ॥ 33 ॥ ಮಾರುತ-ವಾಯುವಿಗೆ, ನಂದನ-ಮಗನಾದ ಆಂಜನೇಯನೇ, ಮೇ-ನನ್ನ, ಅಶೇಷಂ-ಎಲ್ಲಾ, ಕಾರ್ಯಂ-ಕೆಲಸವು, ತ್ವಯಿ-ನಿನ್ನಲ್ಲಿ, ಸ್ಥಿತಂ-ಇರುತ್ತೆ, ಲಕ್ಷ್ಮಣಸ್ಯ-ಲಕ್ಷ್ಮಣನ, ಮೇ-ನನ್ನ, ಕುಶಲಂ-ಕ್ಷೇಮವನ್ನು, ಸರ್ವಂ-ಎಲ್ಲಾ ಇತರ ವೃತ್ತಾಂತವನ್ನು, ಸೀತಾಯೈ-ಸೀತೆಗೆ, ಬ್ರೂಹಿ-ಹೇಳು ॥34॥ ಉತ್ತಮಂ-ಶ್ರೇಷ್ಠವಾದ, ಏತತ್-ಈ, ಪರಿಜ್ಞಾನಾರ್ಥಂ-ನನ್ನ ಕಡೆಯಿಂದ ಬಂದ ದೂತನೆಂದು ತಿಳಿಯುವದಕ್ಕೋಸ್ಕರವಾಗಿ, ಮನ್ನಾಮಾಕ್ಷರಮುದ್ರಿತಂ-ಮನ್ನಾಮ-ನನ್ನ ಹೆಸರಿನ, ಅಕ್ಷರ-ವರ್ಣಗಳಿಂದ, ಮುದ್ರಿತಂ-ಕೆತ್ತಲ್ಪಟ್ಟಿರುವ, ಸಾಧು-ಯೋಗ್ಯವಾದ, ಅಂಗುಳೀಯಕಂ-ಉಂಗರವು, ಸೀತಾಯೈ-ಸೀತಾದೇವಿಗೆ, ದೀಯತಾಂ-ನಿನ್ನಿಂದ ಕೊಡಲ್ಪಡಲಿ ॥ 35 ॥ ಇತಿ-ಹೀಗೆಂದು, ಉಕ್ತ್ವಾ-ಹೇಳಿ, ಕರಾಗ್ರಾತ್-ಬೆರಳಿನಿಂದ, ಅಂಗುಳೀಯಕಂ-ಉಂಗರವನ್ನು (ತೆಗೆದು,) ಮಹ್ಯಂ-ನನಗೆ, ಪ್ರದದೌ-ಉಂಗುರವನ್ನು ಕೊಟ್ಟನು, ಪ್ರಯತ್ನೇನ-ಎಚ್ಚರದಿಂದ, ಸಮಾನೀತಂ-ತರಲ್ಪಟ್ಟ, ಅಂಗುಳೀಯಕಂ-ಉಂಗರವನ್ನು, ದೇವಿ-ಎಲೈ ತಾಯಿಯೇ, ಪಶ್ಯ-ನೋಡು ॥ 36 ॥ ಇತಿ-ಹೀಗೆ, ಉಕ್ತ್ವಾ-ಹೇಳಿ, ಮಾರುತ-ವಾಯುವಿಗೆ, ಆತ್ಮಜಃ-ಮಗನಾದ ಆಂಜನೇಯನು, ದೇವ್ಯೈ-ಸೀತಾ ದೇವಿಗೆ, ಮುದ್ರಿಕಾಂ-ಉಂಗರವನ್ನು, ಪ್ರದದೌ-ಕೊಟ್ಟನು, ಹರಿಃ-ಕಪಿಯಾದ ಆಂಜನೇಯನು, ನಮಸ್ಕೃತ್ವಾ-ನಮಸ್ಕಾರ ಮಾಡಿ, ಬದ್ಧಾಂಜಲಿಪುಟಃ-ಕೈಗಳನ್ನು ಜೋಡಿಸಿಕೊಂಡವನಾಗಿ, ದೂರಾತ್-ದೂರದಲ್ಲಿ, ಸ್ಥಿತಃ-ಇದ್ದನು ॥ 37 ॥ ತದಾ-ಆಗ, ಸೀತಾ-ಸೀತೆಯು, ರಾಮನಾಮ-ರಾಮ ಯೆಂಬ ಹೆಸರಿನಿಂದ, ಅಂಕಿತಾಂ-ಕೆತ್ತಲ್ಪಟ್ಟಿರುವ, ಮುದ್ರಿಕಾಂ-ಮುದ್ರೆ ಉಂಗರವನ್ನು, ದೃಷ್ಟ್ವಾ-ನೋಡಿ, ಪ್ರಮುದಿತಾ-ಸಂತೋಷವುಳ್ಳವಳಾಗಿ, ಶಿರಸಾಧೃತ್ವಾ-ತಲೆಯ ಮೇಲೆ ಇಟ್ಟುಕೊಂಡು, ಸ್ರವತ್-ಸುರಿಯುತ್ತಿರುವ, ಆನಂದ-ಸಂತೋಷದಿಂದುಂಟಾದ, ನೇತ್ರಜಾ-ಕಣ್ಣೀರುಳ್ಳವಳಾಗಿ (ಇದ್ದಳು) ॥ 38 ॥ ಕಪೇ-ಆಂಜನೇಯನೇ, ಮೇ-ನನಗೆ, ತ್ವಂ-ನೀನು,

ಕೇತಂ ತಬಾ । ಮುದಿ)ಕಾಂಶಿರಸಾಧೃತ್ವಾ ಸ)ವದಾನಂದನೇತ್ರಜಾ ॥ ೩೮ ॥ ಕಪೇಮೆಪ್ರಾಣದಾತಾತ್ವಂ ಬುದ್ಧಿಮಾನಸಿ ರಾಘವೆ । ಭಕ್ತ್ಯಾಸಿಪ್ರಿಯಕಾರೀತ್ವಂ ವಿಶ್ವಾಸೋಸ್ತಿತವೈವಹಿ ॥ ೩೯ ॥ ನೋಚೆನ್ಮತ್ಸನ್ನಿಧಿಂಚಾನ್ಯಂ ಪುರುಷಂಪ್ರೆಷಯೆತ್ಕಥಂ । ಹನೂರ್ಮದ್ದೃಷ್ಟಮಖಿಲಂ ಮಮದುಃಖಾದಿಕಂತ್ವಯಾ ॥ ೪೦ ॥ ಸರ್ವಂಕಥಯರಾಮಾಯ ಯಥಾಮೆ ಜಾಯತೆದಯಾ । ಮಾಸದ್ವಯಾವಧಿಪ್ರಾಣಾಃ ಸ್ಥಾಸ್ಯಂತಿಮಮಸತ್ತಮ ॥ ೪೧ ॥ ನಾಗಮಿಷ್ಯತಿಚೆದ್ರಾಮೊ ಭಕ್ಷಯಿಷ್ಯತಿಮಾಂಖಲಃ । ಅತಃಶೀಘ್ರಂಕಪೀಂದ್ರೇಣ ಸುಗ್ರೀವೇಣಸಮನ್ವಿತಃ ॥ ೪೨ ॥ ವಾನರಾನೀಕಪೈಸ್ಸಾರ್ಧಂಹತ್ವಾರಾವಣಮಾಹವೆ । ಸಪುತ್ರಸಬಲಂರಾಮೊ ಯದಿಮಾಂಮೊಚಯೆತ್ಪ್ರಭುಃ ॥ ೪೩ ॥ ತತ್ತಸ್ಯಸದೃಶಂವೀರ್ಯಂವೀರವರ್ಣಯ

ಪ್ರಾಣದಾತಾ-ಪ್ರಾಣಗಳನ್ನು ಉಳುಹಿದವನು, ಬುದ್ಧಿಮಾನ್-ಬುದ್ಧಿಶಾಲಿಯು, ಅಸಿ-ಆಗಿದ್ದೀ, ರಾಘವೆ-ರಾಮಚಂದ್ರನಲ್ಲಿ, ಭಕ್ತ್ಯಾ-ಭಕ್ತಿಯುಳ್ಳವನು, ಅಸಿ-ಆಗಿದ್ದೀ, ತ್ವಂ-ನೀನು, ಪ್ರಿಯಕಾರೀ-ರಾಮಚಂದ್ರನಿಗೆ ಹಿತವನ್ನು ಮಾಡತಕ್ಕವನು, ಅಸಿ-ಆಗಿದ್ದೀ, (ಆದ್ದರಿಂದ) ತವೈವಹಿ-ನಿನಗೂ, (ರಾಮಚಂದ್ರನಿಗೂ) ವಿಶ್ವಾಸಃ-ಪರಸ್ಪರ ಪ್ರೀತಿಯು, ಅಸ್ತಿ-ಇದೆ (ಯೆಂದು,) (ಮನ್ಯೆ-ತಿಳಿಯುತ್ತೇನೆ) ॥ ೩೯ ॥ ನೊಚೆತ್-ಹಾಗೆ ವಿಶ್ವಾಸವಿಲ್ಲದಿದ್ದರೆ, ಮತ್ಸನ್ನಿಧಿಂ-ನನ್ನ ಸಮೀಪವನ್ನು ಕುರಿತು, ಅನ್ಯಂ-ಬೇರೆಯಾದ, ಪುರುಷಂ-ಮನುಷ್ಯನನ್ನು, ಕಥಂ-ಹ್ಯಾಗೆ, ಪ್ರೇಷಯೇತ್-ಕಳುಹಿಸ್ಯಾನು, ಹನೂಮನ್-ಆಂಜನೇಯನೇ, ತ್ವಯಾ-ನಿನ್ನಿಂದ, ಮಮ-ನನ್ನ, ಅಖಿಲಂ-ಎಲ್ಲಾ, ದುಃಖಾದಿಕಂ-ದುಃಖವೇ ಮೊದಲಾದದ್ದು, ದೃಷ್ಟಂ-ನೋಡಲ್ಪಟ್ಟಿತೆ, ॥ ೪೦ ॥ ಮೇ-ನನ್ನ ಮೇಲೆ, ದಯಾ-ಕೃಪೆಯು, ಯಥಾ-ಹ್ಯಾಗೆ, ಜಾಯತೆ-ಉಂಟಾಗುವದೋ, (ತಥಾ-ಹಾಗೆ.) ರಾಮಾಯ-ರಾಮಚಂದ್ರನಿಗೆ, ಸರ್ವಂ-ಎಲ್ಲವನ್ನೂ, ಕಥಯ-ಹೇಳು, ಸತ್ತಮ-ಶ್ರೇಷ್ಠನಾದ ಆಂಜನೇಯನೇ, ಮಮ-ನನ್ನ, ಪ್ರಾಣಾಃ-ಪ್ರಾಣಗಳು, ಮಾಸದ್ವಯಾವಧಿ-ಎರಡು ತಿಂಗಳ ವರಿಗೆ, ಸ್ಥಾಸ್ಯಂತಿ-ನಿಂತ್ತಿವೆ ॥ ೪೧ ॥ ರಾಮಃ-ರಾಮಚಂದ್ರನು, ನಾಗಮಿಷ್ಯತಿಚೆತ್-ಎರಡು ತಿಂಗಳುಗಳೊಳಗಾಗಿ ಬಾರದೇ ಹೋದರೆ ಖಲಃ-ದುಷ್ಟನಾದ ರಾವಣನು, ಮಾಂ-ನನ್ನನ್ನು, ಭಕ್ಷಯಿಷ್ಯತಿ-ತಿನ್ನುತಲಿದ್ದಾನೆ, ಅತಃ-ಆ ಕಾರಣದಿಂದ, ಶೀಘ್ರಂ-ಬೇಗನೆ, ಕಪೀಂದ್ರೇಣ-ಕಪಿ ರಾಜನಾದ, ಸುಗ್ರೀವೇಣ-ಸುಗ್ರೀವನಿಂದ, ಸಮನ್ವಿತಃ-ಕೂಡಿದವನಾಗಿ ॥ ೪೨ ॥ ವಾನರ-ಕಪಿಗಳ, ಅನೀಕಪೈಃ-ಸೇನಾಧಿಪತಿಗಳಿಂದ, ಸಾರ್ಧಂ-ಕೂಡ, (ಇಲ್ಲಿಗೆ ಬಂದು,) ಆಹವೆ-ಯುದ್ಧದಲ್ಲಿ, ಸಪುತ್ರಂ-ಮಕ್ಕಳಿಂದ ಕೂಡಿರುವ, ಸಬಲಂ-ಸೈನ್ಯದಿಂದ ಕೂಡಿರುವ, ರಾವಣಂ-ರಾವಣನನ್ನು, ಹತ್ವಾ-ಕೊಂದು, ಪ್ರಭುಃ-ಸಮರ್ಥನಾದ, ರಾಮಃ-ರಾಮಚಂದ್ರನು, ಮಾಂ-ನನ್ನನ್ನು, ಮೋಚಯೇದ್ಯದಿ-ಬಿಡಿಸಿದ್ದೇ ಆದರೆ, ॥ ೪೩ ॥ ತತ್-ಆ, ವೀರ್ಯಂ-ಪರಾಕ್ರಮವು, ತಸ್ಯ-ಆ ರಾಮಚಂದ್ರನಿಗೆ, ಸದೃಶಂ-ಸಮಾನವಾದದ್ದು (ಆಗುವದು,) ವೀರ-ಶೂರನಾದ ಆಂಜನೇಯನೇ, ವರ್ಣಿತಂ-ನಿನ್ನಿಂದ ಹೇಳಲ್ಪಟ್ಟಿರುವದನ್ನು, ವರ್ಣಯ-ರಾಮಚಂ

ವರ್ಣಿತಂ । ಯಥಾಮಾಂತಾರಯೆದಾಸ್ಮಾದ್ಧತ್ವಾಶೀಘ್ರಂದಶಾನನಂ ॥ ೪೪॥ ತಥಾಯತಸ್ವಹನುಮನ್ ವಾಚಾಧರ್ಮಮ
ವಾಪ್ನುಹಿ । ಹನೂಮಾನಪಿತಾಮಾಹದೇವಿದೃಷ್ಟೋಽಯಥಾಮಯಾ ॥ ೪೫ ॥ ರಾಮಸ್ಸಲಕ್ಷ್ಮಣಶ್ಶೀಘ್ರಮಾಗಮಿಷ್ಯ
ತಿಸಾಯುಧಃ । ಸುಗ್ರೀವೇಣಸಸೈನ್ಯೇನ ಹತ್ವಾದಶಮುಖಂಬಲಾತ್ ॥ ೪೬ ॥ ಸಮಾನೇಷ್ಯತಿದೇವಿತ್ವಾಮಯೋಧ್ಯಾಂನಾ
ತ್ರಸಂಶಯಃ । ತವಾಹಜಾನಕೀರಾಮಃ ಕಥಂವಾರಿಧಿಮಾತತಂ ॥ ೪೭ ॥ ತೀರ್ತ್ವಾಯಾಸ್ಯತ್ಯಮೇಯಾತ್ಮಾ ವಾನ
ರಾನೀಕಪೈಸ್ಸಹ । ಹನೂಮಾನಾಹಮೇಸ್ಕಂಧಾವಾರುಹ್ಯಪುರುಷರ್ಷಭೌ ॥ ೪೮ ॥ ಆಯಾಸ್ಯತಸ್ಸೈನ್ಯಶ್ಚ ಸುಗ್ರೀವೋ
ವಾನರೇಶ್ವರಃ । ವಿಹಾಯಸಾಕ್ಷಣೇನೈವ ತೀರ್ತ್ವಾವಾರಿಧಿಮಾತತಂ ॥ ೪೯ ॥ ನಿರ್ದಹಿಷ್ಯತಿರಕ್ಷೋಘಾನ್ ಸ್ವಾತ್ರ್ಯತೇನಾತ್ರ)

ದ್ದನಿಗೆ ತಿಳಿಸುವವನಾಗು, ರಾಮಃ-ರಾಮಚಂದ್ರನು, ಶೀಘ್ರಂ-ಜಾಗ್ರತೆಯಾಗಿ, ದಶಾನನಂ-ರಾವಣನನ್ನು, ಹತ್ವಾ-ಕೊಂದು, ಯಥಾ-ಹ್ಯಾಗೆ, ಮಾಂ-ನನ್ನನ್ನು, ತಾರಯೇತ-ಈ ಕಷ್ಟದಿಂದ, ಬಿಡಿಸುವವನಾಗುವನೋ ॥ ೪೪ ॥ ತಥಾ-ಹಾಗೆ, ಹನುಮನ್-ಆಂಜನೇಯನೇ, ಯತಸ್ವ-ಪ್ರಯತ್ನ ಮಾಡುವವನಾಗು, ವಾಚಾ-ಮಾತಿನಿಂದ, ಧರ್ಮಂ-ಪುಣ್ಯವನ್ನು, ಅವಾಪ್ನುಹಿ-ಹೊಂದುವವನಾಗು, ಹನುಮಾನಪಿ-ಆಂಜನೇಯನು, ತಾಂ-ಸೀತೆಯನ್ನು ಕುರಿತು, ಆಹ-ಹೇಳಿದನು, ದೇವಿ-ತಾಯಿಯೇ, ಮಯಾ-ನನ್ನಿಂದ, ಯಥಾ-ಹ್ಯಾಗೆ, ದೃಷ್ಟಃ-ನೋಡಲ್ಪಟ್ಟಿತೋ, (ಅದನ್ನು ನಾನು ತಿಳಿದೇ ಇದ್ದೇನೆ,) ॥ ೪೫ ॥ ಸಾಯುಧಃ-ಆಯುಧಗಳಿಂದ ಕೂಡಿದವನಾದ, ಸಲಕ್ಷ್ಮಣಃ-ಲಕ್ಷ್ಮಣ ಸಮೇತನಾದ, ರಾಮಃ-ರಾಮಚಂದ್ರನು, ಸಸೈನ್ಯೇನ-ಸೇನಾ ಸಹಿತನಾದ, ಸುಗ್ರೀವೇಣ-ಸುಗ್ರೀವನ ಸಂಗಡ, ಶೀಘ್ರಂ-ಬೇಗನೆ, ಆಗಮಿಷ್ಯತಿ-ಬರುತ್ತಲಿದ್ದಾನೆ, ದಶಮುಖಂ-ರಾವಣನನ್ನು, ಬಲಾತ್-ಸಾಮರ್ಥ್ಯದಿಂದ, ಹತ್ವಾ-ಕೊಂದು ॥ ೪೬ ॥ ದೇವಿ-ಸೀತೆಯೇ, ತ್ವಾಂ-ನಿನ್ನನ್ನು, ಅಯೋಧ್ಯಾಂ-ಅಯೋಧ್ಯಾ ಪಟ್ಟಣವನ್ನು ಕುರಿತು, ಸಮಾನೇಷ್ಯತಿ-ಕರೆದುಕೊಂಡು ಹೋಗುತ್ತಲಿದ್ದಾನೆ, ಅತ್ರ-ಈ ವಿಷಯದಲ್ಲಿ, ಸಂಶಯಃ-ಸಂದೇಹವು, ನಾ-ಇಲ್ಲ, ಜಾನಕೀ-ಸೀತೆಯು, ತಂ-ಆಂಜನೇಯನನ್ನು ಕುರಿತು, ಆಹ-ಹೇಳಿದಳು, ರಾಮಃ-ರಾಮಚಂದ್ರನು, ಆತತಂ-ವಿಸ್ತೀರ್ಣವಾದ, ವಾರಿಧಿಂ-ಸಮುದ್ರವನ್ನು, ಕಥಂ-ಹ್ಯಾಗೆ ॥ ೪೭ ॥ ತೀರ್ತ್ವಾ-ದಾಟಿ-ಅಮೇಯ-ಊಹಿಸಲಶಕ್ಯವಾದ, ಆತ್ಮಾಪಿ-ಧೈರ್ಯಶಾಲಿಯವನಾದಾಗ್ಯೂ, ವಾನರಃ-ಕಪಿಗಳ, ಅನೀಕಪೈಸ್ಸಹ-ಸೇನಾಧಿಪತಿಗಳ ಸಹಿತವಾಗಿ, ಆಯಾಸ್ಯತಿ-ಬರುತ್ತಲಿದ್ದಾನೆ, ಹನುಮಾನ್-ಆಂಜನೇಯನು, ಆಹ-ಹೇಳಿದನು, ಮೇ-ನನ್ನ, ಸ್ಕಂಧೌ-ಭುಜಗಳನ್ನು, ಆರುಹ್ಯ-ಏರಿ, ಪುರುಷರ್ಷಭೌ-ಪುರುಷ ಶ್ರೇಷ್ಠರಾದ ರಾಮ ಲಕ್ಷ್ಮಣರು ॥ ೪೮ ॥ ಆಯಾಸ್ಯತಃ-ಬರುತ್ತಲಿದ್ದಾರೆ, ವಾನರ-ಕಪಿಗಳಿಗೆ, ಈಶ್ವರಃ-ಒಡೆಯನಾದ, ಸಸೈನ್ಯಃ-ಸೇನೆಯಿಂದ ಕೂಡಿದ, ಸುಗ್ರೀವಶ್ಚ-ಸುಗ್ರೀವನು, ಆತತಂ-ವಿಸ್ತಾರವಾದ, ವಾರಿಧಿಂ-ಸಮುದ್ರವನ್ನು, ವಿಹಾಯಸಾ-ಅಂತರಿಕ್ಷ ಮಾರ್ಗವಾಗಿ, ಕ್ಷಣಾತ್-ನಿಮಿಷದಲ್ಲಿ, ತೀರ್ತ್ವಾ-ದಾಟಿ ॥ ೪೯ ॥ ತ್ವತ್ಕೃತೇ-

ಸಂಶಯಃ । ಅನುಜ್ಞಾಂದೇಹಿಮೇದೇವಿ ಗಚ್ಛಾಮಿತ್ವರಯಾನ್ವಿತಃ ॥ ೫೦ ॥ ದ್ರಷ್ಟುಂರಾಮಂಸಹಭ್ರಾತ್ರಾ ತ್ವರಯಾಮಿತ
ವಾಂತಿಕಂ ॥ ದೇವಿಕಿಂಚಿದಭಿಜ್ಞಾನಂ ದೇಹಿಮೇಯೇನರಾಘವಃ ॥ ೫೧ ॥ ವಿಶ್ವಸೇನ್ಮಾಂಪ್ರಯತ್ನೇನ ತತಸ್ತೋಗಂತಾಸಮುತ್ಸು
ಕಃ । ತತಃಕಿಂಚಿದ್ವಿಚಾರ್ಯಾಥ ಸೀತಾಕಮಲಲೋಚನಾ ॥ ೫೨ ॥ ವಿಮುಚ್ಯಕೇಶಪಾಶಾಂತೇಸ್ಥಿತಂಚೂಡಾಮಣಿಂದದೌ ।
ಅನೇನವಿಶ್ವಸೇದ್ರಾಮಸ್ತ್ವಾಂಕಪೀಂದ್ರಸ್ಸಲಕ್ಷ್ಮಣಃ ॥ ೫೩ ॥ ಅಭಿಜ್ಞಾನಾರ್ಥಮನ್ಯಚ್ಚ ವದಾಮಿತವಸುವ್ರತ । ಚಿತ್ರಕೂ
ಟಗಿರೌಪೂರ್ವ ಮೇಕದಾರಹಸಿಸ್ಥಿತಃ । ಮಮಾಂಕೇಶಿರಆಧಾಯನಿದ್ರಾತಿರಘುನಂದನಃ ॥ ೫೪ ॥ ಐಂದ್ರಃಕಾಕಸ್ತದಾಗತ್ಯ

ನಿನಗೋಸ್ಕರ, ರಕ್ಷೋಘ್ನಾ-ರಾಕ್ಷಸ ಸಮೂಹಗಳನ್ನು, ನಿರ್ದಹಿಷ್ಯತಿ-ಸುಡುತ್ತಲಿದ್ದಾನೆ, ಅತ್ರ-ಈ ಮಾತಿನಲ್ಲಿ, ಸಂಶಯಃ-ಸಂದೇಹವು, ನ-ಇಲ್ಲ, ದೇವೀ-ಸೀತೆಯೇ, ಆನು ಜ್ಞಾ-ಅಪ್ಪಣೆಯನ್ನು, ಮೇ-ನನಗೆ, ದೇಹಿ-ಕೊಡು, ತ್ವರಯಾ-ವೇಗದಿಂದ, ಅನ್ವಿತಃ-ಕೂಡಿದವನಾಗಿ, ಗಚ್ಛಾಮಿ-ಹೋಗುತ್ತಲಿದ್ದೇನೆ ॥ ೫೦ ॥ ಸಹಭ್ರಾತ್ರಾ-ತಮ್ಮನಿಂದೊಡಗೂಡಿ ರುವ, ರಾಮಂ-ರಾಮಚಂದ್ರನನ್ನು, ದ್ರಷ್ಟುಂ-ನೋಡಲು, ಗಚ್ಛಾಮಿ-ಹೋಗುತ್ತಲಿದ್ದೇನೆ, ತವ-ನಿನ್ನ, ಅಂತಿಕಂ-ಸವಿಾಪವನ್ನು ಕುರಿತು, ಗಂತುಂ-ಬರುವದಕ್ಕೆ, ತ್ವರಯಾಮಿ-ಅವ ಸರ ಪಡಿಸುತ್ತೇನೆ, ದೇವಿ-ಸೀತೆಯೇ, ಕಿಂಚಿತ್-ಕೊಂಚವಾಗಿ, ಅಭಿಜ್ಞಾನಂ-ಗುರ್ತನ್ನು, ಮೇ-ನನಗೆ, ದೇಹಿ-ಕೊಡು, ಯೇನ-ಯಾವ ಗುರ್ತಿನಿಂದ, ರಾಘವಃ-ರಾಮಚಂದ್ರನು ॥ ೫೧ ॥ ಮಾಂ-ನನ್ನನ್ನು ಕುರಿತು, ವಿಶ್ವಸೇತ-ನಂಬಿಕೆಯಿಂದುಂಟಾದ ವಿಶ್ವಾಸವನ್ನು ಮಾಡ್ಯಾನು, ತತಃ-ಅಂಥಾ ಗುರ್ತನ್ನು ಹೊಂದಿದ ಮೇಲೆ, ಸಮುತ್ಸುಕಃ-ಕುತೂಹಲ ವುಳ್ಳವನಾಗಿ, ಗಂತಾ-ಹೊರಟು ಹೋಗುವವನಾಗುತ್ತೇನೆ, ತತಃ-ಆ ಬಳಿಕ, ಕಮಲ-ಪದ್ಮದಂತೆ, ಲೋಚನಾ-ಕಣ್ಣುಗಳುಳ್ಳ, ಸೀತಾ-ಸೀತೆಯು, ಕಿಂಚಿತ್-ಸ್ವಲ್ಪವಾಗಿ, ವಿಚಾರ್ಯ-ಯೋಚಿಸಿ ॥ ೫೨ ॥ ಕೇಶಪಾಶ-ಜಡೆಯ, ಅಂತೇ-ತುದಿಯಲ್ಲಿ, ಸ್ಥಿತಂ-ಇರುತ್ತಿದ್ದ, ಚೂಡಾಮಣಿಂ-ಚೂಡಾಮಣಿ ರತ್ನವನ್ನು, ವಿಮುಚ್ಯ-ಜಡೆಯಿಂದ ಬಿಚ್ಚಿ, ದದೌ-ಆಂಜನೇಯನಿಗೆ ಕೊಟ್ಟಳು, ಕಪೀಂ ದ್ರ-ಕಪಿಶ್ರೇಷ್ಠನಾದ ಆಂಜನೇಯನೇ, ಅನೇನ-ಈ ಚೂಡಾಮಣಿಯಿಂದ, ಸಲಕ್ಷ್ಮಣಃ-ಲಕ್ಷ್ಮಣನಿಂದ ಕೂಡಿರುವ, ರಾಮಃ-ರಾಮಚಂದ್ರನು, ತ್ವಾಂ-ನಿನ್ನನ್ನು ಕುರಿತು, ವಿಶ್ವಸೇ ತ-ವಿಶ್ವಾಸ ಮಾಡ್ಯಾನು ॥ ೫೩ ॥ ಸುವ್ರತಾ-ಒಳ್ಳೇ ನಡತೆಯುಳ್ಳವನಾದ ಆಂಜನೇಯನೇ, ತವ-ನಿನಗೆ, ಅಭಿಜ್ಞಾನಾರ್ಥಂ-ಗುರ್ತಿಗೋಸ್ಕರ, ಅನ್ಯಚ್ಚ-ಮತ್ತೊಂದು ರಹಸ್ಯವಾದ ದ್ದನ್ನು, ವದಾಮಿ-ಹೇಳುತ್ತೇನೆ, ಪೂರ್ವಂ-ಹಿಂದಕ್ಕೆ, ಚಿತ್ರಕೂಟಗಿರೌ-ಚಿತ್ರಕೂಟವೆಂಬ ಬೆಟ್ಟದಲ್ಲಿ, ಏಕದಾ-ಒಂದಾನೊಂದು ಸಮಯದಲ್ಲಿ, ರಹಸಿ-ಅಂತರಂಗದಲ್ಲಿ, ಸ್ಥಿತಃ- ಇರುತ್ತಿದ್ದ, ರಘುನಂದನಃ-ರಾಮಚಂದ್ರನು, ಮಮಾಂಕೇ-ನನ್ನ ತೊಡೆಯ ಮೇಲೆ, ಶಿರಃ-ತಲೆಯನ್ನು, ಆಧಾಯ-ಇಟ್ಟುಕೊಂಡು, ನಿದ್ರಾತಿ-ನಿದ್ರೆಯನ್ನು ಮಾಡುತ್ತಿದ್ದನು ॥ ೫೪ ॥ ಐಂದ್ರಃ-ಇಂದ್ರನ ಮಗನಾದ, ಕಾಕಃ-ಕಾಗೆಯು, ಸಮಾಗತ್ಯ-ಬಂದು, ನಖೈಃ-ಉಗುರುಗಳಿಂದಲೂ, ತುಂಡೇನಚ-ಮೂಗಿನ ಕೊಕ್ಕಿಯಿಂದಲೂ, ಅಸಕೃತ್-ಬಾರಿಬಾರಿಗೂ, ಆರ

ನ್ಯೈಸ್ತುಂಡೇನಚಾಸಕೃತ್ । ಮತ್ಪಾದಾಂಗುಷ್ಠಮಾರಕ್ತಂವಿದದಾರಾವಿಷಾಶಯಾ ॥೫೫॥ ತತೋರಾಮಃಪ್ರಬುಧ್ಯಾಥ ದೃಷ್ಟ್ವಾಪಾದಂಕ್ಷತವ್ರಣಂ । ಕೇನಭದ್ರೇಕೃತಂಚೇತ ದ್ವಿಪ್ರಿಯಂಮೇದುರಾತ್ಮನಾ ॥ ೫೬ ॥ ಇತ್ಯುಕ್ತ್ವಾಪುರತೋಪಶ್ಯ ದ್ವಾಯಸಂಮಾಂಪುನಃಪುನಃ । ಅಭಿದ್ರವಂತಂರಕ್ತಾಸ್ಯ ನಖತುಂಡಂಚುಕೋಪಹ ॥ ೫೭ ॥ ತೃಣಮೇಕಮುಪಾದಾಯ ದಿವ್ಯಾಸ್ತ್ರೇಣಾಭಿಯೋಜ್ಯತತ್ । ಚಿಕ್ಷೇಪಲೀಲಯಾರಾಮೋ ವಾಯಸೋಪರಿತಜ್ಜ್ವಲತ್ ॥ ೫೮ ॥ ಅಭ್ಯದ್ರವದ್ವಾಯಸ ಶ್ಚ ಭೀತೋಲೋಕಾನ್ಭ್ರಮತ್ಪುನಃ । ಇಂದ್ರಬ್ರಹ್ಮಾದಿಭಿಶ್ಚಾಪಿನಶಕ್ಯೋರಕ್ಷಿತುಂತದಾ ॥ ೫೯ ॥ ರಾಮಸ್ಯಪಾದಯೋ

ಕ್ತಂ-ಕೆಂಪಾದ, ಮತ್ಪದ-ನನ್ನ ಕಾಲಿನ, ಅಂಗುಷ್ಠಂ-ಬೆರಳನ್ನು, ಆಮಿಷ-ಮಾಂಸವೆಂಬ, ಆಶಯಾ-ಅಭಿಪ್ರಾಯದಿಂದ, ವಿದದಾರ-ಕಚ್ಚಿತು ॥ ೫೫ ॥ ತತಃ-ಆ ಬಳಿಕ, ರಾಮಃ-ರಾಮಚಂದ್ರನು, ಪ್ರಬುಧ್ಯ-ಎಚ್ಚತ್ತು, ಕ್ಷತ-ಮಾಡಲ್ಪಟ್ಟ, ವ್ರಣಂ-ಘಾಯವುಳ್ಳ, ಪಾದಂ-ನನ್ನ ಕಾಲನ್ನು, ದೃಷ್ಟ್ವಾ-ನೋಡಿ, ಭದ್ರೇ-ಮಂಗಳಕರಳಾದ ಸೀತೆಯೇ, ದುರಾತ್ಮನಾ-ದುರ್ಬುದ್ಧಿಯುಳ್ಳ, ಕೇನ-ಯಾರಿಂದ, ಮೇ-ನನಿಗೆ, ಏತತ್-ಈ, ಪ್ರಿಯಂ-ಹಿತವಲ್ಲದ ಕೆಲಸವು, ಕೃತಂ-ಮಾಡಲ್ಪಟ್ಟಿತು ॥ ೫೬ ॥ ಇತಿ-ಹೀಗೆ, ಉಕ್ತ್ವಾ-ಹೇಳಿ, ಪುರತಃ-ಮುಂದುಗಡೆಯಲ್ಲಿ, ಪುನಃಪುನಃ-ಬಾರಿಬಾರಿಗೂ, ಮಾಂ-ನನ್ನನ್ನು ಕುರಿತು, ಅಭಿದ್ರವಂತಂ-ಮೇಲೆ ಬಿದ್ದು ಓಡುತ್ತಿರುವ, ರಕ್ತ-ರಕ್ತದಿಂದ ಕೂಡಿರುವ, ಆಸ್ಯ-ಮುಖವು, ನಖ-ಉಗುರುಗಳು, ತುಂಡಂ-ಮೂಗಿನ ಕೊನೆಯೂ ಉಳ್ಳವನಾದ, ವಾಯಸಂ-ಕಾಕವನ್ನು, ಅಪಶ್ಯತ್-ನೋಡಿದನು, ಚುಕೋಪಹ-ಆ ಕಾಗೆಯ ಮೇಲೆ ಕೋಪವನ್ನು ಮಾಡಿದವನಾದನು ॥ ೫೭ ॥ ಏಕಂ-ಒಂದಾದ, ತೃಣಂ-ಹುಲ್ಲು ಕಡ್ಡಿಯನ್ನು, ಉಪಾದಾಯ-ತೆಗೆದುಕೊಂಡು, ತತ್-ಆ ಹುಲ್ಲನ್ನು, ದಿವ್ಯಾಸ್ತ್ರೇಣ-ಬ್ರಹ್ಮಾಸ್ತ್ರದಿಂದ, ಅಭಿಯೋಜ್ಯ-ಮಂತ್ರಿಸಿ, ರಾಮಃ-ರಾಮಚಂದ್ರನು, ವಾಯಸೋಪರಿ-ಕಾಗೆಯ ಮೇಲೆ, ಲೀಲಯಾ-ವಿಲಾಸದಿಂದ, ಚಿಕ್ಷೇಪ-ಬಿಟ್ಟವನಾದನು, ತತ್-ಆ ಅಸ್ತ್ರವು, ಜ್ವಲತ್-ವಾಯಸಕ್ಕೆ ತಾಪವನ್ನುಂಟುಮಾಡುವದಾಗಿ, ಅಭ್ಯದ್ರವತ್-ಕಾಗೆಯನ್ನು ಅಟ್ಟಿಕೊಂಡು ಹೋಯಿತು ॥ ೫೮ ॥ ವಾಯಸಃ-ಕಾಗೆಯು, ಭೀತಃ-ಭಯಪಟ್ಟದ್ದಾಗಿ, ಪುನಃ-ತಿರಿಗಿ, ಲೋಕಾನ್-ಇಂದ್ರಲೋಕ ಬ್ರಹ್ಮಲೋಕಗಳನ್ನು, ಭ್ರಮನ್-ಸುತ್ತುತ್ತಿರುವದಾಗಿ, ಇಂದ್ರ-ಇಂದ್ರನು, ಬ್ರಹ್ಮ-ಚತುರ್ಮುಖನು, ಆದಿ-ಮೊದಲಾದ ದೇವತೆಗಳಿಂದ, ರಕ್ಷಿತುಂ-ಕಾಪಾಡುವದಕ್ಕೆ, ನಶಕ್ಯಃ-ಸಾಧ್ಯವಾಗಲು, ತದಾ-ಆಗ ॥ ೫೯ ॥ ದಯಾನಿಧೇಃ-ಕೃಪಾಸಮುದ್ರನಾದ, ರಾಮಸ್ಯ-ರಾಮಚಂದ್ರನ, ಪಾದಯೋಃ-ಚರಣಗಳ, ಅಗ್ರೇ-ಮುಂದೆ, ಭೀತ್ಯಾ-ಭಯದಿಂದ, ಅಪತತ್-ಬಿದ್ದವನಾದನು, ಶರಣ-ರಕ್ಷಿಸಬೇಕೆಂದು, ಆಗತಂ-ಬಂದಿರುವ ಕಾಕಾಸುರನನ್ನು, ಆಲೋಕ್ಯ-ನೋಡಿ, ರಾಮಃ-ರಾಮಚಂದ್ರನು, ತಂ-ಆ ಕಾಕಾಸುರನನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್-ಹೇಳಿದನು ॥ ೬೦ ॥ ಮೇ-ನನ್ನ, ಏತತ್-ಈ, ಅಸ್ತ್ರಂ-ಬ್ರಹ್ಮಾಸ್ತ್ರವು, ಅಮೋಘಂ-ಕೊಲ್ಲದೆ ವ್ಯರ್ಥವಾಗಿ ಹೋಗತಕ್ಕದ್ದಲ್ಲ, (ಆದ್ದರಿಂದ ನೀನು, ) ಏಕಂ ಕ್ಷೇಂ-ನಿನ್ನ ಪ್ರಾಣಗಳಿಗೆ

ರಗ್ರೆ ಪತದ್ಭೀತ್ಯಾದಯೋಸಿಧೇಃ । ಶರಣಾಗತಮಾಲೋಕ್ಯರಾಮಸ್ತ್ವಿದಮಬ್ರವೀತ್ ॥ ೬೦ ॥ ಅಮೋಘಂ ನೇತದಸ್ತ್ರಂ ಮೇ ದತ್ವೈಕಾಕ್ಷಮಿತೋವ್ರಜ ॥ ಸವ್ಯಂದತ್ವಾತತಃಕಾಕ ಏವಂಪೌರುಷವಾನಪಿ ॥ ೬೧ ॥ ಉಪೇಕ್ಷತೇಕಿಮರ್ಥಂಮಾಮಿದಾನೀಂಸೋಪಿರಾಘವಃ । ಹನೂಮಾನಪಿತಾಮಾಹ ಶ್ರುತ್ವಾಸೀತಾನುಭಾಷಿತಂ ॥ ೬೨ ॥ ದೇವಿತ್ವಾಂಯದಿಜಾನಾತಿ ಸ್ಥಿತಾಮತ್ರರಘೂತ್ತಮಃ ॥ ಕರಿಷ್ಯತಿಕ್ಷಣಾದ್ಭಸ್ಮಲಂಕಾಂರಾಕ್ಷಸಮಂಡಿತಾಂ ॥ ೬೩ ॥ ಜಾನಕೀಪ್ರಾಹತಂವತ್ಸ ಕಥಂತ್ವಂಯೋತ್ಸ್ಯಸೇಸುರೈಃ । ಅತಿಸೂಕ್ಷ್ಮವಪುಸ್ಸರ್ವೇ ವಾನರಾಶ್ಚಭವಾದೃಶಾಃ ॥ ೬೪ ॥ ಶ್ರುತ್ವಾತದ್ವಚನಂದೇವ್ಯಾಃ ಪೂರ್ವರೂಪಮದರ್ಶಯತ್ । ಮೇರುಮಂದರಸಂಕಾಶಂರಕ್ಷೋಗಣವಿಭೀಷಣಂ ॥ ೬೫ ॥ ದೃಷ್ಟ್ವಾಸೀತಾಹನೂಮಂತಂ ಮಹಾಪ

ಬದಲಾಗಿ ಒಂದು ಕಣ್ಣನ್ನು ಕೊಟ್ಟು, ಇತಃ-ಇಲ್ಲಿಂದ, ವ್ರಜ-ಹೋಗು, ತತಃ-ಆ ಮೇಲೆ, ಕಾಕಃ-ಕಾಕಾಸುರನು, ಸವ್ಯಂ-ಎಡಕಣ್ಣನ್ನು, ದತ್ವಾ-ಬ್ರಹ್ಮಾಸ್ತ್ರಕ್ಕೆ ಬಲಿಯಾಗಿ ಕೊಟ್ಟು ಹೊರಟು ಹೋದನು, ಏವಂ-ಈ ರೀತಿಯಾಗಿ, ಪೌರುಷವಾನಪಿ-ಪುರುಷ ಸಾಮರ್ಥ್ಯವುಳ್ಳವನಾಗಿದ್ದಾಗ್ಯೂ ॥ ೬೧ ॥ ಇದಾನೀಂ-ಈಗ, ಸೋಪಿ-ಅಂಥಾ, ರಾಘವಃ-ರಾಮಚಂದ್ರನು, ಮಾಂ-ನನ್ನನ್ನು ಕುರಿತು, ಕಿಮರ್ಥಂ-ಯಾತಕ್ಕೆ, ಉಪೇಕ್ಷತೇ-ಉದಾಸೀನ ಮಾಡುತ್ತಿದ್ದಾನೆ, ಹನುಮಾನಪಿ-ಆಂಜನೇಯನು, ಸೀತಾ-ಸೀತೆಯಿಂದ, ಅನುಭಾಷಿತಂ-ರಾಮಚಂದ್ರನ ಸ್ವಭಾವವನ್ನು ಅನುಸರಿಸಿ ಹೇಳಿದ ಮಾತನ್ನು, ಶ್ರುತ್ವಾ-ಕೇಳಿ, ತಾಂ-ಸೀತೆಯನ್ನು ಕುರಿತು, ಆಹ-ಹೇಳಿದನು ॥ ೬೨ ॥ ದೇವಿ-ಸೀತೆಯೇ, ರಘೂತ್ತಮಃ-ರಾಮಚಂದ್ರನು, ಅತ್ರ-ಇಲ್ಲಿ, ಸ್ಥಿತಾಂ-ಇರುತ್ತಿರುವವಳನ್ನಾಗಿ, ತ್ವಾಂ-ನಿನ್ನನ್ನು, ಜಾನಾತಿಯದಿ-ತಿಳಿದವನಾಗಿದ್ದರೆ, ರಾಕ್ಷಸ-ರಾಕ್ಷಸರಿಂದ, ಮಂಡಿತಾಂ-ಅಲಂಕೃತವಾದ, ಲಂಕಾಂ-ಲಂಕಾ ಪಟ್ಟಣವನ್ನು, ಕ್ಷಣಾತ್-ನಿಮಿಷದಲ್ಲಿ, ಭಸ್ಮ-ಬೂದಿಯನ್ನಾಗಿ, ಕರಿಷ್ಯತಿ-ಮಾಡುತ್ತಾನೆ ॥ ೬೩ ॥ ಜಾನಕೀ-ಸೀತೆಯು, ತಂ-ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದಳು, ವತ್ಸ-ಬಾಲಕನಾದ ಆಂಜನೇಯನೇ, (ತ್ವಂ-ನೀನು,) ಅತಿ-ಅತ್ಯಂತವಾಗಿ, ಸೂಕ್ಷ್ಮ-ಸಣ್ಣದಾದ, ವಪುಃ-ಶರೀರವುಳ್ಳವನು (ಆಗಿದ್ದೀ) ವಾನರಾಶ್ಚ-ಕಪಿಗಳು, ಭವಾದೃಶಾಃ-ನಿನ್ನಂತೆ ಚಿಕ್ಕ ರೂಪವುಳ್ಳವರು (ಆಗಿರುತ್ತಾರೆ,) (ಹೀಗೆ ಇರುವದರಿಂದ) ಅಸುರೈಃ-ರಾಕ್ಷಸರ ಸಂಗಡ, ಕಥಂ-ಹ್ಯಾಗೆ, ಯೋತ್ಸ್ಯಸೇ-ನೀನು ಯುದ್ಧ ಮಾಡುತ್ತೀ ॥ ೬೪ ॥ ತದ್ವಚನಂ-ಸೀತಾದೇವಿಯ ಮಾತನ್ನು, ಶ್ರುತ್ವಾ-ಕೇಳಿ, ದೇವ್ಯಾಃ-ಸೀತಾದೇವಿಗೆ, ಮೇರು-ಮೇರು ಪರ್ವತಕ್ಕೂ, ಮಂದರ-ಮಂದರ ಪರ್ವತಕ್ಕೂ, ಸಂಕಾಶಂ-ಸಮವಾದ, ರಕ್ಷೋ-ರಾಕ್ಷಸರ, ಗಣ-ಸಮೂಹಕ್ಕೆ, ವಿಭೀಷಣಂ-ಭಯಂಕರವಾದ, ಪೂರ್ವರೂಪಂ-ತನ್ನ ಮೊದಲಿನ ರೂಪವನ್ನು, ಅದರ್ಶಯತ್-ಆಂಜನೇಯನು ತೋರಿಸಿದನು ॥ ೬೫ ॥ ಸೀತಾ-ಸೀತೆಯು, ಮಹಾಪರ್ವತ ಸನ್ನಿಭಂ-ಮಹಾ-ದೊಡ್ಡದಾದ, ಪರ್ವತ-ಬೆಟ್ಟಕ್ಕೆ, ಸನ್ನಿಭಂ-ಸಮನಾದ, ತಂ-ಆ, ಕಪಿಕುಂಜರಂ-ಕಪಿಶ್ರೇಷ್ಠನಾದ, ಹನೂಮಂತಂ-ಆಂಜನೇಯನನ್ನು ಕುರಿತು,

ರ್ವತಸನ್ನಿಭಂ । ಹರ್ಷೇಣಮಹತಾವಿಷ್ಟಾಪ್ರಾಹತಂಕಪಿಕುಂಜರಂ ॥ ೬೬ ॥ ಸಮರ್ಥೋಸಿಮಹಾಸತ್ವದ್ರಷ್ಟುಂತಿತ್ವಾಂ ಮಹಾಬಲಂ । ರಾಕ್ಷಸ್ಯಸ್ತೆಶುಭಃಪಂಥಾಃ ಗಚ್ಛರಾಮಾಂತಿಕಂದ್ರುತಂ ॥ ೬೭ ॥ ಬುಭುಕ್ಷಿತಃಕಪಿಃಪ್ರಾಹ ದರ್ಶನಾತ್ತ್ವಾರಣಂಮಮ । ಭವಿಷ್ಯತಿಫಲೈಸ್ಸರ್ವೈಸ್ತವದೃಷ್ಟೌಸ್ಥಿತೈರ್ಹಿಮೇ ॥ ೬೮ ॥ತಥೇತ್ಯುಕ್ತಸ್ಸಜಾನಕ್ಯಾ ಭಕ್ಷಯಿತ್ವಾಫಲಂಕಪಿಃ । ತತಃಪ್ರಸ್ಥಾಪಿತೋಗಚ್ಛಜ್ಜಾನಕೀಂಪ್ರಣಿಪತ್ಯಸಃ ॥ ೬೯ ॥ ಕಿಂಚಿದ್ದೂರಮಥೋಗತ್ವಾ ಸ್ವಾತ್ಮನ್ಯೇವಾನುಚಿಂತಯತ್ ॥ ೭೦ ॥ ಕಾರ್ಯಾರ್ಥಮಾಗತೋದೂತಃ ಸ್ವಾಮಿಕಾರ್ಯಾವಿರೋಧಕಃ । ಅನ್ಯತ್ಕಿಂಚಿದಸಂಪಾದ್ಯ ಗಚ್ಛತ್ಯಧಮಯೆವಸಃ ॥ ೭೧ ॥ ಅತೋಹಂಕಿಂಚಿದನ್ಯಚ್ಚಕೃತ್ವಾದೃಷ್ಟ್ವಾಥರಾವಣಂ । ಸಂಭಾಷ್ಯಚತತೋರಾಮದರ್ಶನಾರ್ಥಂ

ಮಹತಾ-ಹೆಚ್ಚಾದ, ಹರ್ಷೇಣ-ಸಂತೋಷದಿಂದ, ಪ್ರಾಹ-ಹೇಳಿದಳು ॥ ೬೬ ॥ ಮಹಾಸತ್ವ-ಅಧಿಕ ದೇಹಾಕೃತಿಯುಳ್ಳ ಆಂಜನೇಯನೇ, ಸಮರ್ಥಃ-ರಾಕ್ಷಸರ ಸಂಗಡ ಯುದ್ಧ ಮಾಡಲು ಶಕ್ತನು, ಅಸಿ-ಆಗಿದ್ದೀ, ರಾಕ್ಷಸ್ಯಃ-ರಾಕ್ಷಸರ ಹೆಂಗಸರು, ಮಹಾಬಲಂ-ಅಧಿಕ ಬಲನಾದ, ತ್ವಾಂ-ನಿನ್ನನ್ನು, ದ್ರಕ್ಷ್ಯಂತಿ-ನೋಡುತ್ತಲಿದ್ದಾರೆ, ದ್ರುತಂ-ಶೀಘ್ರವಾಗಿ, ರಾಮ-ರಾಮಚಂದ್ರನ, ಅಂತಿಕಂ-ಸಮೀಪವನ್ನು ಕುರಿತು, ಗಚ್ಛ-ಹೋಗು, ತೇ-ನಿನಗೆ, ಪಂಥಾಃ-ಮಾರ್ಗವು, ಶುಭಃ-ಮಂಗಳಕರವಾದದ್ದು, (ಅಸ್ತು-ಆಗಲಿ,) ॥ ೬೭ ॥ ಕಪಿಃ-ಆಂಜನೇಯನು, ಬುಭುಕ್ಷಿತಃ-ಹಸಿವಿಯಿಂದ ಭೋಜನಾಪೇಕ್ಷೆಯುಳ್ಳವನಾಗಿ, ಪ್ರಾಹ-ಹೇಳಿದನು, ದರ್ಶನಾತ್-ನಿನ್ನನ್ನು ನೋಡಿದ ದೆಸೆಯಿಂದ, ಮಮ-ನನಗೆ, ಪಾರಣಂ-ಆಹಾರ ಸೇವೆಯು, (ಉಚಿತಂ-ಮಾಡಲು ಯೋಗ್ಯವಾದದ್ದು,) ತವ-ನಿನ್ನ, ದೃಷ್ಟೌ-ಕಣ್ಣಿಗೆ ಗೋಚರದಲ್ಲಿ, ಸ್ಥಿತೈಃ-ಇರುತ್ತಿರುವ, ಸರ್ವೈಃ-ಎಲ್ಲಾ, ಫಲೈಃ-ಫಲಗಳಿಂದ, ಮೇ-ನನಗೆ, ಪಾರಣಂ-ಭೋಜನವು, ಭವಿಷ್ಯತಿ-ಆಗುತ್ತೆ ॥ ೬೮ ॥ ಜಾನಕ್ಯಾ-ಸೀತೆಯಿಂದ, ತಥೇತಿ-ಹಾಗೆಯೇ ಆಗಲೆಂದು, ಉಕ್ತಃ-ಹೇಳಲ್ಪಟ್ಟವನಾದ, ಸಃ-ಆ, ಕಪಿಃ-ಆಂಜನೇಯನು, ಭಕ್ಷಯಿತ್ವಾ-ಫಲಗಳನ್ನು ಭಕ್ಷಣೆ ಮಾಡಿ, ತತಃ-ಆ ಬಳಿಕ, ಪ್ರಸ್ಥಾಪಿತಃ-ಕಳುಹಿಸಲ್ಪಟ್ಟವನಾದ, ಸಃ-ಆಂಜನೇಯನು, ಜಾನಕೀಂ-ಸೀತೆಯನ್ನು, ಪ್ರಣಿಪತ್ಯ-ನಮಸ್ಕಾರ ಮಾಡಿ, ಅಗಚ್ಛತ್-ಹೊರಟು ಹೋದನು ॥ ೬೯ ॥ ಅಥ-ಆ ಬಳಿಕ, ಕಿಂಚಿದ್ದೂರಂ-ಕೆಲವು ದೂರದವರಿಗೆ, ಗತ್ವಾ-ಹೋಗಿ, ಸ್ವಾತ್ಮನ್ಯೇವ-ತನ್ನೊಳಗೇನೇ, ಅನುಚಿಂತಯತ್-ಆಲೋಚಿಸಿದನು ॥ ೭೦ ॥ ಕಾರ್ಯಾರ್ಥಂ-ಬಂದು ಕೆಲಸಕ್ಕಾಗಿ, ಆಗತಃ-ಬಂದವನಾದ, ದೂತಃ-ಭೃತ್ಯನು, ಸ್ವಾಮಿಕಾರ್ಯಾವಿರೋಧಕಃ-ಸ್ವಾಮಿ-ಪ್ರಭುವಿನ, ಕಾರ್ಯ-ಕೆಲಸಕ್ಕೆ, ಅವಿರೋಧಕಃ-ವಿರೋಧವಿಲ್ಲದ ಹಾಗೆ, ಅನ್ಯತ್-ಕಿಂಚಿತ್-ಬೇರೆ ಯೇನಾದರೂ ಕೊಂಚ ಇತರ ಕೆಲಸವನ್ನು, ಅಸಂಪಾದ್ಯ-ಮಾಡದೆ, ಗಚ್ಛತಿ-ಪ್ರಭುವಿನ ಬಳಿಗೆ ಹೋಗುತ್ತಾನೋ, ಸಃ-ಆ ದೂತನು, ಅಧಮಃ-ಏವ-ಉತ್ತಮನಲ್ಲವೇ ಅಲ್ಲ ॥ ೭೧ ॥ ಅತಃ-ಆ ಕಾರಣದಿಂದ, ಕಿಂಚಿತ್-ಸ್ವಲ್ಪವಾಗಿ, ಅನ್ಯಚ್ಚ-ಇತರ ಕೆಲಸವನ್ನು, ಕೃತ್ವಾ-ಮಾಡಿ, ರಾವಣಂ-ರಾವಣನನ್ನು, ದೃಷ್ಟ್ವಾ

ವ್ರಜಾಮ್ಯಹಂ ॥ ೨೦ ॥ ಇತಿನಿಶ್ಚಿತ್ಯಮನಸಾ ವೃಕ್ಷಷಂಡಾನ್ಮಹಾಬಲಃ । ಉತ್ಪಾಟ್ಯಾಶೋಕವನಿಕಾಂ ನಿರ್ವೃಕ್ಷಮಕರೋ
ತ್ಕ್ಷಣಾತ್ ॥ ೨೩ ॥ ಸೀತಾಶ್ರಯನಗಂತ್ಯಕ್ತ್ವಾವನಂಶೂನ್ಯಂಚಕಾರಸಃ । ಉತ್ಪಾಟಯಂತಂವಿಪಿನಂ ದೃಷ್ಟ್ವಾವಿರಾ
ಕ್ಷಸಯೋಷಿತಃ ॥೨೪॥ಅಪೃಚ್ಛನ್ಜಾನಕೀಂಕೋಸೌವಾನರಾಕೃತಿರುದ್ಭಟಃ ॥೨೫॥ ಜಾನಕ್ಯುವಾಚ ॥೨೬॥ ಭವತ್ಯಯೋ
ವಜಾನಂತಿ ಮಾಯಾಂರಾಕ್ಷಸನಿರ್ಮಿತಾಂ।ನಾಹಮೇನಾಂವಿಜಾನಾಮಿದುಃಖಶೋಕಸಮಾಕುಲಾ ॥೨೭॥ ಇತ್ಯುಕ್ತಾಸ್ತ್ವ
ರಿತಂಗತ್ವಾ ರಾಕ್ಷಸ್ಯೋಭಯಪೀಡಿತಾಃ । ಹನೂಮತಾಕೃತಂಸರ್ವಂರಾವಣಾಯನ್ಯವೇದಯನ್ ॥ ೨೮ ॥ ದೇವಕಶ್ಚಿನ್ಮ

ಷ್ಟ್ವಾ-ನೋಡಿ, ಸಂಭಾಷ್ಯ-ರಾವಣನ ಸಂಗಡ ಮಾತನಾಡಿ, ತತಃ-ಆ ಬಳಿಕ, ರಾಮಂ-ರಾಮಚಂದ್ರನ, ದರ್ಶನಾರ್ಥಂ-ನೋಡುವದಕ್ಕಾಗಿ, ಅಹಂ-ನಾನು, ವ್ರಜಾಮಿ-ಹೋಗು ಹೋಗುತ್ತೇನ ॥ ೭೦ ॥ ಇತಿ-ಹೀಗೆ, ಮನಸಾ-ಚಿತ್ತದಿಂದ, ನಿಶ್ಚಿತ್ಯ-ಗೊತ್ತುಮಾಡಿ, ಮಹಾಬಲಃ-ಅಧಿಕ ಬಲನಾದ ಅಂಜನೇಯನು, ವೃಕ್ಷ-ಗಿಡಗಳ, ಷಂಡಾನ್-ಸಮೂಹಗಳ ನ್ನು, ಉತ್ಪಾಟ್ಯ-ಕಿತ್ತು, ಅಶೋಕವನಿಕಾಂ-ಅಶೋಕವನವನ್ನು, ನಿರ್ವೃಕ್ಷಂ-ವೃಕ್ಷಗಳಿಲ್ಲದಂತೆ, ಕ್ಷಣಾತ್-ನಿಮಿಷದಲ್ಲಿ, ಅಕರೋತ್-ಮಾಡಿದನು ॥೭೩॥ ಸಃ-ಆಂಜನೇಯನು, ಸೀತಾ ಸೀತೆಗೆ, ಆಶ್ರಯ-ಕೂತಿರುವ ಸ್ಥಳವಾದ, ನಗಂ-ಮರವನ್ನು, ತ್ಯಕ್ತ್ವಾ-ಬಿಟ್ಟು, ವನಂ-ತೋಟವನ್ನು, ಶೂನ್ಯಂ-ವೃಕ್ಷಗಳಿಲ್ಲದಂತೆ, ಚಕಾರ-ಮಾಡಿದನು, ವಿಪಿನಂ-ಅರಣ್ಯವನ್ನು, ಉತ್ಪಾಟಯಂತಂ-ಕೀಳುತ್ತಿರುವ ಆಂಜನೇಯನನ್ನು ರಾಕ್ಷಸ-ರಾಕ್ಷಸರ, ಯೋಷಿತಃ-ಹೆಂಗಸರು, ದೃಷ್ಟ್ವಾ-ನೋಡಿ ॥ ೭೪ ॥ ವಾನರ-ಕಪಿಯ, ಆಕೃತಿಃ-ರೂಪಳ್ಳ, ಉದ್ಭ ಟಃ-ಉದ್ಭಟ ದೂತನಾದ, ಅಸೌ-ಈತನು, ಕಃ-ಯಾರು (ಎಂಬದಾಗಿ) ಜಾನಕೀಂ-ಸೀತೆಯನ್ನು ಕುರಿತು, ಅಪೃಚ್ಛನ್-ಕೇಳಿದರು ॥೭೫॥ ಜಾನಕ್ಯುವಾಚ-ಜಾನಕೀ-ಸೀತೆಯು, ಉವಾಚ-ಹೇಳುತ್ತಲಿದ್ದಾಳೆ ॥೭೬॥ ಭವತ್ಯಯೇವ-ನೀವುಗಳೇ, ರಾಕ್ಷಸ-ರಾಕ್ಷಸರಿಂದ, ನಿರ್ಮಿತಾಂ-ಉಂಟಾಗಿರುವ, ಮಾಯಾಂ-ಮಾಯೆಯನ್ನು, ಜಾನಂತಿ-ತಿಳಿಯುವವರಾಗಿದ್ದೀರಿ, ದುಃಖ-ದುಃಖದಿಂದಲೂ, ಶೋಕ-ವ್ಯಸನದಿಂದಲೂ, ಸಮಾಕುಲಾ-ಕೂಡಿದವಳಾದ, ಅಹಂ-ನಾನು, ಏನಾಂ-ಈ ಮಾಯೆಯನ್ನು, ನವಿಜಾನಾಮಿ-ತಿಳಿಯೆನು ॥ ೭೭ ॥ ಇತಿ-ಹೀಗೆ, ಉಕ್ತಾಃ-ಹೇಳಲ್ಪಟ್ಟವರಾದ, ರಾಕ್ಷಸ್ಯಃ-ರಾಕ್ಷಸಸ್ತ್ರೀಯರು, ಭಯ-ಅಂಜಿಕೆಯಿಂದ, ಪೀಡಿತಾಃ-ಕೂಡಿದವರಾಗಿ, ತ್ವರಿತಂ-ಜಾಗ್ರತೆಯಾಗಿ, ಗತ್ವಾ-ಹೋಗಿ, ಹನೂಮತಾ-ಆಂಜ ನೇಯನಿಂದ, ಕೃತಂ-ಮಾಡಲ್ಪಟ್ಟ, ಸರ್ವಂ-ಎಲ್ಲವನ್ನೂ, ರಾವಣಾಯ-ರಾವಣನಿಗೆ, ನ್ಯವೇದಯನ್-ತಿಳಿಸಿದರು ॥ ೭೮ ॥ ದೇವ-ಸ್ವಾಮಿಯಾದ ರಾವಣನೇ, ವಾನರ-ಕಪಿಯ, ಆಕೃತಿ-ರೂಪಳ್ಳ, ದೇಹ-ಶರೀರವನ್ನು, ಧೃತ-ಧರಿಸಿದವನಾದ, ಕಶ್ಚಿತ್-ಒಬ್ಬನಾದ, ಮಹಾಸತ್ವಃ-ಮಹಾ ಬಲಶಾಲಿಯಾದವನು, ಸೀತಯಾ-ಸೀತೆಯ ಸಂಗಡ, ಸಂಭಾಷ್ಯ-ಮಾತನಾಡಿ, ಅಶೋಕವನಿಕಾಂ-ಅಶೋಕ ವನ ವೃಕ್ಷಗಳನ್ನು, ಕ್ಷಣಾತ್-ನಿಮಿಷದಲ್ಲಿ, ಉತ್ಪಾಟ್ಯ-ಕಿತ್ತು, ಚೈತ್ಯಪ್ರಾಸಾದಂ-ಶ್ರಿನ್ನಿದ್ದ ದೇವಾಲಯವನ್ನು, ಬಭಂಜ-ನಾಶ ಮಾಡಿದ

ಹಾಸತ್ಯೋವಾನರಾಕೃತಿವೇಹಭೃತ್।ಸೀತಯಾಸಹಸಂಭಾಷ್ಯಹ್ಯಶೋಕವನಿಕಾಂಕ್ಷಣಾತ್। ಉತ್ಪಾಟ್ಯಚೈತ್ಯಪ್ರಾಸಾದಂ ಬಭಂಜಾಮಿತವಿಕ್ರಮಃ ॥ ೭೯ ॥ ಪ್ರಾಸಾದರಕ್ಷಿಣಸ್ಸರ್ವಾನ್ಹತ್ವಾತತ್ರೈವತಸ್ಥಿವಾನ್ । ತಚ್ಛ್ರುತ್ವಾತೂರ್ಣಮುತ್ಥಾಯವನಭಂಗಂಮಹಾಪ್ರಿಯಂ ॥ ೮೦ ॥ ಕಿಂಕರಾನ್ಪ್ರೇಷಯಾಮಾಸನಿಯುತಂರಾಕ್ಷಸಾಧಿಪಃ। ನಿರ್ಭಗ್ನಚೈತ್ಯಪ್ರಾಸಾದ ಪ್ರಥಮಾಂತರಸಂಸ್ಥಿತಃ ॥ ೮೧ ॥ ಹನೂಮಾನ್ಪರ್ವತಾಕಾರೋ ಲೋಹಸ್ತಂಭಕೃತಾಯುಧಃ । ಕಿಂಚಿಲ್ಲಾಂಗೂಲಚಲನೋರಕ್ತಾಸ್ಯೋಭೀಷಣಾಕೃತಿಃ ॥ ೮೨ ॥ ಆಪತಂತಂಮಹಾಸಂಘಂ ರಾಕ್ಷಸಾನಾನಾಂದದರ್ಶಸಃ । ಚಕಾರಸಿಹ್ಮನಾದಂಚಶ್ರುತ್ವಾತೇಮುಮುಹುರ್ಭೃಶಂ ॥೮೩॥ ಹನೂಮಂತಮಥೋದೃಷ್ಟ್ವಾರಾಕ್ಷಸಾಭೀಷಣಾಕೃತಿಂ। ನಿಜಘ್ನುರ್ವಿವಿಧಾ

ಸು, ಅಮಿತಃ-ಅಪರಿಮಿತವಾದ, ವಿಕ್ರಮಃ-ಪರಾಕ್ರಮವುಳ್ಳವನಾಗಿ ॥ ೭೯ ॥ ಪ್ರಾಸಾದ-ದೇವಾಲಯವನ್ನು, ರಕ್ಷಿಣಃ-ಕಾಪಾಡುತ್ತಿದ್ದವರಾದ, ಸರ್ವಾನ್-ಎಲ್ಲಾ ಕಾವಲುಗಾರರನ್ನು, ಹತ್ವಾ-ಕೊಂದು, ತತ್ರೈವ-ಅಲ್ಲಿಯೇ, ತಸ್ಥಿವಾನ್-ಇರುತ್ತಿದ್ದಾನೆ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ರಾಕ್ಷಸಾಧಿಪಃ-ರಾಕ್ಷಸರಿಗೆ, ಅಧಿಪಃ-ಒಡೆಯನಾದ ರಾವಣನು, ಮಹಾಪ್ರಿಯಂ-ಬಹಳ ಅಸಮಾಧಾನಕರವಾದ, ವನ-ಅರಣ್ಯದಲ್ಲಿ ಇರುವ ಮರಗಳ, ಭಂಗಂ-ನಾಶವನ್ನು (ತಪ್ಪಿಸುವದಕ್ಕೆ) ॥ ೮೦ ॥ ನಿಯುತಂ-ಹತ್ತು ಕೋಟಿ ಸಂಖ್ಯೆಯುಳ್ಳವರಾದ, ಕಿಂಕರಾನ್-ಸೇವಕ ರಾಕ್ಷಸರನ್ನು, ಪ್ರೇಷಯಾಮಾಸ-ಆಂಜನೇಯನನ್ನು ಜಯಿಸುವದಕ್ಕೆ ಕಳುಹಿಸಿದವನಾದನು, ನಿರ್ಭಗ್ನಚೈತ್ಯಪ್ರಾಸಾದಪ್ರಥಮಾಂತರಸಂಸ್ಥಿತಃ-ನಿರ್ಭಗ್ನ-ಕೆಡವಲ್ಪಟ್ಟ, ಚೈತ್ಯಪ್ರಾಸಾದ-ದೇವಾಲಯದ ಗೋಪುರದ, ಪ್ರಥಮ-ಮೊದಲನೆಯದಾದ, ಅಂತರ-ಅಂತಸ್ತಿನ ಮೇಲೆ, ಸಂಸ್ಥಿತಃ-ಇರುವವನಾದ ॥೮೧॥ ಪರ್ವತಾಕಾರಃ-ಬೆಟ್ಟಕ್ಕೆ ಸಮಾನವಾದ ರೂಪವುಳ್ಳವನಾದ, ಲೋಹ-ಉಕ್ಕಿನಿಂದ ಮಾಡಲ್ಪಟ್ಟ, ಸ್ತಂಭ-ಕಂಭವೇ, ಕೃತ-ಮಾಡಲ್ಪಟ್ಟ, ಆಯುಧಃ-ಆಯುಧವಾಗುಳ್ಳ, ಕಿಂಚಿತ್-ಸ್ವಲ್ಪವಾಗಿ, ಲಾಂಗೂಲ-ಬಾಲದ, ಚಲನಃ-ಕದಲಿಕೆಯುಳ್ಳವನಾದ, ರಕ್ತ-ಕೆಂಪಾದ, ಆಸ್ಯಃ-ಮುಖವುಳ್ಳವನಾದ, ಭೀಷಣ-ಭಯಂಕರವಾದ, ಆಕೃತಿಃ-ರೂಪವುಳ್ಳವನಾದ, ಹನೂಮಾನ್-ಆಂಜನೇಯನು॥೮೨॥ ರಾಕ್ಷಸಾನಾಂ-ರಾಕ್ಷಸರುಗಳ, ಆಪತಂತಂ-ಯುದ್ಧಕ್ಕೆ ಮೇಲೆಬಿದ್ದು ಬರುತ್ತಿರುವ, ಮಹಾಸಂಘಂ-ಬಹಳವಾದ ಸಮೂಹವನ್ನು, ದದರ್ಶ-ನೋಡಿದನು, ಸಃ-ಆಂಜನೇಯನು, ಸಿಹ್ಮನಾದಂ-ಸಿಹ್ಮ ಧ್ವನಿಯನ್ನು, ಚಕಾರ-ಮಾಡಿದನು, ತೇ-ಆ ರಾಕ್ಷಸರು, ಶ್ರುತ್ವಾ-ಆಂಜನೇಯನು ಮಾಡಿದ ಸಿಹ್ಮ ಧ್ವನಿಯನ್ನು ಕೇಳಿ, ಭೃಶಂ-ಅತ್ಯಂತವಾಗಿ, ಮುಮುಹುಃ-ಪ್ರಜ್ಞೆಯಿಲ್ಲದವರಾದರು, ॥ ೮೩ ॥ ಅಥ-ಆ ಬಳಿಕ, ರಾಕ್ಷಸಾಃ-ರಾಕ್ಷಸರು, ಭೀಷಣ-ಭಯಂಕರವಾದ, ಆಕೃತಿಂ-ರೂಪವುಳ್ಳವನಾದ, ಸರ್ವ-ಸಮಸ್ತರಾದ, ರಾಕ್ಷಸ-ರಾಕ್ಷಸರನ್ನು,

ಸ್ತ್ರೈಃ ಸರ್ವರಾಕ್ಷಸಘಾತಿನಂ ॥ ೮೪ ॥ ತತಃ ಪುತ್ಥಾಯ ಹನುಮಾನ್ಮುದ್ಗರೇಣ ಸಮಂತತಃ । ನಿಷ್ಪಿಪೇಷ ಕ್ಷಣಾದೇವ ಮಶಕಾನಿವ ಯೂಥಪಃ ॥ ೮೫ । ನಿಹತಾನ್ಕಿಂಕರಾನ್ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ । ಪಂಚಸೇನಾಪತೀಂಸ್ತತ್ರ ಪ್ರೇಷಯಾಮಾಸ ದುರ್ಮದಾನ್ ॥ ೮೬ ॥ ಹನೂಮಾನಪಿ ತಾನ್ಸರ್ವಾನ್ ಲೋಹಸ್ತಂಭೇನ ಚಾಹನತ್ । ತತಃ ಕ್ರುದ್ಧೋ ಮಂತ್ರಿಸುತಾನ್ ಪ್ರೇಷಯಾಮಾಸ ಸಪ್ತ ಸಃ ॥ ೮೭ ॥ ಆಗತಾನಪಿ ತಾನ್ಸರ್ವಾನ್ ಪೂರ್ವವದ್ವಾನರೇಶ್ವರಃ । ಕ್ಷಣಾನ್ನಿಶ್ಶೇಷಯೋಹ ತ್ವಾ ಲೋಹಸ್ತಂಭೇನ ಮಾರುತಿಃ ॥ ೮೮ ॥ ಪೂರ್ವಸ್ಥಾನಮುಪಾಶ್ರಿತ್ಯ ಪ್ರತೀಕ್ಷನ್ರಾಕ್ಷಸಾನ್ಸ್ಥಿತಃ । ತತೋ ಜಗಾಮ ಬಲವಾನ್ ಕುಮಾರೋಽಕ್ಷಃ ಪ್ರತಾಪವಾನ್ ॥ ೮೯ ॥ ತಮುತ್ಪಪಾತ ಹನುಮಾನ್ ದೃಷ್ಟ್ವಾಽಽಕಾಶೇ ಸಮುದ್ಗರಃ । ಗಗನಾತ್ತ್ವರಿ

ಘಾತಿನಂ-ಕೊಂದಂಥಾವನಾದ, ಹನೂಮಂತಂ-ಆಂಜನೇಯನನ್ನು, ವಿವಿಧ-ನಾನಾ ವಿಧಗಳಾದ ಅಸ್ತ್ರಗಳ, ಓಘೈಃ-ಸಮೂಹಗಳಿಂದ, ನಿಜಘ್ನುಃ-ಹೊಡೆದರು ॥ ೮೪॥ ತತಃ-ಆ ಬಳಿಕ, ಹನುಮಾನ್-ಆಂಜನೇಯನು, ಉತ್ಥಾಯ-ಎದ್ದು, ಯೂಥಪಃ-ಆನೆಯು, ಮಶಕಾನಿವ-ಸೊಂಗುರುಗಳನ್ನು ಹ್ಯಾಗೋ ಹಾಗೆ, ಮುದ್ಗರೇಣ-ಮುದ್ಗರಾಯುಧದಿಂದ, ಸಮಂತತಃ- ಎಲ್ಲಾ ಕಡೆಯಲ್ಲಿಯೂ, ಕ್ಷಣಾತ್-ನಿಮಿಷದಲ್ಲಿ, ನಿಷ್ಪಿಪೇಷ-ಎಲ್ಲಾ ರಾಕ್ಷಸರನ್ನೂ ಹೊಸಕಿ ಹಾಕಿದವನಾದನು ॥ ೮೫ ॥ ಕಿಂಕರಾನ್-ಕಿಂಕರರನ್ನು, ನಿಹತಾನ್-ಕೊಲ್ಲಲ್ಪಟ್ಟವರನ್ನಾಗಿ, ಶ್ರುತ್ವಾ-ಕೇಳಿ, ರಾವಣಃ-ರಾವಣನು, ಕ್ರೋಧ-ಕೋಪದಿಂದ, ಮೂರ್ಛಿತಃ-ಪ್ರಜ್ಞೆಯಿಲ್ಲದವನಾಗಿ, ದುರ್ಮದಾನ್-ದುಷ್ಟ ಮತ್ತತೆಯುಳ್ಳ, ಪಂಚ-ಐದುಮಂದಿಯಾದ, ಸೇನಾಪತೀನ್-ಸೇನಾಧಿಪತಿಗಳನ್ನು, ತತ್ರ-ಯುದ್ಧ ಮಾಡುವ ಬಳಿಗೆ, ಪ್ರೇಷಯಾಮಾಸ-ಕಳುಹಿಸಿದವನಾದನು ॥ ೮೬ ॥ ಹನೂಮಾನಪಿ-ಆಂಜನೇಯನು, ತಾನ್ ಸರ್ವಾನ್-ಆ ಎಲ್ಲರನ್ನೂ, ಲೋಹಸ್ತಂಭೇನ-ಉಕ್ಕಿನ ಕಂಭದಿಂದ, ಅಹನತ್-ಹೊಡೆದನು, ತತಃ-ಆ ಬಳಿಕ, ಸಃ-ಆ ರಾವಣನು, ಕ್ರುದ್ಧಃ-ಕೋಪಿಷ್ಠನಾಗಿ, ಸಪ್ತ-ಏಳುಮಂದಿಯಾದ, ಮಂತ್ರಿಸುತಾನ್-ಮಂತ್ರಿಯ ಮಕ್ಕಳನ್ನು, ಪ್ರೇಷಯಾಮಾಸ-ಕಳುಹಿಸಿದನು ॥ ೮೭ ॥ ವಾನರೇಶ್ವರಃ-ಕಪಿಶ್ರೇಷ್ಠನಾದ, ಮಾರುತಿಃ-ಆಂಜನೇಯನು, ಆಗತಾನ್-ಬಂದವರಾದ, ತಾನ್ ಸರ್ವಾನ್-ಆ ರಾಕ್ಷಸರೆಲ್ಲರನ್ನೂ, ಪೂರ್ವವತ್-ಮೊದಲಿನಂತೆ, ಕ್ಷಣಾತ್-ನಿಮಿಷದಲ್ಲಿ, ನಿಶ್ಶೇಷತಃ-ಯಾರೂ ಉಳಿಯದಂತೆ, ಲೋಹಸ್ತಂಭೇನ-ಉಕ್ಕಿನ ಕಂಭದಿಂದ, ಹತ್ವಾ-ಕೊಂದು ॥ ೮೮ ॥ ಪೂರ್ವಸ್ಥಾನಂ-ತಾನು ಮೊದಲಿದ್ದ ಸ್ಥಳವನ್ನು, ಉಪಾಶ್ರಿತ್ಯ-ಸೇರಿ, ರಾಕ್ಷಸಾನ್-ಯುದ್ಧಕ್ಕೆ ಬರುವ ರಾಕ್ಷಸರನ್ನು, ಪ್ರತೀಕ್ಷನ್-ಎದುರುನೋಡುತ್ತಾ, ಸ್ಥಿತಃ-ಇದ್ದನು, ತತಃ-ಆ ಬಳಿಕ, ಪ್ರತಾಪವಾನ್-ಸಮರ್ಥನಾದ, ಅಕ್ಷಃ-ಅಕ್ಷನೆಂಬ ಹೆಸರುಳ್ಳ, ಕುಮಾರಃ-ರಾವಣನ ಮಗನು, ಜಗಾಮ-ಯುದ್ಧಕ್ಕೆ ಹೋದನು ॥ ೮೯ ॥ ತಂ-ಅಕ್ಷನನ್ನು ದೃಷ್ಟ್ವಾ-ನೋಡಿ, ಸಮುದ್ಗರಃ-ಲೋಹಸ್ತಂಭ ಸಹಿತನಾಗಿ, ಹನೂಮಾನ್-ಆಂಜನೇಯನು, ಆಕಾಶೇ-ಅಂತರಿಕ್ಷದಲ್ಲಿ, ಉತ್ಪಪಾತ-ಹಾರಿದನು, ತ್ವರಿತಃ-ವೇಗವುಳ್ಳವನಾಗಿ, ಗಗ

ತೊಮೂರ್ಧ್ನಿರ್ಮುದ್ಗರೇಣವ್ಯತಾಡಯತ್ ||೯೦|| ಹತ್ವಾತಮಕ್ಷಂನಿಶ್ಶೇಷಂಬಲಂಸರ್ವಂಚಕಾರಸಃ ||೯೧|| ತತಃಶ್ರು ತ್ವಾಕುಮಾರಸ್ಯವಧಂರಾಕ್ಷಸಪುಂಗವಃ । ಕ್ರೋಧೇನಮಹತಾವಿಷ್ಟೋಇಂದ್ರಜಿತಾರಮಬ್ರವೀತ್ ||೯೨|| ಪುತ್ರಗಚ್ಛ ವ್ಯಹಂತತ್ರಯತ್ರಾಸ್ತೆಪುತ್ರಹಾರಿಪುಃ । ಹತ್ವಾತಮಥವಾಬಧ್ವಾಆನಯಿಷ್ಯಾಮಿತೇಂತಿಕಂ ||೯೩|| ಇಂದ್ರಜಿತ್ಪಿತರಂ ಪ್ರಾಹತ್ಯಜಶೋಕಂಮಹಾಮತೆ । ಮಯಿಸ್ಥಿತೆಕಿಮರ್ಥಂತ್ವಂ ಭಾಷಸೆದುಃಖಿತಂವಚಃ ||೯೪|| ಬಧ್ವಾನೆಷ್ಯೆದ್ರುತಂತಾತ ವಾನರಂಬ್ರಹ್ಮಪಾಶತಃ । ಇತ್ಯುಕ್ತ್ವಾರಥಮಾರುಹ್ಯ ರಾಕ್ಷಸೈರ್ಬಹುಭಿರ್ವೃತಃ ||೯೫|| ಜಗಾಮವಾಯುಪುತ್ರ)

ನಾತ್-ಅಂತರಿಕ್ಷೇಂಪಲೇ, ಮೂರ್ಧ್ನಿ-ಅಕ್ಷನ ತಲೆಯಮೇಲೆ, ವ್ಯತಾಡಯತ್-ಹೊಡೆದನು ||೯೦|| ಸಃ-ಹನುಮಂತನು, ತಂಅಕ್ಷಂ-ಆ ಅಕ್ಷನೆಂಬ ರಾಕ್ಷಸನನ್ನು, ಹತ್ವಾ-ಕೊಂದು ಸರ್ವಂ-ಯೆಲ್ಲಾ, ಬಲಂ-ಅವನ ಸೈನ್ಯವನ್ನು, ನಿಶ್ಶೇಷಂ-ಸ್ವಲ್ಪವೂ ಉಳಿಯದಂತೆ, ಚಕಾರ-ಮಾಡಿದನು ||೯೧|| ರಾಕ್ಷಸ-ರಾಕ್ಷಸರೊಳ್ಗೆ, ಪುಂಗವಃ-ಶ್ರೇಷ್ಠನಾದ ರಾವಣನು, ತತಃ-ಆ ಬಳಿಕ, ಕುಮಾರಸ್ಯ-ಅಕ್ಷನೆಂಬ ಮಗನ, ವಧಂ-ಸಂಹಾರವನ್ನು, ಶ್ರುತ್ವಾ-ಕೇಳಿ, ಮಹತಾ-ಅಧಿಕವಾದ, ಕ್ರೋಧೇನ-ಕೋಪದಿಂದ, ಆವಿಷ್ಟಃ-ಕೂಡಿದವನಾಗಿ, ಇಂದ್ರಜೇತಾರಂ-ಇಂದ್ರ-ಇಂದ್ರನನ್ನು, ಜೇತಾರಂ-ಜಯಿಸಿದವನಾದ ಇಂದ್ರಜಿತ್ತನ್ನು ಕುರಿತು, ಅಬ್ರವೀತ್-ಹೇಳಿದನು ||೯೨|| ಪುತ್ರ-ಮಗನಾದ ಇಂದ್ರಜಿತುವೇ, ಪುತ್ರಹಾ-ಮಗನಾದ ಅಕ್ಷನನ್ನು ಕೊಂದವನಾದ, ರಿಪುಃ-ಶತ್ರುವಾದ ಆಂಜನೇಯನು, ಯತ್ರ-ಎಲ್ಲಿ ಇದ್ದಾನೋ, ತತ್ರ-ಅಲ್ಲಿಗೆ, ಅಹಂ-ನಾನು, (ಯುದ್ಧಾಯ-ಯುದ್ಧ ಮಾಡುವದಕ್ಕೆ,) ಗಚ್ಛಾಮಿ-ಹೋಗುತ್ತೇನೆ, ತಂ-ಆ ಶತ್ರುವಾದ ಕಪಿಯನ್ನು, ಹತ್ವಾ-ಕೊಂದು, ಅಥವಾ-ಅಲ್ಲದಿದ್ದರೆ, ಬಧ್ವಾ-ಕಟ್ಟಿ, ತೇ-ನಿನ್ನ, ಅಂತಿಕಂ-ಸಮೀಪವನ್ನು ಕುರಿತು, ಆನಯಿಷ್ಯಾಮಿ-ತರುತ್ತೇನೆ ||೯೩|| ಇಂದ್ರಜಿತ್-ಮೇಘನಾದನು, ಪಿತರಂ-ತಂದೆಯಾದ ರಾವಣನನ್ನು ಕುರಿತು, ಪ್ರಾಹ-ಹೇಳಿದನು, ಮಹಾಮತೆ-ಮಹಾ ಬುದ್ಧಿಯುಳ್ಳ (ತಂದೆಯಾದ ರಾವಣನೇ,) ಶೋಕಂ-ವ್ಯಥೆಯನ್ನು, ತ್ಯಜ-ಬಿಡು, ಮಯಿ-ನಾನು, ಸ್ಥಿತೆ-ಇರುತ್ತಿರುವಾಗ, ತ್ವಂ-ನೀನು, ದುಃಖಿತಂ-ವ್ಯಸನಕರವಾದ, ವಚಃ-ನಾನೇ ಯುದ್ಧಕ್ಕೆ ಹೋಗುತ್ತೇನೆಂಬುವ ಮಾತನ್ನು, ಕಿಮರ್ಥಂ-ಯಾತಕ್ಕೆ, ಭಾಷಸೆ-ಹೇಳುತ್ತಿ ||೯೪|| ತಾತ-ತಂದೆಯೇ, ವಾನರಂ-ಕಪಿಯನ್ನು, ಬ್ರಹ್ಮ-ಬ್ರಹ್ಮಾಸ್ತ್ರದ, ಪಾಶತಃ-ಬಂಧಕದಿಂದ, ಬಧ್ವಾ-ಕಟ್ಟಿ, ದ್ರುತಂ-ಜಾಗ್ರತೆಯಾಗಿ, ನೇಷ್ಯೇ-ತರುತ್ತೇನೆ, ಇತಿ-ಹೀಗೆ, ಉಕ್ತ್ವಾ-ಹೇಳಿ, ರಥಂ-ತೇರನ್ನು, ಆರುಹ್ಯ-ಹತ್ತಿ, ಬಹುಭಿಃ-ಅನೇಕರಾದ, ರಾಕ್ಷಸೈಃ-ರಾಕ್ಷಸರಿಂದ, ವೃತಃ-ಕೂಡಿದವನಾಗಿ ||೯೫|| ವೀರ-ಶೂರರ, ವಿಕ್ರಮಃ-ಪರಾಕ್ರಮವುಳ್ಳವನಾದ (ಇಂದ್ರಜಿತು) ವಾಯುಪುತ್ರಸ್ಯ-ಆಂಜನೇಯನ, ಸಮೀಪಂ-ಬದಿಯನ್ನು ಕುರಿತು, ಜಗಾಮ-ಹೊರಟು ಹೋದನು, ವೀರ್ಯವಾನ್-ಶಕ್ತನಾದ (ಆಂಜನೇಯನು,) ತತಃ-ಆ ಬಳಿಕ, ಅತಿ-ಅತಿಶಯವಾದ, ಗರ್ಜಿತಂ-ರಾಕ್ಷಸರ ಘರ್ಜನೆಯ ಧ್ವನಿಯನ್ನು, ಶ್ರುತ್ವಾ-ಕೇಳಿ, ಸ್ತಂಭಂ-ಉಕ್ಕಿನ ಲಾಳವುಂಡಿಗೆಯನ್ನು, ಉದ್ಯಮ್ಯ-ಎತ್ತಿಕೊಂ

ಸ್ಯಸವಿಶಾಪಂವೀರವಿಕ್ರಮಃ ॥ ತತೋತಿಗರ್ಜಿತಂಕೃತ್ವಾಸ್ತಂಭಮುದ್ಯಮ್ಯವೀರ್ಯವಾನ್ ॥ ೯೬ ॥ ಉತ್ಪಪಾತನಭೋದೇಶಂಗರುತ್ಮಾನಿವಮಾರುತಿಃ । ತತೋಭ್ರಮಂತಂನಭಸಿ ಹನೂಮಂತಂಶಿಲೀಮುಖೈಃ ॥೯೭॥ ವಿಧ್ವಾತಸ್ಯಶಿರೋಭಾಗಮಿಷುಭಿಶ್ಚಾಷ್ಟಭಿಃಪುನಃ । ಹೃದಯಂಪಾದಯುಗಳಂಷಡ್ಭಿರೇಕೇನವಾಲಧಿಂ ॥ ೯೮ ॥ ಭೇದಯಿತ್ವಾತತೋಘೋರಂಸಿಂಹನಾದಮಥಾಕರೋತ್ । ತತೋತಿಹರ್ಷಾದ್ಧನುಮಾನ್ಸ್ತಂಭಮುದ್ಯಮ್ಯವೀರ್ಯವಾನ್ ॥ ೯೯ ॥ ಜಘಾನಸಾರಥಿಂಸಾಶ್ವಂರಥಂಚಾಚೂರ್ಣಯತ್ಕ್ಷಣಾತ್ । ತತೋನ್ಯಂರಥಮಾಸ್ಥಾಯಮೇಘನಾದೋಮಹಾಬಲಃ ॥೧೦೦॥ ಶೀಘ್ರಂಬ್ರಹ್ಮಾಸ್ತ್ರಮಾದಾಯಬಧ್ವಾವಾನರಪುಂಗವಂ । ನಿನಾಯನಿಕಟಂರಾಜ್ಞೋ ರಾವಣಸ್ಯಮಹಾಬಲಃ ॥ ೧೦೧ ॥ ಯಸ್ಯನಾಮ

ದು ॥ ೯೬ ॥ ಮಾರುತಿಃ-ಆಂಜನೇಯನು, ಗರುತ್ಮಾನಿವ-ಗರುಡ ಪಕ್ಷಿಯಂತೆ, ನಭೋದೇಶಂ-ಆಕಾಶ ಪ್ರದೇಶವನ್ನು ಕುರಿತು, ಉತ್ಪಪಾತ-ಹಾರಿದವನಾದನು, ತತಃ-ಅನಂತರದಲ್ಲಿ, ನಭಸಿ-ಅಂತರಿಕ್ಷದೊಳ್ಳು, ಭ್ರಮಂತಂ-ತಿರುಗುತ್ತಿರುವ, ಹನೂಮಂತಂ-ಆಂಜನೇಯನನ್ನು, ಶಿಲೀಮುಖೈಃ-ಬಾಣಗಳಿಂದ ॥ ೯೭ ॥ ವಿಧ್ವಾ-ಹೊಡೆದು, ತಸ್ಯ-ಆಂಜನೇಯನ, ಶಿರೋಭಾಗಂ-ತಲೆಯ ಪ್ರದೇಶವನ್ನು, ಅಷ್ಟಭಿಃ-ಎಂಟಾದ, ಇಷುಭಿಃ-ಬಾಣಗಳಿಂದ, (ವಿಧ್ವಾ-ಹೊಡೆದು) ಪುನಃ-ತಿರಿಗಿ, ಹೃದಯಂ-ವಕ್ಷಸ್ಥಳವನ್ನು, ಪಾದಯುಗಳಂ-ಎರಡು ಕಾಲುಗಳನ್ನು, ಷಡ್ಭಿಃ-ಆರಾರು ಬಾಣಗಳಿಂದಲೂ, ಏಕೇನ-ಒಂದು ಬಾಣದಿಂದ, ವಾಲಧಿಂ-ಗೊಂಚಲಾಗಿ ಕೂದಲು ಬೆಳೆದಿರುವ ಬಾಲವನ್ನು, ವಿಧ್ವಾ-ಹೊಡೆದು ॥ ೯೮ ॥ ತತಃ-ಆ ಬಳಿಕ, ಭೇದಯಿತ್ವಾ-ಹೀಗೆ ಆಂಜನೇಯನ ದೇಹವನ್ನು ಭೇದಿಸಿ ಘಾಯವಾಗುವಂತೆ ಮಾಡಿ, (ಮೇಘನಾದನು) ಅಥ-ಆಮೇಲೆ, ಘೋರಂ-ಕ್ರೂರವಾದ, ಸಿಂಹನಾದಂ-ಸಿಂಹದಂತೆ ಧ್ವನಿಯನ್ನು, ಅಕರೋತ್-ಮಾಡಿದನು, ತತಃ-ಆ ಬಳಿಕ, ವೀರ್ಯವಾನ್-ಪರಾಕ್ರಮಿಯಾದ, ಹನುಮಾನ್-ಆಂಜನೇಯನು, ಅತಿಹರ್ಷಾತ್-ಬಹಳ ಸಂತೋಷದಿಂದ, ಸ್ತಂಭಂ-ಲೋಹದ ಸ್ತಂಭವನ್ನು, ಉದ್ಯಮ್ಯ-ಎತ್ತಿ, ॥ ೯೯ ॥ ಸಾರಥಿಂ-ರಥವನ್ನು ನಡಿಸುವವನನ್ನು, ಸಾಶ್ವಂ-ಕುದುರೆಗಳಿಂ ಕೂಡಿರುವ, ರಥಂಚ-ತೇರನ್ನು, ಜಘಾನ-ಹೊಡೆದನು, ಕ್ಷಣಾತ್-ನಿಮಿಷದಲ್ಲಿ, ಅಚೂರ್ಣಯತ್-ಪುಡಿ ಪುಡಿ ಮಾಡಿದನು, ಮಹಾಬಲಃ-ಅಧಿಕ ಬಲನಾದ, ಮೇಘನಾದಃ-ಮೇಘನಾದನು, ತತಃ-ತನ್ನ ತೇರು ನಾಶವಾದ ಬಳಿಕ, ಅನ್ಯಂ-ಮತ್ತೊಂದು, ರಥಂ-ತೇರನ್ನು, ಆಸ್ಥಾಯ-ಏರಿ ॥ ೧೦೦ ॥ ಶೀಘ್ರಂ-ಬೇಗನೆ, ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರವನ್ನು, ಆದಾಯ-ತೆಗೆದುಕೊಂಡು, (ಆ ಅಸ್ತ್ರದಿಂದ) ವಾನರಪುಂಗವಂ-ಕಪಿಶ್ರೇಷ್ಠನಾದ ಆಂಜನೇಯನನ್ನು, ಬಧ್ವಾ-ಕಟ್ಟಿ, ಮಹಾಬಲಃ-ಅಧಿಕ ಬಲನಾದ ಇಂದ್ರಜಿತ್ತು, ರಾಜ್ಞಃ-ಧೊರೆಯಾದ, ರಾವಣಸ್ಯ-ರಾವಣನ, ನಿಕಟಂ-ಸಮೀಪವನ್ನು, ನಿನಾಯ-ಸೇರಿಸಿದನು) ॥ ೧೦೧ ॥ ಯೇ-ಯಾರು, ಯಸ್ಯ-ಯಾವ ರಾಮಚಂದ್ರನ, ನಾಮ-ಹೆಸರನ್ನು, ಸತತಂ-ಯಾವಾಗಲೂ, ಜಪಂತಿ-ಪಠಿಸುತ್ತಿರುವರೋ, ತೇ-ಅವರು, ಜ್ಞಾನಾತ್-ನಿ

ಸತತಂಜಪಂತಿಯೆಜ್ಞಾನಕರ್ಮಕೃತಬಂಧನಂಕ್ಷಣಾತ್ । ಸದ್ಯಏವಪರಿಮುಚ್ಯತತ್ಪದಂ ಯಾಂತಿಕೋಟಿರವಿಭಾಸು ರಂಶಿವಂ ॥೧೦೨॥ ತಸ್ಯೈವರಾಮಸ್ಯಪದಾಂಬುಜಂಸದಾಹೃತ್ಪದ್ಮಮಧ್ಯೇಸುನಿಧಾಯಮಾರುತಿಃ । ಸದೈವನಿರ್ಮುಕ್ತಸಮಸ್ತಬಂಧನಃಕಿಂತಸ್ಯಪಾಶೈರಿತರೈಶ್ಚಬಂಧನೈಃ ... ... ... ... ... ॥ ೧೦೩ ॥

—** ಇತಿ ಶ್ರೀಮದಧ್ಯಾತ್ಮರಾಮಾಯಣೇ– ಉಮಾಮಹೇಶ್ವರಸಂವಾದೇ–ಸುಂದರಕಾಂಡೇ– ತೃತೀಯಸ್ಸರ್ಗಃ. **—

ಶ್ರೀಮಹಾದೇವಉವಾಚ ॥ ೧ ॥ ಯಾಂತಂಕಪೀಂದ್ರಂಧೃತಪಾಶಬಂಧನಂ ವಿಲೋಕಯಂತಂನಗರಂವಿಭೀತವತ್। ಅತಾಡಯನ್ಮುಷ್ಟಿತಲೈಸ್ಸುಕೋಪನಾಃ ಪೌರಾಸ್ಸಮಂತಾದನುಯಾಂತಈಕ್ಷಿತುಂ ॥೨॥ ಬ್ರಹ್ಮಾಸ್ತ್ರಮೇನಂಕ್ಷಣಮಾತ್ರಸಂಗಮಂ ಕೃತ್ವಾಗತಂಬ್ರಹ್ಮವರೇಣಸತ್ವರಂ । ಜ್ಞಾತ್ವಾಹನೂಮಾನಪಿಫಲ್ಗುರಜ್ಜುಭಿರ್ಧೃತೋಯಯೌಕಾರ್ಯವಿ

ಮಿಷದಲ್ಲಿ, ಅಜ್ಞಾನ-ಅಜ್ಞಾನದಿಂದ ಹುಟ್ಟಿದ, ಕರ್ಮ-ಕರ್ಮವೆಂದು, ಕೃತ-ಉಂಟಾದ, ಬಂಧನಂ-ಸಂಸಾರವನ್ನು, ಪರಿಮುಚ್ಯ-ಕಳೆದುಕೊಂಡು, ಸದ್ಯಏವ-ಆಗಲೇ, ಕೋಟಿರವಿ-ಕೋಟಿ ಸೂರ್ಯರಂತೆ, ಭಾಸುರಂ-ಪ್ರಕಾಶಮಾನವಾದ,ಶಿವಂ-ಶುಭಕರವಾದ, ತತ್ಪದಂ-ಸಚ್ಚಿದಾನಂದಾಖ್ಯವಾದದ್ದನ್ನು,ಯಾಂತಿ-ಹೊಂದುತ್ತಲಿದ್ದಾರೆ||೧೦೨||ಮಾರುತಿಃ-ಆಂಜನೇಯನು ತಸ್ಯ-ಆ, ರಾಮಸ್ಯೈವ-ರಾಮಚಂದ್ರನ, ಪದಾಂಬುಜಂ-ಪಾದಕಮಲವನ್ನು, ಸದಾ-ಯಾವಾಗಲೂ, ಹೃತ್-ಹೃದಯ, ಪದ್ಮ-ಕಮಲದ, ಮಧ್ಯೇ-ನಡುವೆ, ಸುನಿಧಾಯ-ಇರಿಸಿ, (ಇರುವವನಾದಕಾರಣ) ಸದೈವ-ಯಾವಾಗಲೂ, ನಿರ್ಮುಕ್ತ-ಬಿಡಲ್ಪಟ್ಟ, ಸಮಸ್ತ-ಸಕಲಗಳಾದ, ಬಂಧನಃ-ಕರ್ಮಬಂಧಗಳುಳ್ಳವನು, (ಅಥವಾ-ಆದನು) ತಸ್ಯ-ಅಂಥಾ ರಾಮಚಂದ್ರನ ಭಕ್ತನಾದ ಆಂಜನೇಯನಿಗೆ, ಪಾಶೈಃ-ಹಗ್ಗಗಳಿಂದಲೂ, ಇತರೈಃ-ಬೇರೆ ವಿಧಗಳಾದ, ಬಂಧನೈಃ-ಅಸ್ತ್ರಬಂಧನಗಳಿಂದಲೂ, ಕಿಂ-ಏನು ಆಧೀತು, ... ... || ೧೦೩ ||

—·· * ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದೊಳಗೆ ಸುಂದರಕಾಂಡದಲ್ಲಿ ಮೂರನೇ ಸರ್ಗವು. * ··—

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ || ೧ || ಯಾಂತಂ-ರಾಜ ಮಾರ್ಗದಲ್ಲಿ ಹೋಗುತ್ತಿರುವ, ಧೃತ-ತನ್ನ ಕೈಯಲ್ಲಿ ಹಿಡಿಯಲ್ಪಟ್ಟ ಪಾಶಬಂಧನಂ-ಹಗ್ಗಗಳಿಂದ ಕಟ್ಟಲ್ಪಟ್ಟಿರುವವನಾದ, ವಿಭೀತವತ್-ವಿಶೇಷವಾಗಿ ಭಯಪಡುವವನಂತೆ, ನಗರಂ-ಪಟ್ಟಣವನ್ನು, ವಿಲೋಕಯಂತಂ-ನೋಡುತ್ತಿರುವವನಾದ, ಕಪೀಂದ್ರಂ-ಕಪಿಶ್ರೇಷ್ಠನಾದ ಆಂಜನೇಯನನ್ನು, ಈಕ್ಷಿತುಂ-ನೋಡುವದಕ್ಕೆ, ಅನುಯಾಂತಃ-ಅನುಸರಿಸಿ ಹಿಂದೆಯೇ ಬರುತ್ತಿರುವ, ಪೌರಾಃ-ಪಟ್ಟಣ ಜನರು, ಸಕೋಪನಾಃ-ಕೋಪವುಳ್ಳವರಾಗಿ, ಮುಷ್ಟಿತಲೈಃ-ಮುಷ್ಟಿಗಳಿಂದ, ಸಮಂತಾತ್-ಸುತ್ತಲೂ, ಅತಾಡಯನ್-ಗುದ್ದಿದವರಾದರು || ೨ || ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರವು, ಏನಂ-ಈ ಆಂಜನೇಯನನ್ನು ಕುರಿತು, ಕ್ಷಣ

ಕ್ಷೇಪಗೌರವಾತ್ ॥ ೩ ॥ ಸಭಾಂತರಸ್ಥಸ್ಯಚರಾವಣಸ್ಯತಂ ಪುರೋನಿಧಾಯಾಹಬಲಾರಿಜಿತ್ತದಾ । ಬದ್ಧೋಮಯಾಬ್ರ
ಹ್ಮವರೇಣವಾನರಃ ಸಮಾಗತೋನೇನಹತಾಮಹಾಸುರಾಃ ॥ ೪ ॥ ಯದ್ಯುಕ್ತಮತ್ರಾರ್ಯವಿಚಾರ್ಯಮಂತ್ರಿಭಿರ್ವಿಧೀಯತಾ
ಮೇಷನಲೌಕಿಕೋಹರಿಃ । ತತೋವಿಲೋಕ್ಯಾಹಸರಾಕ್ಷಸೇಶ್ವರಃ ಪ್ರಹಸ್ತಮಗ್ರೇಸ್ಥಿತಮಂಜನಾದ್ರಿಭಂ ॥ ೫ ॥ ಪ್ರಹಸ್ತಪೃ
ಚ್ಛ್ಯೇನಮಸೌಕಿಮಾಗತಃ ಕಿಮತ್ರಕಾರ್ಯಂಕುತಏವವಾನರಃ ॥ ವನಂಕಿಮರ್ಥಂಸಕಲಂವಿನಾಶಿತಂ ಹತಾಃಕಿಮರ್ಥಂ
ಮಮರಾಕ್ಷಸಾಬಲಾತ್ ॥ ೬ ॥ ತತಃಪ್ರಹಸ್ತೋಹನುಮಂತಮಾದರಾತ್ಪಪ್ರಚ್ಛಕೇನಪ್ರಹಿತೋಸಿವಾನರಃ । ಭಯಂಚತೇ

ಮಾತ್ರಸಂಗಮಂ-ಕ್ಷಣಮಾತ್ರ-ಕ್ಷಣ ಕಾಲದವರೆಗೇನೇ, ಸಂಗಮಂ-ಸಂಬಂಧವುಳ್ಳವನನ್ನಾಗಿ, ಕೃತ್ವಾ-ಮಾಡಿ, ಬ್ರಹ್ಮವರೇಣ-ಬ್ರಹ್ಮಾಸ್ತ್ರವು ನಿನ್ನನ್ನು ಬಾಧಿಸಿ ಕೊಲ್ಲುವದಿಲ್ಲವೆಂಬ ಬ್ರಹ್ಮದೇವನ ವರದಿಂದ, ಸತ್ವರಂ-ಜಾಗ್ರತೆಯಾಗಿ, ಗತಂ-ಬ್ರಹ್ಮಾಸ್ತ್ರವು ತನ್ನನ್ನು ಬಿಟ್ಟು ಹೋಯಿತೆಂಬುವದನ್ನು, ಜ್ಞಾತ್ವಾ-ತಿಳಿದು, ಹನೂಮಾನಪಿ-ಆಂಜನೇಯನು, ಫಲ್ಗು-ನಿಸ್ಸಾರಗಳಾದ, ರಜ್ಜುಭಿಃ-ಹಗ್ಗಗಳಿಂದ, ಧೃತಃ-ಕಟ್ಟಿಸಿ ಹಿಡಿಯಲ್ಪಟ್ಟವನಾಗಿ, ಕಾರ್ಯವಿಶೇಷಗೌರವಾತ್-ಕಾರ್ಯವಿಶೇಷ-ರಾವಣ ದರ್ಶನ ಸಂಭಾಷಣಾದಿ ರೂಪವಾದ ವಿಶೇಷ ಕೆಲಸದ, ಗೌರವಾತ್-ಗುರುತ್ವದ ದೆಸೆಯಿಂದ, ( ಬದ್ಧ ಇವ-ಬಂಧನವನ್ನು ಹೊಂದಿದವನಂತೆ,) ಯಯೌ-ಹೊರಟು ಹೋದನು ॥ ೩ ॥ ಬಲಾರಿಜಿತ್-ಬಲನೆಂಬ ರಾಕ್ಷಸನಿಗೆ, ಅರಿ-ಶತ್ರುವಾದ ಇಂದ್ರನನ್ನು, ಜಿತ್-ಜಯಿಸಿದ ಮೇಘನಾದನು, ಸಭಾಂತರಸ್ಥಸ್ಯ-ಸಭೆಯ, ಅಂತರ-ಮಧ್ಯದಲ್ಲಿ, ಸ್ಥಸ್ಯ-ಇರುವನಾದ, ರಾವಣಸ್ಯ-ರಾವಣನ, ತಂ-ಆ ಆಂಜನೇಯನನ್ನು, ಪುರಃ-ಮುಂದೆ, ನಿಧಾಯ-ನಿಲ್ಲಿಸಿ, ತದಾ-ಆಗ, ಆಹ-ಹೇಳಿದನು, ವಾನರಃ-ಕಪಿಯು, ಮಯಾ-ನನ್ನಿಂದ, ಬ್ರಹ್ಮವರೇಣ-ಬ್ರಹ್ಮದೇವರ ವರದಿಂದ, ಬದ್ಧಃ-ಬಂಧನ ಮಾಡಲ್ಪಟ್ಟವನಾಗಿ, ಸಮಾಗತಃ-ಬಂದವನಾಗಿದ್ದಾನೆ, ಅನೇನ-ಇವನಿಂದ, ಮಹಾಸುರಾಃ-ದೊಡ್ಡವರಾದ ರಾಕ್ಷಸರು, ಹತಾಃ-ಕೊಲ್ಲಲ್ಪಟ್ಟರು ॥ ೪ ॥ ಆರ್ಯ-ಪೂಜ್ಯನಾದ ತಂದೆಯೇ, ಯತ್-ಯಾವದು, ಯುಕ್ತಂ-ಯೋಗ್ಯವೋ, ತತ್-ಅದನ್ನು, ಮಂತ್ರಿಭಿಃ-ಮಂತ್ರಿಗಳಿಂದ, ವಿಚಾರ್ಯ-ಯೋಚಿಸಿ, ವಿಧೀಯತಾಂ-ಅದು ಮಾಡಲ್ಪಡಲಿ, ಏಷಃ-ಈ, ಹರಿಃ-ಕಪಿಯು, ಲೌಕಿಕಃ-ಲೋಕದಲ್ಲಿರುವ ಸಾಧಾರಣ ಕಪಿಯು, ನ-ಅಲ್ಲ, ತತಃ-ಆ ಬಳಿಕ, ಸಃ-ಆ, ರಾಕ್ಷಸೇಶ್ವರಃ-ರಾಕ್ಷಸರಿಗೆ ಒಡೆಯನಾದ ರಾವಣನು. ವಿಲೋಕ್ಯ-ಕಪಿಯನ್ನು ನೋಡಿ, ಅಗ್ರೇಸ್ಥಿತಂ-ತನ್ನ ಮುಂದುಗಡೆ ಇರುವ, ಅಂಜನಾದ್ರಿ-ಅಂಜನ ಪರ್ವತಕ್ಕೆ, ಸನ್ನಿಭಂ-ಸಮಾನನಿರುವ, ಪ್ರಹಸ್ತಂ-ಪ್ರಹಸ್ತನನ್ನು ಕುರಿತು, ಆಹ-ಹೇಳಿದನು ॥ ೫ ॥ ಪ್ರಹಸ್ತ-ಪ್ರಹಸ್ತನೇ, ಅಸೌವಾನರಃ-ಈ ಕಪಿಯು, ಕಿಮಾಗತಃ-ಯಾಕೆ ಬಂದನು, ಅತ್ರ-ಈ ಪುರದಲ್ಲಿ, ಕಾರ್ಯಂ-ಕೆಲಸವು, ಕಿಂ-ಏನು, ಕುತಃ-ಯಾರ ಕಡೆಯಿಂದ ಬಂದಿದ್ದಾನೆ, ಸಕಲಂ-ಎಲ್ಲಾ, ವನಂ-ಉದ್ಯಾನ ವನವು, ಕಿಮರ್ಥಂ-ಯಾತಕ್ಕೋಸ್ಕರ, ವಿನಾಶಿತಂ-ನಾಶ ಮಾಡಲ್ಪಟ್ಟಿತು, ಮಮ-ನನ್ನ, ರಾಕ್ಷಸಾಃ-ರಾಕ್ಷಸರು, ಬಲಾತ್-ಸಾಮರ್ಥ್ಯದಿಂದ, ಕಿಮರ್ಥಂ-

ಮಾಸ್ತು ವಿಮೋಕ್ಷ್ಯಸೇ ಮಯಾ ಸತ್ಯಂ ವದಸ್ವಾಖಿಲರಾಜಸಂನಿಧೌ ॥ ೭ ॥ ತತೋತಿಹರ್ಷಾತ್ಪವನಾತ್ಮಜೋ ರಿಪುಂ ನಿರೀ
ಕ್ಷ್ಯ ಲೋಕತ್ರಯಕಂಟಕಾಸುರಂ । ವಕ್ತುಂ ಪ್ರಚಕ್ರೇ ರಘುನಾಥಸತ್ಕಥಾಂ ಕ್ರಮೇಣ ರಾಮಂ ಮನಸಾ ಸ್ಮರನ್ಮುಹುಃ ॥ ೮ ॥
ಶೃಣು ಸ್ಫುಟಂ ದೇವಗಣಾದ್ಯಮಿತ್ರ ಹೇ ರಾಮಸ್ಯ ದೂತೋಹಮಶೇಷಹೃತ್ಸ್ಥಿತೇಃ । ಯಸ್ಯಾಖಿಲೇಶಸ್ಯ ಹೃತಾಧುನಾ ತ್ವಯಾ ಭಾ
ರ್ಯಾ ವಿನಾಶಾಯ ಶುನೇವ ಸದ್ಧವಿಃ ॥ ೯ ॥ ಸ ರಾಘವೋಭ್ಯೇತ್ಯ ಮತಂಗಪರ್ವತಂ ಸುಗ್ರೀವಮೈತ್ರೀಮನಲಸ್ಯ ಸನ್ನಿಧೌ । ಕೃತ್ವೈ

ಯೋತಕ್ಯೋಸ್ಕರ, ಹತಾಃ-ಕೊಲ್ಲಲ್ಪಟ್ಟರು, (ಈ ಮಾತುಗಳನ್ನೆಲ್ಲಾ,) ಏನಂ-ಈ ಕಪಿಯನ್ನು ಕುರಿತು, ಪೃಚ್ಛ-ಕೇಳು ॥ ೬ ॥ ತತಃ-ಅನಂತರದಲ್ಲಿ, ಪ್ರಹಸ್ತಃ-ಪ್ರಹ
ಸ್ತನೆಂಬ ರಾವಣನ ಮಂತ್ರಿಯು, ಆದರಾತ್-ಆದರಣೆಯಿಂದ, ಹನುಮಂತಂ-ಆಂಜನೇಯನನ್ನು ಕುರಿತು, ಪಪ್ರಚ್ಛ-ಕೇಳಿದನು, ವಾನರ-ಕಪಿಯೇ, ಕೇನ-ಯಾರಿಂದ, ಪ್ರಹಿತಃ-
ಕಳುಹಿಸಲ್ಪಟ್ಟವನು, ಅಸಿ-ಆಗಿದ್ದೀ, ತೇ-ನಿನಗೆ, ಭಯಂ-ಅಂಜಿಕೆಯು, ಮಾಸ್ತು-ಬೇಡ, ಅಖಿಲ-ಸಮಸ್ತ ಲೋಕಗಳಿಗೆ, ರಾಜ-ದೊರೆಯಾದ ರಾವಣನ-ಸನ್ನಿಧೌ-
ಸಮೀಪದಲ್ಲಿ, ಸತ್ಯಂ-ನಿಜವನ್ನು, ವದಸ್ವ-ಹೇಳು, (ಸತ್ಯವನ್ನು ನೀನು ಹೇಳಿದರೆ) ಮಯಾ-ನನ್ನಿಂದ, ವಿಮೋಕ್ಷ್ಯಸೇ-ಬಂಧನದಿಂ ಲೂ ಪ್ರಾಣ ಭಯದಿಂದಲೂ ವಿಮುಕ್ತನಾಗು
ವಿ ॥ ೭ ॥ ತತಃ-ಆ ತರುವಾಯ, ಪವನ-ವಾಯುವಿಗೆ, ಆತ್ಮಜಃ-ಮಗನಾದ ಆಂಜನೇಯನು, ಅತಿಹರ್ಷಾತ್-ಬಹಳ ಸಂತೋಷದಿಂದ, ಲೋಕತ್ರಯ-ಸ್ವರ್ಗ, ಮರ್ತ್ಯ, ಪಾತಾಳ
ಗಳೆಂಬ ಮೂರು ಲೋಕಗಳಲ್ಲಿ ರುವವರಿಗೆ, ಕಂಟಕ-ವಿರೋಧಿಯಾದ, ಅಸುರಂ-ರಾಕ್ಷಸನಾದ, ರಿಪುಂ-ಶತ್ರುವಾದ ರಾವಣನನ್ನು, ನಿರೀಕ್ಷ್ಯ-ನೋಡಿ, ಮನಸಾ-ಚಿತ್ತದಿಂದ, ರಾಮಂ-ರಾಮ
ಚಂದ್ರನನ್ನು, ಮುಹುಃ-ಬಾರಿಬಾರಿಗೂ, ಸ್ಮರನ್-ಧ್ಯಾನಿಸುತ್ತಾ, ಕ್ರಮೇಣ-ಪಾಜ್ಞವಾಗಿ, ರಘುನಾಥ-ರಾಮಚಂದ್ರನ, ಸತ್ಕಥಾಂ-ಒಳ್ಳೇ ಕಥೆಯನ್ನು, ವಕ್ತುಂ-ಹೇಳುವದಕ್ಕೆ, ಪ್ರ
ಚಕ್ರೇ-ಪ್ರಾರಂಭಿಸಿದನು ॥ ೮ ॥ ಹೇದೇವಗಣಾದ್ಯಮಿತ್ರ-ದೇವಗಣ-ದೇವತೆಗಳ ಸಮೂಹವೇ, ಆದ್ಯ-ಮೊದಲಾದವರಿಗೆ, ಅಮಿತ್ರ-ಶತ್ರುವಾದ ರಾವಣನೇ, ಸ್ಫುಟಂ-ಸ್ಪಷ್ಟವಾಗಿ, ಶೃ
ಣು-ಕೇಳು, ಅಧುನಾ-ಈಗ) ಅಖಿಲ-ಸಮಸ್ತ ಲೋಕಗಳಿಗೆ, ಈಶಸ್ಯ-ಸ್ವಾಮಿಯಾದ, ಯಸ್ಯ-ಯಾವ ರಾಮಚಂದ್ರನ, ಭಾರ್ಯಾ-ಹೆಂಡತಿಯಾದ ಸೀತೆಯು, ನಾಶಾಯ-ನಿನ್ನ ನಾ
ಶಕ್ಯೋಸ್ಕರವಾಗಿ, ತ್ವಯಾ-ನಿನ್ನಿಂದ, ಶುನಾ-ನಾಯಿಯಿಂದ, ಸದ್ಧವಿಃ-ಹೋಮಾರ್ಥವಾದ ಅನ್ನವು ಹ್ಯಾಗೋ ಹಾಗೆ, ಹೃತಾ-ಅಪಹರಿಸಲ್ಪಟ್ಟಳೋ, (ತಸ್ಯ-ಆ,) ಅಶೇ
ಷ-ಸಮಸ್ತರ, ಹೃತ್ಸ್ಥಿತೇಃ-ಹೃದಯಗಳಲ್ಲಿ ರುತ್ತಿರುವ, ರಾಮಸ್ಯ-ರಾಮಚಂದ್ರನಿಗೆ, ಅಹಂ-ನಾನು, ದೂತಃ-ಸೇವಕನು ಅಸಿ-ಆಗಿದ್ದೇನೆ ॥ ೯ ॥ ಸಃ ರಾಘವಃ-ಆ ರಾಮಚಂದ್ರ
ನು, ಮತಂಗಪರ್ವತಂ-ಮತಂಗ ಋಷಿಯು ವಾಸಮಾಡುತ್ತಿರುವ, ಪರ್ವತಂ-ಋಶ್ಯಮೂಕ ಪರ್ವತವನ್ನು ಕುರಿತು, ಅಭ್ಯೇತ್ಯ-ಬಂದು, ಅನಲಸ್ಯ-ಬೆಂಕಿಯ, ಸನ್ನಿಧೌ-ಸಮೀಪ
ದಲ್ಲಿ, ಸುಗ್ರೀವ-ಸುಗ್ರೀವನ ಸಂಗಡ, ಮೈತ್ರೀಂ-ಮಿತ್ರತ್ವವನ್ನು, ಕೃತ್ವಾ-ಮಾಡಿ, ಏಕಬಾಣೇನ-ಒಂದೇ ಬಾಣದಿಂದ, ವಾಲಿನಂ-ವಾಲಿಯನ್ನು, ನಿಹತ್ಯ-ಕೊಂದು, ತಂ-ಆ, ಸುಗ್ರೀವಂ-

ಕಬಾಣೇನನಿಹತ್ಯವಾಲಿನಂ ಸುಗ್ರೀವಮೇವಾಧಿಪತಿಂಚಕಾರತಂ ॥ ೧೦ ॥ ಸವಾನರಾಣಾಮಧಿಪೋಮಹಾಬಲೀ ಮಹಾ ಬಲೈರ್ವಾನರಯೂಥಕೋಟಿಭಿಃ । ರಾಮೇಣಸಾರ್ಧಂಸಹಲಕ್ಷ್ಮಣೇನಭೋ ಪ್ರವರ್ಷಣೇಮರ್ಷಯುತೋವತಿಷ್ಠತಿ ॥ ೧೧ ॥ ಸಂಚೋದಿತಾಸ್ತೇನಮಹಾಹರೀಶ್ವರಾಃ ಧರಾಸುತಾಂಮಾರ್ಗಯಿತುಂದಿಶೋದಶ ॥ ತತ್ರಾಹಮೇಕಃಸವನಾತ್ಮಜಃಕಪಿಃ ಸೀತಾಂವಿಚಿನ್ವನ್ನಶನೈಸ್ಸಮಾಗತಃ ॥ ೧೨ ॥ ದೃಷ್ಟ್ವಾಮಯಾಪದ್ಮಪಲಾಶಲೋಚನಾ ಸೀತಾಕಪಿತ್ವಾದ್ವಿಪಿನಂವಿನಾಶಿತಂ। ದೃಷ್ಟ್ವಾತತೋಹಂರಭಸಾಸಮಾಗತಾನ್ಮಾಂಹಂತುಕಾಮಾ ನ್ಧೃತಚಾಪಸಾಯಕಾನ್ ॥ ೧೩ ॥ ಮಯಾಹತಾಸ್ತೇಪರಿ ರಕ್ಷಿತುಂವಪುಃಪ್ರಿಯೋಹಿದೇಹೋಖಿಲದೇಹಿನಾಂಪ್ರಭೋ । ಬ್ರಹ್ಮಾಸ್ತ್ರಪಾಶೇನನಿಬಧ್ಯಮಾಂತತಃಸಮಾನಯನ್ಮೇಘನಿನಾದ

ಸುಗ್ರೀವನನ್ನೇ, ಅಧಿಪತಿಂ-ಕಪಿರಾಜನನ್ನಾಗಿ, ಚಕಾರ-ಮಾಡಿದನು ॥ ೧೦ ॥ ಭೋ-ರಾವಣನೇ, ವಾನರಾಣಾಂ-ಕಪಿಗಳಿಗೆ, ಅಧಿಪಃ-ಒಡೆಯನಾದ, ಮಹಾಬಲೀ-ಅಧಿಕ ಬಲವುಳ್ಳವನಾದ, ಸಃ-ಆ ಸುಗ್ರೀವನು, ಮಹಾಬಲೈಃ-ಅಧಿಕ ಬಲವಾದ, ವಾನರ-ಕಪಿಗಳ, ಯೂಥ-ಸಮೂಹಗಳ, ಕೋಟಿಭಿಃ-ಕೋಟಿಗಳಿಂದ (ಕೂಡಿದವನಾಗಿ,) ರಾಮೇಣಸಾರ್ಧಂ-ರಾಮನ ಸಂಗಡ, ಲಕ್ಷ್ಮಣೇನಸಹ-ಲಕ್ಷ್ಮಣನ ಸಂಗಡಲೂ ಕೂಡಿದವನಾಗಿ, ಪ್ರವರ್ಷಣೇ-ಪ್ರವರ್ಷಣವೆಂಬ ಪರ್ವತದಲ್ಲಿ, ಅಮರ್ಷ-ಕೋಪದಿಂದ, ಯುತಃ-ಕೂಡಿದವನಾಗಿ, ಅವತಿಷ್ಠತಿ-ಇರುತ್ತಿದ್ದಾನೆ ॥ ೧೧ ॥ ತೇನ-ಆ ಸುಗ್ರೀವನಿಂದ, ಧರಾಸುತಾಂ-ಧರಾ-ಭೂಮಿಗೆ, ಸುತಾಂ-ಮಗಳಾದ ಸೀತೆಯನ್ನು, ಮಾರ್ಗಯಿತುಂ-ಹುಡುಕುವದಕ್ಕೆ, ದಿಶೋದಶ-ಹತ್ತು ದಿಕ್ಕುಗಳಿಗೂ, ಹರೀಶ್ವರಾಃ-ಕಪಿಶ್ರೇಷ್ಠರು, ಸಂಚೋದಿತಾಃ-ಕಳುಹಿಸಲ್ಪಟ್ಟವರಾಗಿದ್ದಾರೆ, ತತ್ರ-ಆ ಕಪಿ ಸಮೂಹಗಳೊಳಗೆ, ಕಪಿಃ-ಕಪಿಯಾದ, ಪವನಾತ್ಮಜಃ-ವಾಯುವಿಗೆ ಮಗನಾದ, ಏಕಃ-ಒಬ್ಬನಾದ ನಾನು, ಶನೈಃ-ಮೆಲ್ಲಗೆ, ಸೀತಾಂ-ಸೀತೆಯನ್ನು, ವಿಚಿನ್ವನ್-ಹುಡುಕುತ್ತಿರುವವನಾಗಿ, ಸಮಾಗತಃ-ಬಂದವನಾದೆನು ॥ ೧೨ ॥ ಪದ್ಮಪಲಾಶಲೋಚನಾ-ಪದ್ಮ-ಕಮಲದ, ಪಲಾಶ-ಪತ್ರದಂತೆ, ಲೋಚನಾ-ಕಣ್ಣುಗಳುಳ್ಳ, ಸೀತಾ-ಸೀತೆಯು, ದೃಷ್ಟ್ವಾ-ನೋಡಲ್ಪಟ್ಟಳು, ಕಪಿತ್ವಾತ್-ಕೋತಿಗಳಾದ್ದರಿಂದ, ವಿಪಿನಂ-ವನವು, ವಿನಾಶಿತಂ-ನಾಶ ಮಾಡಲ್ಪಟ್ಟಿತು, ತತಃ-ಆ ಬಳಿಕ, ಮಾಂ-ನನ್ನನ್ನು, ಹಂತುಕಾಮಾನ್-ಕೊಲ್ಲುವ ಕೋರಿಕೆಯುಳ್ಳವರಾದ, ರಭಸಾ-ವೇಗದಿಂದ, ಸಮಾಗತಾನ್-ಬಂದವರಾದ, ಧೃತಚಾಪಸಾಯಕಾನ್-ಧೃತ-ಧರಿಸಲ್ಪಟ್ಟ, ಚಾಪ-ಬಿಲ್ಲು, ಸಾಯಕಾನ್-ಬಾಣಗಳುಳ್ಳವರಾದ, (ರಾಕ್ಷಸಾನ್-ರಾಕ್ಷಸರನ್ನು.) ದೃಷ್ಟ್ವಾ-ನೋಡಿ ॥ ೧೩ ॥ ತೇ-ಆ ರಾಕ್ಷಸರು, ಮಯಾ-ನನ್ನಿಂದ, ಹತಾಃ-ಕೊಲ್ಲಲ್ಪಟ್ಟರು, ವಪುಃ-ದೇಹವು, ಪರಿರಕ್ಷಿತುಂ-ಕಾಪಾಡಿಕೊಳ್ಳಲ್ಪಟ್ಟಿತು, ಪ್ರಭೋ-ಪ್ರಭುವಾದ ರಾವಣನೇ, ಅಖಿಲ-ಎಲ್ಲಾ, ದೇಹಿನಾಂ-ಪ್ರಾಣಿಗಳಿಗೆ, ದೇಹಃ-ಶರೀರವು, ಪ್ರಿಯೋಹಿ-ಪ್ರೀತಿಯಾದದ್ದಲ್ಲವೇ, ತತಃ-ಆ ಬಳಿಕ, ಮೇಘನಿನಾದ-ಮೇಘನಾದನೆಂಬ, ನಾಮಕಃ-ಹೆಸರುಳ್ಳವನು, ಬ್ರಹ್ಮಾಸ್ತ್ರ-ಬ್ರಹ್ಮಾಸ್ತ್ರದ, ಪಾಶೇನ-ಪಾಶದಿಂದ, ಮಾಂ-ನನ್ನ

ನಾಮಕಃ ॥ ೧೪ ॥ ಸ್ಪೃಷ್ಟ್ವೈವಮಾಂಬ್ರಹ್ಮವರಪ್ರಭಾವತಃ ತ್ಯಕ್ತ್ವಾಗತಂಸರ್ವಮವೇಹಿರಾವಣ । ತಥಾಪ್ಯಹಂಬದ್ಧಯಿವಾಗತೋಹಿತಂ ಪ್ರವಕ್ತುಕಾಮಃಕರುಣಾರಸಾರ್ದ್ರಧೀಃ ॥ ೧೫ ॥ ವಿಚಾರ್ಯಲೋಕಸ್ಯವಿವೇಕತೋಗತಿಂ ನರಾಕ್ಷಸೀಂಬುದ್ಧಿಮುಪೈಹಿರಾವಣ । ದೈವೀಂಗತಿಂಸಂಸೃತಿಮೋಕ್ಷಹೇತುಕೀಂಸಮಾಶ್ರಯಾತ್ಯಂತಹಿತಾಯದೇಹಿನಃ ॥ ೧೬ ॥ ತ್ವಂಬ್ರಹ್ಮಣೋಹ್ಯುತ್ತಮವಂಶಸಂಭವಃ ಪೌಲಸ್ತ್ಯಪುತ್ರೋಸಿಕುಬೇರಬಾಂಧವಃ । ದೇಹಾತ್ಮಬುಧ್ಯಾಪಿಚಪಶ್ಯರಾಕ್ಷಸೋನಾಸ್ಯಾತ್ಮಬುಧ್ಯಾಕಿಮುರಾಕ್ಷಸೋನಹಿ ॥ ೧೭ ॥ ಶರೀರಬುದ್ಧೀಂದ್ರಿಯದುಃಖಸಂತತಿರ್ನತೇನಚತ್ಯಂತವನಿರ್ವಿಕಾರತಃ ॥ ಅ

ಸ್ಸು, ನಿಬಧ್ಯ-ಕಟ್ಟಿ, ಸಮಾನಯತ-ಇಲ್ಲಿಗೆ ಕರೆದುಕೊಂಡು ಬಂದನು ॥ ೧೪ ॥ ರಾವಣ-ರಾವಣನೇ, (ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರವು) ಮಾಂ ನನ್ನನ್ನು, ಸ್ಪೃಷ್ಟ್ವೈವ-ಸ್ಪರ್ಶಮಾಡಿ, ಬ್ರಹ್ಮ-ಚತುರ್ಮುಖಬ್ರಹ್ಮನ, ವರ-ವರದ, ಪ್ರಭಾವತಃ-ಮಹಿಮೆಯಿಂದ, ಮಾಂ-ನನ್ನನ್ನು, ತ್ಯಕ್ತ್ವಾ-ಬಿಟ್ಟು, (ಬ್ರಹ್ಮಾಸ್ತ್ರಬಂಧನವೆಲ್ಲವೂ,) ಗತಂ-ಹೋಯಿತು, ಸರ್ವಂ-ಈ ಯೆಲ್ಲಾ ವೃತ್ತಾಂತವನ್ನೂ, ಅವೇಹಿ-ತಿಳಿ, ತಥಾಪಿ-ಬ್ರಹ್ಮಾಸ್ತ್ರಬಂಧನವು, ಬಿಡುಗಡೆಯಾಗಿದ್ದವನಾದಾಗ್ಯೂ, ಕರುಣಾರಸಾರ್ದ್ರಧೀಃ-ಕರುಣಾ-ಕೃಪೆಯೆಂಬ, ರಸ-ರಸದಿಂದ, ಆರ್ದ್ರ-ನೆನೆಯಲ್ಪಟ್ಟ, ಧೀಃ-ಬುದ್ಧಿಯುಳ್ಳವನಾದ, ಅಹಂ-ನಾನು, (ತವ-ನಿನಗೆ,) ಹಿತಂ-ಕ್ಷೇಮಕರವಾದ ಮಾತನ್ನು, ಪ್ರವಕ್ತುಕಾಮಃ-ಹೇಳಬೇಕೆಂಬ ಯಿಚ್ಛೆಯುಳ್ಳವನಾಗಿ, ಬದ್ಧಯಿವ-ಬ್ರಹ್ಮಾಸ್ತ್ರಬಂಧನದಿಂದ ಕೂಡಿರುವವನಂತೆ, ಆಗತಃ-ಬಂದವನು (ಆಗಿದ್ದೇನೆ) ॥ ೧೫ ॥ ರಾವಣ-ರಾವಣನೇ, ಲೋಕಸ್ಯ-ಜನಕ್ಕೆ, ವಿವೇಕತಃ-ಇದು ಧರ್ಮ, ಇದು ಅಧರ್ಮ, ಇದು ಸತ್ತು, ಇದು ಅಸತ್ತು, ಎಂಬುವ ವಿವೇಕ ಜ್ಞಾನದ ದೆಸೆಯಿಂದ, ಗತಿಂ-ಧರ್ಮದಿಂದ ಸ್ವರ್ಗವು, ಅಧರ್ಮದಿಂದ ನರಕವು ಎಂಬ ಗತಿಯನ್ನು, ವಿಚಾರ್ಯ-ಆಲೋಚಿಸಿ, ರಾಕ್ಷಸೀಂ-ರಾಕ್ಷಸ ಸಂಬಂಧವಾದ, ಬುದ್ಧಿಂ-ಪರದಾರ ಹರಣ ರೂಪವಾದ ಕೆಟ್ಟ ಬುದ್ಧಿಯನ್ನು, ನೋಪೈಹೀ-ಬಿಡು, ದೇಹಿನಃ-ಶರೀರಧಾರಿಯಾದವನಿಗೆ, ಅತ್ಯಂತಹಿತಾಯ-ಅತಿಶಯವಾಗಿ ಕ್ಷೇಮವಾಗುವದಕ್ಕೋಸ್ಕರ, ಸಂಸೃತಿ-ಸಂಸಾರದ, ಮೋಕ್ಷ ವಿಮುಕ್ತಿಗೆ, ಹೇತುಕೀಂ-ಕಾರಣಭೂತವಾದ, (ಅಂದರೆ ವಿನಯ-ಶಮದಮಾದಿಗಳನ್ನನುಸರಿಸಿ ಸಂಸಾರ ವಿಮುಕ್ತಿಗೆ ನಿಮಿತ್ತವಾದ,) ದೈವೀಂ-ದೇವ ಪ್ರೋಕ್ತವಾದ, ಗತಿಂ-ಪರರಿಗನುತಾಪಕರವಲ್ಲದ ಮಾರ್ಗವನ್ನು, ಸಮಾಶ್ರಯ-ಆಶ್ರಯಿಸು ॥ ೧೬ ॥ ತ್ವಂ-ನೀನು, ಬ್ರಹ್ಮಣಃ-ಚತುರ್ಮುಖಬ್ರಹ್ಮನ, ಉತ್ತಮ-ಶ್ರೇಷ್ಠವಾದ, ವಂಶ-ಕುಲದಲ್ಲಿ, ಸಂಭವಃ-ಹುಟ್ಟಿದವನು, ಪೌಲಸ್ತ್ಯ-ವಿಶ್ರವಸ್ಸಿಗೆ, ಪುತ್ರಃ-ಮಗನು, ಕುಬೇರ-ಕುಬೇರನಿಗೆ, ಬಾಂಧವಃ-ತಮ್ಮನು, ಅಸಿ-ಆಗಿದ್ದೀ, ದೇಹಾತ್ಮಬುಧ್ಯಾಪಿ-ದೇಹ-ಶರೀರವೇ, ಆತ್ಮಾ-ಆತ್ಮನು ಎನ್ನುವ, ಬುಧ್ಯಾಪಿ-ಜ್ಞಾನದಿಂದಲೂ, ಪಶ್ಯ-ವಿಚಾರ ಮಾಡು, ಆದಾಗ್ಯೂ ಬ್ರಹ್ಮ ವಂಶದಲ್ಲಿ ಹುಟ್ಟಿದವನಾದ್ದರಿಂದ, ರಾಕ್ಷಸಃ-ರಾಕ್ಷಸನು, ನಾಸಿ-ಆಗುವದಿಲ್ಲ, ಆತ್ಮಬುಧ್ಯಾ-ಆತ್ಮನು ದೇಹಾತಿರಿಕ್ತನೆಂಬ ಬುದ್ಧಿಯಿಂದ, ರಾಕ್ಷಸಃ-ರಾಕ್ಷಸನು, ನಹಿ-ಆಗುವದಿಲ್ಲ, )ಕಿಮುವಕ್ತವ್ಯಂ)-ಹೇಳತಕ್ಕದ್ದೇನು ॥ ೧೭ ॥ ಶರೀರ-ಸ್ಥೂಲಶರೀರದಿಂದ, ಬುದ್ಧಿ ಸೂಕ್ಷ್ಮ ಶರೀರದಿಂದ, ಇಂದ್ರಿಯ ಚಕ್ಷುರಾದಿ ಇಂದ್ರಿಯಗಳಿಂದ ಹುಟ್ಟಿದ, ದುಃಖ-ಆಧಿವ್ಯಾಧಿ ರೂಪ ದುಃಖ

ಜ್ಞಾನಹೇತೋಶ್ಚ ತಥೈವಸಂತತೇ ರಸತ್ವಮಸ್ಯಾಃಸ್ವಪತೋಹಿವೃಶ್ಯವತ್ ॥ ೧೮ ॥ ಇದಂತುಸತ್ಯಂತವನಾಸ್ತಿವಿಕ್ರಿಯಾವಿ ಕಾರಹೇತುರ್ನಚತೇದ್ವಯಾತ್ಮನಃ । ಯಥಾನಭಃಸರ್ವಗತಂನಲಿಪ್ಯತೇ ತಥಾಭವಾನ್ ದೇಹಗತೋಪಿಸೂಕ್ಷ್ಮಕಃ ॥ ದೇಹೇಂ ದ್ರಿಯಪ್ರಾಣಶರೀರಸಂಗತಸ್ತ್ವಾತ್ಮೇತಿಬುಧ್ಯಾಖಿಲಬಂಧಭಾಗ್ಭವೇತ್ ॥ ೧೯ ॥ ಚಿನ್ಮಾತ್ರಮೇವಾಹಮಜೋಹಮಕ್ಷರೋ

ಸಲ್ಪ, ಸಂತತೇಃ-ಪರಂಪರೆಯು, ತೇ-ನಿನಗೆ, ಸ-ದುಃಖ ಪರಂಪರೆಯು ಚಿತ್ತ ಧರ್ಮವಾದ ಪ್ರಯುಕ್ತ ಇಲ್ಲ, ತ್ವಂ-ನೀನು (ಚೇತನನಾದ್ದರಿಂದ,) (ತದಾಶ್ರಯಾಶ್ರಿತಂಚಸ)-ತತಃ-ದುಃಖ ಪರಂಪರೆಗೆ, ಆಶ್ರಯಂ-ಅಧಿಷ್ಠಾನವಾದ ಮನಸ್ಸಿಗೆ, ಆಶ್ರಿತಂಸ-ಆಶ್ರಯನಾದವನು ಅಲ್ಲ, (ಆದರೆ ಆತ್ಮನಿಗೇನೇ ದುಃಖಾದಿಗಳು ಯಾಕೆ ಉಂಟಾಗಬಾರದಂದರೆ) ತವ-ನಿನಗೆ, (ಆ ತ್ಮನಿಗೆ) ನಿರ್ವಿಕಾರತಃ-ವಿಕಾರ ಭಾವವಿಲ್ಲದೇ ಇರುವದರಿಂದ, (ವಿಕಾರತ್ವವು ಘಟಿಸದು,) (ಹಾಗೆ ಹೇಳುವದಾದರೆ, ಆತ್ಮನಿಗೆ ವಿಕ್ರಿಯತ್ವ ಪ್ರತಿಪಾದಕ ಶ್ರುತಿ ವಿರೋಧವು ಬರು ತ್ತೆ,) ಹಾಗಾದರೆ ನಾನು ದುಃಖವೆಲ್ಲವನೆಂಬ ಲೋಕ ಪ್ರತೀತಿಗೆ ಗತಿಯೇನೆಂದರೆ,—ಸ್ವಪತಃ-ನಿದ್ರಾವಸ್ಥೆಯಲ್ಲಿ ಇರುವ ಪುರುಷನಿಗೆ, ದೃಶ್ಯವತ್-ಆಗ ಭಾಸಮಾನವಾದ ವಸ್ತುವಿನ ಹಾಗೆ, ಅಜ್ಞಾನ-ಆತ್ಮ ಸ್ವರೂಪಾಜ್ಞಾನವೆಂಬ, ಹೇತೋಃ-ಕಾರಣದ ದೆಸೆಯಿಂದ, ಸತ್ವಂ-ಆ ನೀನು, ತಥಾ-ಹಾಗೆ, ಅಸ್ಯಾಃ-ಆಜ್ಞಾನದಿಂದ ತೋರುತ್ತಿರುವ, ಸಂತತೇಃ-ದುಃಖ ಪರಂಪರೆಗೆ, ಅಸತ್ವಮೇವ-ವಸ್ತುತಃ ವಾಸ್ತವಸ್ಥಿತಿಯು ಇಲ್ಲವೇ ಇಲ್ಲ, ನಾನು ದುಃಖಿಯು ಯೆಂಬ ವ್ಯವಹಾರವು (ಸ್ವಪ್ನ ಕಾಲಿಕವಾದ ಪ್ರತೀತಿಯಂತೆ ಭ್ರಮೆಯೆಂಬ ಭಾವವು)॥೧೮॥ ತವ-ನಿನಗೆ, ವಿಕ್ರಿಯಾ-ವಿಕಾರತೆಯು, ನಾಸ್ತಿ-ಇಲ್ಲ, ಇದಂತು ಈ ವಿಕಾರರಹಿತವಾಗಿಯೂ, ಚೇತನವಾಗಿಯೂ ಇರುವದೊಂದೇ, ಸತ್ಯಂ-ನಿಶ್ಚಯವಾದದ್ದು, (ವಿಕಾರ ಹೇತುವಾದ ಅ ಜ್ಞಾನವು ಸತ್ಯವಾಗಲಿ, ಅಂದರೆ) ವಿಕಾರ-ವಿಕಾರಕ್ಕೆ, ಹೇತುಃ-ಕಾರಣ ಭೂತವಾದ ಅಜ್ಞಾನವು, (ನಚಸತ್ಯಃ-ಸತ್ಯವಲ್ಲವು,) ಅದ್ವಯಾತ್ಮನಃ-ಏಕವಾದ, ಅದ್ವಿತೀಯವಾದ ಬ್ರಹ್ಮ ವು ಒಂದೇ ಯೆಂಬದಾಗಿ ಶ್ರುತಿಯಲ್ಲಿ ಹೇಳಲ್ಪಡುವಂತೆ ಎರಡನೇ ಪದಾರ್ಥವಿಲ್ಲದ ಆತ್ಮನಾದ, ತೇ-ನಿನಗೆ, (ವಿಕಾರ ಹೇತುವಾದ ಅಜ್ಞಾನವು ಸತ್ಯವಲ್ಲವೆಂಬುವ ಭಾವವಾಗಿರುವದು,) (ಚಿತ್ತ ಸಂಬಂಧವಿರುವದರಿಂದ ನನಗೆ ದುಃಖಾದಿಗಳಿರುವವೆಂದರೆ ಹಾಗಲ್ಲ,) ಸರ್ವಗತಂ-ಯೆಲ್ಲಿಯೂ ವ್ಯಾಪಿಸಿರುವ, ನಭಃ-ಆಕಾಶವು, ಯಥಾನಲಿಪ್ಯತೇ-ಪೃಥ್ವ್ಯಾದಿ ರೂಪ ರಸ ಗಂ ಧಾದಿಗಳಿಂದ ಲೇಪವಿಲ್ಲದೆ ಇದೆಯೋ, ತಥಾ-ಹಾಗೆ, ದೇಹಗತಃ-ಶರೀರವನ್ನು ಹೊಂದಿರುವವನಾದಾಗ್ಯೂ, ಭವಾನ್-ನೀನು, ಸೂಕ್ಷ್ಮಕಃ-ಅತಿ ಸೂಕ್ಷ್ಮನಾಗಿರುವವನಾಗಿ, ನಲಿಪ್ಯ ಸೆ-ಚಿತ್ತ ಸಂಬಂಧ ಉಳ್ಳವನಾಗಿದ್ದಾಗ್ಯೂ ವಾಸ್ತವವಾಗಿ,ದುಃಖಾದಿ ಲೇಪವಿಲ್ಲದವನಾಗಿದ್ದೀ, ದೇಹ-ಸೂಕ್ಷ್ಮ ಶರೀರದೊಳು, ಇಂದ್ರಿಯ-ಚಕ್ಷುರಾದೀಂದ್ರಿಯಗಳೊಳು, ಪ್ರಾಣ-ಪ್ರಾ ಣಗಳೊಳು, ಶರೀರ-ಸ್ಥೂಲ ಶರೀರದಲ್ಲಿ, ಸಂಗತಃ-ಸ್ವರೂಪ ಸಂಬಂಧವುಳ್ಳವನು ಆತ್ಮಾ-ಆತ್ಮನು, ಇತಿ-ಈ ವಿಧವಾದ, ಬುಧ್ಯಾ-ಬುದ್ಧಿಯಿಂದ, (ಅಂದರೆ ದೇಹೇಂದ್ರಿಯ ಪ್ರಾಣ ಶರೀರಗಳೇ ಆತ್ಮನೆಂಬ ಜ್ಞಾನದಿಂದ, ಅಖಿಲ-ಸಮಸ್ತವಾದ, ಬಂಧ-ಸಂಸಾರ ಬಂಧನವನ್ನು, ಭಾಕ್-ಹೊಂದುವವನು, ಭವೇತ್-ಆಗುವನು, ॥ ೧೯ ॥ ಅಹಂ-ನಾನು, ಚಿನ್ಮಾತ್ರಂ-ಜ್ಞಾನ

ಹ್ಯಾನಂದಭಾವ್ರೋಹಮಿತಿಪ್ರಮುಚ್ಯತೇ । ದೇಹೋಪ್ಯನಾತ್ಮಾಪೃಥಿವೀವಿಕಾರಜೋನಪ್ರಾಣಆತ್ಮಾನಿಲಏಷಏವಸಃ ||೨೦||
ಮನೋಪ್ಯಹಂಕಾರವಿಕಾರಏವನೋ ನಚಾಪಿಬುದ್ಧಿಃಪ್ರಕೃತೇರ್ವಿಕಾರಜಾ || ಆತ್ಮಾಚಿದಾನಂದಮಯೋವಿಕಾರವಾನ್ದೇ
ಹಾದಿಸಂಘಾದ್ವ್ಯತಿರಿಕ್ತಈಶ್ವರಃ ||೨೧|| ನಿರಂಜನೋಮುಕ್ತಉಪಾಧಿತಸ್ಸದಾಜ್ಞಾತ್ವೈವಮಾತ್ಮಾನಮಿತೋವಿಮುಚ್ಯತೇ ।
ಅತೋಹವಾತ್ಯಂತಿಕಮೋಕ್ಷಸಾಧನಂವಕ್ಷ್ಯೇಶೃಣುಷ್ವಾವಹಿತೋಮಹಾಮತೇ||೨೨||ವಿಷ್ಣೋರ್ಹಿಭಕ್ತಿಸ್ಸುವಿಶೋಧನಂಧಿಯ

ಸ್ವರೂಪನು ಮಾತ್ರವೇ, ಅಹಂ-ನಾನು, ಅಜಃ-ಉತ್ಪತ್ತಿಯಿಲ್ಲದವನು, ಅಕ್ಷರಃ-ನಾಶರಹಿತನಾದವನು, ಅಹಂ-ನಾನು, ಆನಂದಭಾವಃ-ಆನಂದ ಸ್ವರೂಪನಾದವನು, ಇತಿ-ಹೀಗೆ ಭಾವಿಸುವವನಾದರೆ, ಪ್ರಮುಚ್ಯತೇ-ಸಂಸೃತಿಯ ಬಂಧದಿಂದ ಮುಕ್ತನಾಗುವನು, ಪೃಥಿವೀ-ಭೂಮಿಯ-ವಿಕಾರ-ವಿಕಾರದಿಂದ, ಜಃ-ಹುಟ್ಟಿದ್ದಾದ, ದೇಹಃ-ದೇಹವು, ಅನಾತ್ಮಾ-ಜಡವಾದ್ದರಿಂದ ಆತ್ಮನಲ್ಲ, ಪ್ರಾಣಃ-ವಾಯುವು, ಆತ್ಮಾ-ಆತ್ಮನಲ್ಲ, ನಃ-ಪ್ರಾಣ ವಾಯುವು, ಏಷಃಅನಿಲಏವ-ಈ ಹೊರಗೆ ಗೋಚರಿಸುವ ವಾಯುವೇ ಆಗಿದ್ದಾನೆ, ಅಹಂಕಾರ-ಅಹಂಕಾರದ, ವಿಕಾರಃ-ಪರಿಣಾಮವಾಗಿರುವ, ಮನಃ-ಮನಸ್ಸು, ನಆತ್ಮಾ-ಆತ್ಮನಲ್ಲ, ಪ್ರಕೃತೇಃ-ಪ್ರಕೃತಿಯ, ವಿಕಾರ-ವಿಕಾರದಿಂದ, ಜ-ಹುಟ್ಟಿರುವ, ಬುದ್ಧಿಃ-ಬುದ್ಧಿಯು, ನ-ಆತ್ಮನಲ್ಲ, ಆತ್ಮಾ-ಆತ್ಮನಲ್ಲಿ, ಆತ್ಮಾ-ಆತ್ಮನು, ಚಿದಾನಂದಮಯಃ-ಚಿತ್-ಜ್ಞಾನ ಸ್ವರೂಪನು, ಆನಂದಮಯಃ-ಆನಂದ ಸ್ವರೂಪನಾದವನು, ಅವಿಕಾರವಾನ್-ವಿಕಾರವಿಲ್ಲದವನು, ದೇಹಾದಿ ಸಂಘಾದ್ವ್ಯತಿರಿಕ್ತಃ-ದೇಹ-ಸ್ಥೂಲ ಸೂಕ್ಷ್ಮ ದೇಹಗಳೇ, ಆದಿ-ಮೊದಲಾದ, ಸಂಘ-ಇಂದ್ರಿಯಾದಿ ಸಂಘವೇ, ಆದ್ಯ-ಮುಂತಾದವುಗಳಿಗಿಂತ, ಅತಿರಿಕ್ತಃ-ಬೇರೆಬೇರೆಯಾದವನಾದ, ಈಶ್ವರಃ-ನಿಯಂತೃವಾದವನು || ೨೧ || (ಮತ್ತು) ನಿರಂಜನಃ-ನಿರ್ದೋಷಿಯಾದವನು, ಮುಕ್ತಉಪಾಧಿಕಃ-ಉಪಾಧಿ ಭೂತಗಳಾದ ಚಿತ್ತ ಧರ್ಮ ದುಃಖಾದಿಗಳಿಂದ ವಿಮುಕ್ತನಾದವನು ಎಂಬದಾಗಿ, ಆತ್ಮಾನಂ-ಆತ್ಮನನ್ನು, ಏವಂ-ಈ ಪ್ರಕಾರವಾಗಿ, ಸದಾ-ಯಾವಾಗಲೂ, ಜ್ಞಾತ್ವೈವ-ತಿಳಿದರೇನೇ, ವಿಮುಚ್ಯತೇ-ಸಂಸೃತಿಯಿಂದ ವಿಮುಕ್ತನಾಗುತ್ತಾನೆ, ಅತಃ-ಆ ಕಾರಣದಿಂದ, ಆತ್ಯಂತಿಕ-ಅತ್ಯಂತ ತುದಿಯ ವರಿಗೂ, ಮೋಕ್ಷ-ಮುಕ್ತಿಗೆ, ಸಾಧನಂ-ಕಾರಣವಾದದ್ದನ್ನು, ವಕ್ಷ್ಯೇ-ಹೇಳುತ್ತೇನೆ, ಮಹಾಮತೇ-ಬಹು ಬುದ್ಧಿಶಾಲಿಯಾದವನಾನೇ, ಅವಹಿತಃ-ಏಕ ಮನಸ್ಸುಳ್ಳವನಾಗಿ, ಶೃಣುಷ್ವ-ಕೇಳು || ೨೨ || ವಿಷ್ಣೋಃ-ವಿಷ್ಣುವಿನಲ್ಲಿ, ಭಕ್ತಿಃ-ಭಕ್ತಿಯು, ಧಿಯಃ-ಚಿತ್ತದ, ಸುವಿಶೋಧನಂ-ನಿತ್ಯಾನಿತ್ಯ ವಸ್ತು ವಿವೇಕ ದ್ವಾರದಿಂದ ಶುದ್ಧಿಯನ್ನು (ಉಂಟುಮಾಡುವದು,) ತತಃ-ಆ ಚಿತ್ತ ಶುದ್ಧಿಯಿಂದ, ನಿರ್ಮಲಂ-ಸ್ವಚ್ಛವಾದ, ಜ್ಞಾನಂ-ಆತ್ಮನು ಚಿದಾನಂದ ರೂಪನೆಂಬವಾಗಿ ಆತ್ಮವಿಷಯವಾದ, ನಿಧಿಧ್ಯಾಸನ ರೂಪವಾದ, ಜ್ಞಾನವು, ಭವೇತ್-ಆಗುತ್ತು, ತತಃ-ಆತ್ಮ ವಿಷಯಕವಾದ ನಿಧಿಧ್ಯಾಸನದಿಂದ, ವಿಶುದ್ಧ ಸತ್ವಾನುಭವಃ-ವಿಶುದ್ಧ-ನಿರ್ಮಲವಾದ, ಸತ್ವಾನುಭವಃ-ಅವ

ಸ್ತತೋಭವೇದ್ಜ್ಞಾನಮತೀವನಿರ್ಮಲಂ । ವಿಶುದ್ಧಸತ್ವಾನುಭವೋಭವೇತ್ತತಃಸಮ್ಯಗ್ವಿದಿತ್ವಾಪರಮಂಪದಂವ್ರಜೇತ್ ॥೨೨ ॥ ಅತೋಭಜಸ್ವಾದ್ಯಹರಿಂರಮಾಪತಿಂರಾಮಂಪುರಾಣಂಪ್ರಕೃತೇಃಪರಂವಿಭುಂ । ವಿಸೃಜ್ಯಮೌರ್ಖ್ಯಂಹೃದಿಶತ್ರುಭಾವನಾಂ ಭಜಸ್ವರಾಮಂ ಶರಣಾಗತಪ್ರಿಯಂ ॥೨೩॥ ಸೀತಾಂಪುರಸ್ಕೃತ್ಯಸಪುತ್ರಬಾಂಧವೋ ರಾಮಂನಮಸ್ಕೃತ್ಯವಿಮುಚ್ಯಸೇ ಭಯಾತ್ ॥೨೪॥ರಾಮಂಪರಾತ್ಮಾನಮಭಾವಯನ್ಜನೋಭಕ್ತ್ಯಾಹೃದಿಸ್ಥಂಸುಖರೂಪಮದ್ವಯಂ ॥ ಕಥಂಪರಂತೀರಮವಾಪ್ನುಯಾಜ್ಜನೋಭವಾಂಬುಧೇರ್ದುಃಖತರಂಗಮಾಲಿನಃ ॥೨೫ ॥ ನೋಚೇತ್ವಮಜ್ಞಾನಮಯೇನವಹ್ನಿನಾ ಜ್ವಲಂತಮಾತ್ಮಾ

ಶೋಕ್ತ್ರಾಸಂಘೂತಿಯಂ. ಭವೇತ್-ಆದೀತು, ತತಃ-ಆ ಬಳಿಕ, ಸಮ್ಯಕ್-ಚನ್ನಾಗಿ, ವಿದಿತ್ವಾ-ತಿಳಿದು, ಪರಮಂಪದಂ-ಉತ್ಕೃಷ್ಟವಾದ ಬ್ರಹ್ಮ ಸಾಯುಜ್ಯವನ್ನು, ವ್ರಜೇತ್-ಹೊಂದುವವನಾಗುವನು ॥ ೨೨ ॥ ಅತಃ-ಆ ಕಾರಣದಿಂದ, ಹರಿಂ-ವಿಷ್ಣುವಾಗಿರುವ, ರಮಾಪತಿಂ-ಲಕ್ಷ್ಮೀಪತಿಯಾದ, ಪ್ರಕೃತೇಃ-ಪ್ರಕೃತಿಗೆ, ಪರಂ-ಶ್ರೇಷ್ಠನಾದ (ಹೊರತಾದವನಾದ,) ವಿಭುಂ-ತತ್ವಾವಧಾರಣ ಸಮರ್ಥನಾದ, ಪುರಾಣಂ-ಅನಾದಿಯಾಗಿರುವವನಾದ, ರಾಮಂ-ರಾಮಚಂದ್ರನನ್ನು, ಅದ್ಯ-ಈಗ, ಭಜಸ್ವ-ಸೇವಿಸು, ಮೌರ್ಖ್ಯಂ-ಮೂರ್ಖತನವನ್ನು, ಹೃದಿ ಮನಸ್ಸಿನಲ್ಲಿ, ಶತ್ರುಭಾವನಾಂ-ಶತ್ರುವೆಂಬ ಅಭಿಸಂಧಿಯನ್ನು, ವಿಸೃಜ್ಯ-ಬಿಟ್ಟು, ಶರಣಾಗತ-ರಕ್ಷಿಸಬೇಕೆಂದು ಬಂದ ಭಕ್ತರ ಮೇಲೆ, ಪ್ರಿಯಂ-ವಿಶ್ವಾಸವುಳ್ಳ, ರಾಮಂ-ರಾಮಚಂದ್ರನನ್ನು, ಭಜಸ್ವ-ಸೇವಿಸು ॥ ೨೩ ॥ ಸಪುತ್ರಬಾಂಧವಃ-ಮಕ್ಕಳಿಂದಲೂ ಬಂಧುಗಳಿಂದಲೂ ಕೂಡಿದವನಾಗಿ, (ನೀನು) ರಾಮಂ-ರಾಮನನ್ನು ಕುರಿತು, ನಮಸ್ಕೃತ್ಯ-ನಮಸ್ಕಾರಮಾಡಿ, ಸೀತಾಂ-ಸೀತೆಯನ್ನು, ಪುರಸ್ಕೃತ್ಯ-ಮುಂದು ಮಾಡಿಕೊಂಡು, (ರಾಮಾಯದತ್ವಾ-ರಾಮಚಂದ್ರನಿಗೆ ಕೊಟ್ಟು (ನೀನು ಶರಣಾಗತನಾದರೆ,) ಭಯಾತ್-ರಾಮನಿಂದ ಉಂಟಾಗಿರುವ ಭಯದಿಂದಲೂ, ಸಂಸೃತಿ ಭಯದಿಂದಲೂ, ವಿಮುಚ್ಯಸೇ-ಬಿಡಿಸಲ್ಪಡುವವನಾಗುವಿ ॥ ೨೪ ॥ ಜನಃ-ಜನರು, ಭಕ್ತ್ಯಾ-ಭಕ್ತಿಯಿಂದ, ಹೃದಿ-ಮನಸ್ಸಿನಲ್ಲಿ, ಸ್ಥಂ-ಇರುವವನಾದ ಸುಖರೂಪಂ-ಸುಖ ಸ್ವರೂಪನಾದ, ಅದ್ವಯಂ-ತನ್ನ ಹಾಗೆ ಬೇರೆ ವಸ್ತುವಿಲ್ಲದವನಾದ, ರಾಮಂ-ರಾಮಚಂದ್ರನನ್ನು, ಪರಾತ್ಮಾನಂ-ಪರಮಾತ್ಮನೆಂಬದಾಗಿ, ಅಭಾವಯನ್-ಎಣಿಸದೆ ಇರುವವರಾದರೆ, ದುಃಖತರಂಗಮಾಲಿನಃ-ದುಃಖ-ಮುಖ್ಯಗಳೆಂಬ, ತರಂಗ-ಅಲೆಗಳ, ಮಾಲಿನಃ-ಪಂಕ್ತಿಯುಳ್ಳ, ಭವಾಂಬುಧೇಃ-ಸಂಸಾರ ಸಮುದ್ರದ, ಪರಂತೀರಂ-ಆಚೆ ದಡವನ್ನು, ಜನಃ-ಅಂಥಾ ಜ್ಞಾನ ಜನರು, ಕಥಮವಾಪ್ನುಯಾತ್-ಹ್ಯಾಗೆ ಹೊಂದುವವರಾದಾರು ॥ ೨೫ ॥ ನೋಚೇತ್-ನಾನು ಹೇಳಿದಂತೆ ನೀನು ಮಾಡದೆ ಹೋದವನಾದರೆ ತ್ವಂ-ನೀನು, ಅಜ್ಞಾನಮಯೇನ-ಅಜ್ಞಾನ-ವಿಕಾರವಾದ, ವಹ್ನಿನಾ-ಬೆಂಕಿಯಿಂದ, ಜ್ವಲಂತಂ-ಸುಡುವ, ಆತ್ಮಾನಂ-ಆತ್ಮನನ್ನು, ಅರಿವತ್-ಶತ್ರುವಿನಂತೆ, ಅರಕ್ಷಿತಾ-ಕಾಪಾಡಲ್ಪಡದವನಾಗಿ, ಸ್ವಕೃತ್ಯೈಃ-

ಸಮರಕ್ಷಿತಾರಿವತ್ ॥ ನಯಸ್ಯಧೋಧಸ್ಸ್ವಕೃತೈಶ್ಚ ಪಾತಕೈರ್ವಿಮೋಕ್ಷಶಂಕಾ ನಚತೇಭವಿಷ್ಯತಿ ॥ ೨೭ ॥ ಶ್ರುತ್ವಾಮೃತಸ
ಸ್ವಾದಸಮಾನಭಾಷಿತಂ ತದ್ವಾಯುಸೂನೋರ್ದಶಕಂಧರೋಸುರಃ । ಅಮೃಷ್ಯಮಾಣೋತಿರುಷಾಕಪೀಶ್ವರಂಜಗಾದರ
ಕ್ತಾಂತವಿಲೋಚನೋಜ್ವಲನ್ ॥ ೨೮ ॥ ಕಥಂಮಮಾಗ್ರೇವಿಲಪಸ್ಯಭೀತವತ್ಪ್ಲವಂಗಮಾನಾಮಧಮೋಸಿದುಷ್ಟಧೀಃ । ಕ
ಏಷರಾಮಃಕತಮೋವನೇಚರೋ ನಿಹನ್ಮಿಸುಗ್ರೀವಯುತಂನರಾಧಮಂ ॥ ೨೯ ॥ ತ್ವಾಂಚಾದ್ಯಹತ್ವಾ ಜನಕಾತ್ಮಜಾಂತ
ತೋನಿಹನ್ಮಿರಾಮಂಸಹಲಕ್ಷ್ಮಣಂತತಃ । ಸುಗ್ರೀವಮಗ್ರೇಬಲಿನಂಕಪೀಶ್ವರಂಸವಾನರಂಹನ್ಮ್ಯಚಿರೇಣವಾನರ ॥ ೩೦ ॥ ಶ್ರು
ತ್ವಾ ದಶಗ್ರೀವವಚಸ್ಸಮಾರುತಿಃ ವಿವೃದ್ಧಕೋಪೇನದಹನ್ನಿವಾಸುರಂ । ನಮೇಸಮಾರಾವಣಕೋಟಯೋಧಮ ರಾಮಸ್ಯ

ನಿನ್ನಿಂದ ಮಾಡಲ್ಪಟ್ಟ, ಪಾತಕೈಃ-ಪಾಪಗಳಿಂದ, ಆತ್ಮಾನಂ-ಆತ್ಮನನ್ನು, ಅಧೋಧಃ-ಕೆಳಕ್ಕೆ, ನಯಸಿ-ತೆಗದುಕೊಂಡು ಹೋಗುವವನಾಗುತ್ತೀ, ವಿಮೋಕ್ಷ-ಮುಕ್ತಿಯ, ಶಂಕಾ-ಸಂಭಾವನೆಯು, ತೇ-ನಿನಗೆ, ನಚಭವಿಷ್ಯತಿ-ಆಗುವದಿಲ್ಲ ॥ ೨೭ ॥ ಅಸುರಃ-ರಾಕ್ಷಸನಾದ, ದಶ-ಹತ್ತಾದ, ಕಂಧರಃ-ತಲೆಗಳುಳ್ಳವನಾದ ರಾವಣನು, ವಾಯುಸೂನೋಃ-ಆಂಜನೇಯನ-ಅಮೃತಾಸ್ವಾದಸಮಾನಭಾಷಿತಂ-ಅಮೃತ-ಅಮೃತದ, ಆಸ್ವಾದ-ಸೇವಿಸುವದಕ್ಕೆ, ಸಮಾನ-ಸರಿಯಾಗಿ ಮನೋಹರವಾದ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ಅಮೃಷ್ಯಮಾಣಃ-ಸಹಿಸದೇ ಇರುವವನಾಗಿ, ಅತಿರುಷಾ-ಅತ್ಯಂತ ಕೋಪದಿಂದ, ರಕ್ತಾಂತವಿಲೋಚನಃ-ರಕ್ತ-ಕೆಂಪಾದ, ಅಂತವಿಲೋಚನಃ-ನೇತ್ರಗಳ ಕೊನೆಗಳುಳ್ಳವನಾಗಿ, ಜ್ವಲಂ-ತಾಪವುಳ್ಳವನಾಗಿ, ಕಪೀಶ್ವರಂ-ಆಂಜನೇಯನನ್ನು ಕುರಿತು, ಜಗಾದ-ಹೇಳಿದನು ॥ ೨೮ ॥ ಅಭೀತವತ್-ಭಯವಿಲ್ಲದವನಂತೆ, ಮಮಾಗ್ರೇ-ನನ್ನ ಮುಂದೆ, ಕಥಂ-ವಿಲಪಸಿ-ಏನು ಪ್ರಲಾಪಮಾಡುತ್ತೀ, (ನೀನು) ಪ್ಲವಂಗಮಾನಾಂ-ಕಪಿಗಳೊಳಗೆ, ಅಧಮಃ-ನೀಚನಾಗಿಯೂ, ದುಷ್ಟಧೀಃ-ಕೆಟ್ಟ ಬುದ್ಧಿಯುಳ್ಳವನಾಗಿಯೂ, ಅಸಿ-ಆಗಿದ್ದೀ, ಏಷಃರಾಮಃ-ಈ ರಾಮನು, ಕಃ-ಯಾರು, ವನೇಚರಃ-ಅರಣ್ಯದಲ್ಲಿ ತಿರುಗುತ್ತಿರುವವನಾದ ಸುಗ್ರೀವನು, (ಅಥವಾ ರಾಮನು,) ಕತಮಃ-ಎಷ್ಟರವನು, ಸುಗ್ರೀವ-ಸುಗ್ರೀವನಿಂದ, ಯುತಂ-ಕೂಡಿರುವ, ನರಾಧಮಂ-ಮನುಷ್ಯರೊಳ್ಗು ನೀಚನಾದ ರಾಮಚಂದ್ರನನ್ನು, ನಿಹನ್ಮಿ-ಕೊಲ್ಲುವೆನು ॥ ೨೯ ॥ ಅದ್ಯ-ಈಗ, ತ್ವಾಂ-ನಿನ್ನನ್ನು, ಹತ್ವಾ-ಕೊಂದು, ತತಃ-ಆ ಬಳಿಕ, ಜನಕಾತ್ಮಜಾಂ-ಸೀತೆಯನ್ನು, ನಿಹನ್ಮಿ-ಕೊಲ್ಲುತ್ತೇನೆ, ತತಃ-ಆಮೇಲೆ, ಸಲಕ್ಷ್ಮಣಂ-ಲಕ್ಷ್ಮಣನಿಂದ ಕೂಡಿದ, ರಾಮಂ-ರಾಮಚಂದ್ರನನ್ನು, ನಿಹನ್ಮಿ-ಕೊಲ್ಲುತ್ತೇನೆ, ತತಃ-ಆಮೇಲೆ, ವಾನರ-ಕಪಿಯಾದ ಆಂಜನೇಯನೇ, ಅಗ್ರೇ-ಮುಂದೆ, ಬಲಿನಂ-ಶಕ್ತಿವಂತನಾದ, ಕಪೀಶ್ವರಂ-ಕಪಿಗಳಿಗೆ ದೊರೆಯಾದ, ಸವಾನರಂ-ಕಪಿಗಳಿಂದ ಕೂಡಿದವನಾದ, ಸುಗ್ರೀವಂ-ಸುಗ್ರೀವನನ್ನು, ಅಚಿರೇಣ-ಜಾಗ್ರತೆಯಾಗಿಯೇ, ಹನ್ಮಿ-ಕೊಲ್ಲುತ್ತೇನೆ ॥ ೩೦ ॥ ದಶಗ್ರೀವ-ರಾವಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಸಃ-ಆ, ಮಾರುತಿಃ-ಆಂಜನೇಯನು, ವಿವೃದ್ಧ-ಹೆಚ್ಚಿದ,

ದೂತೋಹಮುಪಾರವಿಕ್ರಮಃ ॥ ೩೧ ॥ ಶ್ರುತ್ವಾತಿಕೋಪೇನಹನೂಮತೋಪಚೋದಶಾನನೋರಾಕ್ಷಸಮೇಕಮಬ್ರವೀತ್ । ಪಾ
ರ್ಶ್ವೇಸ್ಥಿತಂಮಾರಯಖಂಡಶಃಕಪಿಂ ಪಶ್ಯಂತುಸರ್ವೇಸುತಮಿತ್ರಬಾಂಧವಾಃ ॥೩೨॥ ನಿವಾರಯಾಮಾಸತತೋವಿಭೀಷಣೋ
ಮಹಾಸುರಂಸಾಯುಧಮುದ್ಯತಂವಧೇ ।ರಾಜನ್ವಧಾರ್ಹೋನಭವೇತ್ಕಥಂಚನಪ್ರತಾಪಯುಕ್ತೈಃಪರರಾಜವಾನರಃ॥೩೩॥
ಹತೇಸ್ಮಿನ್ವಾನರೇದೂತೇವಾರ್ತಾಂಕೋಪಿನಿವೇದಯೇತ್ । ರಾಮಾಯತ್ವಂಯಮುದ್ದಿಶ್ಯವಧಾಯಸಮುಪಸ್ಥಿತಃ ॥ ೩೪ ॥ ಅ
ತೋವಧಸಮಂಕಿಂಚಿದನ್ಯಚ್ಚಿಂತಯವಾನರೇ । ಸಚಿಹ್ನೋಗಚ್ಛತುಹರಿರ್ಯಂದೃಷ್ಟ್ವಾಯಾಸ್ಯತಿದ್ರುತಂ ॥ ೩೫ ॥

ಕೋಪೇನ-ಶಿಟ್ಟಿನಿಂದ, ಅಸುರಂ-ರಾವಣನನ್ನು, ದಹನ್ನಿವ-ಸುಡುವವನಂತೆ, ಅಧಮ-ನೀಚನಾದ ರಾವಣನೇ, ರಾವಣ-ನಿಸ್ಸಂಘಾ ರಾವಣಾರ, ಕೋಟಯಃ-ಕೋಟಿ ರಾವಣರಾದಾಗ್ಯೂ, ಮೇ-ನನಗೆ, ಸಮಾಃ-ಸರಿಯಾದವರು, ನ-ಅಲ್ಲ, ರಾಮಸ್ಯ-ರಾಮಚಂದ್ರನಿಗೆ, ದೂತಃ-ಭೃತ್ಯನಾದ ನಾನು, ಅಪಾರ-ಮಿತಿಯಿಲ್ಲದ, ವಿಕ್ರಮಃ-ಪರಾಕ್ರಮವುಳ್ಳವನು (ಆಗಿದ್ದೇನೆ) ॥ ೩೧ ॥ ದಶಾನನಃ-ರಾವಣನು, ಹನೂಮತಃ-ಆಂಜನೇಯನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಅತಿಕೋಪೇನ-ಅತ್ಯಂತ ಶಿಟ್ಟಿನಿಂದ, ಪಾರ್ಶ್ವೇ-ನೆಲವದಲ್ಲಿ, ಸ್ಥಿತಂ-ಇರುತ್ತಿರುವ, ಏಕಂ-ಒಬ್ಬನಾದ, ರಾಕ್ಷಸಂ-ರಾಕ್ಷಸನನ್ನು ಕುರಿತು, ಅಬ್ರವೀತ್-ಹೇಳಿದನು, ಕಪಿಂ-ಈ ಕೋತಿಯನ್ನು, ಖಂಡಶಃ-ತುಂಡುತುಂಡಾಗಿ, ಮಾರಯ-ಹೊಡೆದು ಸಂಹರಿಸು, ಅಸುರ-ರಾಕ್ಷಸರಿಗೆ, ಮಿತ್ರ-ಸ್ನೇಹಿತರಾದ, ಬಾಂಧವಾಃ-ನೆಂಟರಾದ, ಸರ್ವೇ-ಎಲ್ಲರೂ, ಪಶ್ಯಂತು-ನೋಡಲಿ॥೩೨॥ತತಃ-ಆಬಳಿಕ, ವಿಭೀಷಣಃ-ವಿಭೀಷಣನು,ವಧೇ-ಕಪಿಯಾದ ಆಂಜನೇಯನ ಸಂಹಾರದಲ್ಲಿ, ಉದ್ಯತಂ-ಉದ್ಯುಕ್ತನಾದ, ಸಾಯುಧಂ-ಆಯುಧದಿಂದ ಕೂಡಿರುವ, ಮಹಾಸುರಂ-ಆ ದೊಡ್ಡ ರಾಕ್ಷಸನನ್ನು, ನಿವಾರಯಾಮಾಸ-ನಿಲ್ಲಿಸಿದನು, ರಾಜನ್-ದೊರೆಯಾದ ರಾವಣನೇ, ಪರ-ಶತ್ರುವಾದ, ರಾಜ-ದೊರೆಯ ಕಜೆಯವನಾದ, ವಾನರಃ-ಕಪಿಯು, (ಅಥವಾ) ಉತ್ಕೃಷ್ಟ ರಾಜನ ಕಜೆಯವನಾಗಿ ಬಂದಿರುವ ಈ ಕಪಿಯು, ಪ್ರತಾಪಯುಕ್ತೈಃ-ಸಾಮರ್ಥ್ಯವುಳ್ಳವರಾದ ರಾಜರಿಂದ, ಕಥಂಚನ-ಹ್ಯಾಗಾದರೂ, ವಧಾರ್ಹಃ-ಕೊಲ್ಲುವದಕ್ಕೆ ತಕ್ಕವನು, ನಭವೇತ್-ಆಗುವದಿಲ್ಲ, ॥ ೩೩ ॥ ತ್ವಂ-ನೀನು, ಯಂ-ಯಾವ ರಾಮಚಂದ್ರನನ್ನು, ಉದ್ದಿಶ್ಯ-ನಿರೀಕ್ಷಿಸಿಕೊಂಡು,ವಧಾಯ-ನಿನ್ನ ಸಂಹಾರಕ್ಕೆ, ಸಮುಪಸ್ಥಿತಃ-ಸಿದ್ಧನಾಗಿ ಇರುತ್ತೀಯೋ, ರಾಮಾಯ-ಅಂಥಾ ರಾಮಚಂದ್ರನಿಗೆ, ವಾರ್ತಾಂ-ಸೀತೆಯ ವೃತ್ತಾಂತವನ್ನು, ಅಸ್ಮಿನ್-ಈ, ದೂತೇ-ಭೃತ್ಯನಾದ, ವಾನರೇ-ಕಪಿಯು, ಹತೇ-ಮೃತಿಯನ್ನು ಹೊಂದಿದರೆ, ಕೋಪಿ-ಯಾವನು, ನಿವೇದಯೇತ್-ತಿಳಿಸುತ್ತಾನೆ ॥ ೩೪ ॥ ಅತಃ-ಆ ಕಾರಣದಿಂದ, ಕಿಂಚಿತ್-ಕೊಂಚವಾಗಿ, ವಧ-ಸಂಹಾರಕ್ಕೆ, ಸಮಂ-ಸರಿಯಾಗಿರುವ, ಅನ್ಯತ್-ಮತ್ತೊಂದು ಶಿಕ್ಷೆಯನ್ನು, ವಾನರೇ-ಈ ದೂತನಾದ ಕಪಿಯ ವಿಷಯದಲ್ಲಿ, ಚಿಂತಯ-ಯೋಚಿಸು, ಹರಿಃ-ಈ ಕಪಿಯು, ಸಚಿಹ್ನಃ-ಇಲ್ಲಿ ಮಾಡಲ್ಪಟ್ಟ ಶಿಕ್ಷೆಯ ಗುರುತುಳ್ಳವನಾಗಿ, ಗಚ್ಛತು-ಹೋಗಲಿ, ಯಂ-ಯಾವ ಈ ಕಪಿಯನ್ನು, ದೃಷ್ಟ್ವಾ-ನೋಡಿ,

ರಾಮಸ್ಸುಗ್ರೀವಸಹಿತಸ್ತತೋಯುದ್ಧಂಭವೇತ್ತವ । ವಿಭೀಷಣವಚಶ್ಶ್ರುತ್ವಾ ರಾವಣೋಪ್ಯೇತದಬ್ರವೀತ್ ॥೩೬ ॥ವಾನರಾಣಾಂಹಿಲಾಂಗೂಲೆ ಮಹಾಮಾನೋಭವೇತ್ಕಿಲ । ಅತೋವಸ್ತ್ರಾದಿಭಿಃಪುಚ್ಛಂವೇಷ್ಟಯಿತ್ವಾಪ್ರಯತ್ನತಃ॥ ೩೭॥ ವಹ್ನಿನಾಯೋಜಯಿತ್ವೈನಂ ಭ್ರಾಮಯಿತ್ವಾಪುರೇಭಿತಃ । ವಿಸರ್ಜಯತಪಶ್ಯಂತು ಸರ್ವೇ ವಾನರಯೂಥಪಾಃ ॥ ೩೮ ॥ ತಥೇತಿಶಣವಲ್ಕೈಶ್ಚ ವಸ್ತ್ರೈರನ್ಯೈರನೇಕಶಃ । ತೈಲಾಕ್ತೈರ್ವೇಷ್ಟಯಾಮಾಸುರ್ಲಾಂಗೂಲಂಮಾರುತೇರ್ದೃಢಂ ॥ ೩೯ ॥ ಪುಚ್ಛಾಗ್ರೇಕಿಂಚಿದನಲಂ ದೀಪಯಿತ್ವಾಥರಾಕ್ಷಸಾಃ । ರಜ್ಜುಭಿಃಸುದೃಢಂಬಧ್ವಾಧೃತ್ವಾತಂಬಲಿನೋಸುರಾಃ ॥ ೪೦ ॥ ಸಮಂತದ್ಭ್ರಾಮಯಾಮಾಸುಶ್ಚೋರೋಯಮಿತಿವಾದಿನಃ । ತೂರ್ಯಘೋಷೈರ್ಘೋಷಯಂತಸ್ತಾಡಯಂತೋಮುಹುರ್ಮು

ಸುಗ್ರೀವಸಹಿತಃ-ಸುಗ್ರೀವನಿಂದ ಕೂಡಿದವನಾದ, ರಾಮಃ-ರಾಮಚಂದ್ರನು, ದ್ರುತಂ-ಬೇಗನೆ, ಆಯಾಸ್ಯತಿ-ಬರುತ್ತಲಿದ್ದಾನೆ ॥ ೩೫ ॥ ತತಃ-ಆ ಬಳಿಕ, ತವ-ನಿನಗೆ, ಯುದ್ಧಂ-ರಾಮನ ಸಂಗಡ ಕೊಳ್ಳುಗುಳ್ಳುವು, ಭವಿಷ್ಯತಿ-ಆಗುತ್ತೆ, ವಿಭೀಷಣ-ವಿಭೀಷಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾವಣೋಪಿ-ರಾವಣನು, ಏತತ್-ಈ ಮಾತನ್ನು, ಅಬ್ರವೀತ್-ಹೇಳಿದನು ॥ ೩೬ ॥ ವಾನರಾಣಾಂ-ಕಪಿಗಳಿಗೆ, ಲಾಂಗೂಲೆ-ಬಾಲದಲ್ಲಿ, ಮಹಾಮಾನಃ-ಅಧಿಕವಾದ ಗೌರವವು, ಭವೇತ್ಕಿಲ-ಉಂಟಾಗಿರುತ್ತಷ್ಟೆ, ಅತಃ-ಆದ್ದರಿಂದ, ವಸ್ತ್ರಾದಿಭಿಃ-ಬಟ್ಟೆ ಮೊದಲಾದವುಗಳಿಂದ, ಪುಚ್ಛಂ-ಬಾಲವನ್ನು, ವೇಷ್ಟಯಿತ್ವಾ-ಸುತ್ತಿ, ಪ್ರಯತ್ನತಃ-ಪ್ರಯತ್ನದಿಂದ ॥ ೩೭ ॥ ವಹ್ನಿನಾ-ಬೆಂಕಿಯಿಂದ, ಯೋಜಯಿತ್ವಾ-ಹತ್ತಿಸಿ, ಏನಂ-ಈ ಕಪಿಯನ್ನು, ಪುರೇ-ಪಟ್ಟಣದಲ್ಲಿ, ಅಭಿತಃ-ಸುತ್ತಲೂ, ಭ್ರಾಮಯಿತ್ವಾ-ತಿರುಗಿಸಿ, ವಿಸರ್ಜಯತ-ಬಿಟ್ಟುಬಿಡಿರಿ, ಸರ್ವೇ-ಸಮಸ್ತರಾದ, ವಾನರಯೂಥಪಾಃ-ವಾನರ-ಕಪಿಗಳ, ಯೂಥ-ಸಮೂಹವನ್ನು, ಪಾಃ-ಕಾಪಾಡುವ ಕಪಿಗಳು, ಪಶ್ಯಂತು-ಸುಟ್ಟ ಬಾಲವನ್ನು ಈ ಕಪಿಯನ್ನು ನೋಡಲಿ ॥ ೩೮ ॥ ತಥೇತಿ-ಹಾಗೆಯೇ ಆಗಲೆಂದು, ತೈಲಾಕ್ತೈಃ-ಎಣ್ಣೆಯಲ್ಲಿ ನೆನಸಿದವುಗಳಾದ, ಶಣವಲ್ಕೈಃ-ಶಣಬಿನಿಂದಲೂ ಮರಗಳ ತ್ವಕ್ಕಿನಿಂದಲೂ ಮಾಡಲ್ಪಟ್ಟವುಗಳಾದ ಬಟ್ಟೆಗಳಿಂದಲೂ, ಅನ್ಯೈಃವಸ್ತ್ರೈಃ-ಅರಳೆ ರೇಷ್ಮೆ ಮುಂತಾದವುಗಳಿಂದ ಮಾಡಲ್ಪಟ್ಟ ಬಟ್ಟೆಗಳಿಂದಲೂ, ಅನೇಕಶಃ-ಅನೇಕ ಪ್ರಕಾರವಾಗಿ, ಮಾರುತೇಃ-ಆಂಜನೇಯನ, ಲಾಂಗೂಲಂ-ಬಾಲವನ್ನು, ದೃಢಂ-ಘಟ್ಟಿಯಾಗಿ, ವೇಷ್ಟಯಾಮಾಸುಃ-ಸುತ್ತಿದರು ॥ ೩೯ ॥ ಅಥ-ಆ ಬಳಿಕ, ರಾಕ್ಷಸಾಃ-ರಾಕ್ಷಸರು, ಪುಚ್ಛಾಗ್ರೇ-ಬಾಲದ ಕೊನೆಗೆ, ಕಿಂಚಿತ್-ಕೊಂಚವಾಗಿ, ಅನಲಂ-ಬೆಂಕಿಯನ್ನು, ದೀಪಯಿತ್ವಾ-ಹೊತ್ತಿಸಿ, ರಜ್ಜುಭಿಃ-ಹಗ್ಗಗಳಿಂದ, ಸುದೃಢಂ-ಭದ್ರವಾಗಿ, ಬಧ್ವಾ-ಕಟ್ಟಿ, ಬಲಿನಃ-ಬಲಿಷ್ಠರಾದ, ಅಸುರಾಃ-ರಾಕ್ಷಸರು, ತಂ-ಆಂಜನೇಯನನ್ನು, ಧೃತ್ವಾ-ಹಿಡಿದುಕೊಂಡು ॥ ೪೦ ॥ ಅಯಂ-ಈ ಕಪಿಯು, ಚೋರಃ-ಕಳ್ಳನು, ಇತಿ-ಹೀಗೆಂಬದಾಗಿ, ವಾದಿನಃ-ಹೇಳುತ್ತಿರುವವರಾಗಿ, ಸಮಂತಾತ್-ಪಟ್ಟಣದ ಯೆಲ್ಲಾ ಸ್ಥಳಗಳಲ್ಲಿ, ಭ್ರಾಮಯಾಮಾಸುಃ-ತಿರುಗಿಸಿದಂಥವರಾದರು, ತೂರ್ಯ-ತುತೂರಿಯ, ಘೋಷೈಃ-

ಹುಃ ॥ ೪೧ ॥ ಹನೂಮತಾಪಿತತ್ಸರ್ವಂ ಸೋಢಂಕಿಂಚಿಚ್ಚಿಕೀರ್ಷುಣಾ । ಗತ್ವಾತುಪಶ್ಚಿಮದ್ವಾರಸಮೀಪಂ ತತ್ರಮಾರುತಿಃ ॥ ೪೨ ॥ ಸೂಕ್ಷ್ಮೋಬಭೂವಬಂಧೇಭ್ಯೋ ನಿಸೃತಃಪುನರಪ್ಯಸೌ । ಬಭೂವಪರ್ವತಾಕಾರ ಸ್ತತಉತ್ಪ್ಲುತ್ಯಗೋಪುರಂ ॥ ೪೩ ॥ ತತ್ರೈಕಂಸ್ತಂಭಮಾದಾಯಹತ್ವಾತಾನ್ರಕ್ಷಿಣಃಕ್ಷಣಾತ್ । ವಿಚಾರ್ಯಕಾರ್ಯಶೇಷಂಸಃಪ್ರಾಸಾದಾಗ್ರಾದ್ಗೃಹಾದ್ಗೃಹಂ ॥ ೪೪ ॥ ಉತ್ಪ್ಲುತ್ಯೋತ್ಪ್ಲುತ್ಯಸಂದೀಪ್ತಪುಚ್ಛೇನಮಹತಾಕಪಿಃ । ದದಾಹಲಂಕಾಮಖಿಲಾಂಸಾಟ್ಟಪ್ರಾಕಾರತೋರಣಾಂ ॥ ೪೫ ॥ ಹಾತಾತಪುತ್ರನಾಥೇತಿ ಕ್ರಂದಮಾನಾಸ್ಸಮಂತತಃ । ವ್ಯಾಪ್ತಾಃಪ್ರಾಸಾದಶಿಖರೇ ಷ್ವಾರೂಢಾದೈತ್ಯಯೋಷಿತಃ ॥ ೪೬ ॥ ದೇವತಾಇವದೃಶ್ಯಂತೇಪತಂತ್ಯಃಪಾವಕೇಖಿಲಾಃ । ವಿಭೀಷಣಗೃಹಂತ್ಯಕ್ತ್ವಾಸರ್ವಂಭಸ್ಮೀ

ಧ್ವನಿಗಳಿಂದ, ಘೋಷಯಂತಃ-ಧ್ವನಿ ಮಾಡುತ್ತಿರುವವರಾಗಿ, ಮುಹುರ್ಮುಹುಃ-ಬಾರಿಬಾರಿಗೂ, ತಾಡಯಂತಃ-ಹೊಡೆಯುತ್ತಿರುವವರು (ಆವರು ॥ ೪೧ ॥ ಕಿಂಚಿತ್-ಲಂಕಾ ಪಟ್ಟಣದಲ್ಲಿ ಸೇನಾನಿವೇಶ ಕ್ರಮವನ್ನೂ ಗುಪ್ತಿ ಲಕ್ಷಣವನ್ನೂ ಆಯುಧ ಮುಂತಾದವುಗಳ ಸ್ಥಿತಿಯನ್ನೂ ಹಗಲು ಚೆನ್ನಾಗಿ ನೋಡಬೇಕೆಂದು, ಚಿಕೀರ್ಷುಣಾ-ಮಾಡಲಿಚ್ಛೆಯುಳ್ಳ, ಹನೂಮತಾ-ಆಂಜನೇಯನಿಂದ, ತತ್ಸರ್ವಂ-ಆ ರಾಕ್ಷಸರು ಮಾಡುತ್ತಿರುವ ತೊಂದರೆಗಳನ್ನೆಲ್ಲ, ಸೋಢಂ-ಸಹಿಸಲ್ಪಟ್ಟಿತು, ಮಾರುತಿಃ-ಆಂಜನೇಯನು, ಪಶ್ಚಿಮದ್ವಾರ-ಪಶ್ಚಿಮ ಕಡೆಯ ಬಾಗಿಲಿನ, ಸಮೀಪಂ-ಹತ್ತಿರವನ್ನು, ಗತ್ವಾ-ಹೊಂದಿ, ತತ್ರ-ಅಲ್ಲಿ, ಸೂಕ್ಷ್ಮಃ-ಸಣ್ಣ ರೂಪವುಳ್ಳವನು, ಬಭೂವ-ಆದನು, ಬಂಧೇಭ್ಯಃ-ಬಿಗಿದ ಹಗ್ಗಗಳ ಕಟ್ಟುಗಳಿಂದ, ನಿಸೃತಃ-ಈಚೆಗೆ ಹೊರಟು ಬಂದವನಾದ, ಅಸೌ-ಆಂಜನೇಯನು, ಪುನಃ-ತಿರಿಗಿ, ಪರ್ವತಾಕಾರಃ-ಬೆಟ್ಟಕ್ಕೆ ಸಮವಾದ ರೂಪವುಳ್ಳವನಾಗಿ, ತತಃ-ಅಲ್ಲಿಂದ, ಗೋಪುರಂ-ಗೋಪುರವನ್ನು ಕುರಿತು, ಉತ್ಪ್ಲುತ್ಯ-ಹಾರಿ ॥ ೪೩ ॥ ತತ್ರ-ಆ ಗೋಪುರದಲ್ಲಿ, ಏಕಂ-ಒಂದಾದ, ಸ್ತಂಭಂ-ಕಂಭವನ್ನು, ಆದಾಯ-ತೆಗೆದುಕೊಂಡು, ತಾನ್-ಆ, ರಕ್ಷಿಣಃ-ಕಾವಲುಗಾರರನ್ನು, ಕ್ಷಣಾತ್-ನಿಮಿಷದಲ್ಲಿ, ಹತ್ವಾ-ಕೊಂದು, ಸಃ-ಆಂಜನೇಯನು, ಕಾರ್ಯಶೇಷಂ-ಉಳಿದಿರುವ ಕಾರ್ಯವನ್ನು, ವಿಚಾರ್ಯ-ಯೋಚಿಸಿ, ಪ್ರಾಸಾದ-ಸೌಧದ, ಅಗ್ರಾತ್-ಕೊನೆಯಿಂದ, ಗೃಹಾದ್ಗೃಹಂ-ಮನೆಯಿಂದ ಮನೆಗೆ ॥ ೪೪ ॥ ಉತ್ಪ್ಲುತ್ಯೋತ್ಪ್ಲುತ್ಯ-ಹಾರಿಹಾರಿ, ಮಹಾಕಪಿಃ-ಆಂಜನೇಯನು, ಮಹತಾ-ಹೆಚ್ಚಾದ, ಸಂದೀಪ್ತಪುಚ್ಛೇನ-ಸಂದೀಪ್ತ-ಬೆಂಕಿಯನ್ನು ಹಚ್ಚಿಸಿದ್ದರಿಂದ ಉರಿಯುತ್ತಿರುವ, ಪುಚ್ಛೇನ-ಬಾಲದಿಂದ, ಸಾಟ್ಟಪ್ರಾಕಾರತೋರಣಾಂ-ಅಟ್ಟ-ಕೋಟೆ ಬಾಗಿಲುಗಳ ಮೇಲೆ ಇರತಕ್ಕ ಮನೆ, ಪ್ರಾಕಾರ-ಕೋಟೆ ತೋರಣಗಳು ಇವುಗಳಿಂದ ಕೂಡಿರುವ, ಅಖಿಲಾಂ-ಸಮಸ್ತವಾದ, ಲಂಕಾಂ-ಲಂಕಾ ಪಟ್ಟಣವನ್ನು, ದದಾಹ-ಸುಟ್ಟನು ॥ ೪೫ ॥ ಹಾತಾತ-ಅಯ್ಯೋ ತಂದೆಯೇ, ನಾಥ-ಗಂಡನೇ, ಪುತ್ರ-ಮಗನೇ, ಇತಿ-ಹೀಗೆಂಬದಾಗಿ, ಕ್ರಂದಮಾನಾಃ-ಕೂಗುತ್ತಿರುವ, ಸಮಂತತಃ-ಸುತ್ತಲೂ, ಪ್ರಾಸಾದ-ಉಪ್ಪರಿಗೆಗಳ, ಶಿಖರೇಷು-ಕೊನೆಗಳಲ್ಲಿ, ಆರೂಢಾಃ-ಹತ್ತಿರುವ, ದೈತ್ಯಯೋಷಿತಃ-ರಾಕ್ಷಸ ಸ್ತ್ರೀಯರು ॥ ೪೬ ॥

ಕೃತಂಪುರಂ ॥೪೭॥ ತತಉತ್ಪ್ಲುತ್ಯಜಲಧೌ ಹನೂಮಾನ್ಮಾರುತಾತ್ಮಜಃ। ಲಾಂಗೂಲಂ ಮಜ್ಜಯಿತ್ವಾಂತಃ ಸ್ವಸ್ಥಚಿತ್ತೋ ಬಭೂವಸಃ ॥ ೪೮ ॥ ವಾಯೋಃಪ್ರಿಯಸಖಿತ್ವಾಚ್ಚ ಸೀತಯಾಪ್ರಾರ್ಥಿತೋನಲಃ। ನದದಾಹಹರೇಃಪುಚ್ಛಂ ಬಭೂವಾತ್ಯಂತ ಶೀತಲಃ ॥ ೪೯ ॥ ಯನ್ನಾಮಸಂಸ್ಮರಣಧೂತಸಮಸ್ತಪಾಪಾಸ್ತಾಪತ್ರಯಾನಲಮಪೀಹತರಂತಿಸದ್ಯಃ ॥ ತಸ್ಯೈವ ಕಿಂರಘುವರಸ್ಯವಿಶಿಷ್ಟದೂತಃ ಸಂತಪ್ಯತೇಕಥಮಸೌಪ್ರಕೃತಾನಲೇನ ॥ ... ... ... ॥ ೫೦ ॥

——**ಇತಿಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಸುಂದರಕಾಂಡೇ ಚತುರ್ಥಸ್ಸರ್ಗಃ**——

ಅಖಿಲಃ-ಸಮಸ್ತರೂ, ಪಾವಕೇ-ಬೆಂಕಿಯಲ್ಲಿ, ಪತಂತ್ಯಃ-ಬೀಳುತ್ತಿರುವವರಾಗಿ, ದೇವತಾಃಇವ-ಸ್ವರ್ಗದಿಂದ ಬೀಳುತ್ತಿರುವ ದೇವತೆಗಳ ಹೆಂಗಸರೋ ಯೆಂಬಂತೆ, ದೃಶ್ಯಂತೇ-ಕಾಣುತ್ತಿದ್ದರು, ವಿಭೀಷಣ-ವಿಭೀಷಣನ, ಗೃಹಂ-ಮನೆಯನ್ನು, ತ್ಯಕ್ತ್ವಾ-ಬಿಟ್ಟು, ಸರ್ವಂ-ಎಲ್ಲಾ, ಪುರಂ-ಪಟ್ಟಣವು, ಭಸ್ಮೀಕೃತಂ-ಭಸ್ಮವಾಗಿ ಮಾಡಲ್ಪಟ್ಟಿತು ॥ ೪೭ ॥ ತತಃ-ಆಮೇಲೆ, ಉತ್ಪ್ಲುತ್ಯ-ಹಾರಿ, ಮಾರುತಾತ್ಮಜಃ-ವಾಯುಪುತ್ರನಾದ, ಹನೂಮಾನ್-ಆಂಜನೇಯನು, ಜಲಧೌ-ಸಮುದ್ರದಲ್ಲಿ, ಲಾಂಗೂಲಂ-ಬಾಲವನ್ನು, ಅಂತಃ-ನೀರಿನೊಳಗೆ, ಮಜ್ಜಯಿತ್ವಾ-ಮುಳುಗಿಸಿ, ಸಃ-ಆಂಜನೇಯನು, ಸ್ವಸ್ಥಚಿತ್ತಃ-ಸ್ಥಿರಚಿತ್ತನಾದವನು, ಬಭೂವ-ಆದನು ॥ ೪೮ ॥ ವಾಯೋಃ-ವಾಯುವಿಗೆ, ಪ್ರಿಯ-ಇಷ್ಟನಾದ, ಸಖಿತ್ವಾಚ್ಚ-ಮಿತ್ರನಾಗಿರುವುದರಿಂದಲೂ, ಸೀತಯಾ-ಸೀತಾದೇವಿಯಿಂದ, ಪ್ರಾರ್ಥಿತಃ-ಬೇಡಲ್ಪಟ್ಟವನಾದ, ಅನಲಃ-ಬೆಂಕಿಯು, ಹರೇಃ-ಆಂಜನೇಯನ, ಪುಚ್ಛಂ-ಬಾಲವನ್ನು, ನದದಾಹ-ಸುಡಲಿಲ್ಲ, ಅತ್ಯಂತ-ಅತಿಶಯವಾಗಿ, ಶೀತಲಃ-ತಣ್ಣಗುಳ್ಳವನು, ಬಭೂವ-ಆಗಿದ್ದನು ॥ ೪೯ ॥ ಯನ್ನಾಮ-ಯಾವ ರಾಮಚಂದ್ರನ ಹೆಸರಿನ, ಸ್ಮರಣಂ-ಧ್ಯಾನ ಮಾಡುವದರಿಂದ, ಧೂತ-ಹೋದಂಥಾ, ಪಾಪಾಃ-ಪಾಪವುಳ್ಳ ಜನರು, ತಾಪತ್ರಯಾನಲಮಪಿ-ತಾಪತ್ರಯ-ಆಧ್ಯಾತ್ಮಿಕ, ಆಧಿದೈವಿಕ, ಆದಿ ಭೌತಿಕಗಳೆಂಬ ತಾಪತ್ರಯರೂಪವಾದ ಬೆಂಕಿಯನ್ನು, ಇಹ-ಈ ಲೋಕದಲ್ಲಿ, ಸದ್ಯಃ-ಈಗಲೇ, ತರಂತಿ-ದಾಟುತ್ತಲಿದ್ದಾರೆ, ತಸ್ಯ-ಅಂಥಾವನಾದ, ರಘುವರಸ್ಯೈವ-ರಾಮಚಂದ್ರನಿಗೇನೇ, ವಿಶಿಷ್ಟ-ಮುಖ್ಯನಾದ, ದೂತಃ-ಸೇವಕನಾದ, ಅಸೌ-ಆಂಜನೇಯನು, ಪ್ರಕೃತಾನಲೇನ-ಈಗಿನ ಬೆಂಕಿಯಿಂದ, ಕಥಂ-ಹ್ಯಾಗೆ, ಸಂತಪ್ಯತೇ-ಸಂತಾಪಿಸಲ್ಪಟ್ಟಾನು. ... ... ... ॥ ೫೦ ॥

—·*ಇಂತು ಅಧ್ಯಾತ್ಮರಾಮಾಯಣದೊಳುಮಾಮಹೇಶ್ವರ ಸಂವಾದದೊಳು ಸುಂದರಕಾಂಡದಲ್ಲಿ ನಾಲ್ಕನೆಯ ಸರ್ಗವು.*·—

ಶ್ರೀಮಹಾದೇವಉವಾಚ ॥ ೧ ॥ ತತಸ್ಸೀತಾಂನಮಸ್ಕೃತ್ಯಹನೂಮಾನಬ್ರವೀದ್ವಚಃ । ಆಜ್ಞಾಪಯಮಾಂ
ದೇವಿಭವತೀರಾಮಸನ್ನಿಧಿಂ ॥ ೨ ॥ ಗಚ್ಛಾಮಿರಾಮಸ್ತ್ವಾಂದ್ರಷ್ಟುಮಾಗಮಿಷ್ಯತಿಸಾನುಜಃ । ಇತ್ಯುಕ್ತ್ವಾತ್ರಿಃಪ
ರಿಕ್ರಮ್ಯಜಾನಕೀಂಮಾರುತಾತ್ಮಜಃ ॥ ೩ ॥ ಪ್ರಣಮ್ಯಪ್ರಸ್ಥಿತೋಗಂತುಮಿದಂವಚನಮಬ್ರವೀತ್ । ದೇವಿಗಚ್ಛಾಮಿಭ
ದ್ರಂತೇ ತೂರ್ಣಂದ್ರಕ್ಷ್ಯಸಿರಾಘವಂ ॥ ೪ ॥ ಲಕ್ಷ್ಮಣಂಚಸಸುಗ್ರೀವಂ ವಾನರಾಯುತಕೋಟಿಭಿಃ । ತತಃಪ್ರಾಹಹ
ನೂಮಂತಂಜಾನಕೀದುಃಖಕರ್ಶಿತಾ ॥ ೫ ॥ ತ್ವಾಂದೃಷ್ಟ್ವಾವಿಸ್ಮೃತಂದುಃಖಮಿದಾನೀಂತ್ವಂಗಮಿಷ್ಯಸಿ । ಇತಃಪ
ರಂಕಥಂವರ್ತೇರಾಮವಾರ್ತಾಶ್ರುತಿಂವಿನಾ ॥ ೬ ॥ ಮಾರುತಿರುವಾಚ ॥ ೭ ॥ ಯದ್ಯೇವಂದೇವಿಮೇಸ್ಕಂಧಮಾರೋಹಕ್ಷಣ

. ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ ॥ ೧ ॥ ತತಃ-ಲಂಕಾದಹನಾನಂತರದಲ್ಲಿ, ಹನೂಮಾನ್-ಆಂಜನೇಯನು, ಸೀತಾಂ-ಸೀತೆಯನ್ನು ಕುರಿತು, ನಮ ಸ್ಕೃತ್ಯ-ವಂದಿಸಿ, ವಚಃ-ಮಾತನ್ನು, ಅಬ್ರವೀತ್-ಹೇಳಿದನು,—ಹೇದೇವಿ-ತಾಯಿಯೇ, ರಾಮ-ರಾಮಚಂದ್ರನ, ಸನ್ನಿಧಿಂ-ಬಳಿಯನ್ನು ಕುರಿತು, (ಅಹಂ-ನಾನು, ಗಚ್ಛಾಮಿ-ಹೋಗು ತ್ತೇನೆ,) ಭವತೀ-ನೀನು, ಮಾಂ-ನನ್ನನ್ನು ಕುರಿತು, ಆಜ್ಞಾಪಯತು-ಅಪ್ಪಣೆಗೊಡು ॥ ೨ ॥ ಸಾನುಜಃ-ತಮ್ಮನಿಂದ ಕೂಡಿರುವ, ರಾಮಃ-ರಾಮಚಂದ್ರನು, ತ್ವಾಂ-ನಿನ್ನನ್ನು, ದ್ರ ಷ್ಟುಂ-ನೋಡುವದಕ್ಕೆ, ಆಗಮಿಷ್ಯತಿ-ಬರುತ್ತಲಿದ್ದಾನೆ, ಇತಿ-ಹೀಗೆ, ಉಕ್ತ್ವಾ-ಹೇಳಿ, ಜಾನಕೀಂ-ಸೀತೆಯನ್ನು, ತ್ರಿಃ-ಮೂರು ಬಾರಿ, ಪರಿಕ್ರಮ್ಯ-ಪ್ರದಕ್ಷಿಣ ಮಾಡಿ॥೩॥ ಪ್ರಣಮ್ಯ-ನಮಸ್ಕರಿಸಿ, ಗಂತುಂ-ಪ್ರಯಾಣ ಮಾಡುವದಕ್ಕೆ, ಪ್ರಸ್ಥಿತಃ-ಸಿದ್ಧನಾಗಿರುವವನಾಗಿ, ಇದಂ-ಈ, ವಚನಂ-ಮಾತನ್ನು, ಅಬ್ರವೀತ್-ಹೇಳಿದನು, ದೇವಿ-ಎಲೆ ತಾಯಿಯೇ, ಗಚ್ಛಾ ಮಿ-ಹೊರಟು ಹೋಗುತ್ತೇನೆ, ತೇ-ನಿನಗೆ, ಭದ್ರಂ-ಮಂಗಳವು, (ಅಸ್ತು-ಆಗಲಿ,) ರಾಘವಂ-ರಾಮಚಂದ್ರನನ್ನು, ತೂರ್ಣಂ-ಬೇಗನೆ, ದ್ರಕ್ಷ್ಯಸಿ-ನೋಡುತ್ತಲಿದ್ದೀ ॥ ೪ ॥ ವಾನರ-ಕಪಿ ಗಳ, ಆಯುತಕೋಟಿಭಿಃ-ಹತ್ತು ಸಾವಿರ ಕೋಟಿಗಳಿಂದ ಕೂಡಿದ, ಸಸುಗ್ರೀವಂ-ಸುಗ್ರೀವ ಸಮೇತನಾದ, ಲಕ್ಷ್ಮಣಂ-ಲಕ್ಷ್ಮಣನನ್ನು, ದ್ರಕ್ಷ್ಯಸಿ-ನೋಡುತ್ತಲಿದ್ದೀ, ತತಃ-ಆ ಬಳಿ ಕ, ದುಃಖ-ವ್ಯಸನದಿಂದ, ಕರ್ಶಿತಾ-ಕೃಶಳಾದ, ಜಾನಕೀ-ಸೀತೆಯು, ಹನೂಮಂತಂ-ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದಳು ॥೫॥ ತ್ವಾಂ-ನಿನ್ನನ್ನು, ದೃಷ್ಟ್ವಾ-ನೋಡಿ, ದುಃಖಂ-ವ್ಯಸನವು, ವಿಸ್ಮೃತಂ-ಮರೆಯಿತು, ಇದಾನೀಂ-ಈಗ, ತ್ವಂ-ನೀನು, ಗಮಿಷ್ಯಸಿ-ಹೋಗುತಲಿದ್ದೀ, ಇತಃಪರಂ-ಇನ್ನು ಮೇಲೆ, ರಾಮವಾರ್ತಾಶ್ರುತಿಂ-ರಾಮ-ರಾಮ ಚಂದ್ರನ, ವಾರ್ತಾ-ಸಮಾಚಾರದ, ಶ್ರುತಿಂ-ಶ್ರವಣವನ್ನು, ವಿನಾ-ಬಿಟ್ಟು, ಕಥಂವರ್ತೇ-ನಾನು ಹ್ಯಾಗೆ ಇರಲಿ ॥ ೬ ॥ ಮಾರುತಿಃ-ಆಂಜನೇಯನು, ಉವಾಚ-ಹೇಳಿದನು, ॥ ೭ ॥ ದೇ ವಿ-ತಾಯಿಯಾದ, ಜಾನಕೀ-ಸೀತೆಯೇ, ಏವಂಯದಿ-ನಾಮ ವೃತ್ತಾಂತವನ್ನು ಕೇಳದೇ ಇನ್ನು ಮೇಲೆ ಬದುಕುವದು ಅಸಾಧ್ಯವಾಗಿದ್ದರೆ, ಮೇ-ನನ್ನ, ಸ್ಕಂಧಂ-ಭುಜವನ್ನು, ಆರೋಹ-

ಮಾತ್ರತಃ । ರಾಮೇಣಯೋಜಯಿಷ್ಯಾಮಿಮನ್ಯಸೆಯದಿಜಾನಕಿ ॥ ೮ ॥ ಸೀತೋವಾಚ ॥ ೯ ॥ ರಾಮಸ್ಸಾಗರಮಾಕ್ಷೋ
ಭ್ಯಬಧ್ವಾವಾಶರಪಂಜರೈಃ । ಆಗತ್ಯವಾನರೈಸ್ಸಾರ್ಧಂಹತ್ವಾರಾವಣಮಾಹವೆ ॥ ೧೦ ॥ ಮಾಂನಯೇದ್ಯದಿರಾಮಸ್ಯ
ಕೀರ್ತಿರ್ಭವತಿಶಾಶ್ವತೀ । ಅತೋಗಚ್ಛಕಥಂಚಾಪಿ ಪ್ರಾಣಾನ್ಸಂಧಾರಯಾಮ್ಯಹಂ ॥ ೧೧ ॥ ಇತಿಪ್ರಸ್ಥಾಪಿತೋ ವೀರಃ
ಸೀತಯಾಪ್ರಣಿಪತ್ಯತಾಂ । ಜಗಾಮಪರ್ವತಸ್ಯಾಗ್ರೆ ಗಂತುಂಪಾರಂಮಹೋದಧೇಃ ॥ ೧೨ ॥ ತತ್ರಗತ್ವಾಮಹಾಸತ್ವಃ
ಪಾದಾಭ್ಯಾಂಪೀಡಯನ್ಗಿರಿಂ । ಜಗಾಮವಾಯುವೇಗೆ ನಪರ್ವತಶ್ಚಮಹೀತಲಂ ॥ ೧೩ ॥ ತತೋಮಹೀಸಮಾಸತ್ವಂ

ಹತ್ತಿದವಳಾಗು, ಕ್ಷಣಮಾತ್ರತಃ-ನಿಮಿಷ ಮಾತ್ರದಲ್ಲಿ, ಮನ್ಯಸೆಯದಿ-ರಾಮನ ಸಮೀಪಕ್ಕೆ ಬರುವ ಅಪೇಕ್ಷೆಯುಳ್ಳವಳಾದರೆ, ರಾಮೇಣ-ರಾಮಚಂದ್ರನ ಸಂಗಡ, ಯೋಜಯಿಷ್ಯಾಮಿ-ಸೇರಿಸುತ್ತೇನೆ ॥ ೮ ॥ ಜಾನಕೀಉವಾಚ-ಸೀತೆಯು ಹೇಳುತ್ತಿದ್ದಾಳೆ ॥ ೯ ॥ ರಾಮಃ-ರಾಮಚಂದ್ರನು, ಸಾಗರಂ-ಸಮುದ್ರವನ್ನು, ಆಕ್ಷೋಭ್ಯ-ಬಾಗಿಸಿ, ಶರ-ಬಾಣಗಳ, ಪಂಜರೈಃ-ಜೋಡಿಸುವದರಿಂದ, ಸಾಗರಂ-ಸಮುದ್ರವನ್ನು, ಬಧ್ವಾ-ಸೇತುವೆಯೆನ್ನಾದರೂ ಕಟ್ಟಿ, ವಾನರೈಃಸಾರ್ಧಂ-ಕಪಿಗಳ ಸಂಗಡ, ಆಗತ್ಯ-ಬಂದು, ಆಹವೆ-ಯುದ್ಧದಲ್ಲಿ, ರಾವಣಂ-ರಾವಣನನ್ನು, ಹತ್ವಾ-ಕೊಂದು ॥ ೧೦ ॥ ಮಾಂ-ನನ್ನನ್ನು, ನಯೆದ್ಯದಿ-ಕರೆದುಕೊಂಡು ಹೋದರೆ, ರಾಮಸ್ಯ-ರಾಮಚಂದ್ರನಿಗೆ, ಶಾಶ್ವತೀ-ಸ್ಥಿರವಾದ, ಕೀರ್ತಿ-ಯಶಸ್ಸು, ಭವತಿ-ಉಂಟಾಗುತ್ತೆ, ಅತಃ-ಆದ್ದರಿಂದ, ಗಚ್ಛ-ನೀನು ಹೋಗು, ಅಹಂ-ನಾನು, ಕಥಂಚಾಪಿ-ಹ್ಯಾಗಾದರೂ, ಪ್ರಾಣಾನ್-ಪ್ರಾಣಗಳನ್ನು, ಸಂಧಾರಯಾಮಿ-ಇಟ್ಟುಕೊಂಡಿರುತ್ತೇನೆ ॥ ೧೧ ॥ ಇತಿ-ಹೀಗೆಂದು, ಸೀತಯಾ-ಸೀತೆಯಿಂದ, ಪ್ರಸ್ಥಾಪಿತಃ-ಹೇಳಿ ಕಳುಹಿಸಲ್ಪಟ್ಟವನಾದ, ವೀರಃ-ಶೂರನಾದ ಆಂಜನೇಯನು, ತಾಂ-ಆ ಸೀತೆಯನ್ನು ಕುರಿತು, ಪ್ರಣಿಪತ್ಯ-ನಮಸ್ಕಾರ ಮಾಡಿ, ಮಹೋದಧೇಃ-ಸಮುದ್ರದ, ಪಾರಂ-ದಡವನ್ನು ಕುರಿತು, ಗಂತುಂ-ಹೋಗುವದಕ್ಕೆ, ಪರ್ವತಸ್ಯ-ಬೆಟ್ಟದ, ಅಗ್ರೆ-ಮೇಲಿನ ಭಾಗಕ್ಕೆ, ಜಗಾಮ-ಹತ್ತಿಹೋದನು ॥ ೧೨ ॥ ತತ್ರ-ಬೆಟ್ಟದ ಮೇಲಕ್ಕೆ, ಗತ್ವಾ-ಹೋಗಿ, ಮಹಾಸತ್ವ-ಅಧಿಕ ಶಕ್ತಿವಂತನಾದ ಆಂಜನೇಯನು, ಪಾದಾಭ್ಯಾಂ-ಕಾಲುಗಳಿಂದ, ಗಿರಿಂ-ಬೆಟ್ಟವನ್ನು, ಪೀಡಯನ್-ಅಮುಕುತ್ತಿರುವವನಾಗಿ, ವಾಯುಃ-ವಾಯುವಿಗೆ ಸಮನಾದ, ವೇಗೆನ-ವೇಗದಿಂದ, ಜಗಾಮ-ಹೊರಟು ಹೋದನು, ಪರ್ವತಶ್ಚ-ಬೆಟ್ಟವು, ಮಹೀತಲಂ-ಭೂಮಿಯೆನ್ನು ಕುರಿತು, (ಜಗಾಮ-ತಗ್ಗಿ ಹೋಯಿತು.) ॥ ೧೩ ॥ ತತಃ-ಬೆಟ್ಟದಿಂದ ಹಾರಿದ ಬಳಿಕ, ಮಾರುತಿಃ-ಆಂಜನೇಯನು, ತ್ರಿಂಶದ್ಯೋಜನಮುಚ್ಛ್ರಿತಃ-ತ್ರಿಂಶತ್-ಯೋಜನ-ಮೂವತ್ತು ಯೋಜನಗಳವರೆಗೂ, ಉಚ್ಛ್ರಿತಃ-ಭೂಮಿಗೆ ಉನ್ನತನಾಗಿದ್ದಾಗ್ಯೂ, ಮಹೀಸಮಾಸತ್ವಂ-ಮಹೀ-ಭೂಮಿಗೆ, ಸಮಾಸತ್ವಂ-ಸಮತ್ವವನ್ನು ಹೊಂದಿದವನಾಗಿ, (ಜಗಾಮ-ಹೊರಟು ಹೋದನು.) ಗಗನ-ಆಕಾಶದ, ಅಂತಸ್ಥಃ-ನಡುವೆ ಇರುವವನಾಗಿ, ಸಃ-ಆಂಜನೇಯನು, ಮಹಾಶಬ್ದಂ-ಮಹಾ ಧ್ವನಿಯನ್ನು, ಚಕಾರ-ಮಾಡಿದನು ॥ ೧೪ ॥ ತಂ-ಆ ಶಬ್ದವನ್ನು, ಶ್ರುತ್ವಾ-ಕೇಳಿ,

ತ್ರಿಂಶದ್ಯೋಜನಮುಚ್ಛ್ರಿತಃ । ಮಾರುತಿರ್ಗಗನಾಂತಸ್ಥೋ ಮಹಾಶಬ್ದಂಚಕಾರಸಃ ॥ ೧೪ ॥ ತಂಶ್ರುತ್ವಾವಾನರಾಸ್ಸರ್ವೇ ಜ್ಞಾತ್ವಾಮಾರುತಿಮಾಗತಂ । ಹರ್ಷೇಣಮಹತಾವಿಷ್ಟಾಃಶಬ್ದಂಚಕ್ರುರ್ಮಹಾಸ್ವನಂ ॥ ೧೫ ॥ ಶಬ್ದೇನೈವ ವಿಜಾನೀಮಃಕೃತಕಾರ್ಯಸ್ಸಮಾಗತಃ । ಹನೂಮಾನೇವಪಶ್ಯಧ್ವಂವಾನರಾವಾನರರ್ಷಭಂ ॥ ೧೬ ॥ ಏವಂಬ್ರುವತ್ಸುವೀರೇಷು ವಾನರೇಷುಸಮಾರುತಿಃ । ಅವತೀರ್ಯಗಿರೇರ್ಮೂರ್ಧ್ನಿ ವಾನರಾನಿದಮಬ್ರವೀತ್ ॥ ೧೭ ॥ ದೃಷ್ಟಾಸೀತಾಮಯಾಲಂಕಾಧರ್ಷಿತಾಚಸಕಾನನಾ । ಸಂಭಾಷಿತೋದಶಗ್ರೀವಸ್ತತೋಹಂಪುನರಾಗತಃ ॥ ೧೮ ॥ ಇದಾನೀಮೇವಗಚ್ಛಾಮೋರಾಮಸುಗ್ರೀವಸನ್ನಿಧಿಂ । ಇತ್ಯುಕ್ತಾವಾನರಾಸ್ಸರ್ವೇಹರ್ಷೇಣಾಲಿಂಗ್ಯಮಾರುತಿಂ ॥ ೧೯ ॥ ಕೇಚಿಚ್ಚುಚುಂಬುಃಲಾಂಗೂ

ಸರ್ವೇ-ಸಮಸ್ತರಾದ, ವಾನರಾಃ-ಕಪಿಗಳು, ಮಾರುತಿಂ-ಹನುಮಂತನನ್ನು, ಆಗತಂ-ಬಂದವನನ್ನಾಗಿ, ಜ್ಞಾತ್ವಾ-ತಿಳಿದು, ಮಹತಾ-ಹೆಚ್ಚಾದ, ಹರ್ಷೇಣ-ಸಂತೋಷದಿಂದ, ಆವಿಷ್ಟಾಃ-ಕೂಡಿದವರಾಗಿ, ಮಹಾಸ್ವನಂ-ಪ್ರತಿಧ್ವನಿಯಾದ, ಶಬ್ದಂ-ಶಬ್ದವನ್ನು, ಚಕ್ರುಃ-ಮಾಡಿದರು ॥ ೧೫ ॥ ಹನೂಮಾನೇವ-ಆಂಜನೇಯನೇ, ಕೃತಕಾರ್ಯಃ-ಕೆಲಸ ಮಾಡಿದವನಾಗಿ, ಸಮಾಗತಃ-ಬಂದನು (ಎಂಬುದಾಗಿ,) ಶಬ್ದೇನೈವ-ಧ್ವನಿಯಿಂದಲೇ, ವಿಜಾನೀಮಃ-ತಿಳಿದವರಾಗಿದ್ದೇವೆ, ವಾನರಾಃ-ಕಪಿಗಳೇ, ವಾನರರ್ಷಭಂ-ಕಪಿಶ್ರೇಷ್ಠನಾದ ಆಂಜನೇಯನನ್ನು, ಪಶ್ಯಧ್ವಂ-ಆಂಜನೇಯನೇನೋ ಅಲ್ಲವೋ ನೋಡಿರಿ ॥ ೧೬ ॥ ವೀರೇಷು-ಶೂರರಾದ, ವಾನರೇಷು-ಕಪಿಗಳು, ಏವಂ-ಹೀಗೆ, ಬ್ರುವತ್ಸುಸತ್ಸು-ಹೇಳುತ್ತಿರುವಾಗ್ಗೇ, ಸಃಮಾರುತಿಃ-ಆ ಆಂಜನೇಯನು, ಗಿರೇಃ-ಪರ್ವತದ, ಮೂರ್ಧ್ನಿ-ಶಿಖರದಲ್ಲಿ, ಅವತೀರ್ಯ-ಇಳಿದು, ವಾನರಾನ್-ಕಪಿಗಳನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀತ್-ಹೇಳಿದನು ॥ ೧೭ ॥ ಮಯಾ-ನನ್ನಿಂದ, ಸೀತಾ-ಸೀತೆಯು, ದೃಷ್ಟಾ-ನೋಡಲ್ಪಟ್ಟಳು, ಸಕಾನನಾ-ವನಗಳಿಂದ ಕೂಡಿರುವ, ಲಂಕಾ-ಲಂಕಾ ಪಟ್ಟಣವು, ಧರ್ಷಿತಾ-ನಾಶ ಮಾಡಲ್ಪಟ್ಟಿತು, ದಶಗ್ರೀವಃ-ರಾವಣನು, ಸಂಭಾಷಿತಃ-ಮಾತನಾಡಿಸಲ್ಪಟ್ಟನು, ತತಃ-ಆ ಬಳಿಕ, ಅಹಂ-ನಾನು, ಪುನಃ-ತಿರಿಗಿ, ಆಗತಃ-ಬಂದವನಾದೆನು ॥ ೧೮ ॥ ಇದಾನೀಮೇವ-ಈಗಲೇ, ರಾಮಸುಗ್ರೀವ-ರಾಮ ಸುಗ್ರೀವರ, ಸನ್ನಿಧಿಂ-ಸಮೀಪವನ್ನು ಕುರಿತು, ಗಚ್ಛಾಮಃ-ಹೋಗೋಣ, ಇತಿ-ಹೀಗೆಂದು, ಉಕ್ತಾಃ-ಹೇಳಲ್ಪಟ್ಟವರಾದ, ಸರ್ವೇ-ಸಮಸ್ತರಾದ, ವಾನರಾಃ-ಕಪಿಗಳು, ಹರ್ಷೇಣ-ಸಂತೋಷದಿಂದ, ಮಾರುತಿಂ-ಆಂಜನೇಯನನ್ನು, ಆಲಿಂಗ್ಯ-ಅಪ್ಪಿಕೊಂಡು ॥ ೧೯ ॥ ಕೇಚಿತ್-ಕೆಲವರು, ಲಾಂಗೂಲಂ-ಆಂಜನೇಯನ ಬಾಲವನ್ನು, ಚುಚುಂಬುಃ-ಮುದ್ದಿಟ್ಟರು ಕೇಚಿತ್-ಕೆಲವರು, ಉತ್ಸುಕಾಃ-ಕುತೂಹಲವುಳ್ಳವರಾಗಿ, ನನೃತುಃ-ನಾಟ್ಯವನ್ನು ಮಾಡಿದರು, ಹನುಮತಾ-ಆಂಜನೇಯನಿಂದ, ಸಮೇತಾಃ-ಕೂಡಿದವರಾದ, ತೇ-ಆ ಕಪಿ

ಲಂನನ್ನೃತುಃಕೇಚಿದುತ್ಸುಕಾಃ । ಹನೂಮತಾಸಮೇತಾಸ್ತೇಜಗ್ಮುಃಪ್ರಸ್ರವಣಂಗಿರಿಂ ‖ ೧೦ ‖ ಗಚ್ಛಂತೋದದೃಶುರ್ವೀರಾವನಂಸುಗ್ರೀವರಕ್ಷಿತಂ । ಮಧುಸಂಜ್ಞಂತದಾಪ್ರಾಹು ರಂಗಂದಂವಾನರರ್ಷಭಾಃ ‖ ೧೧ ‖ ಕ್ಷುಧಿತಾಸ್ಸ್ಮೋವಯಂವೀರದೇಹ್ಯನುಜ್ಞಾಂಮಹಾಮತೇ । ಭಕ್ಷಯಾಮಃಫಲಾನ್ಯದ್ಯಪಿಬಾಮೋಮೃತವನ್ಮಧು ‖ ೧೨ ‖ ಸಂತುಷ್ಟಾ ರಾಘವಂದ್ರಷ್ಟುಂಗಚ್ಛಾಮೋದ್ಯೈವಸಾನುಜಂ ‖ ೧೩ ‖ ಅಂಗದಉವಾಚ ‖ ೧೪ ‖ ಹನೂಮಾನ್ಕೃತಕಾರ್ಯೋಯಂಪಿಬತ್ವೇತತ್ಪ್ರಸಾದತಃ । ಜಕ್ಷಧ್ವಂಫಲಮೂಲಾನಿತ್ವರಿತಂಹರಿಸತ್ತಮಾಃ ‖ ೧೫ ‖ ತತಃಪ್ರವಿಶ್ಯಹರಯಃ ಪಾತುಮಾರೇಭಿರೇಮಧು । ರಕ್ಷಿಣಸ್ತಾನನಾದೃತ್ಯದಧಿವಕ್ತ್ರೇಣನೋದಿತಾನ್ ‖ ೧೬ ‖ ಪಿಬತಸ್ತಾಡಯಾಮಾಸುರ್ವಾನರಾನ್ವಾನರರ್ಷಭಾಃ।

ಗಳು, ಪ್ರಸ್ರವಣಂ-ಪ್ರಸ್ರವಣವೆಂಬ, ಗಿರಿಂ-ಪರ್ವತವನ್ನು ಕುರಿತು, ಜಗ್ಮುಃ-ಹೊರಟು ಹೋದರು ‖ ೧೦ ‖ ವೀರಾಃ-ಶೂರರಾದ, ವಾನರರ್ಷಭಾಃ-ಕಪಿಶ್ರೇಷ್ಠರಾದ ಕಪಿಗಳು, ಗಚ್ಛಂತಃ-ಮಾರ್ಗದಲ್ಲಿ ಹೋಗುತ್ತಿರುವವರಾಗಿ, ಸುಗ್ರೀವ-ಸುಗ್ರೀವನಿಂದ, ರಕ್ಷಿತಂ-ಕಾಪಾಡಲ್ಪಟ್ಟಿರುವ, ಮಧುಸಂಜ್ಞಂ-ಮಧುವೆಂಬ ಹೆಸರುಳ್ಳ, ವನಂ-ತೋಟವನ್ನು, ದದೃಶುಃ-ನೋಡಿದರು, ತದಾ-ಆಗ, ಅಂಗದಂ-ಅಂಗದನನ್ನು ಕುರಿತು, ಪ್ರಾಹುಃ-ಹೇಳಿದರು ‖ ೧೧ ‖ ಮಹಾಮತೇ-ಮಹಾ ಬುದ್ಧಿಶಾಲಿಯಾದ, ವೀರ-ಶೂರನಾದ ಅಂಗದನೇ, ವಯಂ-ನಾವು, ಕ್ಷುಧಿತಾಃ-ಹಸಿವಿಯುಳ್ಳವರಾಗಿ, ಸ್ಮಃ-ಇದ್ದೇವೆ, (ಈ ವನದಲ್ಲಿ,) ಅದ್ಯ-ಈಗ, ಫಲಾನಿ-ಹಣ್ಣುಗಳನ್ನು, ಭಕ್ಷಯಾಮಃ-ತಿನ್ನುತ್ತೇವೆ, ಅಮೃತವತ್-ಸುಧೆಯಂತೆ, ಮಧು-ಮಧುವನ್ನು, ಪಿಬಾಮಃ-ಪಾನ ಮಾಡುತ್ತೇವೆ, ಅನುಜ್ಞಾಂ-ಅಪ್ಪಣೆಯನ್ನು, ದೇಹಿ-ಕೊಡು ‖ ೧೨ ‖ ಸಂತುಷ್ಟಾಃ-ತೃಪ್ತರಾಗಿ, ಅದ್ಯೈವ-ಈಗಲೇ, ಸಾನುಜಂ-ತಮ್ಮನಿಂದ ಕೂಡಿದವನಾದ, ರಾಘವಂ-ರಾಮಚಂದ್ರನನ್ನು, ದ್ರಷ್ಟುಂ-ನೋಡುವದಕ್ಕೆ, ಗಚ್ಛಾಮಃ-ಹೋಗೋಣ ‖ ೧೩ ‖ ಅಂಗದಉವಾಚ-ಅಂಗದನು ಹೇಳುತ್ತಲಿದ್ದಾನೆ ‖ ೧೪ ‖ ಅಯಂ-ಈ, ಹನೂಮಾನ್-ಆಂಜನೇಯನು, ಕೃತಕಾರ್ಯಃ-ರಾಮ ಕಾರ್ಯವನ್ನು ಮಾಡಿದವನಾಗಿದ್ದಾನೆ, ಏತತ್-ಈ ಆಂಜನೇಯನ, ಪ್ರಸಾದತಃ-ದಯೆಯಿಂದ, ಪಿಬತ-ಮಧುವನ್ನು ಕುಡಿಯಿರಿ, ಹರಿಸತ್ತಮಾಃ-ಕಪಿಶ್ರೇಷ್ಠರುಗಳಿರಾ, ಫಲಮೂಲಾನಿ-ಫಲ-ಹಣ್ಣುಗಳನ್ನು, ಮೂಲಾನಿ-ಕಂದಗಡ್ಡೆ ಗೆಣಸುಗಳನ್ನು, ಜಕ್ಷಧ್ವಂ-ಭಕ್ಷಿಸುವವರಾಗಿರಿ ‖ ೧೫ ‖ ತತಃ-ಅಂಗದನ ಅಪ್ಪಣೆಯಾದ ಮೇಲೆ, ಪ್ರವಿಶ್ಯ-ಮಧುವನವನ್ನು ಪ್ರವೇಶಿಸಿ, ಹರಯಃ-ಕಪಿಗಳು, ದಧಿವಕ್ತ್ರೇಣ-ದಧಿವಕ್ತ್ರನೆಂಬ ಕಪಿಯಿಂದ, ನೋದಿತಾನ್-ಪ್ರೇರಿತರಾದ, ತಾನ್ ರಕ್ಷಿಣಃ-ಮಧುವನ್ನು ಕಾವಲು ಮಾಡುವವರಾದ ಕಪಿಗಳನ್ನು, ಅನಾದೃತ್ಯ-ಲಕ್ಷ್ಯ ಮಾಡದೆ, ಮಧು-ಮಧುವನ್ನು, ಪಾತುಂ-ಕುಡಿಯುವದಕ್ಕೆ, ಆರೇಭಿರೇ-ಪ್ರಾರಂಭಿಸಿದರು ‖ ೧೬ ‖ ವಾನರರ್ಷಭಾಃ-ಮಧುವನದ ಕಾವಲಿನವರಾದ ಕಪಿಗಳು, ಪಿಬತಃ-ಮಧುವನ್ನು ಕುಡಿಯುತ್ತಿರುವ, ವಾನರಾನ್-ಕಪಿಗಳನ್ನು, ತಾಡಯಾಮಾಸುಃ-ಹೊಡೆದಂಥಾವರಾದರು, ತತಃ-ಆ ಬಳಿಕ, ತಾನ್-ಮಧುಪಾ

ತತಸ್ತಾನ್ಮುಷ್ಟಿಭಿಃಪಾದೈಶ್ಚೂರ್ಣಯಿತ್ವಾಪಪುರ್ಮಧು ॥ ೨೭ ॥ ತತೋದಧಿಮುಖಃಕ್ರುದ್ಧಃ ಸುಗ್ರೀವಸ್ಯಸಮಾ
ತುಲಃ । ಜಗಾಮರಕ್ಷಿಭಿಸ್ಸಾರ್ಧಂಯತ್ರರಾಜಾಕಪೀಶ್ವರಃ ॥ ೨೮ ॥ ಗತ್ವಾತಮಬ್ರವೀದ್ದೇವಚಿರಕಾಲಾಭಿರಕ್ಷಿತಂ । ನ
ಷ್ಟಂಮಧುವನಂತೇದ್ಯಕುಮಾರೇಣಹನೂಮತಾ ॥ ೨೯ ॥ ಶ್ರುತ್ವಾದಧಿಮುಖೇನೋಕ್ತಂ ಸುಗ್ರೀವೋಹೃಷ್ಟಮಾನಸಃ ।
ದೃಷ್ಟ್ವಾಗತೋನಸಂದೇಹಸ್ಸೀತಾಂಪವನನಂದನಃ ॥ ೩೦ ॥ ನೋಚೇನ್ಮಧುವನಂದ್ರಷ್ಟುಂ ಸಮರ್ಥಃಕೋಭವೇನ್ನೃಪ ।
ತತ್ರಾಪಿವಾಯುಪುತ್ರೇಣಕೃತಂಕಾರ್ಯಂನಸಂಶಯಃ ॥ ೩೧ ॥ ಶ್ರುತ್ವಾಸುಗ್ರೀವವಚನಂಹೃಷ್ಟೋರಾಮಸ್ತುಪಬ್ರವೀತ್ ।
ಕಿಮುಚ್ಯತೇತ್ವಯಾರಾಜನ್ವಚಸ್ಸೀತಾಕಥಾನ್ವಿತಂ ॥ ೩೨ ॥ ಸುಗ್ರೀವಸ್ತ್ವಬ್ರವೀದ್ವಾಕ್ಯಂದೇವದೃಷ್ಟ್ವಾವನೀಸುತಾ ॥

ತವನನ್ನು ಮಾಡಲು ಅಡ್ಡಿ ಮಾಡುತ್ತಿರುವ ಕಪಿಗಳನ್ನು, ಮುಷ್ಟಿಭಿಃ-ಮುಷ್ಟಿಗಳಿಂದಲೂ, ಪಾದೈಃ-ಕಾಲುಗಳಿಂದಲೂ, ಚೂರ್ಣಯಿತ್ವಾ-ಪುಡಿಯಾಗಿ ಮಾಡಿ, ಮಧು-ಮಧುವನ್ನು, ಪಪುಃ-ಪಾನ ಮಾಡಿದರು ॥ ೨೭ ॥ ತತಃ- ಆಬಳಿಕ, ಸುಗ್ರೀವಸ್ಯ-ಸುಗ್ರೀವನಿಗೆ, ಮಾತುಲಃ-ಸೋದರ ಮಾವನಾದ, ದಧಿಮುಖಃ-ದಧಿಮುಖನು, ಕ್ರುದ್ಧಃ-ಕೋಪಿಷ್ಠನಾಗಿ, ರಕ್ಷಿಭಿಃಸಾರ್ಧಂ-ವನಪಾಲಕರ ಸಂಗಡ, ರಾಜಾ-ದೊರೆಯಾದ, ಕಪೀಶ್ವರಃ-ಸುಗ್ರೀವನು, ಯತ್ರ-ಎಲ್ಲಿರುವನೋ, ತತ್ರ-ಅಲ್ಲಿಗೆ, ಜಗಾಮ-ಹೋದನು ॥ ೨೮ ॥ ಗತ್ವಾ-ಸುಗ್ರೀವನ ಬಳಿಗೆ ಹೋಗಿ ದೇವ-ಸ್ವಾಮಿಯೇ, ಚಿರಕಾಲ-ಬಹುಕಾಲದಿಂದ, ಅಭಿರಕ್ಷಿತಂ-ಕಾಪಾಡಲ್ಪಟ್ಟದ್ದು, ತೇ-ನಿನ್ನ, ಮಧುವನಂ-ಮಧುವನವು, ಅದ್ಯ-ಈಗ, ಕುಮಾರೇಣ-ಅಂಗದನಿಂದಲೂ ಹನೂಮತಾ-ಆಂಜನೇಯನಿಂದಲೂ, ನಷ್ಟಂ-ನಾಶ ಮಾಡಲ್ಪಟ್ಟಿತು, (ಎಂಬದಾಗಿ) ತಂ-ಸುಗ್ರೀವನನ್ನು ಕುರಿತು, ಅಬ್ರವೀತ್-ಹೇಳಿದನು ॥ ೨೯ ॥ ದಧಿಮುಖೇನ-ದಧಿಮುಖನಿಂದ, ಉಕ್ತಂ-ಹೇಳಲ್ಪಟ್ಟ ಮಾತನ್ನು, ಶ್ರುತ್ವಾ-ಕೇಳಿ, ಸುಗ್ರೀವಃ-ಸುಗ್ರೀವನು, ಹೃಷ್ಟ-ಸಂತುಷ್ಟವಾದ, ಮಾನಸಃ-ಮನಸ್ಸುಳ್ಳವನಾಗಿ, ಪವನನಂದನಃ-ವಾಯು ಪುತ್ರನಾದ ಆಂಜನೇಯನು, ಸೀತಾಂ-ಸೀತೆಯನ್ನು, ದೃಷ್ಟ್ವಾ-ನೋಡಿ, ಆಗತಃ-ಬಂದವನಾಗಿದ್ದಾನೆ, ನಸಂದೇಹಃ-ಸಂದೇಹವಿಲ್ಲ ॥ ೩೦ ॥ ನೋಚೇತ್-ಹಾಗೆ ಸೀತೆಯನ್ನು ನೋಡದೆ ಬಂದಿದ್ದರೆ, ಮಮ-ನನ್ನ, ಮಧುವನಂ-ಮಧುವನವನ್ನು, ದ್ರಷ್ಟುಂ-ನೋಡುವದಕ್ಕೆ, ಸಮರ್ಥಃ-ಶಕ್ತನು, ಕಃ-ಯಾರು, ಭವೇತ್-ಆದಾನು, ತತ್ರಾಪಿ-ಕಪಿ ಸಮೂಹದೊಳಗೆ, ವಾಯುಪುತ್ರೇಣ-ಆಂಜನೇಯನಿಂದ, ಕಾರ್ಯಂ-ಕೆಲಸವು, ಕೃತಂ-ಮಾಡಲ್ಪಟ್ಟಿದೆ, ನಸಂಶಯಃ-ಸಂದೇಹವಿಲ್ಲ ॥ ೩೧ ॥ ಸುಗ್ರೀವ-ಸುಗ್ರೀವನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಹೃಷ್ಟಃ-ಸಂತುಷ್ಟನಾದ, ರಾಮಃ-ರಾಮಚಂದ್ರನು, ತಂ-ಆ ಸುಗ್ರೀವನನ್ನು ಕುರಿತು, ಅಬ್ರವೀತ್-ಹೇಳಿದನು, ರಾಜನ್-ದೊರೆಯಾದ ಸುಗ್ರೀವನೇ, ಸೀತಾ-ಸೀತೆಯ, ಕಥಾ-ಚರಿತ್ರೆಯಿಂದ, ಅನ್ವಿತಂ-ಕೂಡಿರುವ, ವಚಃ-ಮಾತು, ತ್ವಯಾ-ನಿನ್ನಿಂದ, ಕಿಮುಚ್ಯತೇ-ಏನು ಹೇಳಲ್ಪಟ್ಟಿತು ॥ ೩೨ ॥ ಸುಗ್ರೀವಸ್ತು-ಸುಗ್ರೀವನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ದೇ

ಹನೂಮತ್ಪ್ರಮುಖಾಸ್ಸರ್ವೇ ಪ್ರವಿಷ್ಟಾ ಮಧುಕಾನನಂ ॥ ೩೩ ॥ ಭಕ್ಷಯಂತಿ ಸ್ಮ ಸಕಲಂ ತಾಡಯಂತಿ ಸ್ಮ ರಕ್ಷಿಣಃ । ಅಕೃತ್ವಾ ದೇವ ಕಾರ್ಯಂ ತೇ ದ್ರಷ್ಟುಂ ಮಧುವನಂ ಮಮ ॥ ೩೪ ॥ ನ ಸಮರ್ಥಾಸ್ತತೋ ದೇವೀ ದೃಷ್ಟಾ ಸೀತೇತಿ ನಿಶ್ಚಿತಂ । ರಕ್ಷಿಣೋ ಪ್ರೋ ಭಯಂ ಮಾಸ್ತು ಗತ್ವಾ ಬ್ರೂತ ಮಮಾಜ್ಞಯಾ ॥ ೩೫ ॥ ವಾನರಾನಂಗದಮುಖಾನಾನಯಧ್ವಂ ಮಮಾಂತಿಕಂ । ಶ್ರುತ್ವಾ ಸುಗ್ರೀವವಚನಂ ಗತ್ವಾ ತೇ ವಾಯುವೇಗತಃ ॥ ೩೬ ॥ ಹನೂಮತ್ಪ್ರಮುಖಾನುಚ್ಚೈರ್ಗತ್ವಾ ತೇ ಶ್ವರಶಾಸನಾತ್ । ದ್ರಷ್ಟುಮಿಚ್ಛತಿ ಸುಗ್ರೀವಃ ಸರಾಮೋ ಲಕ್ಷ್ಮಣಾನ್ವಿತಃ ॥ ೩೭ ॥ ಯುಷ್ಮಾನ್ ಪ್ರತೀವ ಹೃಷ್ಟಾಸ್ತೇ ತ್ವರಯಂತಿ ಮಹಾಬಲಾಃ । ತಥೇತ್ಯಂಬರಮಾಸಾದ್ಯ ಯಯುಸ್ತೇ ವಾನರೋತ್ತಮಾಃ ॥ ೩೮ ॥ ಹನೂಮಂತಂ ಪುರಸ್ಕೃತ್ಯ ಯುವರಾಜಂ ತ

ವ-ಸ್ವಾಮಿಯೇ, ಅವನೀಸುತಾ-ಅವನೀ-ಭೂಮಿಗೆ, ಸುತಾ-ಮಗಳಾದ ಸೀತೆಯು, ದೃಷ್ಟಾ-ನೋಡಲ್ಪಟ್ಟಳು, ಹನೂಮತ್ಪ್ರಮುಖಾಃ-ಹನೂಮಂತ-ಆಂಜನೇಯನೇ, ಪ್ರಮುಖಾಃ-ಮೊದಲಾದ, ಸರ್ವೇ-ಎಲ್ಲಾ ಕಪಿಗಳು, ಮಧುಕಾನನಂ-ಮಧುವನವನ್ನು, ಪ್ರವಿಷ್ಟಾಃ-ಪ್ರವೇಶಿಸಿದವರಾಗಿ ॥ 33 ॥ ಸಕಲಂ-ವನದಲ್ಲಿರುವ ಯೆಲ್ಲಾ ಫಲಾದಿಗಳನ್ನು, ಭಕ್ಷಯಂತಿ ಸ್ಮ-ತಿನ್ನುತ್ತಿದ್ದಾರಂತೆ, ರಕ್ಷಿಣಾಃ-ವನಪಾಲಕರನ್ನು, ತಾಡಯಂತಿ ಸ್ಮ-ಹೊಡೆಯುತ್ತಿದ್ದಾರಂತೆ, ದೇವ-ಸ್ವಾಮಿಯೇ, ತೇ-ನಿನ್ನ, ಕಾರ್ಯಂ-ಕೆಲಸವನ್ನು, ಅಕೃತ್ವಾ-ಮಾಡಿ, ಮಮ-ನನ್ನ, ಮಧುವನಂ-ಮಧುವನವನ್ನು, ದ್ರಷ್ಟುಂ-ನೋಡಲು, ನಸಮರ್ಥಾಃ-ಶಕ್ತರಾಗಲಾರರು, ತತಃ-ಆದಕಾರಣದಿಂದ, ದೇವಿ-ಸೀತೆಯಾದ, ಸೀತಾ-ಸೀತೆಯು, ದೃಷ್ಟೇತಿ-ನೋಡಲ್ಪಟ್ಟವಳಾಗಿದ್ದಾಳೆಂದು, ನಿಶ್ಚಿತಂ-ಗೊತ್ತು ಮಾಡಲ್ಪಟ್ಟಿತು, ರಕ್ಷಿಣಾಃ-ವನಪಾಲಕರೇ, ವಃ-ನಿಮಗೆ, ಭಯಂ-ಅಂಜಿಕೆಯು, ಮಾಸ್ತು-ಬೇಡ, ಮಮಾಜ್ಞಯಾ-ಮಮ-ನನ್ನ, ಆಜ್ಞಯಾ-ಅಪ್ಪಣೆಯಿಂದ, ಗತ್ವಾ-ಹೋಗಿ, ಬ್ರೂತ-ಆ ಕಪಿಗಳನ್ನು ಕುರಿತು ಹೇಳುವವರಾಗಿ ॥ 3೪ ॥ ಅಂಗದಮುಖಾನ್-ಅಂಗದನೇ ಮೊದಲಾದ, ವಾನರಾನ್-ಕಪಿಗಳನ್ನು, ಮಮ-ನನ್ನ, ಅಂತಿಕಂ-ಸಮೀಪವನ್ನು ಕುರಿತು, ಆನಯಧ್ವಂ-ಕರಕೊಂಡು ಬನ್ನಿರಿ, ತೇ-ಆ ಕಪಿಗಳು, ಸುಗ್ರೀವ-ಸುಗ್ರೀವನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ವಾಯುವೇಗತಃ-ವಾಯುವೇಗದಿಂದ, ಗತ್ವಾ-ಹೋಗಿ ॥ 3೬ ॥ ಈಶ್ವರ-ಸುಗ್ರೀವನ, ಶಾಸನಾತ್-ಅಪ್ಪಣೆಯಿಂದ, ಉಚ್ಚೈಃ-ಘಟ್ಟಿಯಾಗಿ, ಗಚ್ಛತ-ಹೋಗಿರಿ, (ಹೀಗೆ) ಹನೂಮತ್ಪ್ರಮುಖಾನ್-ಆಂಜನೇಯನೇ ಮೊದಲಾದವರನ್ನು ಕುರಿತು, (ಅಬ್ರುವನ್-ಹೇಳಿದರು,) ಸರಾಮಃ-ರಾಮನಿಂದ ಕೂಡಿದ, ಲಕ್ಷ್ಮಣಾನ್ವಿತಃ-ಲಕ್ಷ್ಮಣನಿಂದ ಕೂಡಿದವನಾದ, ಸುಗ್ರೀವಃ-ಸುಗ್ರೀವಃ-ಸುಗ್ರೀವನು, ದ್ರಷ್ಟುಂ-ನೋಡುವದಕ್ಕೆ, ಇಚ್ಛತಿ-ಅಪೇಕ್ಷಿಸುತ್ತಿದ್ದಾನೆ ॥ 3೭ ಮಹಾಬಲಾಃ-ಮಹಾ ಬಲವಂತರಾದ, ತೇ-ರಾಮ ಲಕ್ಷ್ಮಣ ಸುಗ್ರೀವರು, ಅತೀವ-ಅತ್ಯಂತವಾಗಿ, ಹೃಷ್ಟಾಃ-ಸಂತುಷ್ಟರಾಗಿ, ಯುಷ್ಮಾನ್-ನಿಮ್ಮುಗಳನ್ನು, ತ್ವರಯಂತಿ-ಜಾಗ್ರತೆಯಾಗಿ ಬರುವಂತೆ ಅವಸರ ಪಡಿಸುತ್ತಲಿದ್ದಾರೆ, ತೇ-ಆ, ವಾನರೋತ್ತಮಾಃ-ಕಪಿ ಶ್ರೇಷ್ಠರು, ತಥೇತಿ-ಹಾಗೆ

ಥಾಂಗದಂ । ರಾಮಸುಗ್ರೀವಯೋರಗ್ರೇ ನಿಪೇತುರ್ಭೂರಿವಿಸ್ತ್ವರಂ ॥ ೩೯ ॥ ಸಾಷ್ಟಾಂಗಂಪ್ರಣಿಪತ್ಯಾಗ್ರೇ ರಾಮಂಪಶ್ಚಾದ್ಧರೀಶ್ವರಂ । ಹನೂಮಾನಾಘವಂಪ್ರಾಹ ದೃಷ್ಟಾಸೀತಾನಿರಾಮಯಾ ॥೪೦ ॥ ಕುಶಲಂಪ್ರಾಹರಾಜೇಂದ್ರ ಜಾನಕೀತ್ವಾಂ ಶುಚಿಸ್ಮಿತಾ । ಅಶೋಕವನಿಕಾಮಧ್ಯೇ ಶಿಂಶುಪಾಮೂಲಮಾಶ್ರಿತಾ ॥ ೪೧ ॥ ರಾಕ್ಷಸೀಭಿಃಪರಿವೃತಾ ನಿರಾಹಾರಾಕೃಶಾಪ್ರಭೋ । ಹಾರಾಮರಾಮರಾಮೇತಿ ಶೋಚಂತೀಮಲಿನಾಂಬರಾ ॥ ೪೨ ॥ ಏಕವೇಣೀಮಯಾದೃಷ್ಟಾಶನೈರಾಶ್ವಾಸಿತಾಶುಭಾ । ವೃಕ್ಷಶಾಖಾಂತರೇಸ್ಥಿತ್ವಾ ಸೂಕ್ಷ್ಮರೂಪೇಣತೇಕಥಾಂ ॥ ೪೩ ॥ ದಶಾನನೇನಹರಣಂ ಜಾನಕ್ಯಾರಹಿತೇತ್ವಯಿ ॥ ೪೪ ॥ ಸು

ಯೇ ಆಗಲೇದು, ಅಂಬರಂ-ಆಕಾಶವನ್ನು, ಆಸಾದ್ಯ-ಸೇರಿ, ಯಯುಃ-ಹೊರಟು ಹೋದರು ॥ ೩೮ ॥ ಹನುಮಂತಂ-ಆಂಜನೇಯನನ್ನು, ಯುವರಾಜಂ-ಯುವರಾಜನಾದ, ಅಂಗದಂ-ಅಂಗದನನ್ನು, ಪುರಸ್ಕೃತ್ಯ-ಮುಂದು ಮಾಡಿಕೊಂಡು, ತಥಾ-ಹಾಗೆ, ರಾಮಸುಗ್ರೀವಯೋಃ-ರಾಮಚಂದ್ರ ಸುಗ್ರೀವರುಗಳ, ಅಗ್ರೇ-ಮುಂದೆ, ಸತ್ವರಂ-ಬೇಗನೆ, ನಿಪೇತುಃ-ಬಿದ್ದು ನಿಂತವರಾದರು ॥ ೩೯ ॥ ರಾಮಂ-ರಾಮಚಂದ್ರನನ್ನು ಕುರಿತು, ಪಶ್ಚಾತ್-ಆ ಬಳಿಕ, ಹರೀಶ್ವರಂ-ಸುಗ್ರೀವನನ್ನು ಕುರಿತು, ಸಾಷ್ಟಾಂಗಂ-ಸಾಷ್ಟಾಂಗವಾಗಿ, ಅಗ್ರೇ-ಮುಂದೆ, ಪ್ರಣಿಪತ್ಯ-ನಮಸ್ಕರಿಸಿ, ಸ್ಥಿತಃ-ಕೂತುಕೊಂಡವರಾದರು, ಹನೂಮಾನ್-ಆಂಜನೇಯನು, ರಾಘವಂ-ರಾಮಚಂದ್ರನನ್ನು ಕುರಿತು, ಪ್ರಾಹ-ಹೇಳಿದನು, ನಿರಾಮಯಾ-ಆರೋಗ್ಯಳಾಗಿರುವ, ಸೀತಾ-ಸೀತೆಯು, ದೃಷ್ಟಾ-ನಿನ್ನಿಂದ ನೋಡಲ್ಪಟ್ಟಳು ॥ ೪೦ ॥ ರಾಜೇಂದ್ರ-ರಾಜಶ್ರೇಷ್ಠನಾದ ರಾಮಚಂದ್ರನೇ, ಶುಚಾ-ಶೋಕದಿಂದ. ಅನ್ವಿತಾ-ಕೂಡಿದವಳಾದ, ಜಾನಕೀ-ಸೀತೆಯು, ತ್ವಾಂ-ನಿನ್ನನ್ನು ಕುರಿತು, ಕುಶಲಂ-ಕ್ಷೇಮವನ್ನು, ಪ್ರಾಹ-ಕೇಳಿದಳು, ಅಶೋಕವನಿಕಾ-ಅಶೋಕ ವನದ, ಮಧ್ಯೇ-ನಡುವೆ, ಶಿಂಶುಪಾ-ಶಿಂಶುಪವೆಂಬ ವನದ, ಮೂಲ-ಬುಡದ ಬಳಿಯನ್ನು, ಆಶ್ರಿತಾ-ಹೊಂದಿ ಕೂತಿರುವ ॥ ೪೧ ॥ ರಾಕ್ಷಸೀಭಿಃ-ರಾಕ್ಷಸ ಸ್ತ್ರೀಯರಿಂದ, ಪರಿವೃತಾ-ಕೂಡಿದವಳಾದ, ನಿರಾಹಾರಾ-ಆಹಾರವಿಲ್ಲದೆ ಉಪವಾಸ ಮಾಡುತ್ತಿರುವವಳಾದ, ಕೃಶ-ಬಡವಾದ ದೇಹವುಳ್ಳವಳಾದ, ಪ್ರಭೋ-ರಾಮಚಂದ್ರನೇ, ಹಾರಾಮರಾಮರಾಮೇತಿ-ಮತ್ತು ರಾಮ ರಾಮ ರಾಮ ಎಂಬುದಾಗಿ, ಶೋಚಂತೀ-ಹೇಳುತ್ತಾ ವ್ಯಥೆಪಡುತ್ತಿರುವವಳಾದ, ಮಲಿನಾ-ಮಾಸಿರುವ, ಅಂಬರಾ-ಬಟ್ಟೆಯಿಂದ ಇರುವವಳಾದ ॥ ೪೨ ॥ ಏಕವೇಣೀ-ಬಾಚುವದು ಮುಂತಾದ ಸಂಸ್ಕಾರ ವಿಲ್ಲದೆ ಇರುವದ್ದರಿಂದ, ಒಂದೇ ಜಡೆಯಂತೆ ಇರುವ ಕೇಸರುಳ್ಳವಳಾದ, ಶುಭಾ-ಮಂಗಳಕರಳಾದ (ಸೀತೆಯು,) ಮಯಾ-ನನ್ನಿಂದ, ದೃಷ್ಟಾ-ನೋಡಲ್ಪಟ್ಟಳು, ಶನೈಃ-ಮೆಲ್ಲಗೆ, ಆಶ್ವಾಸಿತಾ-ಸಮಾಧಾನ ಮಾಡಲ್ಪಟ್ಟಳು, ಸೂಕ್ಷ್ಮ-ಅತ್ಯಂತ ಸಣ್ಣದಾದ, ರೂಪೇಣ-ಆಕೃತಿಯಿಂದ ಕೂಡಿದವನಾಗಿ, ವೃಕ್ಷ-ಮರದ, ಶಾಖಾ-ರೆಂಬೆಗಳ, ಅಂತರೇ-ಮಧ್ಯದಲ್ಲಿ, ಸ್ಥಿತ್ವಾ-ಇದ್ದುಕೊಂಡು, ತೇ-ನಿನ್ನ, ಕಥಾಂ-ಚರಿತ್ರೆಯನ್ನು, (ಸೀತಾಯೈ-ಸೀತಾ ದೇವಿಗೆ, ಅವೋಚಂ-ನಾನು ಹೇಳಿದೆನು ॥ ೪೩ ॥ ತವ-ನಿನಗೆ, ಅತ್ಯರ್ಥಂ-ಅತಿಶಯವಾಗಿ, ಜನ್ಮಾರಭ್ಯ-ನೀನು ಹುಟ್ಟಿದ್ದು ಮೊದಲಾಗಿ, ದಂಡಕಾಗಮ

ಗ್ರೀವೇಣಯಥಾಮೈತ್ರೀಂಕೃತ್ವಾವಾಲಿನಿಬರ್ಹಣಂ । ಮಾರ್ಗಣಾರ್ಥಂತವೈದೇಹ್ಯಾಃಸುಗ್ರೀವೇಣವಿಸರ್ಜಿತಾಃ ॥ ೪೫ ॥ ಮಹಾಬಲಾಮಹಾಸತ್ವಾಃ ಹರಯೋಜಿತಕಾಶಿನಃ । ಗತಾಸ್ಸರ್ವತ್ರಸರ್ವೇವೈ ತತ್ರೈಕೋಹಮಿಹಾಗತಃ ॥ ೪೬ ॥ ಅಹಂ ಸುಗ್ರೀವಸಚಿವೋ ದಾಸೋಹಂರಾಘವಸ್ಯಹಿ । ದೃಷ್ಟಾದ್ಯಜಾನಕೀಭಾಗ್ಯಾತ್ ತ್ವಯಾಸಃಫಲಿತೋದ್ಯಮಃ ॥ ೪೭ ॥ ಇ ತ್ಯುದೀರಿತಮಾಕರ್ಣ್ಯಸೀತಾವಿಸ್ಫಾರಿತೇಕ್ಷಣಾ । ಕೇನವಾಕರ್ಣಪೀಯೂಷಂ ಶ್ರಾವಿತಂಮೇಶುಭಾಕ್ಷರಂ ॥೪೮॥ ಯದಿಸ ತ್ಯಂತದಾಯಾತುಮದ್ದರ್ಶನಪಥಂತುಸಃ । ತತೋಹಂವಾನರಾಕಾರಃ ಸೂಕ್ಷ್ಮರೂಪೇಣಜಾನಕೀಂ ॥ ೪೯ ॥ ಪ್ರಣಮ್ಯ

ನಂ-ನಂಡಕಾರಣ್ಯವನನ್ನು ಕುರಿತು ಹೋಗುವಿಕೆಯು, ತಥಾ-ಹಾಗೆ, ತ್ವಯಿ-ನೀನು, ರಹಿತೇ-ಇಲ್ಲದ ವೇಳೆಯಲ್ಲಿ, ದಶಾನನೇನ-ರಾವಣನಿಂದ, ಜಾನಕ್ಯಾಃ-ಸೀತೆಯ, ಹರಣಂ-ಅಪಹರಿಸೋಣವು ॥೪೪॥ ಸುಗ್ರೀವೇಣ-ನೀನು ಸುಗ್ರೀವನ ಸಂಗಡ, ಯಥಾ-ಹ್ಯಾಗೆ, ಮೈತ್ರೀಂ-ಮಿತ್ರತ್ವವನ್ನು, ಕೃತ್ವಾ-ಹೊಂದಿ, ವಾಲಿ-ವಾಲಿಯ, ನಿಬರ್ಹಣಂ-ಸಂಹಾರವು, ಕೃತಂ-ಮಾಡಲ್ಪಟ್ಟಿತೊ, ವೈದೇಹ್ಯಾಃ-ಸೀತೆಯನ್ನು, ಮಾರ್ಗಣಾರ್ಥಂ-ಹುಡುಕುವದಕ್ಕೆ, ಸುಗ್ರೀವೇಣ-ಸುಗ್ರೀವನಿಂದ, ವಿಸರ್ಜಿತಾಃ-ಕಳುಹಿಸಲ್ಪಟ್ಟವರಾದ ॥೪೫॥ಮಹಾಬಲಾಃ-ಅಧಿಕಬಲರಾದ,ಮಹಾಸತ್ವಾಃ-ಬೃಹದಾಕಾರವುಳ್ಳವರಾದ,ಜಿತಕಾಶಿನಃ-ಜಯಶೀಲರಾದ, ಹರಯಃ-ಕಪಿಗಳು,ಸರ್ವೇವೈ-ಎಲ್ಲರೂ, ಸರ್ವತ್ರ-ಸಮಸ್ತದಿಕ್ಕುಗಳಿಗೂ,ಗತಾಃ-ಹುಡಕಲು ಹೋಗಿರುತ್ತಾರೆಂಬುವದು, ತತ್ರ-ಆಕಪಿ ಸಮೂಹಗಳೊಳಗೆ, ಏಕಃ-ಒಬ್ಬನಾದ, ಅಹಂ-ನಾನು, ಇಹ-ಇಲ್ಲಿಗೆ, ಆಗತಃ-ಬಂದವನಾದೆನು॥೪೬॥ ಅಹಂ-ನಾನು,ಸುಗ್ರೀವ-ಸುಗ್ರೀವನಿಗೆ,ಸಚಿವಃ-ಮಂತ್ರಿಯು, ರಾಘವಸ್ಯಹಿ-ರಾಮಚಂದ್ರನಿಗೆ, ದಾಸಃ-ದೂತನು ಆಗಿದ್ದೇನೆ, ಅದ್ಯ-ಈಗ, ಜಾನಕೀ-ಸೀತೆಯು, ದೃಷ್ಟಾ-ನೋಡಲ್ಪಟ್ಟಳು ಭಾಗ್ಯಾತ್-ನನ್ನ ಪುಣ್ಯ ವಿಶೇಷದಿಂದ, ಮೆ-ನನ್ನ, ಪ್ರಯಾಸಃ-ಶ್ರಮೆಯು, ಫಲಿತಃ-ಸಾರ್ಥಕವಾಯಿತು ॥ ೪೭॥ ಇತಿ-ಈ ಪ್ರಕಾರವಾಗಿ, ಉದೀರಿತಂ-ಹೇಳಲ್ಪಟ್ಟ ಮಾತನ್ನು, ಆಕರ್ಣ್ಯ-ಕೇಳಿ, ಸೀತಾ-ಸೀತೆಯು, ವಿಸ್ಫಾರಿತ-ವಿಸ್ತರಿಸಲ್ಪಟ್ಟ, ಈಕ್ಷಣಾ-ನೇತ್ರಗಳುಳ್ಳವಳಾಗಿ, ಮೆ-ನನಿಗೆ, ಕರ್ಣಪೀಯೂಷಂ-ಕಿವಿಗೆ ಅಮೃತ ಸಮವಾದ, ಶುಭಾಕ್ಷರಂ-ಮಂಗಳಕರವಾದ ವರ್ಣಾನುಪೂರ್ವಿಯುಳ್ಳ ಮಾತು, ಕೇನವಾ-ಯಾರಿಂದ, ಶ್ರಾವಿತಂ-ಕೇಳಲ್ಪಟ್ಟಿತು ॥ ೪೮ ॥ ಸತ್ಯಂ-ಯದಿ-ಇದು ನಿಜವಾಗಿಯೇ ಇದ್ದರೆ, ತದಾ-ಆಗ, ಸಃ-ಈ ಮಾತನ್ನು ಹೇಳಿದಾತನು, ಮದ್ದರ್ಶನಪಥಂ-ಮದ್ದರ್ಶನ-ನನ್ನ ದೃಷ್ಟಿಯ-ಪಥಂ-ಮಾರ್ಗವನ್ನು ಕುರಿತು, ಆಯಾತು-ಬರಲಿ, ತತಃ-ಆ ಬಳಿಕ, ಅಹಂ-ನಾನು, ವಾನರಾಕಾರಃ-ಕಪಿ ರೂಪವುಳ್ಳವನಾಗಿ, ಸೂಕ್ಷ್ಮರೂಪೇಣ-ಅತ್ಯಂತ ಸಣ್ಣದಾದ ಆಕೃತಿಯಿಂದ, ಜಾನಕೀಂ-ಸೀತೆಯನ್ನು ಕುರಿತು ॥ ೪೯ ॥ ಪ್ರಣಮ್ಯ-ವಂದಿಸಿ, ಪ್ರಾಂಜಲಿಃ-ಅಂಜಲಿ ಬದ್ಧನು, ಭೂತ್ವಾ-ಆಗಿ, ಪ್ರಭೊ-ಸ್ವಾಮಿಯೇ, ದೂರಾ

ಪ್ರಾಂಜಲಿರ್ಭೂತ್ವಾದೂರಾದೇನಸ್ಥಿತಃಪ್ರಭೋ ॥ ಪೃಷ್ಟೋಹಂಸೀತಯಾಕಸ್ತ್ವಮಿತ್ಯಾದಿಬಹುವಿಸ್ತರಂ ॥ ೫೦ ॥ ಮಯಾಸರ್ವಂಕ್ರಮೇಣೈವ ವಿಜ್ಞಾಪಿತಮರಿಂದಮ । ಪಶ್ಚಾನ್ಮಯಾರ್ಪಿತಂದೇವ್ಯೈಭವದ್ದತ್ತಾಂಗುಳೀಯಕಂ ॥ ೫೧ ॥ ತೇನ ಮಾಮತಿವಿಶ್ವಸ್ತಾವಚನಂಚೇದಮಬ್ರವೀತ್ । ಯಥಾದೃಷ್ಟಾಸ್ಮಿಹನುಮನ್ಪೀಡ್ಯಮಾನಾದಿವಾನಿಶಂ ॥೫೨॥ ರಾಕ್ಷಸೀನಾಂತರ್ಜನೈಸ್ತತ್ಸರ್ವಂಕಥಯರಾಘವೇ । ಮಯೋಕ್ತಂದೇವಿರಾಮೋಪಿ ತ್ವಚ್ಚಿಂತಾಪರಿನಿಷ್ಠಿತಃ ॥ ೫೩ ॥ ಪರಿಶೋಚತ್ಯಹೋರಾತ್ರಂ ತ್ವದ್ವಾರ್ತಾಂನಾಧಿಗಮ್ಯಸಃ । ಇದಾನೀಮೇವಗತ್ವಾಹಂ ಸ್ಥಿತಿಂರಾಮಾಯತೇಬ್ರುವೇ ॥ ೫೪ ॥ ರಾಮಃ ಶ್ರವಣಮಾತ್ರೇಣಸುಗ್ರೀವೇಣಸಲಕ್ಷ್ಮಣಃ । ವಾನರಾನೀಕಪೈಸಾರ್ಧಮಾಗಮಿಷ್ಯತಿತೇಂತಿಕಂ ॥ ೫೫ ॥ ರಾವಣಂಸಕು

ದೇವ-ದೂರದಲ್ಲೇ, ಸ್ಥಿತಃ-ಇದ್ದೆನು, ಅಹಂ-ನಾನು, ಸೀತಯಾ-ಸೀತೆಯಿಂದ, ಬಹುವಿಸ್ತರಂ-ಬಹಳ ವಿವರವಾಗಿ, ಕಸ್ತ್ವಂ-ನೀನು ಯಾರು, ಇತ್ಯಾದಿ-ಇದೇ ಮೊದಲಾದದ್ದು, ಪೃಷ್ಟಃ-ಕೇಳಲ್ಪಟ್ಟವನಾದೆನು ॥ ೫೦ ॥ ಅರಿಂದಮ-ಶತ್ರುಸಂಹಾರಕನಾದ ರಾಮಚಂದ್ರನೇ, ಮಯಾ-ನನ್ನಿಂದ, ಕ್ರಮೇಣ-ಕ್ರಮವಾಗಿ, ಸರ್ವಂ-ಎಲ್ಲವೂ, ವಿಜ್ಞಾಪಿತಂ-ಹೇಳಲ್ಪಟ್ಟಿತು, ಪಶ್ಚಾತ್-ಆಮೇಲೆ, ದೇವ್ಯೈ-ಸೀತಾದೇವಿಗೆ, ಭವದ್ದತ್ತಾಂಗುಳೀಯಕಂ-ಭವತಾ-ನಿನ್ನಿಂದ, ದತ್ತ-ಕೊಡಲ್ಪಟ್ಟ, ಅಂಗುಳೀಯಕಂ-ಉಂಗುರವನ್ನು, ಮಯಾ-ನನ್ನಿಂದ, ಅರ್ಪಿತಂ-ಕೊಡಲ್ಪಟ್ಟಿತು ॥ ೫೧ ॥ ತೇನ-ಆ ಅಂಗುಳೀಯಕವನ್ನು ಕೊಟ್ಟದ್ದರಿಂದ, ಮಾಂ-ನನ್ನನ್ನು ಕುರಿತು, ಅತಿವಿಶ್ವಸ್ತಾ-ಅತ್ಯಂತ ಪ್ರೀತಿಯುಳ್ಳವಳಾಗಿ, ಇದಂ-ಈ, ವಚನಂ-ಮಾತನ್ನು, ಅಬ್ರವೀತ್-ಹೇಳಿದಳು, ಹನುಮನ್-ಆಂಜನೇಯನೇ, ದಿವಾನಿಶಂ-ಹಗಲು ರಾತ್ರಿಯಲ್ಲಿಯೂ, ಪೀಡ್ಯಮಾನಾ-ರಾಕ್ಷಸ ಸ್ತ್ರೀಯರಿಂದ ಬಾಧಿಸಲ್ಪಡುತ್ತಿರುವವಳಾದ ನಾನು, ಯಥಾ-ಹ್ಯಾಗೆ, ದೃಷ್ಟಾ-ನೋಡಲ್ಪಟ್ಟವಳು, ಅಸ್ಮಿ-ಆಗಿದ್ದೇನೋ ॥ ೫೨ ॥ (ತಥಾ-ಹಾಗೆ, ರಾಕ್ಷಸೀನಾಂ-ರಾಕ್ಷಸ ಸ್ತ್ರೀಯರ, ತರ್ಜನೈಃ-ಗದರಿಸೋಣದರಿಂದ (ಉಂಟಾದ,) ತತ್ಸರ್ವಂ-ಅದೆಲ್ಲವನ್ನೂ, ರಾಘವೇ-ರಾಮಚಂದ್ರನಲ್ಲಿ, ಕಥಯ-ಹೇಳುವವನಾಗು, ದೇವಿ-ಸೀತೆಯೇ, ರಾಮೋಪಿ-ರಾಮಚಂದ್ರನು, ತ್ವಚ್ಚಿಂತಾಪರಿನಿಷ್ಠಿತಃ-ತ್ವಚ್ಚಿಂತಾ-ನಿನ್ನ ಯೋಚನೆಯಲ್ಲಿಯೇ, ಪರಿನಿಷ್ಠಿತಃ-ಆಸಕ್ತನಾಗಿದ್ದಾನೆಂದು, ಮಯಾ-ನನ್ನಿಂದ, ಉಕ್ತಂ-ಹೇಳಲ್ಪಟ್ಟಿತು ॥ ೫೩ ॥ ಸಃ-ರಾಮಚಂದ್ರನು, ತ್ವದ್ವಾರ್ತಾಂ-ನಿನ್ನ ಸಮಾಚಾರವನ್ನು, ನಾಧಿಗಮ್ಯ-ತಿಳಿಯದೇ, ಅಹೋರಾತ್ರಂ-ಹಗಲು ರಾತ್ರಿಯಲ್ಲಿಯೂ, ಪರಿಶೋಚತಿ-ದುಃಖಪಡುತ್ತಲಿದ್ದಾನೆ, ಇದಾನೀಮೇವ-ಈಗಲೇ, ಅಹಂ-ನಾನು, ಗತ್ವಾ-ಹೋಗಿ, ತೇ-ನಿನ್ನ, ಸ್ಥಿತಿಂ-ಇರುವಿಕೆಯನ್ನು, ಬ್ರುವೇ-ಹೇಳುತ್ತೇನೆ ॥ ೫೪ ॥ ಸಲಕ್ಷ್ಮಣಃ-ಲಕ್ಷ್ಮಣನಿಂದ ಕೂಡಿರುವ, ರಾಮಃ-ರಾಮಚಂದ್ರನು, ಶ್ರವಣಮಾತ್ರೇಣ-ನೀನು ಇಲ್ಲಿರುವದಾಗಿ ತಿಳಿದ ಮಾತ್ರದಿಂದಲೇ, ಸುಗ್ರೀವೇಣ-ಸುಗ್ರೀವನಿಂದ, ವಾನರ-ಕಪಿಗಳ, ಅನೀಕಪೈಃ-ಸೇನಾಧಿಪತಿಗಳಿಂದ, ಸಾರ್ಧಂ-ಕೂಡ, ತೇ-ನಿನ್ನ ಅಂತಿಕಂ-ಸಮೀಪವನ್ನು ಕುರಿತು, ಆಗಮಿಷ್ಯತಿ-ಬರುತ್ತಲಿದ್ದಾನೆ ॥ ೫೫ ॥ ಸಕುಲ-

ಲಂಹತ್ವಾನೇಷ್ಯತಿತ್ವಾಂಸ್ವಕಂಪುರಂ । ಅಭಿಜ್ಞಾಂದೇಹಿಮೇದೇವಿಯಯಾಮಾಂವಿಶ್ವಸೇದ್ವಿಭುಃ॥ ೫೬ ॥ಇತ್ಯುಕ್ತ್ವಾ ಸಾಶಿರೋ
ರತ್ನಂಚೂಡಾಪಾಶಸ್ಥಿತಂಪ್ರಿಯಂ । ದತ್ವಾಕಾಕೇನಯದ್ವೃತ್ತಂಚಿತ್ರಕೂಟಗಿರೌಪುರಾ ॥೫೭॥ ತದಪ್ಯಾಹಾಶ್ರುಪೂ
ರ್ಣಾಕ್ಷೀಕುಶಲಂಬ್ರೂಹಿರಾಘವಂ । ಲಕ್ಷ್ಮಣಂಬ್ರೂಹಿಮೇಕಿಂಚಿದ್ದುರುಕ್ತಂಭಾಷಿತಂಪುರಾ ॥೫೮॥ ತತ್ಕ್ಷಮಸ್ವಾಜ್ಞ
ಭಾವೇನಭಾಷಿತಂಕುಲನಂದನ । ತಾರಯೇನ್ಮಾಂಯಥಾರಾಮಃತಥಾಕುರುಕೃಪಾನ್ವಿತಃ ॥ ೫೯ ॥ ಇತ್ಯುಕ್ತ್ವಾರುದತೀ
ಸೀತಾದುಃಖೇನಮಹತಾವೃತಾ । ಮಯಾಪ್ಯಾಶ್ವಾಸಿತಾರಾಮವದತಾಸರ್ವಮೇವತೇ ॥ ೬೦ ॥ ತತಃಪ್ರಸ್ಥಾಪಿತೋರಾ

ರಾಕ್ಷಸ ಕುಲದಿಂದ ಕೂಡಿರುವ, ರಾವಣಂ-ರಾವಣನನ್ನು, ಹತ್ವಾ-ಕೊಂದು, ತ್ವಾಂ-ನಿನ್ನನ್ನು, ಸ್ವಕಂಪುರಂ-ಸ್ವಂತವಾದ ಅಯೋಧ್ಯಾ ಪುರವನ್ನು ಕುರಿತು, ನೇಷ್ಯತಿ-ಕರೆದುಕೊಂಡು ಹೋಗುತ್ತಾನೆ, ವಿಭುಃ-ಸಮರ್ಥನಾದ ರಾಮಚಂದ್ರನು, ಯಯಾ-ಯಾವ ಗುರ್ತಿನಿಂದ, ಮಾಂ-ನನ್ನನ್ನು, ವಿಶ್ವಸೇತ್-ಪ್ರೀತಿಸುವವನಾಗುತ್ತಾನೋ, ಅಭಿಜ್ಞಾಂ-ಅಂಥಾ ಗುರ್ತನ್ನು, ದೇವಿ-ಸೀತೆಯೇ, ಮೇ-ನನಗೆ, ದೇಹಿ-ಕೊಡು, ||೫೬|| ಇತ್ಯುಕ್ತ್ವಾ-ಈ ಪ್ರಕಾರವಾಗಿ ನನ್ನಿಂದ ಹೇಳಲ್ಪಟ್ಟವಳಾದ, ಸಾ-ಆ ಸೀತೆಯು, ಚೂಡಾಪಾಶೆ-ಹೆರಳಿನಲ್ಲಿ, ಸ್ಥಿತಂ-ಇರುತ್ತಿದ್ದ, ಪ್ರಿಯಂ-ಇಷ್ಟವಾದ, ಶಿರೋರತ್ನಂ-ತಲೆಯಲ್ಲಿ ಧರಿಸಲು ಯೋಗ್ಯವಾದ ಚೂಡಾಮಣಿಯನ್ನು, ದತ್ವಾ-ನನಗೆ ಕೊಟ್ಟು, ಪುರಾ-ಹಿಂದಕ್ಕೆ, ಚಿತ್ರಕೂಟಗಿರೌ-ಚಿತ್ರಕೂಟವೆಂಬ ಹೆಸರುಳ್ಳ ಬೆಟ್ಟದಲ್ಲಿ, ಯದ್ವೃತ್ತಂ-ಯಾವ ಕೆಲಸವು, ಕಾಕೇನ-ಕಾಗೆಯಿಂದ ನಡೆಸಲ್ಪಟ್ಟಿತೋ ||೫೭|| ತದಪಿ-ಆ ಕಾಕಾಸುರನಿಂದ ಮಾಡಲ್ಪಟ್ಟ ಕೆಲಸವನ್ನು, ಅಶ್ರುಪೂರ್ಣಾಕ್ಷೀ-ಅಶ್ರು-ಕಣ್ಣೀರಿನಿಂದ, ಪೂರ್ಣ-ತುಂಬಿದ, ಅಕ್ಷಿ-ನೇತ್ರಗಳುಳ್ಳವಳಾಗಿ, ಆಹ-ಹೇಳಿದಳು, ರಾಘವಂ-ರಾಮಚಂದ್ರನನ್ನು ಕುರಿತು, ಕುಶಲಂ-ಕ್ಷೇಮವನ್ನು ಕೇಳಿದನೆಂಬುವದನ್ನು ಬ್ರೂಹಿ-ಹೇಳು, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, (ಇದಂ-ಈ ಮಾತನ್ನು,) ಬ್ರೂಹಿ-ಹೇಳುವವನಾಗು, ಮೇ-ನನ್ನಿಂದ, ಪುರಾ-ಪೂರ್ವದಲ್ಲಿ, ಕಿಂಚಿತ್-ಸ್ವಲ್ಪವಾಗಿ, ಭಾಷಿತಂ-ಆಡಲ್ಪಟ್ಟಿದ್ದ ದುರುಕ್ತಂ-ಕೆಟ್ಟ ಮಾತು, ಹೇಳಲ್ಪಟ್ಟಿತ್ತು ||೫೮|| ಕುಲನಂದನ-ವಂಶೋದ್ಧಾರಕನಾದ ಲಕ್ಷ್ಮಣನೇ, ಅಜ್ಞಭಾವೇನ-ಮೂಢತನದಿಂದ ಭಾಷಿತಂ-ಹೇಳಲ್ಪಟ್ಟ, ತತ್-ಆ ಮಾತನ್ನು, ಕ್ಷಮಸ್ವ-ಮನ್ನಿಸು, ರಾಮಃ-ರಾಮಚಂದ್ರನು, ಯಥಾ-ಯಾವ ಪ್ರಕಾರವಾಗಿ, ಮಾಂ-ನನ್ನನ್ನು, ತಾರಯೇತ್-ಈ ನಿರ್ಬಂಧದಿಂದ ಬಿಡಿಸುವವನಾಗುವನೋ, ಕೃಪಾನ್ವಿತಃ-ನನ್ನ ಮೇಲೆ ದಯೆಯುಳ್ಳವನಾಗಿ, ತಥಾ-ಆ ರೀತಿಯಾಗಿ, ಕುರು-ಮಾಡು || ೫೯ || ಇತ್ಯುಕ್ತ್ವಾ-ಈ ಮಾತುಗಳನ್ನು ಹೇಳಿ, ರುದತೀ-ಅಳುತ್ತಿರುವವಳಾದ, ಮಹತಾ-ಅಧಿಕವಾದ, ದುಃಖೇನ-ವ್ಯಸನದಿಂದ, ವೃತಾ-ಕೂಡಿದವಳಾದ, ಸೀತಾ-ಸೀತೆಯು, ರಾಮ-ರಾಮಚಂದ್ರನೇ, ತೇ-ನಿನಗೆ, ಸರ್ವಮೇವ-ಎಲ್ಲಾ ವೃತ್ತಾಂತವನ್ನೂ, ವದತಾ-ಹೇಳುತ್ತಿರುವ, ಮಯಾಪಿ-ನನ್ನಿಂದಲೂ, ಆಶ್ವಾಸಿತಾ-ಸಂತೈಸಲ್ಪಟ್ಟವಳಾದಳು || ೬೦|| ತತಃ-ಆಮೇಲೆ, ಪ್ರಸ್ಥಾಪಿತಃ-ಸೀತಾ ದೇವಿಯಿಂದ, ಕಳುಹಿಸಲ್ಪಟ್ಟವನಾಗಿ, ರಾಮ-ರಾಮಚಂದ್ರನೇ,

ಮತ್ತ್ವತ್ಸವಿಾಪಮಿಹಾಗತಃ । ತದಾಗಮನವೇಳಾಯಾಮಶೋಕವನಿಕಾಂಪ್ರಿಯಾಂ ||೬೧|| ಉತ್ಪಾಟ್ಯರಾಕ್ಷಸಾನ್ಸ್ತತ್ರ
ಬಹೂನ್ಹತ್ವಾಕ್ಷಣಾದಹಂ । ರಾವಣಸ್ಯಸುತಂಹತ್ವಾರಾವಣೇನಾಭಿಭಾಷ್ಯಚ || ೬೦ || ಲಂಕಾಮಶೇಷತೋದಗ್ಧ್ವಾಪುನರ
ಪ್ಯಗಮಂಕ್ಷಣಾತ್ । ಶ್ರುತ್ವಾಹನುಮತೋವಾಕ್ಯಂ ರಾಮೋತ್ಯಂತಪ್ರಹೃಷ್ಟಧೀಃ || ೬೩ || ಹನೂಮನ್ತೇಕೃತಂಕಾರ್ಯಂ
ದೇವೈರಪಿಸುದುಷ್ಕರಂ । ಉಪಕಾರಂನಪಶ್ಯಾಮಿತವಪ್ರತ್ಯುಪಕಾರಿಣಃ || ೬೪ || ಇದಾನೀಂತೇಪ್ರಯಚ್ಛಾಮಿಸರ್ವಸ್ವಂಮ
ಮವಾರುತೇ । ಇತ್ಯಾಲಿಂಗ್ಯಸಮಾಕೃಷ್ಯಗಾಢಂವಾನರಪುಂಗವಂ || ೬೫ || ಸಾರ್ದ್ರನೇತ್ರೋರಘುಶ್ರೇಷ್ಠಃಪರಾಂಪ್ರೀ
ತಿಮವಾಪಸಃ । ಹನೂಮಂತಮುವಾಚೇದಂ ರಾಘವೋಭಕ್ತವತ್ಸಲಃ|| ೬೬ || ಪರಿರಂಭೋಹಿಮೇಲೋಕೇದುರ್ಲಭಃಪರಮಾ

ಇಹ-ಇಲ್ಲಿ, ತ್ವತ್ಸವಿಾಪಂ-ನಿನ್ನ ಸವಿಾಪವನ್ನು ಕುರಿತು, ಆಗತಃ-ಬಂದವನಾದೆನು, ತದಾ-ಆಗ, ಗಮನ-ಇಲ್ಲಿಗೆ ಬರುವ ವೇಳಾಯಾಂ-ಸಮಯದಲ್ಲಿ, ಪ್ರಿಯಾಂ-ರಾವಣನಿಗೆ, ಇಷ್ಟವಾಗಿದ್ದ, ಅಶೋಕವನಿಕಾಂ-ಅಶೋಕ ವನವನ್ನು || ೬೧ || ಉತ್ಪಾಟ್ಯ-ಕಿತ್ತು, ಅಹಂ-ನಾನು, ಕ್ಷಣಾತ್-ನಿಮಿಷದಲ್ಲಿ, ಬಹೂನ್-ಅನೇಕರಾದ, ರಾಕ್ಷಸಾನ್-ರಾಕ್ಷಸರನ್ನು, ಹತ್ವಾ-ಕೊಂದು, ತತ್ರ-ಅಲ್ಲಿ, ರಾವಣಸ್ಯ-ರಾವಣನ, ಸುತಂ-ಮಗನಾದ ಅಕ್ಷನೆಂಬುವನನ್ನು, ಹತ್ವಾ-ಸಂಹರಿಸಿ, ರಾವಣೇನ-ರಾವಣನ ಸಂಗಡ, ಅಭಿಭಾಷ್ಯಚ-ಮಾತುಗಳನ್ನೂ ಆ ಡಿ || ೬೦ || ಅಶೇಷತಃ-ಸಶ್ಶೇಷವಾಗಿ, ಲಂಕಾ ಪಟ್ಟಣವನ್ನು ದಗ್ಧ್ವಾ-ಸುಟ್ಟು, ಪುನಃ-ತಿರಿಗಿ, ಕ್ಷಣಾತ್-ನಿಮಿಷದಲ್ಲಿ, ಆಗಮಂ-ಬಂದೆನು, ಹನುಮತಃ-ಆಂಜನೇಯನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ರಾಮಚಂದ್ರನು, ಅತ್ಯಂತ-ಅತಿಶಯವಾಗಿ, ಪ್ರಹೃಷ್ಟ-ಸಂತುಷ್ಟವಾದ, ಧೀಃ-ಬುದ್ಧಿಯುಳ್ಳವನಾಗಿ, (ಅಬ್ರವೀತ್-ಹೇಳಿದನು ||೬೩|| ಹನೂಮನ್-ಆಂಜನೇಯನೇ, ತೇ-ನಿನ್ನಿಂದ, ಕೃತಂ-ಮಾಡಲ್ಪಟ್ಟ, ಕಾರ್ಯಂ-ಕೆಲಸವು, ದೇವೈರಪಿ-ದೇವತೆಗಳಿಂದಲೂ, ಸುದುಷ್ಕರಂ-ಮಾಡಲಶಕ್ಯವಾದದ್ದು, ಪ್ರತ್ಯುಪಕಾರಿಣಃ-ನನಗೆ ಪ್ರತಿಯಾಗಿ ಸಹಾಯ ಮಾಡಿದ, ತವ-ನಿನಗೆ, ಉಪಕಾರಂ-ಪ್ರತಿಯಾಗಿ ಪುನಃ- ಸಹಾಯವನ್ನು, (ಕರ್ತುಂ-ಮಾಡಲು,) ನಪಶ್ಯಾಮಿ-ಇಂಥಾ ಉಪಕಾರವನ್ನು ಮಾಡಬೇಕೆಂಬುವದು ನನಗೆ ಕಾಣುವದಿಲ್ಲ || ೬೪ || ಮಾರುತೇ-ಆಂಜನೇಯನೇ, ಇದಾನೀಂ-ಈಗ, ತೇ-ನಿನಗೆ, ಮಮ-ನನ್ನ, ಸರ್ವಸ್ವಂ-ಆಲಿಂಗನವನ್ನು, ಪ್ರಯಚ್ಛಾಮಿ-ಕೊಡುತ್ತೇನೆ, ಇತಿ-ಹೀಗೆ ಹೇಳಿದವನಾಗಿ, ವಾನರಪುಂಗವಂ-ಕಪಿಶ್ರೇಷ್ಠನಾದ ಆಂಜನೇಯನನ್ನು, ಗಾಢಂ-ಅತಿಶಯವಾಗಿ, (ಅಥವಾ ದೃಢವಾಗಿ) ಆಕೃಷ್ಯ-ಬಾಚಿ, ಆಲಿಂಗ್ಯ-ಅಪ್ಪಿಕೊಂಡು || ೬೫ || ಸಃ-ಜಗತ್ಕರ್ತೃತ್ವವೇ ಮೊದಲಾದ ಪರಮೈಶ್ವರ್ಯವುಳ್ಳವನಾದ, ರಘುಶ್ರೇಷ್ಠಃ-ರಾಮಚಂದ್ರನು, ಸಾರ್ದ್ರನೇತ್ರಃ-ಸಾರ್ದ್ರ-ಆನಂದದಿಂದುಂಟಾದ ಕಣ್ಣೀರಿನಿಂದ ನೆನೆಯಲ್ಪಟ್ಟ, ನೇತ್ರಃ-ಕಣ್ಣುಗಳುಳ್ಳವನಾಗಿ, ಪರಾಂ-ಉತ್ತಮವಾದ, ಪ್ರೀತಿಂ-ವಿಶ್ವಾಸವನ್ನು, ಅವಾಪ-ಹೊಂದಿದನು, ಭಕ್ತವತ್ಸಲ-ಭಕ್ತ-ಭಕ್ತರಲ್ಲಿ, ವತ್ಸಲಃ-ವಿಶ್ವಾಸವುಳ್ಳವನಾದ, ರಾಘವಃ-ರಾಮಚಂದ್ರನು, ಹನೂ

ತ್ಮನಃ । ಅತಸ್ತ್ವಂ ಮಮ ಭಕ್ತೋಽಸಿ ಪ್ರಿಯೋಽಸಿ ಹರಿಪುಂಗವ ॥೬೭॥ ಯತ್ಪಾದಪದ್ಮಯುಗಳಂ ತುಲಸೀದಳಾದ್ಯೈಃ ಸಂಪೂಜ್ಯ ವಿಷ್ಣುಪದವೀಮತುಲಾಂ ಪ್ರಯಾಂತಿ । ತೇನೈವ ಕಿಂ ಪುನರಸೌ ಪರಿರಬ್ಧಮೂರ್ತಿಃ ರಾಮೇಣ ವಾಯುತನಯಃ ಕೃತಪುಣ್ಯಪುಂಜಃ ... ... ... ... ... ... ... ॥೬೮॥

—** ಇತಿ ಶ್ರೀಮದಧ್ಯಾತ್ಮರಾಮಾಯಣೇ—ಉಮಾಮಹೇಶ್ವರಸಂವಾದೇ—ಸುಂದರಕಾಂಡೇ—ಪಂಚಮಸ್ಸರ್ಗಃ. **—

ಮಂತಂ-ಆಂಜನೇಯನನ್ನು ಕುರಿತು, ಇದಂ-ಈ ಮಾತನ್ನು, ಉವಾಚ-ಹೇಳಿದನು ॥ ೬೬ ॥ ಲೋಕೇ-ಪ್ರಪಂಚದಲ್ಲಿ, ಪರಮಾತ್ಮನಃ-ಪರಮಾತ್ಮನಾದ, ಮೇ-ನನ್ನಿಂದ, ಪರಿರಂಭಃ-ಆಲಿಂಗನವು, ದುರ್ಲಭಃ-ಲಭಿಸತಕ್ಕದ್ದಲ್ಲವು, ಹರಿಪುಂಗವ-ಆಂಜನೇಯನೇ, ತ್ವಂ-ನೀನು, ಯತಃ-ಯಾವ ಕಾರಣದಿಂದ, ಮಮ-ನನಗೆ, ಭಕ್ತಃ-ಭಕ್ತನು, ಅಸಿ-ಆಗಿದ್ದೀಯೋ, ಪ್ರಿಯಃ-ಪ್ರೀತಿಪಾತ್ರನು, ಅಸಿ-ಆಗಿದ್ದೀ, ಅತಃ-ಆ ಕಾರಣದಿಂದ, (ತ್ವಯಾ-ನಿನ್ನಿಂದ, ಪರಿರಂಭಃ-ಆಲಿಂಗನವು, ಲಬ್ಧಃ-ಹೊಂದಲ್ಪಟ್ಟಿತು ॥ ೬೭ ॥ ತುಲಸೀದಳಾದ್ಯೈಃ-ತುಳಸೀದಳ-ತುಳಸೀ ದಳವೇ, ಆದ್ಯೈಃ-ಮೊದಲಾದವುಗಳಿಂದ, ಯತ್ಪಾದಪದ್ಮಯುಗಳಂ-ಯತ್ಪಾದ-ಯಾವ ರಾಮಚಂದ್ರನ ಚರಣಗಳ, ಯುಗಳಂ-ಯುಗಳವನ್ನು, ಸಂಪೂಜ್ಯ-ಅರ್ಚಿಸಿ, ಅತುಲಾಂ-ಸಮಾನವಿಲ್ಲದ, ವಿಷ್ಣುಪದವೀಂ-ವಿಷ್ಣುತ್ವವೆಂಬ ಪದವಿಯನ್ನು, ಪ್ರಯಾಂತಿ-ಜನರು ಹೊಂದುತ್ತಿದ್ದಾರೋ, ಕೃತಪುಣ್ಯಪುಂಜಃ-ಪುಣ್ಯ ಸಮೂಹವುಳ್ಳವನಾದ, ವಾಯುತನಯಃ-ಆಂಜನೇಯನು, ತೇನೈವ-ಆ ರಾಮಚಂದ್ರನಿಂದಲೇ, ಪರಿರಬ್ಧ-ಆಲಿಂಗನೆ ಮಾಡಲ್ಪಟ್ಟ, ಮೂರ್ತಿಃ-ದೇಹವುಳ್ಳವನಾದ ಪ್ರಯುಕ್ತ, ಪುನಃ-ತಿರಿಗಿ, ಕಿಂ-ಹೇಳತಕ್ಕದ್ದೇನಿದೆ ... ... ... ... ... ... ... ... ... ॥ ೬೮ ॥

—..* ಇಂತು ಅಧ್ಯಾತ್ಮರಾಮಾಯಣದೊಳುಮಾಮಹೇಶ್ವರ ಸಂವಾದದಲ್ಲಿ ಸುಂದರಕಾಂಡದೊಳು ಐದನೆಯ ಸರ್ಗವು. *..—

ಬೆಂಗಳೂರಲ್ಲಿರುವ ಶ್ರೀ ರಾಜರಾಜೇಶ್ವರೀ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.
೧೮೮೭.

ಶ್ರೀ ರಾ ಮ ಪ್ರ ಸೀ ದ.

# ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡಃ ಪ್ರಾರಂಭಃ

ಮೂ॥ ಶ್ರೀಮಹಾದೇವಉವಾಚ ॥೧॥ ಯಥಾವದ್ಭಾಷಿತಂವಾಕ್ಯಂಶ್ರುತ್ವಾರಾಮೋಹನೂಮತಃ। ಉವಾಚಾನಂತರಂವಾಕ್ಯಂಹರ್ಷೇಣಮಹತಾವೃತಃ ॥೨॥ ಕಾರ್ಯಂಕೃತಂಹನುಮತಾದೇವೈರಪಿಸುದುಷ್ಕರಂ। ಮನಸಾಪಿಯದನ್ಯೇನಸ್ಮರ್ತುಂಶಕ್ಯಂನಭೂತಲೇ॥೩॥ಶತಯೋಜನವಿಸ್ತೀರ್ಣಂಲಂಘಯೇತ್ಕಃಪಯೋನಿಧಿಂ। ಲಂಕಾಂಚರಾಕ್ಷಸೈರ್ಗುಪ್ತಾಂಕೋವಾಧರ್ಷಯಿತುಂಕ್ಷಮಃ॥೪॥ ಭೃತ್ಯಕಾರ್ಯಂಹನುಮತಾಕೃತಂಸರ್ವಮಶೇಷತಃ। ಸುಗ್ರೀವಸದೃಶೋಲೋಕೇನಭೂತೋನಭವಿಷ್ಯತಿ ॥೫॥

ಟೀ॥ ಶ್ರೀಮಹಾದೇವಉವಾಚ,—ಈಶ್ವರನು ಹೇಳುತ್ತಲಿದ್ದಾನೆ, ॥೧॥ ರಾಮಃ-ರಾಮಚಂದ್ರನು, ಯಥಾವತ್-ನಡೆದಂತೆ, ಭಾಷಿತಂ-ಹೇಳಲ್ಪಟ್ಟ, ಹನೂಮತಃ-ಆಂಜನೇಯನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಅನಂತರಂ-ಆ ಬಳಿಕ, ಮಹತಾ-ಹೆಚ್ಚಾದ, ಹರ್ಷೇಣ-ಸಂತೋಷದಿಂದ, ವೃತಃ-ಕೂಡಿದವನಾಗಿ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು, ॥೨॥ ಭೂತಲೇ-ಭೂಮಿಯಲ್ಲಿ, ಅನ್ಯೇನ-ಮತ್ತೊಬ್ಬನಿಂದ, ಮನಸಾಪಿ-ಮನಸ್ಸಿನಿಂದಲೂ, ಯತ್-ಯಾವಕೆಲಸವು, ಸ್ಮರ್ತುಂ-ಸ್ಮರಣಮಾಡುವದಕ್ಕೆ, ನಶಕ್ಯಂ-ಅಸಾಧ್ಯವಾಗಿರುವದೋ, (ಅಂಥಾದ್ದಾದ) ದೇವೈರಪಿ-ದೇವತೆಗಳಿಂದಲೂ, ಸುದುಷ್ಕರಂ-ಮಾಡಲು ಅಸಾಧ್ಯವಾದ, ಕಾರ್ಯಂ-ಕೆಲಸವು, ಹನುಮತಾ-ಆಂಜನೇಯನಿಂದ, ಕೃತಂ-ಮಾಡಲ್ಪಟ್ಟಿತು, ॥೩॥ ಶತಯೋಜನ-ನೂರುಗಾವುದದ, ವಿಸ್ತೀರ್ಣಂ-ವಿಸ್ತಾರದುಳ್ಳಾದ, ಪಯೋನಿಧಿಂ-ಸಮುದ್ರವನ್ನು, ಕಃ-ಯಾವನು ಪ್ಯನು, ಲಂಘಯೇತ್-ದಾಟುವಂಥವನಾದಾನು, ರಾಕ್ಷಸೈಃ-ರಾಕ್ಷಸರಿಂದ, ಗುಪ್ತಾಂ-ಕಾಪಾಡಲ್ಪಟ್ಟ, ಲಂಕಾಂ-ಲಂಕಾಪಟ್ಟಣವನ್ನು, ಧರ್ಷಯಿತುಂ-ಕೆಡಿಸುವದಕ್ಕೆ, ಕಃ-ಯಾವವನು, ಕ್ಷಮಃ-ಸಮರ್ಥನಾದಾನು,॥೪॥ ಹನೂಮತಾ-ಆಂಜನೇಯನಿಂದ, ಸರ್ವಂ-ಸಮಸ್ತವಾದ, ಭೃತ್ಯಕಾರ್ಯಂ-ಭೃತ್ಯ-ದೂತನು ಮಾಡಬೇಕಾದ, ಕಾರ್ಯಂ-ಕೆಲಸವು, ಅಶೇಷತಃ-ಕೊಂಚವೂ ಉಳಿಯದಂತೆ, ಕೃತಂ-ಮಾಡಲ್ಪಟ್ಟಿತು, ಲೋಕೇ-ಪ್ರಪಂಚದಲ್ಲಿ, ಈದೃಶಃ-ಇಂಥಾದೂತನು, ನಭೂತಃ-ಪೂರ್ವದಲ್ಲಿ-ಹುಟ್ಟಿ-ಇರಲಿಲ್ಲ, ನಭವಿಷ್ಯತಿ-ಮುಂದೆ ಇಂಥಾದೂತನು ಮುಂದೆ ಹುಟ್ಟುವದೂ ಇಲ್ಲ,॥೫॥ಅಹಂ-ನಾನು, ರಘುವಂಶಜ-ರಘುಮಹಾರಾಯನವಂಶವು,ಲಕ್ಷ್ಮಣಃ-ಲಕ್ಷ್ಮಣನು, ಕಪೀಶ್ವರಃ-ಕಪಿರಾಜನಾದ

ಮೂ॥ ಅಹಂಚರಘುವಂಶಶ್ಚ ಲಕ್ಷ್ಮಣಶ್ಚ ಕಪೀಶ್ವರಃ । ಜಾನಕ್ಯಾದರ್ಶನೇನಾದ್ಯ ರಕ್ಷಿತಾಸ್ಮೋ ಹನೂಮತಾ ॥೬॥
ಸರ್ವಥಾಸುಕೃತಂಕಾರ್ಯಜಾನಕ್ಯಾಃ ಪರಿಮಾರ್ಗಣಂ ।ಸಮುದ್ರಂಮನಸಾಸ್ಮೃತ್ವಾಸೀದತೀವಮನೋಮಮ ॥೭॥
ಕಥಂನಕ್ರಝಷಾಕೀರ್ಣಂಸಮುದ್ರಂಶತಯೋಜನಂ। ಲಂಘಯಿತ್ವಾರಿಪುಂಹನ್ಯಾಂಕಥಂದ್ರಕ್ಷ್ಯಾಮಿಜಾನಕೀಂ ॥೮॥
ಶ್ರುತ್ವಾತುರಾಮವಚನಂಸುಗ್ರೀವಃಪ್ರಾಹರಾಘವಂ । ಸಮುದ್ರಂಲಘಯಿಷ್ಯಾಮೋಮಹಾನಕ್ರಝಷಾಕುಲಂ ॥೯॥
ಲಂಕಾಂಚವಿಧಮಿಷ್ಯಾಮೋಹನಿಷ್ಯಾಮೋದ್ಯರಾವಣಂ । ಚಿಂತಾಂತ್ಯಜರಘುಶ್ರೇಷ್ಠ ಚಿಂತಾಕಾರ್ಯವಿನಾಶಿನೀ ॥೧೦॥
ಏತಾನ್ಪಶ್ಯಮಹಾಸತ್ವಾನ್ಶೂರಾನ್ವಾನರಪುಂಗವಾನ್। ತ್ವತ್ಪ್ರಿಯಾರ್ಥಂಸಮುದ್ಯುಕ್ತಾನ್ಪ್ರವೇಷ್ಟುಮಪಿಪಾವಕಂ ॥೧೧॥

ಸುಗ್ರೀವನು, ಜಾನಕ್ಯಾಃ-ಸೀತೆಯ, ದರ್ಶನೇನ-ನೋಡಿದ್ದರಿಂದ, ಅದ್ಯ-ಈಗ,ಹನೂಮತಾ-ಆಂಜನೇಯನಿಂದ, ರಕ್ಷಿತಾಃ-ಕಾಪಾಡಲ್ಪಟ್ಟವರು,ಸ್ಮ-ಆಗಿದ್ಧೇವೆ. ॥೬॥

ಟೀ॥ ಜಾನಕ್ಯಾಃ-ಸೀತಾದೇವಿಯು ಪರಿಮಾರ್ಗಣಂ-ಹುಡಿಕಿದ್ದು, ಸರ್ವಥಾ-ಯೆಲ್ಲಾರೀತಿಯಲ್ಲಿ, ಸುಕೃತಂಕಾರ್ಯಂ-ವಳ್ಳೇಕೆಲಸವು, (ಆಯಿತು,) ಸಮುದ್ರ-ಸಮುದ್ರವನ್ನು, ಮನಸಾ-ಚಿತ್ತದಿಂದ, ಸ್ಮೃತ್ವಾ-ಸ್ಮರಿಸಿದರೆ, ಮಮ-ನನ್ನ, ಮನಃ-ಮನಸ್ಸು, ಸೀದತೀವ-ಕಷ್ಟವಾದದ್ದಂದು,(ಅಧೈರ್ಯವನ್ನು ಹೊಂದುತ್ತಲಿಧೆ,)॥೭॥ ನಕ್ರ-ಮೊಸಳೆಗಳಿಂದಲೂ, ಝಷ-ಮತ್ಸ್ಯಗಳಿಂದಲೂ, ಆಕೀರ್ಣಂ-ತುಂಬಿರುವ, ಶತಯೋಜನಂ-ನೂರುಯೋಜನ ವಿಸ್ತಾರವುಳ್ಳದ್ದಾದ, ಸಮುದ್ರಂ-ಸಮುದ್ರವನ್ನು, ಕಥಂ-ಹ್ಯಾಗೆ, ಲಂಘಯಿತ್ವಾ-ದಾಟಿ, ರಿಪುಂ-ಶತೃವಾದ ರಾವಣನನ್ನು, ಹನ್ಯಾಂ-ಕೊಲ್ಲುವೆನು, ಜಾನಕೀಂ-ಸೀತೆಯನ್ನು, ಕಥಂ-ಹ್ಯಾಗೆ, ದ್ರಕ್ಷ್ಯಾಮಿ-ನೋಡುತ್ತೇನೆ॥೮॥ ರಾಮವಚನಂ-ರಾಮ-ರಾಮಚಂದ್ರನ, ವಚನಂ-ಮಾತನ್ನು,ಶ್ರುತ್ವಾ-ಕೇಳಿ, ಸುಗ್ರೀವಃ-ಸುಗ್ರೀವನು, ರಾಘವಂ-ರಾಮಚಂದ್ರನನ್ನು ಕುರಿತು,ಪ್ರಾಹ-ಹೇಳಿದನು, ಮಹಾ-ದೊಡ್ಡವುಗಳಾದ, ನಕ್ರ-ಮೊಸಳೆಗಳಿಂದಲೂ, ಝಷ-ಮತ್ಸ್ಯಗಳಿಂದಲೂ,ಆಕುಲಂ-ವ್ಯಾಪ್ತವಾಗಿರುವ, ಸಮುದ್ರಂ-ಸಮುದ್ರವನ್ನು, ಲಂಘಯಿಷ್ಯಾಮಃ-ದಾಟುವಂಥವರಾಗುತ್ತೇವೆ,॥೯॥ಲಂಕಾಂಚ-ಲಂಕಾಪಟ್ಟಣವನ್ನು, ವಿಧಮಿಷ್ಯಾಮಃ-ನಾಶಮಾಡುತ್ತೇವೆ, ಅದ್ಯ-ಈಗ, ರಾವಣಂ-ರಾವಣನನ್ನು, ಹನಿಷ್ಯಾಮಃ-ಕೊಲ್ಲುತ್ತೇವೆ,ರಘುಶ್ರೇಷ್ಠ-ರಾಮಚಂದ್ರನೇ, ಚಿಂತಾಂ-ವ್ಯಥೆಯನ್ನು, ತ್ಯಜ-ಬಿಡು, ಚಿಂತಾ-ವ್ಯಥೆಯು, ಕಾರ್ಯವಿನಾಶಿನೀ-ಕಾರ್ಯ-ಕೆಲಸವನ್ನು, ವಿನಾಶಿನೀ-ಕೆಡಿಸುವಂಥಾದ್ದಾಗುವದು, ॥೧೦॥ ಮಹಾಸತ್ವಾನ್-ಅಧಿಕಬಲರಾದ, ಶೂರಾನ್-ವೀರರಾದ, ವಾನರಪುಂಗವಾನ್-ಕಪಿಶ್ರೇಷ್ಠರಾದ, ತ್ವತ್ಪ್ರಿಯಾರ್ಥಂ-ನಿನಗೆ ಹಿತವನ್ನು ಮಾಡುವದಕ್ಕೋಸ್ಕರ, ಪಾವಕಂ-ಬೆಂಕಿಯನ್ನು, ಪ್ರವೇಷ್ಟುಂ-ಪ್ರವೇಶಿಸುವದಕ್ಕೆ, ಸಮುದ್ಯುಕ್ತಾನ್-ಸಿದ್ಧರಾಗಿರುವ, ಏತಾನ್-ಈ ಕಪಿಗಳನ್ನು, ಪಶ್ಯ-ನೋಡು, ॥೧೧॥ ಸಮುದ್ರ-ಸಮುದ್ರವನ್ನು, ತರಣೇ-ದಾ

ಸಮುದ್ರತರಣೆಬುದ್ಧಿಂಕುರುಷ್ವಪ್ರಥಮಂತತಃ । ದೃಷ್ಟ್ವಾಲಂಕಾಂದಶಗ್ರೀವೋಹತಇತ್ಯೇವಮನ್ಮಹೆ ॥೧೨॥
ನಹಿಪಶ್ಯಾಮ್ಯಹಂಕಿಂಚಿತ್ತ್ರಿಷುಲೋಕೇಷುರಾಘವ । ಗೃಹೀತಧನುಷೋಯಸ್ತೇತಿಷ್ಠೇದಭಿಮುಖೋರಣೇ ॥೧೩॥
ಸರ್ವಥಾನೋಜಯೋರಾಮಭವಿಷ್ಯತಿನಸಂಶಯಃ ।ನಿಮಿತ್ತಾನಿಚಪಶ್ಯಾಮಿತಥಾಭೂತಾನಿಸರ್ವಶಃ ॥೧೪॥
ಸುಗ್ರೀವವಚನಂಶ್ರುತ್ವಾಭಕ್ತಿವೀರ್ಯಸಮನ್ವಿತಂ ।ಅಂಗೀಕೃತ್ಯಾಬ್ರವೀದ್ರಾಮೋಹನೂಮಂತಂಪುರಸ್ಥಿತಂ ॥೧೫॥
ಏನಕೇನಪ್ರಕಾರೇಣಲಂಘ್ಯಾಮೋಮಹಾರ್ಣವಂ।ಲಂಕಾಸ್ವರೂಪಂಮೆಬ್ರೂಹಿದುಸ್ಸಾಧ್ಯಂದೇವದಾನವೈಃ ॥೧೬॥
ಜ್ಞಾತ್ವಾತಸ್ಯಪ್ರತೀಕಾರಂಕರಿಷ್ಯಾಮಿಕಪೀಶ್ವರ । ಶ್ರುತ್ವಾರಾಮಸ್ಯವಚನಂಹನೂಮಾನ್ವಿನಯಾನ್ವಿತಃ ॥೧೭॥

ಟುವದರಲ್ಲಿ, ಪ್ರಥಮಂ-ಮೊದಲು, ಬುದ್ಧಿಂ-ಬುದ್ಧಿಯನ್ನು, ಕುರುಷ್ವ-ಮಾಡು, ತತಃ-ಆ ಬಳಿಕ, ಲಂಕಾಂ-ಲಂಕಾಪಟ್ಟಣವನ್ನು, ದೃಷ್ಟ್ವಾ-ನೋಡಿ, ದಶಗ್ರೀವಃ-ರಾವಣನು, ಹತಇತ್ಯೇವ-ಸತ್ತನು ಎಂಬದಾಗಿಯೆ, ಮನ್ಮಹೆ-ತಿಳಿಯುತ್ತೇವೆ, ॥೧೨॥ ರಾಘವ-ರಾಮಚಂದ್ರನೆ, ರಣೇ-ಯುದ್ಧದಲ್ಲಿ, ಗೃಹೀತಧನುಷಃ-ಗೃಹೀತ-ಒಡಿಯಲ್ಪಟ್ಟ, ಧನುಷಃ-ಬಿಲ್ಲುಳ್ಳವನಾದ, ತೇ-ನಿನಗೆ, ಅಭಿಮುಖಃ-ಯದುರಾಗಿ, ಯಃ-ಯಾವನು, ತಿಷ್ಠೇತ್-ನಿಲ್ಲುವಂಥವನಾಗುವನೋ, (ಅಂಥಾವನನ್ನು) ಕಿಂಚಿತ್-ಸ್ವಲ್ಪವಾಗಿ ಆದರೂ, ತ್ರಿಷುಲೋಕೇಷು-ಮೂರುಲೋಕಗಳಲ್ಲಿ, ಅಹಂ-ನಾನು, ನಹಿಪಶ್ಯಾಮಿ-ನೋಡುವವನಾಗುವದಿಲ್ಲ, ॥೧೩॥ ರಾಮ-ರಾಮಚಂದ್ರನೇ, ಸರ್ವಥಾ-ಸರ್ವಪ್ರಕಾರವಾಗಿಯೂ, ನಃ-ನಮ್ಮಗಳಿಗೆ, ಜಯಃ-ಶತ್ರುಜಯವು, ಭವಿಷ್ಯತಿ-ಆಗುತ್ತೆ, ನಸಂಶಯಃ-ಸಂದೇಹವಿಲ್ಲ, ಸರ್ವಶಃ-ಸಮಸ್ತರೀತಿಯಲ್ಲಿಯೂ, ತಥಾಭೂತಾನಿ-ಜಯಸೂಚಕಗಳಾದ, ನಿಮಿತ್ತಾನಿ-ಶಕುನಗಳನ್ನು, ಪಶ್ಯಾಮಿ-ನೋಡುತ್ತಲಿದ್ದೇನೆ, ॥೧೪॥ ಭಕ್ತಿ-ಭಕ್ತಿಯಿಂದಲೂ, ವೀರ್ಯ-ಸಾಮರ್ಥ್ಯದಿಂದಲೂ, ಸಮನ್ವಿತಂ-ಕೂಡಿಯಿರುವ, ಸುಗ್ರೀವ-ಸುಗ್ರೀವನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ರಾಮಚಂದ್ರನು, ಅಂಗೀಕೃತ್ಯ-ಸುಗ್ರೀವನಮಾತನ್ನು ಒಪ್ಪಿ, ಪುರಃ-ಮುಂದೆ, ಸ್ಥಿತಂ-ಇರುತ್ತಿರುವ, ಹನೂಮಂತಂ-ಆಂಜನೇಯನನ್ನು ಕುರಿತು, ಅಬ್ರವೀತ್-ಹೇಳಿದನು, ॥೧೫॥ ಏನಕೇನ-ಯಾವದಾದರೂ, ಪ್ರಕಾರೇಣ -ರೀತಿಯಿಂದ, ಮಹಾರ್ಣವಂ-ಸಮುದ್ರವನ್ನು, ಲಂಘ್ಯಾಮಃ-ದಾಟುವಂಥವರಾಗೋಣ, ದೇವದಾನವೈಃ-ದೇವತೆಗಳಿಂದಲೂ-ರಾಕ್ಷಸರಿಂದಲೂ, ದುಸ್ಸಾಧ್ಯಂ-ಸಾಧಿಸುವದಕ್ಕೆ ಅಸಾಧ್ಯವಾದ,ಲಂಕಾಸ್ವರೂಪಂ-ಲಂಕಾಪಟ್ಟಣವಿರುವರೀತಿಯನ್ನು, ಮೆ-ನನಗೆ, ಬ್ರೂಹಿ-ಹೇಳು,॥೧೬॥ಜ್ಞಾತ್ವಾ-ಲಂಕೆಯದುರ್ಗಕರ್ಮವಿಧಾನವನ್ನು ತಿಳಿದು,ತಸ್ಯ-ಅದಕ್ಕೆ,ಪ್ರತೀಕಾರಂ-ಪ್ರತಿಕ್ರಿಯೆಯನ್ನು,ಕಪೀಶ್ವರ-ಆಂಜನೇಯನೇ, ಕರಿಷ್ಯಾಮಿ-ಮಾಡುತ್ತೇನೆ, ರಾಮಸ್ಯ-ರಾಮಚಂದ್ರನ, ವಚನಂ-ಮಾತನ್ನು,ಶ್ರುತ್ವಾ-ಕೇಳಿ,ಹನೂಮಾನ್-ಆಂಜನೇಯನು,ವಿನಯಾನ್ವಿತಃ-ವಿನಯ-ನಯದಿಂದ, ಅನ್ವಿತಃ-ಕೂಡಿದವನಾಗಿ, ॥೧೭॥ ಪ್ರಾಂಜಲಿಃ-ಮುಕುಳಿತಹಸ್ತನಾಗಿ, ದೇವ-ಸ್ವಾಮಿಯೆ, ಯಥಾದೃಷ್ಟಂ-ನಾನುನೋಡಿದಂತೆ, ತೇ-ನಿನಗೆ,ಬ್ರವೀಮಿ-ಹೇಳುತ್ತೇನೆ,

ಉವಾಚಸಾಂಜಲಿರ್ದೇವಯಥಾದೃಷ್ಟಂಬ್ರವೀಮಿತೇ। ಲಂಕಾದಿವ್ಯಪುರೀದೇವತ್ರಿಕೂಟಶಿಖರೇಸ್ಥಿತಾ ॥೧೮॥
ಸ್ವರ್ಣಪ್ರಾಕಾರಸಹಿತಾಸ್ವರ್ಣಾಟ್ಟಾಲಕಸಂಯುತಾ । ಪರಿಖಾಭಿಃಪರಿವೃತಾಪೂರ್ಣಾಭಿಃನಿರ್ಮಲೋದಕೈಃ ॥೧೯॥
ನಾನೋಪವನಶೋಭಾಢ್ಯಾದಿವ್ಯವಾಪೀಭಿರಾವೃತಾ। ಗೃಹೈರ್ವಿಚಿತ್ರಶೋಭಾಢ್ಯೈರ್ಮಣಿಸ್ತಂಭಮಯೈಶ್ಶುಭೈಃ ॥ ॥೨೦॥
ಪಶ್ಚಿಮದ್ವಾರಮಾಸಾದ್ಯಗಜವಾಹಾಸಹಸ್ರಶಃ ।ಉತ್ತರೇದ್ವಾರಿತಿಷ್ಠಂತಿಸಾಶ್ವವಾಹಾಸ್ಸಪತ್ತಯಃ ॥೨೧॥
ತಿಷ್ಠಂತ್ಯರ್ಬುದಸಂಖ್ಯಾಕಾಃಪ್ರಾಚ್ಯಾಮಪಿತಥೈವಚ । ರಕ್ಷಿಣೋರಾಕ್ಷಸಾವೀರಾದ್ವಾರಂದಕ್ಷಿಣಮಾಶ್ರಿತಾಃ ॥೨೨॥



ಲಂಕಾ-ಲಂಕೆಯೆಂಬಹೆಸರುಳ್ಳ, ದಿವ್ಯಪುರೀ-ದೇವತಾಯೋಗ್ಯವಾದಪಟ್ಟಣವು,ತ್ರಿಕೂಟ-ಮೂರುಶಿಖರಗಳುಳ್ಳದ್ದಾದ್ದರಿಂದತ್ರಿಕೂಟವೆಂಬ ಹೆಸರುಳ್ಳಬೆಟ್ಟದ,ಶಿಖರೇ-ಶೃಂಗದಲ್ಲಿ,ಸ್ಥಿತಾ-ಇರುತ್ತಿದೆ.॥೧೮॥ಸ್ವರ್ಣಪ್ರಾಕಾರಸಹಿತಾ-ಸ್ವರ್ಣ-ಭಂಗಾರಮಯವಾದ,ಪ್ರಾಸಾದ-ಕೋಟೆಯ ಗೋಡೆಯಿಂದಲೂ,ಸ್ವರ್ಣಾಟ್ಟಾಲಕಸಂಯುತಾ-ಸ್ವರ್ಣ-ಸ್ವರ್ಣಮಯವಾದ, ಅಟ್ಟಾಲಕ-ಕೋಟೆಯ ಬಾಕಲಿನ ಮೇಲೆ ಯಿರುವ ಮನೆಗಳಿಂದಲೂ, ಸಂಯುತಾ-ಕೂಡಿಯಿರುವ, ನಿರ್ಮಲೋದಕೈಃ-ನಿರ್ಮಲ-ಸ್ವಚ್ಛವಾದ, ಉದಕೈಃ-ನೀರುಗಳಿಂದ, ಪೂರ್ಣಾಭಿಃ-ತುಂಬಲ್ಪಟ್ಟಿರುವ, ಪರಿಖಾಭಿಃ-ಅಗಳ್ತೆಗಳಿಂದ, ಪರಿವೃತಾ-ಸುತ್ತಲ್ಪಟ್ಟಿರುವ,॥೧೯॥ನಾನಾ-ಬಗೆಬಗೆಯಾದ, ಉಪವನ-ತೋಟಗಳ, ಶೋಭಾ-ಕಾಂತಿಯಿಂದ ಆಢ್ಯಾ-ಕೂಡಿರುವ,ದಿವ್ಯ-ದೇವತಾಯೋಗ್ಯವಾದ,ವಾಪೀಭಿಃ-ಸರಸ್ಸುಗಳಿಂದ,ಆವೃತಾ-ಆವರಿಸಲ್ಪಟ್ಟಿರುವ,ವಿಚಿತ್ರ-ಆಶ್ಚರ್ಯಕರವಾದ, ಶೋಭಾ-ಕಾಂತಿಯಿಂದ, ಆಢ್ಯೈಃ-ವೊಪ್ಪುತ್ತಲಿರುವ,ಶುಭೈಃ-ಮಂಗಳಕರಗಳಾದ,ಮಣಿಸ್ತಂಭಮಯೈಃ-ಮಣಿ-ಮಣಿವಿಕಾರಗಳಾದ,ಸ್ತಂಭ-ಕಂಭಗಳ, ಮಯೈಃ-ಆಸರೆವುಳ್ಳವುಗಳಾದ,ಗೃಹೈಃ-ಮನೆಗಳಿಂದ,(ಸಂಯುತಾ-ಕೂಡಿರುವಪಾದ,ಲಂಕಾಪಟ್ಟಣವು,)ತ್ರಿಕೂಟಪರ್ವತಶೃಂಗದಮೇಲೆ ಇರುತ್ತೆ॥೨೦॥ಸಹಸ್ರಶಃ-ಸಹಸ್ರಸಂಖ್ಯೆಯಾಗಿ,ಗಜವಾಹಾಃ-ಗಜಾರೂಢರಾದ ಯೋಧರು,ಪಶ್ಚಿಮದ್ವಾರಂ-ಪಡುವಣಬಾಗಿಲನ್ನು,ಅಸಾದ್ಯ-ಹೊಂದಿ,ತಿಷ್ಠಂತಿ-ಇರುತ್ತಾರೆ, ಸಪತ್ತಯಃ-ಕಾಲುಬಲದ ಜನರಿಂದ ಕೂಡಿ,ಸಾಶ್ವವಾಹಾಃ-ಕುದುರೆಯಮೇಲೆ ಹತ್ತುವವರಾದ ಶೂರರು, ಉತ್ತರೆ, ದ್ವಾರಿ-ಬಡುಗಣ ಬಾಗಲಲ್ಲಿ,ತಿಷ್ಠಂತಿ-ಇರುತ್ತಾರೆ.॥೨೧॥ಪ್ರಾಚ್ಯಾಮಪಿ-ಪೂರ್ವದಿಕ್ಕಿನಲ್ಲಿಯೂ,ಅರ್ಬುದಸಂಖ್ಯಾಕಾಃ- ಅರ್ಬುದಸಂಖ್ಯೆವುಳ್ಳವರಾದಶೂರರು, ತಿಷ್ಠಂತಿ-ಇರುತ್ತಾರೆ, ತಥೈವಚ-ಹಾಗೆಯೇ, ಅರ್ಬುದಸಂಖ್ಯೆಯುವರಾದ, ವೀರಾಃ-ಶೂರರಾದ, ರಕ್ಷಿಣಃ-ದಕ್ಷಿಣದ್ವಾರರಕ್ಷಕರಾದ, ರಾಕ್ಷಸಾಃ-ರಾಕ್ಷಸರು, ದಕ್ಷಿಣಂ- ದ್ವಾರಂ-ತೆಂಕಣಬಾಗಿಲನ್ನು, ಆಶ್ರಿತಾಃ-ಆಶ್ರಯಮಾಡಿಕೊಂಡು ಕಾವಲಾಗಿರುತ್ತಾರೆ. ॥೨೨॥ ಮಧ್ಯಕಕ್ಷೆ-ಮಧ್ಯದೇಶದಲ್ಲಿ, ಅಸಂಖ್ಯಾತಾಃ-ಲೆಖ್ಖವಿಲ್ಲದವರಾದ, ಗಜಾಶ್ವರಥಪತ್ತಯಃ-ಗಜ-ಆನೆಗಳು, ಅಶ್ವ-ಕುದುರೆಗಳು, ರಥ-ತೇರುಗಳು, ಪತ್ತಯಃ-ಕಾಲಾಳುಗಳು, ನಾನಾಸ್ತ್ರಕುಶಲಾಃ-ನಾನಾ-ಬಗೆಬಗೆಯಾದ, ಅಸ್ತ್ರ- ಅಸ್ತ್ರಗಳನ್ನು, ಕುಶಲಾಃ-ತಿಳಿದವರಾದರು, ಪ್ರಭೋ-ರಾಮಚಂದ್ರನೆ,ಸದಾ-ಯಾವಾಗಲೂ,ಲಂಕಾಂ-ಲಂಕಾಪಟ್ಟಣವನ್ನು, ರಕ್ಷಯಂತಿ-ಕಾಪಾಡುತ್ತಲಿದ್ದಾರೆ.॥೨೩॥ವಿವಿಧೈಃ-ನಾನಾವಿ

ಸಪೌರಾಂ ಸುದುರ್ಗ್ಧರ್ಷಾಂ ನಾಶಯಾಮಿ ಸರಾವಣಾಂ । ಆನೇಷ್ಯಾಮಿ ಚ ಸೀತಾಂ ಮೇ ದಕ್ಷಿಣಾಕ್ಷಿ ಸ್ಫುರತ್ಯಧಃ ॥೨೦॥

ಪ್ರಯಾತು ವಾಹಿನೀ ಸರ್ವಾ ವಾನರಾಣಾಂ ತರಸ್ವಿನಾಂ । ರಕ್ಷಂತು ಯೂಥಪಾಸ್ಸೇನಾಮಗ್ರೇ ಪೃಷ್ಠೇ ಚ ಪಾರ್ಶ್ವಯೋಃ ॥೨೧॥

ಹನೂಮಂತಮಥಾರುಹ್ಯ ಗಚ್ಛಾಮ್ಯಗ್ರೇಂಗದಂ ತತಃ । ಆರುಹ್ಯ ಲಕ್ಷ್ಮಣೋ ಯಾತು ಸುಗ್ರೀವ ತ್ವಂ ಮಯಾ ಸಹ ॥೨೨॥

ಗಜೋ ಗವಾಕ್ಷೋ ಗವಯೋ ಮೈಂದೋ ದ್ವಿವಿದ ಏವ ಚ । ನಲೋ ನೀಲಸ್ಸುಷೇಣಶ್ಚ ಜಾಂಬವಾನ್ ತಥಾಪರೇ ॥೨೩॥

ಸರ್ವೇ ಗಚ್ಛಂತು ಸರ್ವತ್ರ ಸೇನಾಯಾಶ್ಶತ್ರುಘಾತಿನಃ । ಇತ್ಯಾಜ್ಞಾಪ್ಯ ಹರೀನ್ ರಾಮಃ ಪ್ರತಸ್ಥೇ ಸಹಲಕ್ಷ್ಮಣಃ ॥೨೪॥

ಜಯಿಸಲಸಾಧ್ಯವಾದ, ಸರಾವಣಾಂ-ರಾವಣನಿಂದ ಕೂಡಿರುವ, (ಲಂಕಾಪಟ್ಟಣವನ್ನು) ನಾಶಯಾಮಿ-ನಾಶನಮಾಡುತ್ತೇನೆ, ಸೀತಾಂ-ಸೀತೆಯನ್ನು, ಆನೇಷ್ಯಾಮಿ ಚ-ತರುತ್ತೇನೆ, ಮೇ-ನನಗೆ, ಅಧಃ-ಕೆಳಗಣ, ದಕ್ಷಿಣಾಕ್ಷಿ-ಬಲದ ಕಣ್ಣುರೆಪ್ಪೆಯು, ಸ್ಫುರತಿ-ಅದರುತ್ತಿದೆ. ॥೨೦॥ ತರಸ್ವಿನಾಂ-ವೇಗವಂತರಾದ, ವಾನರಾಣಾಂ-ಕಪಿಗಳ, ಸರ್ವಾವಾಹಿನೀ-ಸಮಸ್ತಸೇನೆಯು, ಪ್ರಯಾತು-ಪ್ರಯಾಣಮಾಡಿಕೊಂಡು ನಡಿಯಲಿ, ಯೂಥಪಾಃ-ಸೇನಾನಾಯಕರು, ಅಗ್ರೇ-ಸೇನೆಯಮುಂದೆ, ಪೃಷ್ಠೇ-ಹಿಂದೆ, ಪಾರ್ಶ್ವಯೋಃ-ಇಕ್ಕೆಲದೊಳಗೆ, ಸೇನಾಂ-ಸೇನೆಯನ್ನು, ರಕ್ಷಂತು-ಕಾಪಾಡಲಿ. ॥೨೧॥ ಹನೂಮಂತಂ-ಆಂಜನೇಯನನ್ನು, ಅಥ-ಆಬಳಿಕ, ಆರುಹ್ಯ-ನಾನು ಏರಿ, ಅಗ್ರೇ-ಮುಂದೆ, ಗಚ್ಛಾಮಿ-ಹೋಗುತ್ತೇನೆ, ತತಃ-ಆ ಬಳಿಕ, ಅಂಗದಂ-ಅಂಗದನನ್ನು, ಲಕ್ಷ್ಮಣಃ-ಲಕ್ಷ್ಮಣನು, ಆರುಹ್ಯ-ಏರಿ, ಯಾತು-ಹೋಗಲಿ, ಸುಗ್ರೀವ-ಸುಗ್ರೀವನೆ, ತ್ವಂ-ನೀನು, ಮಯಾಸಹ-ನನ್ನ ಸಂಗಡ, (ಆಗಚ್ಛ-ಬರುವವನಾಗು.) ॥೨೨॥ ಗಜಃ-ಗಜನು, ಗವಾಕ್ಷಃ-ಗವಾಕ್ಷನು, ಗವಯಃ-ಗವಯನು, ಮೈಂದಃ-ಮೈಂದನು, ದ್ವಿವಿದಃ-ದ್ವಿವಿದನು, ನಲಃ-ನಲನು, ನೀಲಃ-ನೀಲನು, ಸುಷೇಣಃ-ಸುಷೇಣನು, ಜಾಂಬವಾನ್-ಜಾಂಬವಂತನು, ತಥಾ-ಹಾಗೆ, ಅಪರೇ-ಅನ್ಯರಾದ, ಸರ್ವೇ-ಯಲ್ಲಾ ಕಪಿಗಳು, ॥೨೩॥

ಟೀ॥ ಸೇನಾಯಾಃ-ಸೇನೆಯ, ಸರ್ವತ್ರ-ಸುತ್ತಲೂ ಶತ್ರುಘಾತಿನಃ-ಹಗೆಗಳನ್ನು ಕೊಲ್ಲುವವರಾಗಿ, ಗಚ್ಛಂತು-ಪ್ರಯಾಣ ಮಾಡಿಹೋಗಲಿ. ಇತಿ-ಈ ಪ್ರಕಾರವಾಗಿ, ಹರೀನ್-ಕಪಿಗಳನ್ನು ಕುರಿತು, ಆಜ್ಞಾಪ್ಯ-ಅಪ್ಪಣೆಮಾಡಿ, ಸಹಲಕ್ಷ್ಮಣಃ-ಲಕ್ಷ್ಮಣನಿಂದ ಕೂಡಿದವನಾದ, ರಾಮಃ-ರಾಮಚಂದ್ರನು, ಪ್ರತಸ್ಥೇ-ಹೊರಟನು॥೨೪ ವಿಭುಃ-ತತ್ವಾವಧಾರಣ ಸಮರ್ಥನಾದ, ಸುಗ್ರೀವಸಹಿತಃ-ಸುಗ್ರೀವನಿಂದ ಕೂಡಿದವನಾದ, (ರಾಮಚಂದ್ರನು,) ಹರ್ಷಾತ್-ಸಂತೋಷದಿಂದ, ಸೇನಾಮಧ್ಯಗತಃ- ಸೇನಾ-ಸೇನೆಯ, ಮಧ್ಯ-ಮಧ್ಯವನ್ನು, ಗತಃ-ಹೊಂದಿದವನಾಗಿ, (ಪ್ರತಸ್ಥೇ-ಹೊರಟುಹೋದನು,) ವಾರಣೇಂದ್ರ-ಗಜಶ್ರೇಷ್ಠಗಳಿಗೆ, ನಿಭಾಃ-ಸಮರಾದ, ಕಾಮರೂಪಿಣಃ-ಇಚ್ಛಾರೂಪಿಗಳಾದ, ಸರ್ವೇ-ಯಲ್ಲಾ, ವಾನರಾಃ-ಕಪಿಗಳು, ಪ್ರತಸ್ಥಿರೇ-ಹೊರಟವರಾದರು. ॥೨೫॥ ಕ್ಷ್ವೇಳಂತಃ-(ಕ್ಷ್ವೇಡಂತಃ-)ಸಿಹ್ಮನಾದವನ್ನು ಮಾಡುತ್ತಿರುವವರಾಗಿ, ತೇ-ಆ ಕಪಿಗಳು, ದಕ್ಷಿಣಾಂದಿಶಂ-ದಕ್ಷಿಣ ದಿಕ್ಕನ್ನು ಕುರಿತು, ಜಗ್ಮುಃ-ಹೊರಟುಹೋದರು, ಸರ್ವೇ-ಯಲ್ಲಾ ಕಪಿಗಳು, ಮಧೂನಿಚ - ಮಧುಗಳನ್ನು, ಭಕ್ಷಯಂತಃ -

ಮಧ್ಯೆ ಕಕ್ಷ್ಯೆಸ್ಸಂಖ್ಯಾತಾಃಗಜಾಶ್ವರಥಪತ್ತಯಃ। ರಕ್ಷಯಂತಿಸದಾಲಂಕಾಂನಾನಾಸ್ತ್ರಕುಶಲಾಃಪ್ರಭೋ ॥೧೩॥
ಸಂಕ್ರಮೈರ್ವಿವಿಧೈರ್ಲಂಕಾಶತಘ್ನೀಭಿಶ್ಚ ಸಂಯುತಾ।ಏವಂಸ್ಥಿತೆಪಿದೆವಶೃಣುಮೆತತ್ರಚೇಷ್ಟಿತಂ ॥೧೪॥
ದಶಾನನಬಲೌಘಸ್ಯಚತುರ್ಥಾಂಶೋಮಯಾಹತಃ। ದಗ್ಧಾಲಂಕಾಪುರೀಸ್ವರ್ಣಪ್ರಾಕಾರೋಧರ್ಷಿತೋಮಯಾ ॥೧೫॥
ಶತಘ್ನ್ಯಸ್ಸಂಕ್ರಮಾಶ್ಚೈವನಾಶಿತಾಮೆರಘೂತ್ತಮ।ದೆವತ್ವದ್ದರ್ಶನಾದೆವಲಂಕಾಭಸ್ಮೀಕೃತಾಭವೇತ್ ॥೧೬॥
ಪ್ರಸ್ಥಾನಂಕುರುದೇವೇಶಗಚ್ಛಾಮೋಲವಣಾಂಬುಧೇಃ। ತೀರಂಸಹಮಹಾವೀರ್ಯೈರ್ವಾನರೌಘೈಸ್ಸಮಂತತಃ ॥೧೭॥
ಶ್ರುತ್ವಾಹನುಮತೋವಾಕ್ಯಮುವಾಚರಘುನಂದನಃ। ಸುಗ್ರೀವಸೈನಿಕಾನ್ಸರ್ವಾನ್ಪ್ರಸ್ಥಾನಾಯಸಮಾದಿಶ ॥೧೮॥

ಧಗಳಾದ, ಸಂಕ್ರಮೈಃ-ಯಲ್ಲರೂ ಪ್ರವೇಶಿಸಲು, ಆಗದಂತೆ ಕಟ್ಟಿರುವ ಮಾರ್ಗಗಳಿಂದ,ಶತಘ್ನೀಭಿಃ-ಪಿರಂಗಿಗಳಿಂದಲೂ,ಲಂಕಾ -ಲಂಕಾಪಟ್ಟಣವು, ಸಂಯುತಾ-ಕೂಡಿರುವದಾಗಿದೆ, ಏವಂ-ಹೀಗೆ-ಸ್ಥಿತೆಪಿ-ಪ್ರವೇಶಕ್ಕೆ ಅಸಾಧ್ಯವಾಗಿದ್ದಾಗ್ಯೂ, ತತ್ರ-ಆ ಲಂಕೆಯಲ್ಲಿ, ಮೆ-ನನ್ನಿಂದ, ಚೇಷ್ಟಿತಂ-ನಡಿಸಲ್ಪಟ್ಟದ್ದನ್ನು,ಶೃಣು-ಕೇಳು.॥೧೪॥ದಶಾನನಬಲೌಘಸ್ಯ-ದಶಾನನ-ರಾವಣನ, ಬಲ-ಸೈನ್ಯದ, ಓಘಸ್ಯ-ಸಮೂಹದ, ಚತುರ್ಥಾಂಶಃ-ನಾಲ್ಕರಲ್ಲಿ ಒಂದುಭಾಗವು,ಮಯಾ-ನನ್ನಿಂದ,ಹತಃ-ಸಂಹರಿಸಲ್ಪಟ್ಟಿತು,ಲಂಕಾಪುರೀ-ಲಂಕಾಪಟ್ಟಣವು,ದಗ್ಧಾ-ಸುಡಲ್ಪಟ್ಟಿತು,ಮಯಾ-ನನ್ನಿಂದ, ಸ್ವರ್ಣಪ್ರಾಕಾರಃ-ಭಂಗಾರುಮಯವಾದ ಪ್ರಾಕಾರವು, ಧರ್ಷಿತಃ-ನಾಶಮಾಡಲ್ಪಟ್ಟಿತು.॥೧೫॥ರಘೂತ್ತಮ- ರಾಮಚಂದ್ರನೇ, ಶತಘ್ನ್ಯಃ-ಪಿರಂಗಿಗಳು, ಸಂಕ್ರಮಾಶ್ಚ -ದುರವಗಾಹವಾಗಿ ಹೋಗಲು ಆಗದಂತೆ ಕಟ್ಟಿದ ಮಾರ್ಗಗಳು-ಮೆ-ನನ್ನಿಂದ, ನಾಶಿತಾಃ-ನಾಶಮಾಡಲ್ಪಟ್ಟವು, ದೇವ-ಸ್ವಾಮಿಯೇ, ತ್ವದ್ದರ್ಶನಾದೇವ-ನಿನ್ನ ದೃಷ್ಟಿ ಬೀಳುವದರಿಂದಲೇ, ಲಂಕಾ-ಲಂಕಾಪಟ್ಟಣವು, ಭಸ್ಮೀಕೃತಾ-ಭಸ್ಮವಾಗಿ ಮಾಡಲ್ಪಟ್ಟದ್ದು, ಭವೇತ್-ಆಗೀತು.॥೧೬॥ ದೇವೇಶ-ದೇವತೆಗಳಿಗೆಲ್ಲಾ ಸ್ವಾಮಿಯಾದ ರಾಮಚಂದ್ರನೇ, ಪ್ರಸ್ಥಾನಂ-ಪ್ರಯಾಣವನ್ನು, ಕುರು-ಮಾಡು, ಸಮಂತತಃ-ಸುತ್ತಲೂ, ಮಹಾವೀರ್ಯೈಃ-ಅತಿ ಶೂರರಾದ, ವಾನರೌಘೈಃ-ಕಪಿಸಮೂಹಗಳಿಂದ, ಸಹ-ಕೂಡಿ, ಲವಣಾಂಬುಧೇಃ-ಲವಣಸಮುದ್ರದ, ತೀರಂ-ದಡವನ್ನು, ಕುರಿತು, ಗಚ್ಛಾಮಃ-ಹೋಗೋಣ. ॥೧೭॥

ರಘುನಂದನಃ-ರಾಮಚಂದ್ರನು, ಹನುಮತಃ-ಆಂಜನೇಯನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಉವಾಚ-ಹೇಳಿದನು,ಸುಗ್ರೀವ-ಸುಗ್ರೀವನೇ,ಸರ್ವಾನ್-ಯಲ್ಲಾ, ಸೈನಿಕಾನ್-ಸೇನಾಜನರನ್ನು, ಪ್ರಸ್ಥಾನಾಯ-ಪ್ರಯಾಣಕ್ಕೋಸ್ಕರವಾಗಿ, ನೋದಯ-ಅಜ್ಞಾಪಿಸು. ॥೧೮॥ ಇದಾನೀಮೇವ- ಈಗಲೇ, ವಿಜಯಃ- ವಿಜಯವೆಂಬ ಮುಹೂರ್ತಃ- ಮುಹೂರ್ತವು, ಪರಿವರ್ತತೆ- ಬರುತ್ತಿದೆ, ಅಸ್ಮಿನ್ಮುಹೂರ್ತೆ - ಈ ಮುಹೂರ್ತದಲ್ಲಿ, ಅಹಂ- ನಾನು, ರಾಕ್ಷಸಕುಲಂ-ರಾಕ್ಷಸ- ರಾಕ್ಷಸರಿಂದ, ಸಂ

ಸುಗ್ರೀವಸಹಿತೋಹರ್ಷಾತ್ಸೇನಾಮಧ್ಯಗತೋಽಪಿಭುಃ । ವಾರಣೇಂದ್ರನಿಭಾಸ್ಸರ್ವೇವಾನರಾಃಕಾಮರೂಪಿಣಃ ॥೩೫॥
ಕ್ಷ್ವೇಳಂತಃಪರಿಗರ್ಜಂತೋಜಗ್ಮುಸ್ತೇದಕ್ಷಿಣಾಂದಿಶಂ । ಭಕ್ಷಯಂತೋಯಯುಸ್ಸರ್ವೇಫಲಾನಿಚಮಧೂನಿಚ ॥೩೬॥
ಬ್ರುವಂತೋರಾಘವಸ್ಯಾಗ್ರೇಹನಿಷ್ಯಾಮೋದ್ಯರಾವಣಂ । ಏವಂತೇವಾನರಶ್ರೇಷ್ಠಾಃಗಚ್ಛಂತ್ಯತುಲವಿಕ್ರಮಾಃ ॥೩೭॥
ಹರಿಭ್ಯಾಮುಹ್ಯಮಾನೌತೌಶುಶುಭಾತೇರಘೂತ್ತಮೌ । ನಕ್ಷತ್ರೈಸ್ಸೇವಿತೌಯದ್ವಚ್ಚಂದ್ರಸೂರ್ಯಾವಿವಾಂಬರೇ ॥೩೮॥
ಆವೃತ್ಯಪೃಥಿವೀಂಕೃತ್ಸ್ನಾಂಜಗಾಮಮಹತೀಚಮೂಃ । ಪ್ರಸ್ಫೋಟಯಂತಃಪುಚ್ಛಾಗ್ರಾನುದ್ವಹಂತಶ್ಚಪಾದಪಾನ್ ॥೩೯॥
ಶೈಲಾನಾರೋಹಯಂತಶ್ಚಜಗ್ಮುರ್ಮಾರುತವೇಗತಃ । ಅಸಂಖ್ಯಾತಾಶ್ಚಸರ್ವತ್ರವಾನರಾಃಪರಿಪೂರಿತಾಃ ॥೪೦॥
ಹೃಷ್ಟಾಸ್ತೇಜಗ್ಮುರತ್ಯರ್ಥಂರಾಮೇಣಪರಿಪಾಲಿತಾಃ । ಗತಾಚಮೂರ್ದಿವಾರಾತ್ರಂಕ್ವಚಿನ್ನಾಸಜ್ಜತಕ್ಷಣಂ ॥೪೧॥

ತಿನ್ನುತ್ತಿರುವರಾಗಿ, ಯಯುಃ-ಹೊರಟುಹೋದರು. ॥೩೬॥ ಅದ್ಯ-ಈಗ, ರಾವಣಂ-ರಾವಣನನ್ನು, ಹನಿಷ್ಯಾಮಃ-ಕೊಲ್ಲುತ್ತೇವೆ, (ಏವಂ-ಹೀಗೆಂದು,) ರಾಘವಸ್ಯ-ರಾಮಚಂದ್ರನ, ಅಗ್ರೇ-ಮುಂದೆ, ಬ್ರುವಂತಃ-ಹೇಳುತ್ತಿರುವವರಾದ, ಅತುಲವಿಕ್ರಮಾಃ-ಅತುಲ-ಸಮಾನವಿಲ್ಲದ, ವಿಕ್ರಮಾಃ-ಪರಾಕ್ರಮವುಳ್ಳವರಾದ, ತೇ-ಆ, ವಾನರಶ್ರೇಷ್ಠಾಃ-ಕಪಿಶ್ರೇಷ್ಠರು, ಗಚ್ಛಂತಿ-ಹೊರಟುಹೋದರು. ॥೩೭॥ ಹರಿಭ್ಯಾಂ-ಆಂಜನೇಯ ಅಂಗದರಿಂದ, ಉಹ್ಯಮಾನೌ-ವಹಿಸಲ್ಪಟ್ಟವರಾದ, ತೌ-ಆ, ರಘೂತ್ತಮೌ- ರಾಮಲಕ್ಷ್ಮಣರು, ಅಂಬರೇ-ಆಕಾಶದಲ್ಲಿ, ನಕ್ಷತ್ರೈಃ-ನಕ್ಷತ್ರಗಳಿಂದ, ಸೇವಿತೌ-ಸೇವಿಸಲ್ಪಟ್ಟವರಾದ, ಚಂದ್ರಸೂರ್ಯಾವಿವ-ಚಂದ್ರಸೂರ್ಯರಂತೆ, ಯದ್ವತ್-ಹ್ಯಾಗೋ, ಹಾಗೆ, ಶುಶುಭಾತೇ-ಪ್ರಕಾಶಿಸುತ್ತಿರುವವರಾದ. ॥೩೮॥ ಮಹತೀ-ಬೃಹತ್ತಾದ, ಚಮೂಃ-ಸೇನೆಯು, ಕೃತ್ಸ್ನಾಂ-ಸಮಸ್ತವಾದ, ಪೃಥಿವೀಂ-ಭೂಮಿಯನ್ನು, ಆವೃತ್ಯ-ಆವರಿಸಿಕೊಂಡು, ಜಗಾಮ-ಹೊರಟುಹೋಯಿತು, ಪುಚ್ಛಾಗ್ರಾನ್-ಬಾಲದ ತುದಿಗಳನ್ನು, ಪ್ರಸ್ಫೋಟಯಂತಃ-ಎತ್ತಿ ಹೊಡೆಯುತ್ತಿರುವವರಾಗಿ, ಪಾದಪಾನ್-ಮರಗಳನ್ನು, ಉದ್ವಹಂತಃ-ಎತ್ತಿಕೊಂಡವರಾಗಿ. ॥೩೯॥ ಶೈಲಾನ್-ಪರ್ವತಗಳನ್ನು, ಆರೋಹಯಂತಶ್ಚ-ಹತ್ತುವವರಾಗಿ, ಮಾರುತವೇಗತಃ-ವಾಯುವೇಗದಿಂದ, ಸರ್ವತ್ರ-ಯಲ್ಲಿಯೂ, ಪರಿಪೂರಿತಾಃ-ತುಂಬಿದವರಾದ, ಅಸಂಖ್ಯಾತಾಃ-ಎಣಿಕೆ ಯಿಲ್ಲದವರಾದ, ವಾನರಾಃ-ಕಪಿಗಳು, ಜಗ್ಮುಃ-ಹೊರಟುಹೋದರು. ॥೪೦॥ ಅತ್ಯರ್ಥಂ-ಅತ್ಯಂತವಾಗಿ, ರಾಮೇಣ-ರಾಮಚಂದ್ರನಿಂದ, ಪರಿಪಾಲಿತಾಃ- ಕಾಪಾಡಲ್ಪಟ್ಟವರಾದ, ತೇ-ಆ ಕಪಿಗಳು, ಹೃಷ್ಟಾಃ-ಸಂತುಷ್ಟರಾಗಿ, ಜಗ್ಮುಃ-ಹೊರಟುಹೋದರು, ಚಮೂಃ-ಸೇನೆಯು, ದಿವಾರಾತ್ರಂ-ಹಗಲು ರಾತ್ರಿಯಲ್ಲಿಯೂ ಕೂಡ, ಗತಾ-ಪ್ರಯಾಣಮಾಡುತ್ತಿರುವಂಥಾದ್ದಾಯಿತು, ಕ್ಷಣಂ-ಕ್ಷಣಕಾಲದವರಿಗೂ, ಕ್ವಚಿತ್-ಯಲ್ಲಿಯಾದರೂ, ನಾಸಜ್ಜತ-ನಿಲ್ಲಲಿಲ್ಲ. ॥೪೧॥

ಕಾನನಾನಿವಿಚಿತ್ರಾಣಿಪಶ್ಯನ್ಮಲಯಸಹ್ಯಯೋಃ । ತೇಸಹ್ಯಂಸಮತಿಕ್ರಮ್ಯಮಲಯಂಚತಥಾಗಿರಿಂ ॥೪೦॥ ಆಯಯು ಶ್ಚಾನುಪೂರ್ವೇಣಸಮುದ್ರಂಭೀಮನಿಸ್ವನಂ।ಅವತೀರ್ಯಹನೂಮಂತಂರಾಮಸ್ಸುಗ್ರೀವಸಂಯುತಃ ॥೪೨॥ ಸಲಿಲಾಭ್ಯಾ ಶಮಾಸಾದ್ಯರಾಮೋವಚನಮಬ್ರವೀತ । ಆಗತಾಸ್ಮೋವಯಂಸರ್ವೆಸಮುದ್ರಂಮಕರಾಲಯಂ ॥೪೪॥ ಇತೋಗಂತುಮ ಶಕ್ಯಂನೋನಿರುಪಾಯೇನವಾನರಾಃ। ಅತ್ರಸೇನಾನಿವೇಶೋಸ್ತುಮಂತ್ರಯಾಮೋಸ್ಯತಾರಣೆ ॥೪೫॥ ಶ್ರುತ್ವಾರಾಮಸ್ಯವಚನಂ ಸುಗ್ರೀವಃಸಾಗರಾಂತಿಕೆ । ಸೇನಾಂನಿವೇಶಯತ್ಕ್ಷಿಪ್ರಂರಕ್ಷಿತಾಂಕಪಿಕುಂಜರೈಃ ॥೪೬॥ ತೇಪಶ್ಯಂತೋವಿಷೇದುಸ್ತೆಸಾಗರಂ ಭೀಮನಿಸ್ವನಂ । ಮಹೋನ್ನತತರಂಗಾಢ್ಯಂಭೀಮನಕ್ರಭಯಂಕರಂ ॥೪೭॥ ಆಗಾಧಂಗಗನಾಕಾರಂಸಾಗರಂವೀಕ್ಷ್ಯ

ಟೀ॥ ಮಲಯಸಹ್ಯಯೋಃ-ಮಲಯ-ಮಲಯಪರ್ವತದ, ಸಹ್ಯ - ಸಹ್ಯಪರ್ವತದ, ವಿಚಿತ್ರಾಣಿ-ಆಶ್ಚರ್ಯಕರಗಳಾದ, ಕಾನನಾನಿ - ಅರಣ್ಯಗಳನ್ನು, ಪಶ್ಯ- ನೋಡುತ್ತಿರುವವರಾದ, ರಾಮಚಂದ್ರನು, ತೆ-ಆಕಪಿಗಳು, ಸಹ್ಯಂ-ಸಹ್ಯಪರ್ವತವನ್ನು, ಮಲಯಂ-ಮಲಯವೆಂಬ ಹೆಸರುಳ್ಳ ಗಿರಿಂ-ಬೆಟ್ಟವನ್ನು, ತಥಾ-ಹಾಗೆ, ಸಮತಿಕ್ರಮ್ಯ-ದಾಟಿ, ॥೪೦॥ ಅನುಪೂರ್ವೇಣ-ಕ್ರಮದಿಂದ, ಭೀಮ-ಭಯಂಕರವಾದ, ಸ್ವನಂ-ಧ್ವನಿಯುಳ್ಳ, ಸಮುದ್ರಂ-ಸಮುದ್ರವನ್ನು,ಕುರಿತು, ಆಯಯುಃ-ಬಂದರು, ಹನೂಮತಂ-ಆಂಜನೇಯನಿಂದ, ಅವತೀರ್ಯ-ಇಳಿದು, ರಾಮಃ-ರಾಮಚಂದ್ರನು, ಸುಗ್ರೀವಸಂಯುತಃ-ಸುಗ್ರೀವನಿಂದ ಕೂಡಿದವನಾಗಿ, ॥೪೨॥ ಸಲಿಲಭ್ಯಾಶಂ-ಸಲಿಲ-ನೀರಿನ,ಅಭ್ಯಾಶಂ-ಸಮೀಪವನ್ನು ಕುರಿತು, ಆಗತ್ಯ-ಬಂದು, ರಾಮಃ-ರಾಮಚಂದ್ರನು, ವಚನಂ-ಮಾತನ್ನು, ಅಬ್ರವೀತ್- ಹೇಳಿದನು. ವಯಂಸರ್ವೆ- ನಾವೆಲ್ಲರೂ, ಮಕರಾಲಯಂ-ಮೊಸಳೆಗಳಿಗೆ ಆ ವಾಸಸ್ಥಳವಾದ, ಸಮುದ್ರಂ-ಸಮುದ್ರವನ್ನು ಕುರಿತು, ಆಗತಾಸ್ಮಃ-ಬಂದವರಾಗಿದ್ದೇವೆ. ॥೪೪॥ ವಾನರಾಃ-ಕಪಿಗಳು,ಇತಃ-ಇಲ್ಲಿಂದ, ಗಂತುಂ-ಹೋಗುವದಕ್ಕೆ, ನಃ-ನಮ್ಮಗಳಿಗೆ, ನಿರುಪಾಯೇನ-ಯುಕ್ತಿಯಿಲ್ಲದ್ದರಿಂದ, ಅಶಕ್ಯಂ-ಸಮುದ್ರವನ್ನು ದಾಟಿಹೋಗಲು ಅಸಾಧ್ಯವು, ಅತ್ರ-ಸಮುದ್ರಧಡದಲ್ಲಿ, ಸೇನಾನಿವೇಶಃ-ಸೇನೆಯನ್ನು ನಿಲಿಸೋಣವು, ಅಸ್ತು-ಆಗಲಿ, ಅಸ್ಯ-ಈ ಸಮುದ್ರದ, ತಾರಣೆ-ದಾಟುವದರಲ್ಲಿ ಮಂತ್ರಯಾಮಃ-ಆಲೋಚನೆಯನ್ನು ಮಾಡೋಣ.॥೪೫॥ ರಾಮಸ್ಯ-ರಾಮಚಂದ್ರನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಸುಗ್ರೀವಃ-ಸುಗ್ರೀವನು, ಸಾಗರಾಂತಿಕೆ, ಸಾಗರ-ಸಮುದ್ರದ, ಅಂತಿಕೆ-ಸಮೀಪದಲ್ಲಿ, ಕಪಿಕುಂಜರೈಃ-ಆನೆಗಳಿಗೆ ಸಮರಾದಕಪಿಗಳಿಂದ, ರಕ್ಷಿತಾಂ-ಕಾಪಾಡಲ್ಪಟ್ಟಿರುವ, ಸೆನಾಂ-ಸೇನೆಯನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ನಿವೆಶಯತ್-ನಿಲ್ಲಿಸಿದನು. ॥೪೬॥ ತೆ-ಆ ಕಪಿಗಳು, ಭೀಮನಿಸ್ವನಂ-ಭೀಮ-ಭಯಂಕರವಾದ, ನಿಸ್ವನಂ-ಧ್ವನಿಯುಳ್ಳ, ಮಹತ್-ಹೆಚ್ಚಾದ, ಉನ್ನತ-ಎತ್ತರವಾದ,ತರಂಗ-ಅಲೆಗಳಿಂದ,ಆಢ್ಯಂ-ಕೂಡಿರುವ, ಭೀಮನಕ್ರಭಯಂಕರಂ-ಭೀಮ-ಭಯಂಕರವಾದ, ನಕ್ರ-ಮೊಸಳೆಗಳಿಂದ, ಭಯಂಕರಂ-ಭಯಪ್ರದವಾದ, ತಂ-ಆ, ಸಾಗರಂ-ಸಮುದ್ರವನ್ನು, ಪಶ್ಯಂತಃ-ನೋಡುತ್ತಿರುವವರಾಗಿ, ವಿಷೇದುಃ-ವ್ಯಸನಪಟ್ಟವರಾದ

ದುಃಖಿತಾಃ ॥ ತರಿಷ್ಯಾಮಃಕಥಂಘೋರಂಸಾಗರಂವರುಣಾಲಯಂ ॥೪೭॥ ಹಂತವ್ಯಸ್ಸ್ಮಾಭಿರದ್ಯೈವರಾವಣೋರಾಕ್ಷಸಾಧಮಃ । ಇತಿಚಿಂತಾಕುಲಾಸ್ಸರ್ವೇರಾಮಪಾರ್ಶ್ವೇವ್ಯವಸ್ಥಿತಾಃ ॥೪೮॥ ರಾಮಸ್ಸೀತಾಮನುಸ್ಮೃತ್ಯದುಃಖೇನಮಹತಾವೃತಃ । ವಿಲಪ್ಯಜಾನಕೀಂಸೀತಾಂಬಹುಧಾಕಾರ್ಯಮಾನುಷಃ ॥೫೦॥ ಅದ್ವಿತೀಯಶ್ಚಿದಾತ್ಮೈಕಃಪರಮಾತ್ಮಾಸನಾತನಃ॥ ಯಸ್ತುಜಾನಾತಿರಾಮಸ್ಯಸ್ವರೂಪಂತತ್ವತೋಜನಃ ॥೫೧॥ ತನ್ನಸ್ಪೃಶಂತಿದುಃಖಾನಿಕಿಮುತಾನಂದಮವ್ಯಯಂ।ದುಃಖಹರ್ಷಭಯಕ್ರೋಧಲೋಭಮೋಹಮದಾದಯಃ ॥ ೫೨ ॥ ಅಜ್ಞಾನಲಿಂಗಾನ್ಯೇತಾನಿಕುತಸ್ಸಂತಿಚಿದಾತ್ಮನಿ । ದೇಹಾಭಿ

ಟೀ. ॥೪೭॥ ಅಗಾಧಂ-ತಳವು ಗೊತ್ತಿಲ್ಲದೆ ಇರುವ, ಗಗನಾಕಾರಂ-ಗಗನ-ಆಕಾಶಕ್ಕೆ ಸಮವಾದ, ಆಕಾರಂ-ಆಕಾರವುಳ್ಳ, ಸಾಗರಂ-ಸಮುದ್ರವನ್ನು, ವೀಕ್ಷ್ಯ-ನೋಡಿ ದುಃಖಿತಾಃ-ಚಿಂತಾಕ್ರಾಂತರಾದ, ಕಪಿಗಳು, ಘೋರಂ-ಘೋರವಾದ, ವರುಣಾಲಯಂ-ವರುಣ-ವರುಣನಿಗೆ, ಆಲಯಂ-ವಾಸಸ್ಥಾನವಾದ,ಸಾಗರಂ-ಸಮುದ್ರವನ್ನು, ಕಥಂ-ಹ್ಯಾಗೆ, ತರಿಷ್ಯಾಮಃ-ದಾಟುವವರಾಗುತ್ತೇವೆ. ... ... ॥೪೭॥

ಟೀ॥ ಅದ್ಯೈವ-ಈಗಲೆ, ಅಸ್ಮಾಭಿಃ-ನಮ್ಮಗಳಿಂದ, ರಾಕ್ಷಸಾಧಮಃ-ರಾಕ್ಷಸ-ರಾಕ್ಷಸರೊಳಗೆ, ಅಧಮಃ-ನೀಚನಾದ, ರಾವಣಃ-ರಾವಣನು, ಕಥಂಹಂತವ್ಯಃ-ಹ್ಯಾಗೆ ಸಂಹರಿಸಲ್ಪಡುವನು, ಇತಿ-ಹೀಗೆ, ಚಿಂತಾಕುಲಾಃ-ಆಲೋಚನೆಯುಳ್ಳವರಾಗಿ, ಸರ್ವೇ-ಯಲ್ಲಾಕಪಿಗಳು, ರಾಮಪಾರ್ಶ್ವೇ-ರಾಮ-ರಾಮಚಂದ್ರನ, ಪಾರ್ಶ್ವೇ-ಕಡೆಯಲ್ಲಿ, ವ್ಯವಸ್ಥಿತಾಃ-ಇದ್ದರು. ॥೪೮॥ ಕಾರ್ಯಮಾನುಷಃ-ಕಾರ್ಯ-ದೇವತೆಗಳ ಶತ್ರುಸಂಹಾರ ರೂಪವಾದಕೆಲಸಕ್ಕಾಗಿ, ಮಾನುಷ್ಯನಾಗಿರುವವನಾದ, ರಾಮಃ-ರಾಮಚಂದ್ರನು, ಸೀತಾಂ-ಸೀತೆಯನ್ನು, ಅನುಸ್ಮೃತ್ಯ-ಸ್ಮರಿಸಿ, ಮಹತಾ-ಹೆಚ್ಚಾದ, ದುಃಖೇನ-ದುಃಖದಿಂದ, ವೃತಃ-ಕೂಡಿದವನಾಗಿ, ಬಹುಧಾ-ಹಲವುಬಗೆಯಿಂದ, ಜಾನಕೀಂ-ಜನಕರಾಯನಮಗಳಾದ, ಸೀತಾಂ-ಸೀತೆಯನ್ನು ಕುರಿತು, ವಿಲಪ್ಯ-ಗೋಳಾಡಿ, (ನಟನೆಯನ್ನು ಮಾಡಿದವನಾದನು ) ॥೫೦॥ ಅದ್ವಿತೀಯಃ-ಎರಡನೆಯವನಿಲ್ಲದವನಾದ, ಏಕಃ-ಒಬ್ಬನಾದ ಸನಾತನಃ-ಅನಾದಿಯಾದವನಾದ, ಚಿದಾತ್ಮಾ - ಜ್ಞಾನಸ್ವರೂಪನಾದ, ಪರಮಾತ್ಮಾ-ಪರಮಾತ್ಮನಾದ, ರಾಮಚಂದ್ರನು ಎಂಬದಾಗಿ ರಾಮಸ್ಯ-ರಾಮಚಂದ್ರನ,ಸ್ವರೂಪಂ-ಸ್ವಸ್ವರೂಪವನ್ನು,ತತ್ವತಃ-ನಿಜವಾಗಿ,ಯಸ್ತುಜನಃ-ಯಾವಜನವು, ಜಾನಾತಿ-ತಿಳಿಯುವನಾಗುತ್ತಾ॥೫೧॥ತಂ-ಅಂಥಾಜನವನ್ನು,ದುಃಖಾನಿ-ದುಃಖಗಳು,ನಸ್ಪೃಶಂತಿ-ಹೊಂದುವದಿಲ್ಲ, ಆನಂದಂ-ಆನಂದಸ್ವರೂಪನಾದ, ಅವ್ಯಯಂ-ನಾಶರಹಿತನಾದ ) ರಾಮಚಂದ್ರನನ್ನು, ಹೊಂದುವದಿಲ್ಲವೆಂಬುವ ವಿಷಯದಲ್ಲಿ, ) ಕಿಮುತ-ಹೇಳತಕ್ಕದ್ದೇನು, ದುಃಖಹರ್ಷಭಯಕ್ರೋಧಲೋಭಮೋಹಮದಾದಯಃ-ದುಃಖ-ವ್ಯಸನ, ಹರ್ಷ-ಸಂತೋಷ, ಭಯ-ಅಂಜಿಕೆ, ಕ್ರೋಧ-ಕೋಪ, ಲೋಭ-ಲುಬ್ಧತ್ವವು,- ಮೋಹ ಮಮತೆ, ಮದ-ಮದವ, ಆದಿ-ಮೊದಲಾದವುಗಳು॥ ೫೨ ॥ ಅಜ್ಞಾನ-ಅಜ್ಞಾನಕ್ಕೆ, ಲಿಂಗಾನಿ-ಗುರುತುಗಳಾಗಿರುವವು, ಏತಾನಿ-ಅಜ್ಞಾನಲಿಂಗಗಳಾದ ದುಃಖಾದಿಗಳು, ಚಿ

ಮಾನಿನೊದುಃಖ್ಬಂನದೆಹಸ್ಯಚಿದಾತ್ಮನಃ ||೫೩|| ಸಂಪ್ರಸಾದೆದ್ವಯಾಭಾವಾತ್ಸುಖಮಾತ್ರಂಹಿದೃಶ್ಯತೆ । ಬುಧ್ಯಾದ್ಯಭಾವಾತ್ಸಂಶುದ್ಧೆದುಃಖಂತತ್ರನದೃಶ್ಯತೆ ||೫೪|| ಅತೊದುಃಖಾದಿಕಂಸರ್ವಂಬುದ್ಧೆರೆವನಸಂಶಯಃ ||೫೫|| ರಾಮಃಪರಾತ್ಮಾಪುರುಷಃಪುರಾಣೊನಿತ್ಯೊದಿತೊನಿತ್ಯಸುಖೊನಿರೀಹಃ । ತಥಾಪಿಮಾಯಾಗುಣಸಂಗತೊಸೌಸುಖೀವದುಃಖೀವವಿಭಾವ್ಯತೆಬುಧ್ಯೈಃ ... ... ||೫೬||

ಇತಿ ಶ್ರೀಮದಧ್ಯಾತ್ಮರಾಮಾಯಣೆ ಉಮಾಮಹೇಶ್ವರ ಸಂವಾದೆ ಯುದ್ಧಕಾಂಡೆ ಪ್ರಥಮಸರ್ಗಃ.

ದಾತ್ಮನಿ-ಜ್ಞಾನಸ್ವರೂಪನಾದ ಆತ್ಮನಲ್ಲಿ, ಕುತಃಸಂತಿ-ಎಲ್ಲಿರುವವು ಅಂದರೆ ಇರುವದಿಲ್ಲ, ದೇಹಾಭಿಮಾನಿನಃ-ದೇಹದಲ್ಲಿ ಅಭಿಮಾನವುಳ್ಳದ್ದಕ್ಕೆ, ದುಃಖಂ-ದುಃಖವು, ಉಂಟಾಗುವದು, ದೇಹಸ್ಯ-ದೇಹಕ್ಕೂ, ಚಿದಾತ್ಮನಃ-ಜ್ಞಾನಸ್ವರೂಪನಾದ ಆತ್ಮನಿಗೂ, ನ-ದುಃಖವಿಲ್ಲ, ||೫೩||ಸಂಪ್ರಸಾದೆ-ಸುಷುಪ್ತಿಯಲ್ಲಿ, ದ್ವಯಾಭಾವಾತ್-ದ್ವಿತೀಯಭಾವದಿಂದ, ಸುಖಮಾತ್ರಂ-ಸುಖವೇ, ದೃಶ್ಯತೆ-ಕಾಣಲ್ಪಡುತ್ತೆ, ಸಂಶುದ್ಧೆ-ಶುದ್ಧವಾದ ಆತ್ಮನಲ್ಲಿ, ಬುಧ್ಯಾದ್ಯಭಾವಾತ್-ಬುಧ್ಯಾದಿಗಳಿಲ್ಲದ್ದರಿಂದ, ದುಃಖವು, ತತ್ರ-ಅಲ್ಲಿ, ನದೃಶ್ಯತೆ-ಕಾಣಲ್ಪಡುವದಿಲ್ಲ, ||೫೪|| ಅತಃ-ಆದ್ದರಿಂದ, ದುಃಖಾದಿಕಂ-ದುಃಖಾದಿಗಳೆಂಬ, ಸರ್ವಂ-ಯಲ್ಲಾವು, ಬುದ್ಧೇರೇವ-ಬುದ್ಧಿಯೇ, ನಸಂಶಯಃ-ಸಂಶಯವಿಲ್ಲ, ||೫೫|| ರಾಮಃ-ರಾಮಚಂದ್ರನು, ಪರಮಾತ್ಮನಾಗಿದ್ದಾಗ್ಯೂ, ಪುರಾಣಃ-ಅನಾದಿಯಾದ, ಪುರುಷಃ-ಪುರುಷನಾಗಿದಾಗ್ಯೂ, ನಿತ್ಯೋದಿತಃ-ನಾಶರಹಿತನಾಗಿದ್ದಾಗ್ಯೂ, ನಿತ್ಯಸುಖಃ-ನಿತ್ಯಸುಖವುಳ್ಳವನಾದಾಗ್ಯೂ, ನಿರೀಹಃ-ಆಶೆಯಿಲ್ಲದವನಾಗಿದ್ದಾಗ್ಯೂ,ಮಾಯಾಗುಣ-ಸತ್ವರಜಸ್ತಮೊಗುಣಗಳಿಂದ, ಸಂಗತಃ-ಕೂಡಿದವನಾದ, ಅಸೌ-ರಾಮಚಂದ್ರನು, ಬುಧೈರಪಿ-ಪಂಡಿತರಿಂದಲೂಕೂಡ, ತಥಾ-ಹಾಗೆ, ಸುಖೀವ-ಸುಖವುಳ್ಳವನಂತೆ, ದುಃಖೀವ-ದುಃಖವುಳ್ಳವನಂತೆ, ವಿಭಾವ್ಯತೆ-ಭಾವಿಸಲ್ಪಡುತ್ತಾನೆ. ||೫೬||

ಇಂತು ಅಧ್ಯಾತ್ಮರಾಮಾಯಣದೊಳುಮಾಮಹೇಶ್ವರ ಸಂವಾದದೊಳು ಯುದ್ಧಕಾಂಡದಲ್ಲಿ ಮೊದಲನೇಸರ್ಗವು.

ಶ್ರೀ ಮಹಾದೇವಉವಾಚ ॥೧॥ ಲಂಕಾಯಾಂರಾವಣೋದೃಷ್ಟ್ವಾಕೃತಂಕರ್ಮಹನೂಮತಾ । ದುಷ್ಕರಂದೇವತೈರ್ವಾಪಿಹ್ರಿಯಾಕಿಂಚಿದವಾಙ್ಮುಖಃ ॥೨॥ ಆಹೂಯಮಂತ್ರಿಣಸ್ಸರ್ವಾನಿದಂವಚನಮಬ್ರವೀತ್। ಹನೂಮತಾಕೃತಂಕರ್ಮಭವದ್ಭಿರ್ದೃಷ್ಟಮೇವತತ್ ॥೩॥ ಪ್ರವಿಶ್ಯಲಂಕಾಂದುರ್ಧರ್ಷಾಂದೃಷ್ಟ್ವಾಸೀತಾಂದುರಾಸದಾಂ । ಹತ್ವಾಚರಾಕ್ಷಸಾನ್ವೀರಾನಕ್ಷಂಮಂಡೋದರೀಸುತಂ ॥೪॥ ದಗ್ಧ್ವಾಲಂಕಾಮಶೇಷೇಣಲಂಘಯಿತ್ವಾಚಸಾಗರಂ । ಯುಷ್ಮಾನ್ಸರ್ವಾನತಿಕ್ರಮ್ಯಸ್ವಸ್ಥೋಗಾತ್ಪುನರೇವಸಃ ॥೫॥ ಕಿಂಕರ್ತವ್ಯಮಿತೋಸ್ಮಾಭಿರ್ಯೂಯಂಮಂತ್ರವಿಶಾರದಾಃ । ಮಂತ್ರಯಧ್ವಂಪ್ರಯತ್ನೇನಯತ್ಕೃತಂಮೇಹಿತಂಭವೇತ್ ॥ ೬ ॥ ರಾವಣಸ್ಯವಚಃಶ್ರುತ್ವಾರಾಕ್ಷಸಾಸ್ತಮಥಾಬ್ರುವನ್ । ದೇವಶಂಕಾಕುತೋರಾಮಾ

ಶ್ರೀಮಹಾದೇವಉವಾಚ-ಈಶ್ವರನುಹೇಳುತ್ತಲಿದ್ದಾನೆ, ॥೧॥ ರಾವಣಃ-ರಾವಣನು, ಲಂಕಾಯಾಂ-ಲಂಕಾಪಟ್ಟಣದಲ್ಲಿ, ಹನೂಮತಾ-ಆಂಜನೇಯನಿಂದ,ಕೃತಂ-ಮಾಡಲ್ಪಟ್ಟ, ದೇವತೈಃವಾಪಿ- ದೇವತೆಗಳಿಂದಲೂ, ದುಷ್ಕರಂ-ಮಾಡಲಸಾಧ್ಯವಾದ, ಕರ್ಮ-ಕೆಲಸವನ್ನು, ದೃಷ್ಟ್ವಾ-ನೋಡಿ, ಹ್ರಿಯಾ-ನಾಚಿಕೆಯಿಂದ, ಕಿಂಚಿತ್-ಕೊಂಚವಾಗಿ, ಅವಾಙ್ಮುಖಃ-ತಲೆಯನ್ನು ಬೊಗ್ಗಿಸಿದವನಾಗಿ, ॥೨॥ ಸರ್ವಾನ್-ಎಲ್ಲಾ, ಮಂತ್ರಿಣಃ-ಮಂತ್ರಿಗಳನ್ನು, ಆಹೂಯ-ಕರಿಸಿ, ಇದಂ-ಈ, ವಚನಂ-ಮಾತನ್ನು, ಅಬ್ರವೀತ್-ಹೇಳಿದನು, ಹನೂಮತಾ-ಆಂಜನೇಯನಿಂದ, ಕೃತಂ-ಮಾಡಲ್ಪಟ್ಟ, ತತ್-ಆ, ಕರ್ಮ-ಕೆಲಸವು, ಭವದ್ಭಿಃ-ನಿಮ್ಮಗಳಿಂದ, ದೃಷ್ಟಮೇವ - ನೋಡಲ್ಪಟ್ಟಿದ್ದೆಯಷ್ಟೆ, ದುರ್ಧರ್ಷಾಂ-ಹೋಗುವದಕ್ಕೆ, ಅಸಾಧ್ಯವಾದ, ಲಂಕಾಂ-ಲಂಕಾಪಟ್ಟಣವನ್ನು, ಪ್ರವಿಶ್ಯ-ಹೊಕ್ಕು, ದುರಾಸದಾಂ-ಗುಪ್ತದಲ್ಲಿ ನಿರ್ಬಂಧವಾಡಿರಿಸಿದ್ದರಿಂದ,ನೋಡಿಮಾತಾಡಲು ಅಶಕ್ಯಳಾದ, ಸೀತಾಂ-ಸೀತೆಯನ್ನು ದೃಷ್ಟ್ವಾ -ನೋಡಿ, ವೀರಾನ್-ಶೂರರಾದ, ರಾಕ್ಷಸಾನ್-ರಾಕ್ಷಸರನ್ನು, ಮಂಡೋದರೀಸುತಂ-ಮಂಡೋದರಿಗೆಮಗನಾದ, ಅಕ್ಷಂ-ಅಕ್ಷನನ್ನು, ಹತ್ವಾ-ಕೊಂದು, ॥೪॥ ಅಶೇಷೇಣ-ಶೇಷವಿಲ್ಲದರೀತಿಯಿಂದ, ಲಂಕಾಂ-ಲಂಕಾಪಟ್ಟಣವನ್ನು ದಗ್ಧ್ವಾ-ಸುಟ್ಟು, ಯುಷ್ಮಾನ್ಸರ್ವಾನ್-ನಿಮ್ಮೆಲ್ಲರನ್ನು, ಅತಿಕ್ರಮ್ಯ-ಲಕ್ಷ್ಯಮಾಡದೆಮೀರಿ, ಸಾಗರಂ-ಸಮುದ್ರವನ್ನು, ಲಂಘಯಿತ್ವಾ-ದಾಟಿ, ಸಃ-ಆಂಜನೇಯನು, ಸ್ವಸ್ಥಃ-ಸ್ವಸ್ಥಚಿತ್ತನಾಗಿ, ಪುನರೇವ-ತಿರಿಗಿ, ಅಗಾತ್-ಹೊರಟುಹೋದನು,॥೫॥ ಇತಃ-ಇನ್ನು ಮೇಲೆ, ಅಸ್ಮಾಭಿಃ-ನಮ್ಮಗಳಿಂದ, ಕಿಂಕರ್ತವ್ಯಂ-ಏನು ಮಾಡತಕ್ಕದ್ದು. ಯೂಯಂ-ನೀವುಗಳು, ಮಂತ್ರವಿಶಾರದಾಃ-ಮಂತ್ರ-ಆಲೋಚನೆಯನ್ನು,ವಿಶಾರದಾಃ-ತಿಳಿದವರು ಆಗಿಯಿದ್ದೀರಿ, ಯತ್-ಯಾವದು, ಕೃತಂ-ಮಾಡಲ್ಪಟ್ಟರೆ, ಮೇ-ನನಗೆ, ಹಿತಂ-ಕ್ಷೇಮವು, ಭವೇತ್ ಆದೀತು,(ಹಾಗೆ)ಪ್ರಯತ್ನೇನ-ಪ್ರಯತ್ನದಿಂದ, ಮಂತ್ರಯಧ್ವಂ-ಆಲೋಚನೆಮಾಡಿರಿ.॥೬॥ರಾವಣಸ್ಯ-ರಾವಣನ,ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾಕ್ಷಸಾಃ-ರಾಕ್ಷಸರು, ತಂ-ಆ ರಾವಣನನ್ನು ಕುರಿತು,ಅಥ-

ತ್ವವಲೋಕಜಿತೋರಣೇ ॥೭॥ ಇಂದ್ರಸ್ತು ಬಧ್ವಾನಿಕ್ಷಿಪ್ತಃಪುತ್ರೇಣತವಪತ್ತನೇ। ಜಿತ್ವಾಕುಬೇರಮಾನೀಯ್ಯ ಪುಷ್ಪಕಂ ಭುಜ್ಯ
ತೇತ್ವಯಾ॥೮॥ಯಮೋಜಿತಃಕಾಲದಂಡಾದ್ಭಯಂನಾಭೂತ್ತವಪ್ರಭೋ।ವರುಣೋಹುಂಕೃತೇನೈವಜಿತಃಸರ್ವೇಪಿರಾಕ್ಷಸಾಃ॥೯
ಮಯೋಮಹಾಸುರೋಭೀತ್ವಾ ಕನ್ಯಾಂದತ್ವಾಸ್ವಯಂತವ।ತ್ವದ್ವಶೇವರ್ತತೇದ್ಯಾಪಿಕಿಮುತಾನ್ಯೇಮಹಾಸುರಾಃ॥೧೦॥ ಹನೂ
ಮದ್ಧರ್ಷಣಂಯತ್ತು ತದವಜ್ಞಾಕೃತಂವಚಃ । ವಾನರೋಯಂಕಿಮಸ್ಮಾಕಮಸ್ಮಿನ್ಪೌರುಷದರ್ಶನೇ ॥೧೧॥ ಇತ್ಯುಪೇಕ್ಷಿ
ತಮಸ್ಮಾಭಿರ್ಧರ್ಷಣಂತೇನಕಿಂಭವೇತ್ । ವಯಂಪ್ರಮತ್ತಾಃಕಿಂತೇನವಂಚಿತಾಸ್ತೇನ ಹನೂಮತಾ ॥೧೨॥ ಜಾನೀಮೋ
ಯದಿತಂಸರ್ವೇಕಥಂಜೀವನ್ಗಮಿಷ್ಯತಿ । ಆಜ್ಞಾಪಯಜಗತ್ಕೃತ್ಸ್ನಮವಾನರಮಮಾನುಷಂ ॥೧೩॥ ಕೃತ್ವಾಯಾಸ್ಯಾ

ಆಬಳಿಕ,ಅಬ್ರುವನ್-ಹೇಳಿದರು, ದೇವ-ಸ್ವಾಮಿಯೆ,ರಣೆ-ಯುದ್ಧದಲ್ಲಿ, ಲೋಕ-ಸ್ವರ್ಗಾದಿಲೋಕಗಳನ್ನು ಜಿತಃ-ಜಯಿಸಿದನಿನಗೆ, ರಾಮಾತ್-ರಾಮಚಂದ್ರನಿಂದ,ಕುತಃ-ಸಕಾ, ಸಂಶಪ್ರಯಾಕೆ।॥೭॥ತವ-ನಿನ್ನ,ಪುತ್ರೇಣ-ಮಗನಾದಇಂದ್ರಜಿತುವಿನಿಂದ,ಇಂದ್ರಃ-ಇಂದ್ರನು,ಬಧ್ವಾ-ಕಟ್ಟಲ್ಪಟ್ಟು, ಪತ್ತನೇ-ಲಂಕಾಪಟ್ಟಣದಲ್ಲಿ,ನಿಕ್ಷಿಪ್ತಃ-ಕೆಡವಲ್ಪಟ್ಟಿದ್ದನ್ನು ತ್ವಯಾ-ನಿನ್ನಿಂದ, ಕುಬೇರಂ-ಕುಬೇರನನ್ನು, ಜಿತ್ವಾ-ಜಯಿಸಿ, ಪುಷ್ಪಕಂ-ಪುಷ್ಪಕವನ್ನು, ಆನೀಯ್ಯ-ತರಿಸಿ, ಭುಜ್ಯತೆ-ಅನುಭವಿಸಲ್ಪಡುತ್ತೆ ॥೮॥ ಪ್ರಭೋ-ಸ್ವಾಮಿಯಾದರಾವಣನೆ, ಯಮಃ-ಯಮನು, ಜಿತಃ-ನಿನ್ನಿಂದಜಯಿಸಲ್ಪಟ್ಟನು, ತವ-ನಿನಗೆ, ಕಾಲದಂಡಾತ್-ಯಮದಂಡದಿಂದ, ಭಯಂ-ಅಂಜಿಕೆಯು, (ಅಥವಾ-ಪ್ರಾಣಭಯವು) ನಾಭೂತ್-ಆಗಲಿಲ್ಲ)ವರುಣನು, ಹುಂಕೃತೇನೈವ-ಹುಂಕಾರದಿಂದಲೆ, ಜಿತಃ-ಜಯಿಸಲ್ಪಟ್ಟನು, ಸರ್ವೇಪಿ-ಸಮಸ್ತರಾದ, ರಾಕ್ಷಸಾಃ-ರಾಕ್ಷಸರು (ಜಿತಾಃ-ಜಯಿಸಲ್ಪಟ್ಟರು)॥೯॥ ಮಯಃ-ಮಯನೆಂಬ,ಮಹಾಸುರಃ-ದೊಡ್ಡರಾಕ್ಷಸನು ,ಭೀತ್ವಾ-ಭಯಪಟ್ಟು, ತವ-ನಿನಗೆ, ಸ್ವಯಂ-ತಾನು, ಕನ್ಯಾಂ-ತನಮಗಳನ್ನು, ದತ್ವಾ-ಕೊಟ್ಟು, ಅದ್ಯಾಪಿ-ಈಗಲೂ, ತ್ವದ್ವಶೇ-ನಿನ್ನಸ್ವಾಧೀನದಲ್ಲಿ, ವರ್ತತೆ-ಇರುತ್ತಾನೆ, ಅನ್ಯೇ-ಇತರರಾದ, ಮಹಾಸುರಾಃ-ರಾಕ್ಷಸರು,ಕಿಮುತ-ಹೇಳತಕ್ಕದ್ದೇನು, ಅಂದರೆಯಲ್ಲಾ ರಾಕ್ಷಸರುನಿನ್ನ ಸ್ವಾಧೀನದಲ್ಲಿದ್ದಾರೆ॥೧೦॥ ಹನೂಮದ್ಧರ್ಷಣಂ-ಹನೂಮಂತ್-ಆಂಜನೇಯನಿಂದ, ಧರ್ಷಣ-ಲಂಕಾದಹನಾದಿರೂಪವಾದ ತಿರಸ್ಕಾರವು, ಯತ್-ಯಾವದುಂಟೊ, ತತ್-ಅದು ಅವಜ್ಞಾಕೃತಂ,-ನಮ್ಮಗಳಉಪೇಕ್ಷೆಯಿಂದ, ಕೃತಂ-ಉಂಟಾದ,ವಚಃ-ಮಾತಾಗಿದೆ,ಅಯಂ-ಇವನು, ವಾನರಃ-ಕೋತಿಯು, ಅಸ್ಮಿನ್ - ಈಕೋತಿಯಮೇಲೆ, ಪೌರುಷ ದರ್ಶನೇ-ಪೌರುಷ-ನಮ್ಮಸಾಮರ್ಥ್ಯವನ್ನು, ದರ್ಶನೇ-ತೋರಿಸುವವಿಷಯದಲ್ಲಿ, ಅಸ್ಮಾಕಂ-ನಮ್ಮಗಳಿಗೆ, ಕಿಂ-ಏನು ಗೌರವ,॥೧೧॥ ಇತಿ-ಹೀಗೆಂದು, ಅಸ್ಮಾಭಿಃ-ನಮ್ಮಗಳಿಂದ, ಉಪೇಕ್ಷಿತಂ-ಉದಾಸೀನಮಾಡಲ್ಪಟ್ಟಿತು, ತೇನ-ಆಕಪಿಯಿಂದಲೇ, ಧರ್ಷಣಂ-ನಷ್ಟವು, ಕಿಂಭವೇತ್-ಏನಾಧೀತು, ವಯಂ-ನಾವು, ಪ್ರಮತ್ತಾಃ-ಈಕಪಿಯು ಇಷ್ಟು

ಮಹೆಸರ್ವೆಪ್ರತ್ಯೇಕಂವಾನಿಯೋಜಯು । ಕುಂಭಕರ್ಣಸ್ತದಾಪಾಹರಾವಣಂರಾಕ್ಷಸೇಶ್ವರಂ ॥೧೪॥ ಆರಬ್ಧಂಯತ್ವಯಾ
ಕರ್ಮಸ್ವಾತ್ಮನಾಶಾಯಕೇವಲಂ। ನದೃಷ್ಟೋಸಿತದಾಭಾಗ್ಯಾತ್ವಂರಾಮೇಣಮಹಾತ್ಮನಾ ॥೧೫॥ ಯದಿಪಶ್ಯತಿರಾಮಸ್ತ್ವಾಂ
ಜೀವನಾಯಾಸಿರಾವಣ । ರಾಮೋನಮಾನುಷೋದೇವಃಸಾಕ್ಷಾನ್ನಾರಾಯಣೋವ್ಯಯಃ ॥೧೬॥ಸೀತಾಭಗವತೀಲಕ್ಷ್ಮೀರಾಮ
ಪತ್ನಿಯಶಸ್ವಿನೀ । ರಾಕ್ಷಸಾನಾಂವಿನಾಶಾಯತ್ವಯಾಸೀತಾಸುಮಧ್ಯಮಾ ॥೧೭॥ ವಿಷಪಿಂಡಮಿವಾಗೀರ್ಯಮಹಾಮೀನೋ
ಯಥಾತಥಾ । ಆನೀತಾಜಾನಕೀಪಶ್ಚಾತ್ವಯಾಕಿಂವಾಭವಿಷ್ಯತಿ ॥೧೮॥

ಮಾಡೀತೆಂಬುವದನ್ನು ತಿಳಿಯದೆಹೋದ್ದರಿಂದ, ಜಾಗರೂಕರಾಗಿರಲಿಲ್ಲ, ತೇನ-ಆ, ಹನೂಮತಾ-ಆಂಜನೇಯನಿಂದ, ವಂಚಿತಾಸ್ಮಃ-ವಂಚನೆಮಾಡಲ್ಪಟ್ಟವರಾದೆವು॥೧೦॥ಸರ್ವೆ-ನಾವೆಲ್ಲರೂ, ಜಾನೀಮೋಯದಿ-ಈ ಕೋಡಗನು ಬಂದದ್ದನ್ನು ತಿಳಿದವರಾಗಿದ್ದರೆ, ಜೀರ್ವ-ಪ್ರಾಣವುಳ್ಳವನಾಗಿ, ಕಥಂಗಮಿಷ್ಯತಿ-ಹ್ಯಾಗೆಹೋಗುವನು,ಆಜ್ಞಾಪಯ-ಅಪ್ಪಣೆಕೊಡು, ಕೃತ್ಸ್ನಂ-ಸಮಸ್ತವಾದ, ಜಗತ್-ಪ್ರಪಂಚವನ್ನು, ಅವಾನರಂ-ಕಪಿಗಳೆ ಇಲ್ಲದ್ದನ್ನಾಗಿ, ಅಮಾನುಷಂ-ಮನುಷ್ಯರೆ ಇಲ್ಲದ್ದನ್ನಾಗಿ॥೧೩॥ಕೃತ್ವಾ-ಮಾಡಿ,ಸರ್ವೆ-ಯಲ್ಲರೂ, ಆಯಾಸ್ಯಾಮಹೆ-ಬರುತ್ತಲಿದ್ದೇವೆ,ಪ್ರತ್ಯೇಕಂವಾ-ಬೇರೆಬೇರೆಒಬ್ಬೊಬ್ಬನನ್ನಾಗಲಿ, ನಿಯೋಜಯ-ಗೊತ್ತುಮಾಡಿಕಳುಹಿಸು,ತದಾ-ಆಗ,ಕುಂಭಕರ್ಣಃ-ಕುಂಭಕರ್ಣನು, ರಾಕ್ಷಸೇಶ್ವರಂ-ರಾಕ್ಷಸ-ರಾಕ್ಷಸರಿಗೆ, ಈಶ್ವರಂ-ಧೊರೆಯಾದ, ರಾವಣಂ-ರಾವಣನನ್ನು ಕುರಿತು,ಪ್ರಾಹ-ಹೇಳಿದನು॥೧೪॥ತ್ವಯಾ-ನಿನ್ನಿಂದ, ಆರಬ್ಧಂ-ಆರಂಭಿಸಲ್ಪಟ್ಟ, ಯತ್-ಕರ್ಮ-ಯಾವಕೆಲಸವುಂಟೊ, ತತ್-ಅದು, ಕೇವಲಂ-ಅತಂತರವಾಗಿ, ಸ್ವಾತ್ಮ-ನಿನ್ನ ಪ್ರಾಣದ, ನಾಶಾಯ-ನಾಶಕ್ಕೋಸ್ಕರವೇ,( ಆದರೆ)ಭಾಗ್ಯಾತ್-ನಿನ್ನ ಅದೃಷ್ಟದಿಂದ, ತದಾ-ಸೀತಾಪಹಾರಕಾಲದಲ್ಲಿಯೇ, ಮಹಾತ್ಮನಾ-ಮಹಾತ್ಮನಾದ, ರಾಮೇಣ-ರಾಮನಿಂದ, ತ್ವಂ-ನೀನು, ದೃಷ್ಟಃ-ನೋಡಲ್ಪಟ್ಟವನು,ನಾಸಿ-ಆಗಲಿಲ್ಲ,॥೧೫॥ರಾವಣ-ರಾವಣನೇ, ರಾಮಃ-ರಾಮಚಂದ್ರನು, ತ್ವಾಂ-ನಿನ್ನನ್ನು, ಯದಿಪಶ್ಯತಿ-ನೋಡಿದವನೇ, ಆದರೆ, ಜೀರ್ವ-ಬದುಕಿದವನಾಗಿ, ನಾಯಾಸಿ-ಬರುವದಿಲ್ಲ, ರಾಮಃ-ರಾಮಚಂದ್ರನು, ಮಾನುಷಃ-ಮನುಷ್ಯನು, ನ-ಅಲ್ಲ, ಸಾಕ್ಷಾತ್-ಪ್ರತ್ಯಕ್ಷವಾಗಿ, ಅವ್ಯಯಃ-ನಾಶರಹಿತನಾದ, ನಾರಾಯಣಃ-ನಾರಾಯಣನೆಂಬಹೆಸರುಳ್ಳ, ದೇವಃ-ಸ್ವಾಮಿಯು ಆಗಿದ್ದಾನೆ ॥೧೬॥ ರಾಮಪತ್ನೀ-ರಾಮನಿಗೆ ಹೆಂಡತಿಯಾದ, ಯಶಸ್ವಿನೀ-ಕೀರ್ತಿಯುಳ್ಳವಳಾದ, ಭಗವತೀ-ಪೂಜ್ಯಳಾದ, ಸೀತಾ-ಸೀತೆಯೇ, ಲಕ್ಷ್ಮೀ-ಮಹಾಲಕ್ಷ್ಮಿಯು, ಆಗಿದ್ದಾಳೆ, ರಾಕ್ಷಸಾನಾಂ-ರಾಕ್ಷಸರ. ವಿನಾಶಾಯ-ಸಂಹಾರಕ್ಕಾಗಿ ತ್ವಯಾ-ನಿನ್ನಿಂದ, ಸುಮಧ್ಯಮಾ-ವಳ್ಳೇನಡುವುಳ್ಳ, ಸೀತಾ-ಸೀತೆಯು,(ಆನೀತಾ-ತರಲ್ಪಟ್ಟಳು)॥೧೭॥ ಯಥಾ-ಹ್ಯಾಗೆ, ಮಹಾಮೀನಃ-ದೊಡ್ಡಮತ್ಸ್ಯವು, ವಿಷಪಿಂಡಂ-ವಿಷದವುಂಡೆಗೆ ಸಮವಾದ ವಸ್ತುವನ್ನು, ಆಗೀರ್ಯ-ನುಂಗಿ, (ಆ ಮೇಲೆ ಪ್ರಾಣಕ್ಕೆ ನಾಶಬರುವಾಗ್ಯೆ ಪಶ್ಚಾತ್ತಾಪವನ್ನು ಪಡುವದೊ) ತಥಾ-ಹಾಗೆ, ಜಾನಕೀ-ಸೀತೆಯು, ಆನೀತಾ-ನಿನ್ನಿಂದತರಲ್ಪಟ್ಟಳು, ಪಶ್ಚಾತ್-ಆಮೇಲೆ, ತ್ವಯಾ-ನಿನ್ನಿಂದ,ಕಿಂವಾಭವಿಷ್ಯತಿ-ಮುಂದೆಯೇ

ಯದ್ಯಪ್ಯನುಚಿತಂಕರ್ಮತ್ವಯಾಕೃತಮಜಾನತಾ । ಸರ್ವಂಸಮಂಕರಿಷ್ಯಾಮಿಸ್ವಸ್ಥಚಿತ್ತೋಭವಪ್ರಭೋ॥೧೯॥ ಕುಂಭ
ಕರ್ಣವಚಶ್ಶ್ರುತ್ವಾವಾಕ್ಯಮಿಂದ್ರಜಿದಬ್ರವೀತ್। ದೇಹಿದೇವಮಮಾನುಜ್ಞಾಂಹತ್ವಾರಾಮಂಸಲಕ್ಷ್ಮಣಂ॥ಸುಗ್ರೀವಂವಾನ
ರಾನ್ಸರ್ವಾನ್ಪುನರ್ಯಾಸ್ಯಾಮಿತೇಂತಿಕಂ ॥೨೦॥ ತತ್ರಾಗತೋಭಾಗವತಪ್ರಧಾನೋವಿಭೀಷಣೋಬುದ್ಧಿಮತಾಂವರಿಷ್ಠಃ।ಶ್ರೀರಾ
ಮಪಾದದ್ವಯಯೇಕತಾನಃಪ್ರಣಮ್ಯದೇವಾರಿಮುಪೋಪವಿಷ್ಟಃ ॥೨೧॥

ವಿಲೋಕ್ಯಕುಂಭಶ್ರವಣಾದಿದೈತ್ಯಾನ್ಮತ್ತಪ್ರಮತ್ತಾನತಿವಿಸ್ಮಯೇನ । ವಿಲೋಕ್ಯಕಾಮಾತುರಮಪ್ರಮತ್ತೋದಶಾನನಂ
ಪ್ರಾಹವಿಶುದ್ಧಬುದ್ಧಿಃ ॥೨೨॥ ನಕುಂಭಕರ್ಣೇಂದ್ರಜಿತೌನರಾಜನ್ಸ್ತಥಾಮಹಾಪಾರ್ಶ್ವಮಹೋದರೌತೌ। ನಿಕುಂಭಕುಂ

ನಾಗುತ್ತೇನೆ ಎಂಬದಾಗಿ, (ಅನುತಾಪ ಪಡುವವನಾಗುತಿದ್ದೀ) ॥೧೮॥ ಅಜಾನತಾ-ತಿಳಿಯದೇಇರುವ, ತ್ವಯಾ-ನಿನ್ನಿಂದ, ಅನುಚಿತಂ-ಮಾಡಬಾರದ, ಕರ್ಮ-ಕೆಲಸವು, ಯದ್ಯಪಿ-ಕೃತಂ-ಮಾಡಲ್ಪಟ್ಟದ್ದೇ ಆಯಿತು, ಪ್ರಭೋ-ಧೊರೆಯಾದ ರಾವಣನೇ, ಸರ್ವಂ-ನೀನುಮಾಡಿದ, ಅಯೋಗ್ಯವಾದ ಕೆಲಸವನ್ನು, ಸಮಂಕರಿಷ್ಯಾಮಿ - ಸರಿಯಾಗಿ ಮಾಡುತ್ತೇನೆ, ಸ್ವಸ್ಥಚಿತ್ತಃ-ಸ್ಥಿರಚಿತ್ತವುಳ್ಳವನು, ಭವ-ಆಗು, ॥೧೯॥ ಇಂದ್ರಜಿತ್-ಇಂದ್ರಜಿತುವು, ಕುಂಭಕರ್ಣ-ಕುಂಭಕರ್ಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ದೇವ-ಸ್ವಾಮಿಯೇ, ಮಮ-ನನಗೆ, ಅನುಜ್ಞಾಂ-ಅಪ್ಪಣೆಯನ್ನು, ದೇಹಿ-ಕೊಡು,ಸಲಕ್ಷ್ಮಣಂ-ಲಕ್ಷ್ಮಣನಿಂದಕೂಡಿರುವ, ರಾಮಂ-ರಾಮಚಂದ್ರನನ್ನು, ಸುಗ್ರೀವಂ-ಸುಗ್ರೀವನನ್ನು, ವಾನರಾನ್ಸರ್ವಾನ್-ಕಪಿಗಳನ್ನು, ಹತ್ವಾ-ಕೊಂದು, ತೇ-ನಿನ್ನ, ಅಂತಿಕಂ-ಸಮೀಪವನ್ನು ಕುರಿತು, ಪುನಃ-ತಿರಿಗಿ, ಯಾಸ್ಯಾಮಿ, ಬರುತ್ತಲಿದ್ದೇನೆ, ॥೨೦॥ ತತ್ರ-ಆ ರಾವಣನಸಭೆಗೆ, ಭಾಗವತಪ್ರಧಾನಃ-ಭಾಗವತ-ಭಗವದ್ಭಕ್ತರೊಳಗೆ, ಪ್ರಧಾನಃ-ಮುಖ್ಯನಾದ, ಬುದ್ಧಿಮತಾಂ-ಬುದ್ಧಿಶಾಲಿಗಳೊಳಗೆ, ವರಿಷ್ಠಃ-ಶ್ರೇಷ್ಠನಾದ, ಶ್ರೀರಾಮ-ರಾಮಚಂದ್ರನ, ಪಾದದ್ವಯ, ಚರಣಯುಗ್ಮವನ್ನು, ಏಕತಾನಃ- ತದೇಕಚಿತ್ತನಾಗಿ ಧ್ಯಾನಮಾಡುವವನಾದ, ವಿಭೀಷಣಃ-ವಿಭೀಷಣನು, ದೇವಾರಿಂ-ದೇವತೆಗಳಿಗೆಶತ್ರುವಾದ ರಾವಣನನ್ನು, ಪ್ರಣಮ್ಯ-ವಂದಿಸಿ, ಉಪೋಪವಿಷ್ಟಃ-ರಾವಣನ ಬಳಿಯಲ್ಲಿ ಕೂತುಕೊಂಡೆನು ॥೨೧॥

ಕುಂಭಶ್ರವಣಾದಿದೈತ್ಯಾನ್, ಕುಂಭಶ್ರವಣ – ಕುಂಭಕರ್ಣನೆ, ಆದಿ- ಮೊದಲಾದ, ದೈತ್ಯಾನ್ - ರಾಕ್ಷಸರನ್ನು, ವಿಲೋಕ್ಯ-ನೋಡಿ, ಮತ್ತಪ್ರಮತ್ತಾನ್ - ಮತ್ತನು, ಪ್ರಮತ್ತನು ಎಂಬರಾಕ್ಷಸರನ್ನು, ಕಾಮಾತುರಂ-ಕಾಮುಕನಾದ, ದಶಾನನಂ-ಹತ್ತುಮುಖಉಳ್ಳವನಾದ ರಾವಣನನ್ನು, ವಿಸ್ಮಯೇನ-ಆಶ್ಚರ್ಯದಿಂದ, ವಿಲೋಕ್ಯ-ನೋಡಿ, ವಿಶುದ್ಧಬುದ್ಧಿಃ-ವಿಶುದ್ಧ-ಪರಿಶುದ್ಧವಾದ, ಬುದ್ಧಿಃ-ಜ್ಞಾನವುಳ್ಳ, ವಿಭೀಷಣನು, ಪ್ರಾಹ-ರಾವಣನನ್ನು ಕುರಿತು ಹೇಳುವವನಾದನು, ॥೨೨॥ ರಾಜನ್-ಧೊ

ಭೌಚತಥಾತಿಕಾಯಃಸ್ಥಾತುಂನಶಕ್ತಾ ಯುಧಿರಾಘವಸ್ಯ ॥೭೩॥ ಸೀತಾಭಿಧಾನೇನಮಹಾಗ್ರಹೇಣಗ್ರಸ್ತೋಸಿರಾಜನ್ನಚತೇವಿಮೋಕ್ಷಃ । ತಾಮೇವಸತ್ಕೃತ್ಯಮಹಾಧನೇನದತ್ವಾಭಿರಾಮಾಯಸುಖೀಭವಾಮಃ ॥೭೪॥

ಯಾವನ್ನರಾಮಸ್ಯಶಿತಾಶ್ಶಿಲೀಮುಖಾಃಲಂಕಾಮಭಿವ್ಯಾಪ್ಯಶಿರಾಂಸಿರಕ್ಷಸಾಂ । ಛಿಂದಂತಿತಾವದ್ರಘುನಾಯಕಸ್ಯಭೋತಾಂಜಾನಕೀಂತ್ವಂಪ್ರದಾತುಮರ್ಹಸಿ ॥೭೫॥ ಯಾವನ್ನಗಾಭಾಃಕಪಯೋಮಹಾಬಲಾಃಹರೀಂದ್ರತುಲ್ಯಾನಖದಂಷ್ಟ್ರಯೋಧಿನಃ । ಲಂಕಾಂಸಮಾಕ್ರಮ್ಯವಿನಾಶಯಂತಿತೇತಾವದ್ಭೃತಂದೇಹಿರಘೋತ್ತಮಾಯತಾಂ ॥೭೬॥ ಜೀವನ್ನರಾಮ

ಕೆನಾದರಾವಣನೇ, ಕುಂಭಕರ್ಣೇಂದ್ರಜಿತೌ-ಕುಂಭಕರ್ಣ-ಕುಂಭಕರ್ಣನು, ಇಂದ್ರಜಿತ್-ಇಂದ್ರಜಿತುವು, ರಾಘವಸ್ಯ-ರಾಮಚಂದ್ರನ ಕುರಿತು, ಯುಧಿ-ಯುದ್ಧದಲ್ಲಿ, ಸ್ಥಾತುಂ [illegible]ದಕ್ಕೆ, (ನಶಕ್ತೌ-ಸಮರ್ಥರಾಗುವದಿಲ್ಲ) ತೌ-ಪ್ರಸಿದ್ಧರಾದ, ಮಹಾಪಾರ್ಶ್ವಮಹೋದರೌ-ಮಹಾಪಾರ್ಶ್ವಮಹೋದರರೆಂಬ ರಾಕ್ಷಸರು, ನಶಕ್ತೌ-ಶಕ್ತರಾಗುವದಿಲ್ಲ, ನಿಕುಂಭಕುಂಭೌಚ-ನಿಕುಂಭಕುಂಭರೆಂಬರಾಕ್ಷಸರು, ತಥಾ-ಹಾಗೆ, ಅತಿಕಾಯಃ-ಅತಿಕಾಯನೆಂಬರಾಕ್ಷಸನು, ನಶಕ್ತಃ-ರಾಮಚಂದ್ರನಸಂಗಡೆ ಯುದ್ಧದಲ್ಲಿ ನಿಲ್ಲುವದಕ್ಕೆ ಸಮರ್ಥರಾಗುವದಿಲ್ಲ, ॥೭೩॥ ರಾಜನ್-ಧೊರೆಯಾದ ರಾವಣನೇ, ಸೀತಾಭಿಧಾನೇನ-ಸೀತಾ-ಸೀತೆಯೆಂಬ, ಅಭಿಧಾನೇನ-ಹೆಸರುಳ್ಳ, ಮಹಾಗ್ರಹೇಣ-ಮಹಾ-ದೊಡ್ಡದಾದ, ಗ್ರಹೇಣ-ಗ್ರಹದಿಂದ, ಗ್ರಸ್ತಃ-ನುಂಗಲ್ಪಟ್ಟವನು, ಅಸಿ-ಆಗಿದ್ದೀ, ತೇ-ನಿನಗೆ, ವಿಮೋಕ್ಷಃ-ಆ ಗ್ರಹದಿಂದ, ಬಿಡುಗಡೆಯು, ನ-ಉಂಟಾಗುವದಿಲ್ಲ, ಮಹಾಧನೇನ- ಅಮೂಲ್ಯರತ್ನಗಳ ಸಂಗಡೆ, ತಾಮೇವ-ಆ ಸೀತೆಯನ್ನೇ, ಸತ್ಕೃತ್ಯ-ಕಾಣಿಕೆಯಾಗಿಮಾಡಿ, ಅಭಿರಾಮಾಯ-ಮನೋಹರನಾದ, ರಾಮಚಂದ್ರನಿಗೆ, ದತ್ವಾ-ಕೊಟ್ಟು, ಸುಖೀಭವಾಮಃ-ಸುಖವುಳ್ಳವರಾಗಿರೋಣ. ॥೭೪॥ ರಾಮಸ್ಯ-ರಾಮಚಂದ್ರನ, ಶಿತಾಃ-ತೀಕ್ಷ್ಣಗಳಾದ, ಶಿಲೀಮುಖಾಃ-ಬಾಣಗಳು, ಲಂಕಾಂ-ಲಂಕಾಪಟ್ಟಣವನ್ನು, ಅಭಿವ್ಯಾಪ್ಯ-ಆವರಿಸಿಕೊಂಡು, ರಕ್ಷಸಾಂ-ರಾಕ್ಷಸರುಗಳ, ಶಿರಾಂಸಿ ತಲೆಗಳನ್ನು, ಯಾವತ್-ಯದುವರಿಗೆ, ನಛಿಂದಂತಿ-ಕತ್ತರಿಸುವದಿಲ್ಲವೋ, ತಾವತ್-ಅಷ್ಟರೊಳಗಾಗಿಯೇ, ಭೋ-ರಾವಣನೆ, ರಘುನಾಯಕ [illegible]ಮಚಂದ್ರನಿಗೆ, ತಾಂ-ಆ, ಜಾನಕೀಂ-ಸೀತೆಯನ್ನು, ತ್ವಂ-ನೀನು, ಪ್ರದಾತುಂ-ಕೊಡುವದಕ್ಕೆ, ಅರ್ಹಸಿ-ಸಮರ್ಥನಾಗು. ॥೭೫॥ ನಗಾಭಾಃ-ನಗ-ಬೆಟ್ಟಕ್ಕೆ, ಆಭಾಃ-ಸಮಾನರಾದ, ಮಹಾಬಲಾಃ-ಅಧಿಕಬಲರಾದ, ಹರೀಂದ್ರತುಲ್ಯಾಃ-ಸಿಂಹಕ್ಕೆ ಸಮಾನರಾದ, ನಖದಂಷ್ಟ್ರಯೋಧಿನಃ-ನಖ-ಉಗುರುಗಳಿಂದಲೂ, ದಂಷ್ಟ್ರ-ಕೋರೆಹಲ್ಲುಗಳಿಂದಲೂ, ಯೋಧಿನಃ-ಯುದ್ಧ ಮಾಡುವವರಾದ, ಕಪಯಃ-ಕೋಡಗಗಳು, ಯಾವತ್-ಯಷ್ಟರೊಳಗಾಗಿ, ತೇ-ನಿನ್ನ, ಲಂಕಾಂ-ಲಂಕಾಪಟ್ಟಣವನ್ನು, ಸಮಾಕ್ರಮ್ಯ-ಮುತ್ತಿಗೆಹಾಕಿ, ವಿನಾಶಯಂತಿ-ನಾಶಮಾಡುತ್ತಾರೊ, ತಾವತ್-ಅಷ್ಟರೊಳಗೆ, ಧೃತಂ-ಜಾಗ್ರತೆಯಾಗಿ, ರಘೋತ್ತಮಾಯ-ರಾಮಚಂದ್ರನಿಗೆ, ತಾಂ-ಆ ಸೀತೆಯನ್ನು, ದೇಹಿ-ಕೊಡು. ॥೭೬॥ ಸುರೇಂದ್ರೈಃ-ಶ್ರೇಷ್ಠರಾದ ಕುಬೇರಾದಿ ದೇವತೆಗಳಿಂದಲೂ, ಶಂಕರೇಣ-ಈಶ್ವರನಿಂದಲೂ, ಮೃತ್ಯೋಃ-ಮೃತ್ಯುವಿನಿಂದಲೂ, ಗುಪ್ತಃ- ಕಾಪಾಡಲ್ಪಟ್ಟ

ಣಾವಿಮೋಕ್ಷ್ಯಸೆತ್ವಂಗುಪ್ತಃಸುರೇಂದ್ರೈರಪಿಶಂಕರೇಣ ॥ ನದೇವರಾಜಾಂಕಗತೋಽನಮೃತ್ಯೋಃಪಾತಾಳಲೋಕಾನಪಿಸಂಪ್ರ
ವಿಷ್ಟಃ ॥೧೭॥ಶುಭಂಹಿತಂಪವಿತ್ರಂಚವಿಭೀಷಣವಚಃಖಲಃ।ಪ್ರತಿಜಗ್ರಾಹನೈವಾಸೌವಿಮ್ರಿಯ್ಯಮಾಣಇವೌಷಧಂ॥೧೮॥
ಕಾಲೇನನೋದಿತೋದೈತ್ಯೋವಿಭೀಷಣಮಥಾಬ್ರವೀತ್ । ಮದ್ದತ್ತಭೋಗೈಃಪುಷ್ಟಾಂಗೋಮತ್ಸಮೀಪೇವಸನ್ನಪಿ ॥೧೯॥
ಪ್ರತೀಪಮಾಚರತ್ಯೇಷಃಮಮೈವಹಿತಕಾರಿಣಃ । ಮಿತ್ರಭಾವೇನಶತ್ರುರ್ಮೇಜಾತೋನಾಸ್ತ್ಯತ್ರಸಂಶಯಃ ॥೨೦॥ ಅನಾ
ರ್ಯೇಣಕೃತಘ್ನೇನಸಂಗತಿರ್ಮೇನಯುಜ್ಯತೇ । ವಿನಾಶಮಭಿಕಾಂಕ್ಷಂತಿಜ್ಞಾತೀನಾಂಜ್ಞಾತಯಸ್ಸದಾ ॥೨೧॥ ಯೋನ್ಯಸ್ತ್ವೇವಿ

ವನಾದಾಗ್ಯೂ, ತ್ವಂ-ನೀನು, ರಾಮೇಣ-ರಾಮಚಂದ್ರನಿಂದ, ಜೀವನ್-ಪ್ರಾಣವುಳ್ಳವನಾಗಿ, ನಮೋಕ್ಷ್ಯಸೇ-ಬಿಡಲ್ಪಡುವವನಾಗುವದಿಲ್ಲ, ದೇವರಾಜಾಂಕಗತಃ- ದೇವರಾಜ-ಇಂದ್ರನ, ಅಂಕ-ತೊಡೆಯಮೇಲೆ, ಗತಃ-ಇರುವವನಾದಾಗ್ಯೂ, ನ-ನೀನು ರಾಮಚಂದ್ರನಿಂದ ಪ್ರಾಣವುಳ್ಳವನಾಗಿ ಬಿಡಲ್ಪಡುವವನಾಗುವದಿಲ್ಲ, ಪಾತಾಳಲೋಕಾನಪಿ-ಪಾತಾಳವೇ ಮೊದಲಾದ ಲೋಕಗಳನ್ನು, ಸಂಪ್ರವಿಷ್ಟಃ-ಹೊಕ್ಕು ಇರುವವನಾದಾಗ್ಯೂ, ನ-ನೀನು ರಾಮಚಂದ್ರನಿಂದ ಪ್ರಾಣವುಳ್ಳವನಾಗಿ ಬಿಡಲ್ಪಡುವವನಾಗುವದಿಲ್ಲ. ॥೧೭॥ ಖಲಃ-ಆ ನೀಚನಾದ, ಅಸೌ-ಈ ರಾವಣನು, ಶುಭಂ-ಮಂಗಳಕರವಾದ, ಹಿತಂ-ಕ್ಷೇಮಕರವಾದ, ಪವಿತ್ರಂ-ಪರಿಶುದ್ಧವಾದ, ವಿಭೀಷಣವಚಃ-ವಿಭೀಷಣ- ವಿಭೀಷಣನ, ವಚಃ-ಮಾತನ್ನು, ಮ್ರಿಯ್ಯಮಾಣಃ-ಸಾಯುವವನು, ಔಷಧಮಿವ-ಮದ್ದನ್ನು ಹ್ಯಾಗೆ ತೆಗದುಕೊಳ್ಳುವದಿಲ್ಲವೋ ಹಾಗೆ, ನಪ್ರತಿಜಗ್ರಾಹ-ಅಂಗೀಕರಿಸಲಿಲ್ಲ. ॥೧೮॥ ಕಾಲೇನ-ಮೃತ್ಯುವಿನಿಂದ, ನೋದಿತಃ-ಪ್ರೇರಿತನಾದ, ದೈತ್ಯಃ-ರಾಕ್ಷಸನಾದ ರಾವಣನು, ವಿಭೀಷಣಂ-ವಿಭೀಷಣನನ್ನು ಕುರಿತು, ಅಥ-ಆ ಬಳಿಕ,ಅಬ್ರವೀತ್-ಹೇಳುವವನಾದನು. ಮದ್ದತ್ತಭೋಗೈಃ-ಮದ್ದತ್ತ-ನನ್ನಿಂದ ಕೊಡಲ್ಪಟ್ಟ, ಭೋಗೈಃ-ಭೋಗಸಾಧನಗಳಾದ ವಸ್ತುಗಳಿಂದ, ಪುಷ್ಟಾಂಗಃ-ಬಲತ ದೇಹವುಳ್ಳವನಾಗಿ, ಮತ್ಸಮೀಪೇ- ನನ್ನ ಹತ್ತಿರದಲ್ಲಿ, ವಸನ್ನಪಿ-ಇರುತ್ತಿರುವವನಾದಾಗ್ಯೂ. ॥೧೯॥ ಏಷಃ-ಈ ವಿಭೀಷಣನು,ಹಿತಕಾರಿಣಃ-ವಿಭೀಷಣನಾದ ಇವನಿಗೆ ಕ್ಷೇಮವನ್ನು ಮಾಡಿದವನಾದ, ಮಮ-ನನಗೆ, ಮಿತ್ರಭಾವೇನ-ಮಿತ್ರತ್ವದಿಂದ (ಕಾಣಿಸುತ್ತಿರುವ) ಶತ್ರುಃ-ಶತ್ರುವಾಗಿ, ಜಾತಃ-ಹುಟ್ಟಿದ್ದಾನೆ,ಅತ್ರ-ಈ ಮಾತಿನಲ್ಲಿ, ಸಂಶಯಃ-ಸಂದೇಹವು ನ-ಇಲ್ಲ. ॥೨೦॥ ಕೃತಘ್ನೇನ-ಉಪಕಾರವನ್ನು ಎಣಿಸದೇ ಇರುವವನಾದ, ಅನಾರ್ಯೇಣ-ಅತಿಯಿವ-ನೀಚನಾದವಿಭೀಷಣನ ಸಂಗಡ, ಸಂಗತಿಃ-ಸಹವಾಸವು, ಮೇ-ನನಗೆ, ನಯುಜ್ಯತೇ-ಯುಕ್ತವಾದದ್ದಲ್ಲ, ಜ್ಞಾತಯಃ-ಜ್ಞಾತಿಗಳು, ಸದಾ-ಯಾವಾಗಲು, ಜ್ಞಾತೀನಾಂ-ಜ್ಞಾತಿಗಳಿಗೆ, ವಿನಾಶಂ-ಕೇಡನ್ನು, ಅಭಿಕಾಂಕ್ಷಂತಿ-ಅಪೇಕ್ಷಿಸುತ್ತಾರೆ. ॥೨೧॥ ಅನ್ಯಃ-ಯಃ-ನೀನಲ್ಲದೆ ಬೇರೆ ಯಾರಾದರೂ ಆದ, ನಿಶಾಚರಃ-ರಾಕ್ಷಸನು, ಏವಂವಿಧಂ-ಈ ವಿಧವಾದ, ಏಕಂ-ಒಂದು, ವಾಕ್ಯಂ-ಮಾತನ್ನು, ಬ್ರೂಯಾತ್-ಹೇಳದ್ದೆ ಆದರೆ, ತಸ್ಮಿನ್-

ವಂವಿಧಂಬ್ರೂಯಾದ್ವಾಕ್ಯಮೇಕಂನಿಶಾಚರಃ । ಹನ್ಮಿತಸ್ಮಿನ್‌ಕ್ಷಣಯೇವಧಿಕ್ತ್ವಾಂರಕ್ಷಃಕುಲಾಧಮಂ ॥೨೦॥ ರಾವಣೇನೈವಮುಕ್ತಸ್ಸಪ್ಪರುಷಂಸವಿಭೀಷಣಃ । ಉತ್ಪಪಾತಸಭಾಮಧ್ಯಾದ್ಗದಾಪಾಣಿರ್ಮಹಾಬಲಃ ॥೨೭॥ ಚತುರ್ಭಿರ್ಮಂತ್ರಿಭಿಸಾರ್ಧಂಗಗನಸ್ಥೋಬ್ರವೀದ್ವಚಃ । ಕ್ರೋಧೇನಮಹತಾವಿಷ್ಟೋರಾವಣಂದಶಕಂಧರಂ ॥೨೪॥ ಮಾವಿನಾಶಮುಪೇಹಿತ್ವಂಪ್ರಿಯವಾದಿನಮೇವಮಾಂ । ಧಿಕ್ಕರೋಷಿತಥಾಪಿತ್ವಂಜ್ಯೇಷ್ಠೋಭ್ರಾತಾಪಿತುಸ್ಸಮಃ ॥೨೫॥ ಕಾಲೋರಾಘವರೂಪೇಣಜಾತೋದಶರಥಾಲಯೇ। ಕಾಳೀಸೀತಾಭಿಧಾನೇನಜಾತಾಜನಕನಂದಿನಿ ॥ ೨೬ ॥ ತಾವುಭಾವಾಗತಾವತ್ರಭೂಮೇರ್ಭಾ

ಅ, ಕ್ಷಣಯೇವ- ನಿಮಿಷದಲ್ಲಿಯೆ, ಹನ್ಮಿ-ಅವನನ್ನು ಕೊಲ್ಲುತ್ತಿದ್ದೆನು, ರಕ್ಷಃಕುಲಾಧಮಂ-ರಕ್ಷಃ-ರಾಕ್ಷಸರ, ಕುಲ-ವಂಶದವರೊಳಗೆ,ಅಧಮಂ- ನೀಚನಾದ,ತ್ವಾಂ-ನಿನ್ನನ್ನು, ಧಿಕ್-ನಿಂದೆಗೆ ಅರ್ಹನಾಗಿ ಮಾಡಬೇಕು, ಅಂದರೆ ಧಿಕ್ಕಾರಕ್ಕೆ ಅರ್ಹನಾದಪ್ರಯುಕ್ತ-ನನ್ನ ಪಟ್ಟಣದಲ್ಲಿ ಇರದಂತೆಗಡಿದಾಟಿಸಿ ಕಳುಹಿಸಲು ಯೋಗ್ಯನಾದವನು. ॥೨೦॥ ಸಃ-ಆ ಮಹಾಬಲಃ-ಅಧಿಕಬಲನಾದ, ವಿಭೀಷಣಃ- ವಿಭೀಷಣನು, ರಾವಣೇನ-ರಾವಣನಿಂದ, ಏವಂ-ಈ ಪ್ರಕಾರವಾಗಿ, ಪರುಷಂ-ಕ್ರೂರವಾದದ್ದನ್ನು, ಉಕ್ತಃ-ಹೇಳಲ್ಪಟ್ಟವನಾಗಿ, ಸಭಾಮಧ್ಯಾತ್-ಸಭೆಯ ಮಧ್ಯದಿಂದ, ಗದಾಪಾಣಿಃ-ಗದೆಯನ್ನು ಕೈಯಲ್ಲಿ ಧರಿಸಿದವನಾಗಿ, ಉತ್ಪಪಾತ-ಎದ್ದನು. ॥೨೭॥ ಚತುರ್ಭಿಃ- ನಾಲ್ಕಾದ, ಮಂತ್ರಿಭಿಃ-ಮಂತ್ರಿಗಳ ಸಂಗಡ, ಗಗನಸ್ಥಃ-ಆಕಾಶದಲ್ಲಿ ನಿಂತವನಾಗಿ, ಮಹತಾ-ಹೆಚ್ಚಾದ, ಕ್ರೋಧೇನ-ಕೋಪದಿಂದ, ಆವಿಷ್ಟಃ-ಕೂಡಿದವನಾಗಿ, ದಶಕಂಧರಂ-ದಶ- ಹತ್ತಾದ, ಕಂಧರಂ-ಕಲೆಗಳುಳ್ಳವನಾದ, ರಾವಣಂ-ರಾವಣನನ್ನು ಕುರಿತು, ವಚಃ-ಮಾತನ್ನು, ಅಬ್ರವೀತ್-ಹೇಳಿದನು. ॥೨೪॥ ತ್ವಂ-ನೀನು, ವಿನಾಶಂ-ನಾಶವನ್ನು, ಮಾಉಪೇಹಿ-ಹೊಂದಬೇಡ, ಪ್ರಿಯವಾದಿನಂ-ಪ್ರಿಯ-ಹಿತವಾದ ಮಾತನ್ನು, ವಾದಿನಂ-ಹೇಳುತ್ತಿರುವ, ಮಾಂ-ನನ್ನನ್ನು, ಧಿಕ್ಕರೋಷಿ-ಧಿಕ್ಕಾರವನ್ನು ಮಾಡಿದವನಾಗಿ, ತಥಾಪಿ- ಆದಾಗ್ಯೂ, ಜ್ಯೇಷ್ಠಃಭ್ರಾತಾ-ಅಣ್ಣನಾದವನು, ಪಿತುಃ-ತಂದೆಗೆ, ಸಮಃ-ಸಮಾನನಾದವನು, (ಆದ್ದರಿಂದ ಕ್ರೂರಮಾತುಗಳನ್ನು ನಾನುಹೇಳಬಾರದಾದ್ದರಿಂದಹೇಳಲಿಲ್ಲ,)ನಿಜಸ್ಥಿತಿಯನ್ನು ಹೇಳುತ್ತೇನೆ ಕೇಳು, ಯಂದು ಹೇಳುವದಕ್ಕೆ ಉಪಕ್ರಮಿಸಿದನು. ॥೨೫॥ ಕಾಲಃ-ಕಾಲಸ್ವರೂಪನಾದ ಭಗವಂತನು, ಅಂದರೆ ಸರ್ವಸಂಹಾರಕರ್ತನು, ರಾಘವರೂಪೇಣ-ರಾಮಚಂದ್ರನೆಂಬರೂಪದಿಂದ, ದಶರಥಾಲಯೇ, ದಶರಥ-ದಶರಥರಾಯನ, ಆಲಯೇ-ಮನೆಯಲ್ಲಿ, ಜಾತಃ-ಹುಟ್ಟಿದವನಾದನು, ಕಾಳೀ-ಸರ್ವಸಂಹಾರಕ್ಕೆ ಸಹಾಯಭೂತಳಾದಶಕ್ತಿಯು, ಸೀತಾಭಿಧಾನೇನ-ಸೀತಾ-ಸೀತೆಯೆಂಬ, ಅಭಿಧಾನೇನ-ಹೆಸರಿನಿಂದ, ಜನಕನಂದಿನೀ-ಜನಕರಾಯನಿಗೆ, ನಂದಿನೀ-ಮಗಳಾಗಿ, ಜಾತಾ-ಹುಟ್ಟಿದವಳಾದಳು, ॥೨೬॥ ತಾವುಭೌ-ಸಂಹಾರಕರ್ತನಾದ ಭಗವಂತನು, ಸಂಹಾರಕ್ಕೆ ಸಹಾಯಭೂತಳಾದಶಕ್ತಿಯೂ, ಇವರಿಬ್ಬರೂ,ಅತ್ರ-ಇಲ್ಲಿಗೆ,ಭೂಮೇರ್ಭಾರಾಪನುತ್ತಯೇ, ಭೂಮೇಃ-

ರಾಪನುತ್ತಯೆ ॥೩೭॥ ತೆನ್ಯೆವಪ್ರೇರಿತಸ್ತ್ವಂತುನೆಶೃಣೋಷಿಹಿತಂಮಮ । ಶ್ರೀರಾಮಃಪ್ರಕೃತೆಸಾಕ್ಷಾತ್ಪರಸ್ತಾತ್ಸರ್ವ
ದಾಸ್ಥಿತಃ ॥೩೮॥ ಬಹಿರಂತಶ್ಚಭೂತಾನಾಂಸಮಃಸರ್ವತ್ರಸಂಸ್ಥಿತಃ। ನಾಮರೂಪಾದಿಭೇದೆನತತ್ತನ್ಮಯಇವಾಮಲಃ ॥
ಯಥಾನಾನಾಪ್ರಕಾರೇಷುವೃಕ್ಷೇಷ್ವೇಕೋಮಹಾನಲಃ॥ ತತ್ತದಾಕೃತಿಭೇದೆನಭಿದ್ಯತೆಜ್ಞಾನಚಕ್ಷುಷಾಂ ॥೪೦॥ ಪಂಚ
ಕೋಶಾದಿಭೇದೇನತತ್ತನ್ಮಯಇವಾಬಭೌ । ನೀಲಪೀತಾದಿಯೋಗೆನನಿರ್ಮಲಃಸ್ಫಟಿಕೋಯಥಾ ॥೪೧॥ ಸಯೆಪನಿತ್ಯ

ಭೂಮಿಯ, ಭಾರ-ಹೊರೆಯನ್ನು ಅಪನುತ್ತಯೆ-ಹೋಗಲಾಡಿಸುವದಕ್ಕಾಗಿ, ಆಗತಃ-ಬಂದವರಾಗಿದ್ದಾರೆ. ॥೩೭॥ ತೆನ್ಯೆವ - ಆ ಕಾಲಪುರುಷನಿಂದಲೇ, ಪ್ರೇರಿತಃ-ಪ್ರೇರೇಪಿಸಲ್ಪಟ್ಟವನಾಗಿ, ತ್ವಂ-ನೀನು, ಮಮ-ನನ್ನ, ಹಿತಂ-ನಿನಗೆ ಕ್ಷೇಮಕರವಾದ ಮಾತನ್ನು, ನಶೃಣೋಷಿ-ಕೇಳುವವನಾಗುವದಿಲ್ಲ, ॥ ಶ್ರೀರಾಮಃ-ರಾಮಚಂದ್ರನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಪ್ರಕೃತಿಗೆ, ಪರಸ್ತಾತ್-ಹೊರತಾಗಿ, ಸರ್ವದಾ-ಯಾವಾಗಲೂ, ಸ್ಥಿತಃ-ಪಂಕಪದ್ಮನ್ಯಾಯದಿಂದ ಇರುವವನಾಗಿದ್ದಾನೆ, ॥೩೮॥ ಭೂತಾನಾಂ-ಪ್ರಾಣಿಗಳಿಗೆ, ಸಮಃ-ಹೆಚ್ಚು ಕಡಮೆಗಳೆಂಬ ವೈಷಮ್ಯವಿಲ್ಲದೆ ಆಯಾಯಿಪ್ರಾಣಿಯು ಮಾಡಿದ್ದಕ್ಕನುಗುಣವಾಗಿ ಫಲವನ್ನು ಕೊಡುವದ್ದರಿಂದಸಮನಾದವನು, ಸರ್ವತ್ರ-ಯೆಲ್ಲಾ ವಸ್ತುಗಳಲ್ಲಿಯೂ, ಬಹಿರಂತಶ್ಚ-ಹೊರಗೂ ಒಳಗೂಕೂಡ, ಸಂಸ್ಥಿತಃ-ವ್ಯಾಪಕನಾಗಿ, ಇರತಕ್ಕವನೂ, (ಆದಾಗ್ಯೂ) ನಾಮರೂಪಾದಿಭೇದೆನ-ನಾಮ-ಹೆಸರು, ರೂಪ-ಆಕೃತಿ, ವರ್ಣವೆ, ಆದಿ-ಮೊದಲಾದವುಗಳ, ಭೇದೆನ-ಭೇದದಿಂದ, ತತ್ತನ್ಮಯಇವ-ನಾಮರೂಪವರ್ಣಾದಿಗಳುಳ್ಳವನಂತೆ, ಅಮಲಃ-ನಿರ್ಮಲನಾಗಿದ್ದಾಗ್ಯೂ, ಪ್ರತೀತಿವಿಷಯನಾಗುತ್ತಲಿದ್ದಾನೆ) ॥೩೯॥ ಏಕಃ-ಒಬ್ಬನಾದ, ಮಹಾನಲಃ-ಯಜ್ಞೇಶ್ವರರು, ನಾನಾಪ್ರಕಾರೆಷು-ಅನೇಕವಿಧಗಳಾದ, ವೃಕ್ಷೇಷು-ಗಿಡಗಳಲ್ಲಿ, ಯಥಾ-ಹ್ಯಾಗೆ, ಕೃತಿ, ಭೇದೆನ-ಆಕಾರಭೇದದಿಂ, ಭಿದ್ಯತೆ-ಭೇದವುಳ್ಳದ್ದಾಗಿ ಕಾಣಲ್ಪಡುತ್ತೊ, ಜ್ಞಾನಚಕ್ಷುಷಾಂ- ಜ್ಞಾನದೃಷ್ಟಿಯುಳ್ಳವರಿಗೆ, ತತ್ತದಾಕೃತಿಭೇದೆನ, ತತ್ತತ್-ಆಯಾಯ, ಆಕೃತಿ-ಆಕಾರದಭೇದೆನ-ಭೇದದಿಂದ, ಭಿದ್ಯತೆ-ಭೇದವಾಗಿಕಾಣಲ್ಪಡುತ್ತೆ, ॥೪೦॥ ನಿರ್ಮಲಃ-ಸ್ವಚ್ಛವಾದ, ಸ್ಫಟಿಕಃ-ಸ್ಫಟಿಕಮಣಿಯು, ನೀಲಪೀತಾದಿಯೋಗೆನ, ನೀಲ- ನೀಲಬಣ್ಣ ಪೀತ-ಹಚ್ಚೆಬಣ್ಣವೆ, ಆದಿ- ಮೊದಲಾದ, ಬಣ್ಣಗಳ, ಯೋಗೆನ-ಸಂಬಂಧದಿಂದ, ಯಥಾ-ಹ್ಯಾಗೆ, ನೀಲಾದಬಣ್ಣವುಳ್ಳಂತೆ ಕಾಣಲ್ಪಡುತ್ತೊ, (ತಥಾ-ಹಾಗೆ) ಪಂಚಕೋಶಾದಿಭೇದೆನ- ಪಂಚಕೋಶ-ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ, ಐದು ಕೋಶಗಳ, ಆದಿಭೂತಗಳೇ ಮೊದಲಾದವುಗಳ, ಭೇದೇನ-ಭೇದದಿಂದ, ತತ್ತನ್ಮಯಇವ-ಆ ಯಾಯಿವಿಕಾರನಾದವನಂತೆ, ಆಬಭೌ-ತೋರಿಪ್ರಕಾಶಿಸುತ್ತಲಿದ್ದಾನೆ॥೪೧॥ ಸಃ-ಏಷಃ-ಈರಾಮಚಂದ್ರನು, ನಿತ್ಯಮುಕ್ತೋಪಿ-ನಿತ್ಯಮುಕ್ತನಾಗಿದ್ದಾಗ್ಯೂ, ಸ್ವಮಾಯಯಾಗುಣಬಿಂಬಿತಃ-ಸ್ವ-ತನ್ನ, ಮಾಯಾ-ಪ್ರಕೃತಿಯು, ಗುಣ-ಸತ್ವಾದಿಗುಣಗಳು, ಬಿಂಬಿತಃ-ತನ್ನಲ್ಲಿ ಪ್ರತಿಫಲಿಸಲ್ಪಟ್ಟವುಗ

ಮುಕ್ತೋಽಪಿಸ್ವಮಾಯಾಗುಣಬಿಂಬಿತಃ । ಕಾಲಃಪ್ರಧಾನಂಪುರುಷೋವ್ಯಕ್ತಂಚೇತಿಚತುರ್ವಿಧಃ॥೪೦॥ ಪ್ರಧಾನಪುರುಷಾಭ್ಯಾಂಸಃಜಗತ್ಕೃತ್ಸ್ನಂಸೃಜತ್ಯಜಃ । ಕಾಲರೂಪೇಣಕಲನಾಂಜಗತಃಕುರುತೇವ್ಯಯಃ ॥೪೨॥ ಕಾಲರೂಪೀಸಭಗವಾನ್ರಾಮರೂಪೇಣಮಾಯಯಾ ॥೪೪॥ ಬ್ರಹ್ಮಣಾಪ್ರಾರ್ಥಿತೋದೇವಸ್ತ್ವದ್ವಧಾರ್ಥಮಿಹಾಗತಃ। ತದನ್ಯಥಾಕಥಂಕುರ್ಯಾತ್ಸತ್ಯಸಂಕಲ್ಪ ಈಶ್ವರಃ ॥೪೫॥ ಹನಿಷ್ಯತಿತ್ವಾಂರಾಮಸ್ತುಸಪುತ್ರಬಲವಾಹನಂ । ಹನ್ಯಮಾನಂನಶಕ್ನೋಮಿದ್ರಷ್ಟುಂರಾಮೇಣರಾವಣ॥೪೬॥ತ್ವಾಂರಾಕ್ಷಸಕುಲಂಕೃತ್ಸ್ನಂತತೋಗಚ್ಛಾಮಿರಾಘವಂ। ಮಯಿಯಾತೇಸುಖೀಭೂತ್ವಾರಮಸ್ವಭವನೇಚಿರಂ॥೪೭॥

ಳಾಗುವದರದೆಸೆಯಿಂದ, ಸತ್ವಾದಿಗುಣ ಪ್ರತಿಫಲನವುಳ್ಳವನಾಗಿ, ಕಾಲಃ-ಕಾಲವೆಂದು, ಪ್ರಧಾನಂ-ಪ್ರಧಾನವೆಂದು, ಪುರುಷಃ-ಪುರುಷನೆಂದು, ಅವ್ಯಕ್ತಂ-ಅವ್ಯಕ್ತವೆಂದು, ಚತುರ್ವಿಧಃ-ನಾಲ್ಕುಪ್ರಕಾರವಾಗಿ, ತೋರುವನು. ॥೪೦॥ ಪ್ರಧಾನಪುರುಷಾಭ್ಯಾಂ-ಪ್ರಧಾನಂ-ಪರಿಣಾಮಿ, ಪುರುಷಃ-ತನ್ನ ಭೋಗಕ್ಕೋಸ್ಕರ, ಅಪವರ್ಗಕ್ಕೋಸ್ಕರವಾಗಿ, ತತ್ಪ್ರವರ್ತಕನಾದವನು, ರಜೋಗುಣಪ್ರತಿಬಿಂಬಿತರಾದ ಈ ಪ್ರಧಾನಪುರುಷರಿಂದ, ಕೃತ್ಸ್ನಂ-ಸಮಸ್ತವಾದ, ಜಗತ್-ಪ್ರಪಂಚವನ್ನು, ಅಜಃ-ಉತ್ಪತ್ತಿಯಿಲ್ಲದವನಾದ, ಸಃ-ಪರಮಾತ್ಮನು, ಸೃಜತಿ-ಸೃಷ್ಟಿಮಾಡುತ್ತಾನೆ,ಅವ್ಯಯಃ-ನಾಶರಹಿತನಾದ, ಪರಮಾತ್ಮನು, ಕಾಲರೂಪೇಣ-ತಮೋ ಗುಣಪ್ರತಿಬಿಂಬಿತವಾದ ಕಾಲರೂಪದಿಂದ, ಜಗತಃ-ಪ್ರಪಂಚದ, ಕಲನಾಂ-ಸಂಹಾರವನ್ನು, ಕುರುತೇ-ಮಾಡುತ್ತಲಿದ್ದಾನೆ ॥೪೨॥ ಭಗವಾನ್-ಭೂತಗಳ ಉತ್ಪತ್ತಿ-ನಾಶ, ಆಗತಿ-ಗತಿವಿದ್ಯೆ ಅವಿದ್ಯೆಗಳನ್ನು ತಿಳಿದುಇರುವವನಾದ, ಕಾಲರೂಪೀ-ಸಂಹಾರಕರ್ತನಾದ, ಸಃ-ಆ ಪರಮಾತ್ಮನು, ಮಾಯಯಾ-ಸ್ವಮಾಯೆಯಿಂದ, ರಾಮರೂಪೇಣ-ರಾಮಚಂದ್ರನ ಆಕೃತಿಯಿಂದ, ॥೪೪॥ ಬ್ರಹ್ಮಣಾ-ಬ್ರಹ್ಮನಿಂದ, ಪ್ರಾರ್ಥಿತಃ-ಬೇಡಲ್ಪಟ್ಟವನಾಗಿ, ದೇವಃ-ಆ ಸಂಹಾರಕರ್ತನಾದ ಭಗವಂತನೇ, ತ್ವದ್ವಧಾರ್ಥಂ-ನಿನ್ನ ಸಂಹಾರಮಾಡುವದಕ್ಕೆ, ಇಹ-ಇಲ್ಲಿಗೆ, ಆಗತಃ-ಬಂದವನು ಆಗಿದ್ದಾನೆ, ಸತ್ಯ-ನಿಜವಾದ, ಸಂಕಲ್ಪಃ-ಸಂಕಲ್ಪವುಳ್ಳವನಾದ, ಈಶ್ವರಃ-ಈಶ್ವರನು, ತತ್-ಆ ಸಂಕಲ್ಪವನ್ನು, ಅನ್ಯಥಾ-ಮತ್ತೊಂದುವಿಧವಾಗಿ, ಕಥಂ-ಹ್ಯಾಗೆ, ಕುರ್ಯಾತ್-ಮಾಡ್ಯಾನು ॥೪೫॥ ರಾಮಃ-ರಾಮಚಂದ್ರನು, ಸಪುತ್ರಬಲವಾಹನಂ-ಮಕ್ಕಳು ಸೈನ್ಯವಾಹನಗಳಿಂದ ಕೂಡಿರುವ, ತ್ವಾಂ-ನಿನ್ನನ್ನು, ಹನಿಷ್ಯತಿ-ಕೊಲ್ಲುತ್ತಲಿದ್ದಾನೆ, ರಾವಣ-ರಾವಣನೆ, ರಾಮೇಣ-ರಾಮಚಂದ್ರನಿಂದ, ಹನ್ಯಮಾನಂ-ಕೊಲ್ಲಲ್ಪಡುವ, ತ್ವಾಂ-ನಿನ್ನನ್ನು, ಕೃತ್ಸ್ನಂ-ಸಮಸ್ತವಾದ, ರಾಕ್ಷಸಕುಲಂ-ರಾಕ್ಷಸ ಸಮೂಹವನ್ನು, ದ್ರಷ್ಟುಂ-ನೋಡುವದಕ್ಕೆ, ನಶಕ್ನೋಮಿ-ಸಮರ್ಥನಾಗಲಾರೆನು, ॥೪೬॥ ತತಃ-ಆದಕಾರಣದಿಂದ, ರಾಘವಂ-ರಾಮಚಂದ್ರನನ್ನು ಕುರಿತು, ಗಚ್ಛಾಮಿ-ಹೊರಟುಹೋಗುತ್ತೇನೆ. ಮಯಿ-ನಾನು, ಯಾತೇ-ಹೊರಟುಹೋದಬಳಿಕ,ಸುಖೀ-ಸುಖವುಳ್ಳವನು, ಭೂತ್ವಾ-ಆಗಿ, ಭವನೇ-ಮನೆಯಲ್ಲಿ, ಚಿರಂ-ಬಹುಕಾಲವರಿಗೂ, ರಮಸ್ವ-ಕ್ರೀಡಾಪರನಾಗಿರುವವನೆಯಾಗು, ॥೪೭॥ ಪರಿಪೂರ್ಣಮಾನಸಃ-ಪರಿಪೂರ್ಣ-ತೃಪ್ತವಾದ, ಮಾನಸಃ-ಮನಸ್ಸುಳ್ಳವನಾದ, ವಿಭೀಷಣಃ-ವಿಭೀಷಣನು, ರಾವಣ-ರಾ

ವಿಭೀಷಣೋರಾವಣವಾಕ್ಯತಃಕ್ಷಣಾದ್ವಿಸೃಜ್ಯಸರ್ವಂಸಪರಿಚ್ಛದಂಗೃಹಂ । ಜಗಾಮರಾಮಸ್ಯಪದಾರವಿಂದಯೋಃಸೇವಾಭಿಕಾಂಕ್ಷೀಪರಿಪೂರ್ಣಮಾನಸಃ ... ... ॥೪೮॥

ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಯುದ್ಧಕಾಂಡೇ ದ್ವಿತೀಯಸ್ಸರ್ಗಃ.

* 

ಶ್ರೀಮಹಾದೇವಉವಾಚ ॥೧॥ ವಿಭೀಷಣೋಮಹಾಭಾಗಶ್ಚತುರ್ಭಿರ್ಮಂತ್ರಿಭಿಸ್ಸಹ । ಆಗತ್ಯಗಗನೇರಾಮಸಮ್ಮುಖೇಸಮುಪಸ್ಥಿತಃ ॥೨॥ ಉಚ್ಚೈರುವಾಚಭೋಸ್ವಾಮಿನ್ರಾಮರಾಜೀವಲೋಚನ । ರಾವಣಸ್ಯಾನುಜೋಹಂತೇದಾರಹರ್ತುರ್ವಿಭೀಷಣಃ ॥೩॥ ನಾಮ್ನಾಭ್ರಾತ್ರಾನಿರಸ್ತೋಹಂತ್ವಾಮೇವಶರಣಂಗತಃ । ಹಿತಮುಕ್ತಂಮಯಾದೇವತಸ್ಯಚಾವಿದಿತಾತ್ಮನಃ ॥೪॥

ವಣನ, ವಾಕ್ಯತಃ-ಮಾತಿನದೆಸೆಯಿಂದ, ಕ್ಷಣಾತ್-ನಿಮಿಷದಲ್ಲಿ, ಸಪರಿಚ್ಛದಂ-ಉಪಭೋಗಸಾಮಗ್ರಿಗಳಿಂದಕೂಡಿದ, ಗೃಹಂ-ಮನೆಯನ್ನು, ಸರ್ವಂ-ಇತರಯೆಲ್ಲಾ ವಿಷಯವನ್ನು, ವಿಸೃಜ್ಯ-ಬಿಟ್ಟು, ರಾಮಸ್ಯ-ರಾಮಚಂದ್ರನ, ಪದಾರವಿಂದಯೋಃ-ಪಾದಕಮಲಗಳ, ಸೇವಾಭಿಕಾಂಕ್ಷೀ, ಸೇವ-ಸೇವೆಯನ್ನು, ಅಭಿಕಾಂಕ್ಷೀ- ಅಪೇಕ್ಷಿಸುತ್ತಿರುವವನಾಗಿ, ಜಗಾಮ-ಹೊರಟು ಹೋದನು. ... ... ... ॥೪೮॥

ಇಂತು ಅಧ್ಯಾತ್ಮರಾಮಾಯಣದೊಳುಮಾಮಹೇಶ್ವರ ಸಂವಾದದೊಳು ಯುದ್ಧಕಾಂಡದಲ್ಲಿ ಯೆರಡನೇಸರ್ಗವು.

ಟೀ॥ ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ ॥೧॥ ಮಹಾಭಾಗಃ-ಅಧಿಕಭಾಗ್ಯಶಾಲಿಯಾದ, ವಿಭೀಷಣಃ-ವಿಭೀಷಣನು, ಚತುರ್ಭಿಃ-ನಾಲ್ಕು ಮಂದಿಯಾದ, ಮಂತ್ರಿಭಿಸ್ಸಹ- ಮಂತ್ರಿಗಳಸಂಗಡೆ, ಆಗತ್ಯ-ಬಂದು, ಗಗನೇ-ಅಂತರಿಕ್ಷದಲ್ಲಿ, ರಾಮಸಮ್ಮುಖೇ, ರಾಮ-ರಾಮಚಂದ್ರನ, ಸಮ್ಮುಖೇ-ಮುಂದುಗಡೆಯಲ್ಲಿ, ಸಮುಪಸ್ಥಿತಃ-ಬಂದುನಿಂತವನಾದನು, ॥೨॥ ಉಚ್ಚೈಃ-ಘಟ್ಟಿಯಾಗಿ, ಉವಾಚ-ರಾಮಚಂದ್ರನನ್ನು ಕುರಿತು ಹೇಳಿದನು, ಭೋಸ್ವಾಮಿನ್-ಎಲೈಸ್ವಾಮಿಯಾದ, ರಾಜೀವಲೋಚನ,-ರಾಜೀವ-ಕಮಲಕ್ಕೆಸರಿಯಾದ, ಲೋಚನ-ಕಣ್ಣುಗಳುಳ್ಳವನಾದ, ರಾಮ-ರಾಮಚಂದ್ರನೇ, ತೇ-ನಿನ್ನ, ದಾರಹರ್ತುಃ, ದಾರ-ಹೆಂಡತಿಯನ್ನು, ಹರ್ತುಃ-ಅಪಹರಿಸಿದವನಾದ, ರಾವಣಸ್ಯ-ರಾವಣನಿಗೆ, ಅನುಜಃ-ತಮ್ಮನಾದ, ಅಹಂ-ನಾನು, ನಾಮ್ನಾ-ಹೆಸರಿನಿಂದ, ವಿಭೀಷಣಃ-ವಿಭೀಷಣನೆಂಬುವನು, (ಆಗಿದ್ದೇನೆ,) ॥೩॥ ಅಹಂ-ನಾನು, ಭ್ರಾತ್ರಾ-ಅಣ್ಣನಾದ ರಾವಣನಿಂದ, ನಿರಸ್ತಃ-ಹೊರಡಿಸಲ್ಪಟ್ಟವನಾಗಿ, ತ್ವಾಮೇವ-ನಿನ್ನನ್ನೇ, ಶರಣಂ-ರಕ್ಷಕನನ್ನಾಗಿ, ಗತಃ-ಹೊಂದಿದವನಾಗಿದ್ದೇನೆ, ಅವಿ

ಸೀತಾಂರಾಮಾಯವೈದೇಹೀಂಪ್ರೇಷಯೇತಿಪುನಃಪುನಃ।ಉಕ್ತೋಪಿನಶೃಣೋತ್ಯೇಷಕಾಲಪಾಶವಶಂಗತಃ ||೫|| ಹಂತುಂಮಾಂ ಖಡ್ಗಮಾದಾಯಪ್ರಾದ್ರವದ್ರಾಕ್ಷಸಾಧಮಃ । ತತೋಽಚಿರೇಣಸಚಿವೈಶ್ಚತುರ್ಭಿಸ್ಸಹಿತೋಭಯಾತ್ ||೬|| ತ್ವಾಮೇವಭವ ಮೋಕ್ಷಾಯಮುಮುಕ್ಷುಶ್ಶರಣಂಗತಃ । ವಿಭೀಷಣವಚಶ್ಶ್ರುತ್ವಾಸುಗ್ರೀವೋವಾಕ್ಯಮಬ್ರವೀತ್ ||೭|| ವಿಶ್ವಾಸಾರ್ಹೋ ನತೇರಾಮಮಾಯಾವೀರಾಕ್ಷಸಾಧಮಃ । ಸೀತಾಹರ್ತುರ್ವಿಶೇಷೇಣರಾವಣಸ್ಯಾನುಜೋಬಲೀ ||೮|| ಮಂತ್ರಿಭಿಸ್ಸಾ ಯುಧೈರಸ್ಮಾನ್ವಿವರೇನಿಹನಿಷ್ಯತಿ । ತದಾಜ್ಞಾಪಯಮೇದೇವವಾನರೈರ್ಹನ್ಯತಾಮಯಂ ||೯|| ಮಮೈವಂಭಾತಿತೇರಾ

ದಿತಾತ್ಮನಃ, ಅವಿದಿತ-ತಿಳಿಯದೇಯಿರುವ, ಆತ್ಮನಃ-ಬುದ್ಧಿಯುಳ್ಳವನಾದ, ತಸ್ಯ-ಆ ರಾವಣನಿಗೆ, ಮಯಾ-ನನ್ನಿಂದ, ಹಿತಂ-ರಾವಣನಿಗೆ ಕ್ಷೇಮಕರವಾದಮಾತು, ಉಕ್ತಂ-ಹೇಳಲ್ಪಟ್ಟಿತು, ||೪|| ರಾಮಾಯ-ರಾಮಚಂದ್ರನಿಗೆ, ವೈದೇಹೀಂ-ವಿದೇಹರಾಜನ ಮಗಳಾದ, ಸೀತಾಂ-ಸೀತೆಯನ್ನು, ಪ್ರೇಷಯ-ಕಳುಹಿಸು, ಇತಿ-ಹೀಗೆಂಬದಾಗಿ, ಪುನಃ ಪುನಃ-ಭಾರಿಭಾರಿಗೂ, ಉಕ್ತೋಪಿ-ಹೇಳಲ್ಪಟ್ಟವನಾದಾಗ್ಯೂ, ಏಷಃ-ಈ ರಾವಣನು, ಕಾಲಪಾಶವಶಂಗತಃ,- ಕಾಲ-ಯಮನ, ಪಾಶ-ಪಾಶದ, ವಶಂ-ಸ್ವಾಧೀನ ವನ್ನು, ಗತಃ-ಹೊಂದಿದವನಾಗಿ, ನಶೃಣೋತಿ-ನಾನುಹೇಳಿದ ಕ್ಷೇಮಕರವಾದಮಾತನ್ನು, ಕೇಳುವವನಾಗಲಿಲ್ಲ, ||೫|| ರಾಕ್ಷಸಾಧಮಃ-ರಾಕ್ಷಸ-ರಕ್ಕಸರೊಳಗೆ, ಅಧಮಃ-ನೀಚನಾದ ರಾವಣನು, ಖಡ್ಗಂ-ಕತ್ತಿಯನ್ನು, ಆದಾಯ-ತೆಗದುಕೊಂಡು, ಮಾಂ-ನನ್ನನ್ನು, ಹಂತುಂ-ಕೊಲ್ಲುವದಕ್ಕೆ, ಪ್ರಾದ್ರವತ್-ಮೇಲೆಬಿದ್ದುಬಂದನು, ತತಃ-ಆ ಬಳಿಕ, ಅಚಿರೇಣ-ಜಾಗ್ರತೆಯಾಗಿ, ಚತುರ್ಭಿಃ-ನಾಲ್ಕು, ಸಚಿವೈಃ-ಮಂತ್ರಿಗಳಿಂದ, ಸಹಿತಃ-ಕೂಡಿದವನಾಗಿ, ಭಯಾತ್-ಅಂಜಿಕೆಯಿಂದ, ಮುಮುಕ್ಷುಃ-ಮೋಕ್ಷಾಪೇಕ್ಷೆಯುಳ್ಳ, (ನಾನು) ಭವಮೋಕ್ಷಾಯ,-ಭವ-ಸಂಸೃತಿಯಿಂದ, ಮೋಕ್ಷಾಯ-ವಿಮುಕ್ತಿಗೋಸ್ಕರವಾಗಿ, ತ್ವಾಮೇವ-ನಿನ್ನನ್ನೇ, ಶರಣಂ-ರಕ್ಷಕನನ್ನಾಗಿ, ಗತಃ-ಹೊಂದಿದವನಾದೆನು,ವಿಭೀಷಣವಚಃ,-ವಿಭೀಷಣ-ವಿಭೀಷಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಸುಗ್ರೀವಃ-ಸುಗ್ರೀವನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು,||೭|| ರಾಮ-ರಾಮಚಂದ್ರನೇ, ಮಾಯಾವೀ-ಮಾಯಾಕಾರನಾದ, ರಾಕ್ಷಸಾಧಮಃ,-ರಾಕ್ಷಸ-ರಾಕ್ಷಸರೊಳಗೆ, ಅಧಮಃ-ನೀಚನಾದ ಈ ವಿಭೀಷಣನು, ತೇ-ನಿನ್ನ, ವಿಶ್ವಾಸಾರ್ಹಃ-ವಿಶ್ವಾಸ-ಪ್ರೀತಿಗೆ,ಅರ್ಹಃ-ತಕ್ಕವನು, ನ-ಅಲ್ಲ,||ವಿಶೇಷೇಣ-ವಿಶೇಷವಾಗಿ, ಸೀತಾಹರ್ತುಃ,-ಸೀತಾ-ಸೀತೆಯನ್ನು, ಹರ್ತುಃ-ಕದ್ದವನಾದ, ರಾವಣಸ್ಯ-ರಾವಣನಿಗೆ, ಅನುಜಃ-ತಮ್ಮನಾದ, ಬಲೀ-ಬಲವಂತನಾದ, (ಈ ವಿಭೀಷಣನು.) ... ... ||೮||

ಟೀ|| ಸಾಯುಧೈಃ-ಆಯುಧ ಧಾರಿಗಳಾದ, ಮಂತ್ರಿಭಿಃ-ಮಂತ್ರಿಗಳಿಂದ, ವಿವರೇ-ಯುದ್ಧವಿಲ್ಲದೇ, ಉದಾಸೀನವಾಗಿ ಸುಮ್ಮನಿರತಕ್ಕ ಸಂಧಿಯಲ್ಲಿ, ಅಸ್ಮಾನ್-ನ

ಮಬುಧ್ಯಾ ಕಿಂನಿಶ್ಚಿತಂವದ ॥ ಶೃತ್ವಾ ಸುಗ್ರೀವವಚನಂರಾಮಸ್ಸಸ್ಮಿತಮಬ್ರವೀತ್ ॥೧೦॥ ಯದಿಭ್ಪಾ ವಿಕಪಿಶ್ರೇಷ್ಠ ಲೋಕಾ ತ್ಸರ್ವಾನ್ಸಹೇಶ್ವರಾನ್ ॥ ನಿಮಿಷಾರ್ಧೇನಸಂಹನ್ಯಾಂ ಸೃಜಾಮಿನಿಮಿಷಾರ್ಧತಃ ॥೧೧॥ ಅತೋಮಯಾಭಯಂದತ್ತಂ ಶೀಘ್ರಮಾನಯರಾಕ್ಷಸಂ ॥೧೨॥ ಸಕೃದೇವಪ್ರಪನ್ನಾಯ ತವಾಸ್ಮೀತಿಚಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ॥೧೩॥ರಾಮಸ್ಯವಚನಂಶೃತ್ವಾ ಸುಗ್ರೀವೋಹೃಷ್ಟಮಾನಸಃ। ವಿಭೀಷಣಮಥಾನಾಯ್ಯ ದರ್ಶಯಾಮಾಸರಾಘವಂ॥೧೪॥ವಿಭೀಷಣಸ್ತುಸಾಷ್ಟಾಂಗಂಪ್ರಣಿಪತ್ಯರಘೂತ್ತಮಂ। ಹರ್ಷಗದ್ಗದಯಾವಾಚಾಭಕ್ತ್ಯಾಚಪರಯಾನ್ವಿತಃ॥೧೫॥

ಮ್ಮಗಳನ್ನು, ಹನಿಷ್ಯತಿ-ಕೊಲ್ಲುತ್ತಾನೇ, ದೇವ-ಸ್ವಾಮಿಯೇ, ತತ್-ಆ ಕಾರಣದಿಂದ, ಅಯಂ-ಈ ವಿಭೀಷಣನು, ವಾನರ್ಯೈಃ-ಕಪಿಗಳಿಂದ, ಹನ್ಯತಾಂ-ಕೊಲ್ಲಲ್ಪಡಲೀ, ಆಜ್ಞಾಪಯ-ಅಪ್ಪಣೆಕೊಡು, ॥೯॥ ರಾಮ-ರಾಮಚಂದ್ರನೇ, ಮಮ-ನನಗೆ, ಏವಂ - ಈ ಪ್ರಕಾರವಾಗಿ, ಭಾತಿ-ತೋರುತ್ತಲಿದೆ, ತೇ-ನಿನ್ನ, ಬುಧ್ಯಾ- ಬುದ್ಧಿಯಿಂದ, ನಿಶ್ಚಿತಂ-ನಿಶ್ಚಯಿಸಲ್ಪಟ್ಟದ್ದು, ಕಿಂ-ಏನು, ವದ-ಹೇಳು, ಸುಗ್ರೀವವಚನಂ-ಸುಗ್ರೀವ - ಸುಗ್ರೀವನ, ವಚನಂ-ಮಾತನ್ನು, ಶೃತ್ವಾ-ಕೇಳಿ, ರಾಮಃ-ರಾಮಚಂದ್ರನು, ಸಸ್ಮಿತಂ-ಮುಗುಳುನಗೆಯಿಂದ ಕೂಡಿರುವಂತೆ, ಅಬ್ರವೀತ್-ಹೇಳಿದನು ॥೧೦॥ ಕಪಿಶ್ರೇಷ್ಠ-ಕಪಿ-ಕಪಿಗಳೊಳಗೆ, ಶ್ರೇಷ್ಠ-ಉತ್ತಮನಾದ, ಸುಗ್ರೀವನೆ, ಇಚ್ಛಾಮಿಯದಿ-ಎಣಿಸಿದ್ದೇಆದರೇ, ಸಹೇಶ್ವರಾನ್-ಇಂದ್ರಾದಿಗಳಿಂದ ಕೂಡಿರುವ, ಸರ್ವಾನ್-ಎಲ್ಲಾ, ಲೋಕಾನ್-ಲೋಕಗಳನ್ನು, ನಿಮಿಷಾರ್ಧೇನ-ಅರ್ಧನಿಮಿಷದಲ್ಲಿ, ಸಂಹನ್ಯಾಂ-ಕೊಲ್ಲುವವನಾಗುತ್ತೇನೆ, ನಿಮಿಷಾರ್ಧತಃ-ಅತಿನಿಮಿಷದಲ್ಲಿಯೇ, ಸೃಜಾಮಿ-ಉಂಟುಮಾಡುತ್ತೇನೆ ॥೧೧॥ ಅತಃ-ಆದ್ದರಿಂದ, ಮಯಾ-ನನ್ನಿಂದ, ಅಭಯಂ - ಅಂಜಬ್ಯಾಡವೆಂಬದಾಗಿ ಅಭಯವು, ದತ್ತಂ-ಕೊಡಲ್ಪಟ್ಟಿತು, ರಾಕ್ಷಸಂ-ರಾಕ್ಷಸನಾದ ವಿಭೀಷಣನನ್ನು, ಶೀಘ್ರಂ-ಬೇಗನೆ, ಆನಯ-ಕರಿಸು ॥೧೨॥ ಸಕೃತ್ - ಒಂದುಸಲವಾಗಲೀ, ತವಅಸ್ಮಿ-ನಿನ್ನ ಸೇವಕನು ನಾನು, ಇತಿಚ-ಹೀಗೆಂದು, ಪ್ರಪನ್ನಾಯ-ಅಂಗೀಕರಿಸಿದವನಾದ, ಅಭಯಂ-ಅಭಯವನ್ನು, ಯಾಚತೇ-ಬೇಡುತ್ತಿರುವವನಾದ, ಸರ್ವಭೂತೇಭ್ಯಃ-ಸರ್ವ-ಸಮಸ್ತವಾದ, ಭೂತೇಭ್ಯಃ-ಪ್ರಾಣಿಗಳಿಗಿಂತ, ನಿಕೃಷ್ಟಾಯ-ಅಧಮನಾದವನಿಗೂ, ಅಭಯಂ-ಅಭಯವನ್ನು, ದದಾಮಿ-ಕೊಡುತ್ತೇನೆ, ಏತತ್-ಇದು, ಮಮ-ನನಗೆ, ವ್ರತಂ-ತಪ್ಪ ಕೂಡದಾದನಿಯಮ ವಾಗಿರುತ್ತೇ, ॥ (ಅಥವಾ-ಯಾಚತೇ-ಬೇಡುವಮನುಷ್ಯನಿಗೂ ಹೀಗೆಂಬೇಡುವ) ಸರ್ವಭೂತೇಭ್ಯಃ-ಪಶು ಪಕ್ಷಿ ಮೃಗಾದಿ ಪ್ರಾಣಿಗಳಿಗೂ, ಅಭಯಂ-ಅಭಯವನ್ನು, ದದಾಮಿ-ಕೊಡುತ್ತೇನೆ, ॥೧೩॥ ರಾಮಸ್ಯ-ರಾಮಚಂದ್ರನ, ವಚನಂ-ಮಾತನ್ನು, ಶೃತ್ವಾ-ಕೇಳಿ, ಸುಗ್ರೀವಃ-ಸುಗ್ರೀವನು, ಹೃಷ್ಟಮಾನಸಃ-ಹೃಷ್ಟ-ಸಂತುಷ್ಟವಾದ, ಮಾನಸಃ-ಮನಸ್ಸುಳ್ಳವನಾಗಿ, ಅಥ-ರಾಮಚಂದ್ರನಿಂದ ಅಭಯಪ್ರದಾನವಾದಬಳಿಕ, ವಿಭೀಷಣಂ-ವಿಭೀಷಣನನ್ನು, ಆನಾಯ್ಯ-ಕರಿಸಿ, ರಾಘವಂ-ರಾಮಚಂದ್ರನನ್ನು ಕುರಿತು, ದರ್ಶಯಾಮಾಸ-ತೋರಿಸಿದನು ॥೧೪॥ವಿಭೀಷಣಸ್ತು-ವಿಭೀಷಣನೂ, ರಘೂತ್ತಮಂ-ರಾಮಚಂ

ರಾಮಂಸ್ಮ್ಯಾಮಂವಿಶಾಲಾಕ್ಷಂಪ್ರಸನ್ನಮುಖಪಂಕಜಂ । ಧನುರ್ಬಾಣಧರಂಶಾಂತಂಲಕ್ಷ್ಮಣೇನಸಮನ್ವಿತಂ॥೧೬॥ಕೃತಾಂಜಲಿ
ಪುಟೋಭೂತ್ವಾಸ್ತೋತುಂಸಮುಪಚಕ್ರಮೆ ॥೧೭॥ ವಿಭೀಷಣಉವಾಚ ॥೧೮॥ ನಮಸ್ತೆರಾಮರಾಜೇಂದ್ರನಮಸ್ಸೀತಾ
ಮನೋರಮ । ನಮಸ್ತೆಚಂಡಕೋದಂಡನಮಸ್ತೆಭಕ್ತವತ್ಸಲ॥೧೯॥ನಮೋನಂತಾಯಶಾಂತಾಯರಾಮಾಯಾಮಿತತೇಜಸೆ।
ಸುಗ್ರೀವಮಿತ್ರಾಯಚತೆರಘೂಣಾಂಪತಯೆನಮಃ॥೨೦॥ ಜಗದುತ್ಪತ್ತಿನಾಶಾನಾಂಕಾರಣಾಯಮಹಾತ್ಮನೆ॥ತ್ರೈಲೋಕ್ಯ
ಗುರುವೆನಾದಿಗೃಹಸ್ಥಾಯನಮೋನಮಃ ॥೨೧॥ ತ್ವಮಾದಿರ್ಜಗತಾಂರಾಮತ್ವಮೆವಸ್ಥಿತಿಕಾರಣಂ । ತ್ವಮಂತೆನಿಧನಂ

ದ್ರನನ್ನು ಕುರಿತು, ಸಾಷ್ಟಾಂಗಂ-ಸಾಷ್ಟಾಂಗವಾಗಿ, ಪ್ರಣಿಪತ್ಯ-ವಂದಿಸಿ, ಪರಯಾ-ಶ್ರೇಷ್ಠವಾದ, ಭಕ್ತ್ಯಾ-ಭಕ್ತಿಯಿಂದ, ಅನ್ವಿತಃ-ಕೂಡಿದವನಾಗಿ, ಹರ್ಷಗದ್ಗದಯಾ-ಸಂತೋಷಪಡಿದ ಗದ್ಗದ ಧ್ವನಿಯಾಗಿರುವ, ವಾಚಾ-ವಾಕ್ಕಿನಿಂದ ॥೧೫॥ ಶ್ಯಾಮಂ-ಶ್ಯಾಮಲಬಣ್ಣವುಳ್ಳವನಾದ, ವಿಶಾಲಾಕ್ಷಂ-ವಿಶಾಲ-ವಿಸ್ತಾರವಾದ, ಅಕ್ಷಂ-ಕಣ್ಣುಗಳುಳ್ಳವನಾದ, ಪ್ರಸನ್ನ ಮುಖಪಂಕಜಂ-ಪ್ರಸನ್ನ-ಭಕ್ತರಲ್ಲಿಅನುಗ್ರಹಯುಕ್ತವಾದ, ಮುಖಪಂಕಜಂ-ಕಮಲಕ್ಕೆ ಸಮಾನವಾದ ಮುಖವುಳ್ಳವನಾದ,ಧನುರ್ಬಾಣಧರಂ-ಧನು-ಬಿಲ್ಲನ್ನು, ಬಾಣ-ಬಾಣಗಳನ್ನು, ಧರಂ-ವಹಿಸಿರುವ, ಶಾಂತಂ-ಸಮಾಧಾನವುಳ್ಳವನಾದ, ಲಕ್ಷ್ಮಣೇನ-ಲಕ್ಷ್ಮಣನಿಂದ, ಸಮನ್ವಿತಂ-ಕೂಡಿರುವವನಾದ, ರಾಮಂ- ರಾಮಚಂದ್ರನನ್ನು, ॥೧೬॥ಸ್ತೋತುಂ-ಸ್ತೋತ್ರಮಾಡುವದಕ್ಕೆ, ಕೃತಾಂಜಲಿಪುಟಃ-ಕೃತ-ಮಾಡಲ್ಪಟ್ಟ, ಅಂಜಲಿಪುಟಃ-ಅಂಜಲಿಪುಟವುಳ್ಳವನಾಗಿ,ಸಮುಪಚಕ್ರಮೆ-ಉಪಕ್ರಮಿಸಿದನು ॥೧೭॥ ವಿಭೀಷಣ ಉವಾಚ—ವಿಭೀಷಣನು ಹೇಳುತ್ತಲಿಧಾನೆ ॥೧೮॥ ರಾಜೇಂದ್ರ-ರಾಜಶ್ರೇಷ್ಠನಾದ, ರಾಮ-ರಾಮಚಂದ್ರನೇ, ತೆ-ನಿನಗೆ, ನಮಃ-ನಮಸ್ಕಾರವು, ಸೀತಾಮನೋಹರ-ಸೀತಾ-ಸೀತಾದೇವಿಯ, ಮನಃ-ಚಿತ್ತವನ್ನು, ಹರ-ಅಪಹರಿಸುವವನೇ, ನಮಃ-ನಮಸ್ಕಾರವು, ಚಂಡಕೋದಂಡ-ಚಂಡ-ಕ್ರೂರವಾದ, ಕೋದಂಡ- ಬಿಲ್ಲುವುಳ್ಳವನೇ, ನಮಃ-ನಮಸ್ಕಾರವು, ಭಕ್ತವತ್ಸಲ-ಭಕ್ತ-ಸೇವಕರಲ್ಲಿ, ವತ್ಸಲ-ಪ್ರೇಮವುಳ್ಳವನೇ, ನಮಃ-ನಮಸ್ಕಾರವು ॥೧೯॥ ಅನಂತಾಯ-ನಾಶವಿಲ್ಲದವನಾದ (ಅಥವಾ-ಭೂಮಿಯನ್ನು ಹೊರುತ್ತಿರುವ ಮಹಾಶೇಷರೂಪನಾದ, (ಅನೇಕರೂಪನಾದ,) ಶಾಂತಾಯ-ಶಾಂತನಾದ, ಅಮಿತ-ಮಿತಿಯಿಲ್ಲದ, ತೇಜಸೆ-ಕಾಂತಿಯುಳ್ಳವನಾದ, ರಾಮಾಯ-ರಾಮಚಂದ್ರನಿಗೆ, ನಮಃ-ನಮಸ್ಕಾರವು, ಸುಗ್ರೀವಮಿತ್ರಾಯ-ಸುಗ್ರೀವ-ಸುಗ್ರೀವನಿಗೆ, ಮಿತ್ರಾಯ-ಸ್ನೇಹಿತನಾದ, ರಘೂಣಾಂ-ರಘುವಂಶದವರಿಗೆ, ಪತಯೆ-ಅಧಿಪತಿಯಾದ, ತೆ-ನಿನಗೆ, ನಮಃ-ನಮಸ್ಕಾರವು ॥೨೦॥ ಜಗದುತ್ಪತ್ತಿನಾಶಾನಾಂ-ಜಗತ್-ಪ್ರಪಂಚದ, ಉತ್ಪತ್ತಿನಾಶಾನಾಂ-ಸೃಷ್ಟಿಸ್ಥಿತಿಲಯಗಳಿಗೆ, ಕಾರಣಾಯ-ಹೇತುವಾಗಿರುವನಾದ, ಮಹಾತ್ಮನೆ-ಮಹನೀಯ್ಯನಾದ, ತ್ರೈಲೋಕ್ಯಗುರವೆ-ತ್ರೈಲೋಕ್ಯ-ಮೂರುಲೋಕಗಳಲ್ಲಿರುವವರಿಗೆ, ಗುರವೆ-ಅಂತರ್ಯಾಮಿಯಾದ್ದರಿಂದ, ಅಜ್ಞಾನ-ನಿವರ್ತಕನಾದ, ಅನಾದಿಗೃಹಸ್ಥಾಯ-ಸದಾಮಾಯೆಯೆಂಬ ಗೃಹಿಣಿಯೊಡನಿರುವ ಸ್ವಶಕ್ತಿಯಿಂದಯುತನಾದಕಾರಣ, ಆದಿಯಿಲ್ಲದೆ ಗೃಹಸ್ಥ

ಸ್ಥಾನಂಸ್ವೇಚ್ಛಾಚಾರಸ್ತ್ವಮೇವಹಿ ॥೨೧॥ ಚರಾಚರಾಣಾಂಭೂತಾನಾಂಬಹಿರಂತಶ್ಚ ರಾಘವ। ವ್ಯಾಪ್ಯವ್ಯಾಪಕರೂಪೇಣ ಭವಾನ್ಭಾತಿಜಗನ್ಮಯಃ ॥೨೨॥ ತ್ವನ್ಮಾಯಯಾಹೃತಾಜ್ಞಾನಾನ್ನಷ್ಟಾತ್ಮಾನೋವಿಚೇತಸಃ । ಗತಾಗತಂಪ್ರಪದ್ಯಂತೇ ಪಾಪಪುಣ್ಯವಶಾತ್ಸದಾ॥೨೩॥ತಾವತ್ಸತ್ಯಂಜಗದ್ಭಾತಿಶುಕ್ತಿಕಾರಜತಂಯಥಾ। ಯಾವನ್ನಜ್ಞಾಯತೇಜ್ಞಾನಚೇತಸಾನನ್ಯಗಾ ಮಿನಾ ॥೨೪॥ ತ್ವದಜ್ಞಾನಾತ್ಸದಾಯುಕ್ತಾಃಪುತ್ರದಾರಗೃಹಾದಿಷು । ರಮಂತೇವಿಷಯಾನ್ಸರ್ವಾನಂತೇದುಃಖಪ್ರ

ಸೆನಿಸಿಕೊಳ್ಳುವವನಾದ, (ನಿನಗೆ) ನಮೋನಮಃ-ನಮಸ್ಕಾರವು ನಮಸ್ಕಾರವು ॥೨೧॥ ಜಗತಾಂ-ಜಗತ್ತುಗಳಿಗೆ, ತ್ವಂ-ನೀನು, ಆದಿಃ-ಉತ್ಪತ್ತಿಕಾರಣನು, ರಾಮ-ರಾಮಚಂದ್ರನೇ, ತ್ವಮೇವ-ನೀನೇ, ಸ್ಥಿತಿಕಾರಣಂ,-ಸ್ಥಿತಿ-ಪಾಲನೆಗೆ, ಕಾರಣಂ-ಹೇತುವಾದವನು, ತ್ವಂ-ನೀನು, ಅಂತೇ-ಕೊನೆಯಲ್ಲಿ, ನಿಧನಂ-ಲಯಕರನಾದ, ಸ್ಥಾನಂ-ಸ್ಥಾನವು, ತ್ವಮೇವ-ನೀನೇ, ಸ್ವೇಚ್ಛಾಚಾರಃ-ಪರಾಧೀನನಲ್ಲದವನು, ಆಗಿದ್ದೀ ॥೨೨॥ ರಾಘವ-ರಾಮಚಂದ್ರನೇ, ಚರಾಚರಾಣಾಂ-ಚೈತನ್ಯವುಳ್ಳ, ಚೈತನ್ಯವಿಲ್ಲದೇ ಇರುವವುಗಳಾದ, ಭೂತಾನಾಂ-ಜಡಾಜಡವಸ್ತುಗಳ, ಬಹಿಃ-ಹೊರಗೆ, ಅಂತಶ್ಚ-ಒಳಗೆ, ವ್ಯಾಪ್ಯವ್ಯಾಪಕರೂಪೇಣ-ಮತ್ಸ್ಯ-ಮಹಾಮತ್ಸ್ಯಗಳಂತೆ, ವ್ಯಾಪ್ಯ-ವ್ಯಾಪಕರೂದಿಂದ, ಜಗನ್ಮಯಃ-ಜಗದಂತರ್ಯಾಮಿಯಾದ, ಭವಾನ್-ನೀನು, ಭಾತಿ-ತೋರುವವನಾಗುತ್ತಿ ॥೨೩॥ ತ್ವನ್ಮಾಯಯಾ-ನಿನ್ನ ಮಾಯೆಯಿಂದ, ಹೃತಜ್ಞಾನಾಃ-ನಿನ್ನರೂಪವೆಜಗತ್ತೆಂಬ ಜ್ಞಾನಹೀನರಾಗಿ,ನಷ್ಟಾತ್ಮಾನಃ-ನಾಶವಾದ ಕೊರಳಸಲ್ಲಿದ್ದ ಭಂಗಾರದ ಪೋಡಿಪಯಂತೆ, ನಷ್ಟ-ಅಜ್ಞಾತವಾದ, ಆತ್ಮಾನಃ-ಸ್ವಸ್ವರೂಪವುಳ್ಳವರಾಗಿ, ವಿಚೇತಸಃ-ವಿರುದ್ಧವಾದ ಪ್ರವೃತ್ತಿಮಾರ್ಗದಲ್ಲಿ ಚಿತ್ತವುಳ್ಳವರಾಗಿ, ಗತಾಗತಂ-ಜನನ ಮರಣ ರೂಪವಾದ ಸಂಸಾರವನ್ನು, ಪಾಪಪುಣ್ಯವಶಾತ್-ಪಾಪ-ದುಷ್ಕರ್ಮ, ಪುಣ್ಯ-ಸುಕರ್ಮ, ಇವುಗಳಿಗೆ, ವಶಾತ್-ಅಧೀನರಾಗುವದರದೆಸೆಯಿಂದ, ಸದಾ-ಯಾವಾಗಲೂ, ಪ್ರಪದ್ಯಂತೇ-ಹೊಂದುತ್ತಿದ್ದಾರೆ, ॥೨೪॥ ನಾನ್ಯಗಾಮಿನಾ-ಅನ್ಯವಿಷಯಗಳಿಂದ ರಹಿತವಾದ, ಜ್ಞಾನಚೇತಸಾ-ಜ್ಞಾನಸ್ವರೂಪ ನಿನ್ನ ವಿಷಯವಾದ ಮನಸ್ಸಿನಿಂದ, (ಭವಾನ್-ನೀನು) ಯಾವತ್-ಯಾವರಿಗೆ, ನಜ್ಞಾಯತೇ-ತಿಳಿಯಲ್ಪಡುವದಿಲ್ಲವೋ, ತಾವತ್-ಅದುವರಿಗೆ, ಯಥಾ-ಹ್ಯಾಗೆ, ಶುಕ್ತಿಕಾರಜತಂ-ಕಪ್ಪೆಚಿಪ್ಪಿನಲ್ಲಿ, ರಜತಭ್ರಾಂತಿಯು, (ತೋರುತ್ತೋ, ಹಾಗೆ) ಜಗತ್-ಜಗತ್ತು, ಸತ್ಯಂ-ಸತ್ಯವೆಂಬದಾಗಿ, ಭಾತಿ-ತೋರುತ್ತೆ ॥ ನೀನೆ ಸರ್ವರೂಪದಿಂದ ಭಾಸಮಾನನಾಗಿದ್ದೀ ಯೆಂಬದಾಗಿ ಜ್ಞಾನವುಂಟಾದರೆ, ಭಾಸಮಾನವಾದ ಜಗತ್ತು ಮಿಥ್ಯೆಯೆಂಬದಾಗಿ ತೋರುತ್ತೆ ॥೨೫॥ ತ್ವದಜ್ಞಾನಾತ್-ನಿನ್ನ ಸ್ವರೂಪಜ್ಞಾನವಿಲ್ಲದ್ದರಿಂದ, ಸದಾ-ಯಾವಾಗಲೂ, ಪುತ್ರದಾರಗೃಹಾದಿಷು, ಪುತ್ರ-ಮಕ್ಕಳು, ದಾರ-ಹೆಂಡರು, ಗೃಹ-ಮನೆಯೇ, ಆದಿಷು-ಮೊದಲಾದವಸ್ತುಗಳಲ್ಲಿ, ಯುಕ್ತಾಃ-ಅಭಿರುಚಿಯುಳ್ಳವರಾಗಿ, ವಿಭೋ-ಸ್ವಾಮಿಯೇ, ಅಂತೇ-ತುದಿಯಲ್ಲಿ, ದುಃಖಪ್ರದಾನ್-ದುಃಖವನ್ನು ಕೊಡುತ್ತಿರುವವುಗಳಾದ, ಸರ್ವಾನ್-ಎಲ್ಲಾ, ವಿಷಯಾನ್-ವಿಷಯಗಳನ್ನು, ರಮಂತೇ-ಅನುಭವಿಸುತ್ತಿರುವವರಾಗಿ, (ಸಂಸಾರದಲ್ಲಿಯೇ ಲೀನವಾದ ಚಿತ್ತವುಳ್ಳವರಾಗುತ್ತಾರೆ)॥೨೬॥

ದಾಸ್ವಿಭೊ ||೧೬|| ತ್ವಮಿಂದ್ರೋಗ್ನಿರ್ಯಮೋರಕ್ಷೋವರುಣಶ್ಚ ತಥಾನಿಲಃ । ಕುಬೇರಶ್ಚ ತಥಾರುದ್ರಸ್ತ್ವಮೇವಪು ರುಷೋತ್ತಮ ||೧೭|| ತ್ವಮಣೋರಪ್ಯಣೀಯಾಂಶ್ಚ ಸ್ಥೂಲಾತ್ಸ್ಥೂಲತರಃಪ್ರಭೋ। ತ್ವಂಪಿತಾಸರ್ವಲೋಕಾನಾಂಮಾ ತಾಧಾತಾತ್ವಮೇವಹಿ ||೧೮|| ಆದಿಮಧ್ಯಾಂತರಹಿತಃಪರಿಪೂರ್ಣೋಚ್ಯುತೋವ್ಯಯಃ । ತ್ವಂಪಾಣಿಪಾದರಹಿತಶ್ಚಕ್ಷು ಶ್ರೋತ್ರವಿವರ್ಜಿತಃ ||೧೯|| ಶ್ರೋತಾದ್ರಷ್ಟಾಗ್ರಹೀತಾಚಜವನಸ್ತ್ವಂಖರಾಂತಕಃ । ಕೋಶೇಭ್ಯೋವ್ಯತಿರಿಕ್ತಸ್ತ್ವಂನಿ ರ್ಗುಣೋನಿರುಪಾಶ್ರಯಃ ||೨೦|| ನಿರ್ವಿಕಲ್ಪೋನಿರ್ವಿಕಾರೋನಿರಾಕಾರೋನಿರೀಶ್ವರಃ । ಷಡ್ಭಾವರಹಿತೋನಾದಿಃಪುರುಷಃ

ಪುರುಷೋತ್ತಮ-ಪುರುಷಶ್ರೇಷ್ಠನಾದ, ರಾಮಚಂದ್ರನೇ, ತ್ವಂ-ನೀನು, ಇಂದ್ರಃ-ಇಂದ್ರನು, ಅಗ್ನಿಃ-ಯಜ್ಞೇಶ್ವರನು, ಯಮಃ-ಕಾಲನು, ರಕ್ಷಃ-ನೈರುತನು, ವರುಣಃ ಪ್ರಚೇತಸ್ಸು, ಅನಿಲಃ-ವಾಯುವು, ಕುಬೇರಃ-ಧನದನು, ತಥಾ-ಹಾಗೆ, ತ್ವಂ-ನೀನು, ರುದ್ರಃ-ಈಶಾನನು, (ಆಗಿದ್ದೀ) ||೧೭|| ತ್ವಂ-ನೀನು- ಅಣೋರಪಿ-ಸೂಕ್ಷ್ಮವಾದ ವುಗಳೊಳಗೆ, ಅಣೀಯಾನ್-ಅತ್ಯಂತಸೂಕ್ಷ್ಮನು, ಪ್ರಭೋ-ಸ್ವಾಮಿಯಾದ ರಾಮಚಂದ್ರನೆ, ಸ್ಥೂಲಾತ್-ಬೃಹದ್ವಸ್ತುವಿಗಿಂತ, ಸ್ಥೂಲತರಃ- ಅತ್ಯಂತಬೃಹತ್ತಾದವನು, ತ್ವಂ-ನೀನು, ಸರ್ವಲೋಕಾನಾಂ-ಸಮಸ್ತಪ್ರಾಣಿಗಳಿಗೆ, ಪಿತಾ-ತಂದೆಯು, ತ್ವಮೇವ-ನೀನೇ, ಮಾತಾ-ತಾಯಿಯು, ಧಾತಾ-ಬ್ರಹ್ಮನು, (ಆಗಿದ್ದೀ) ||೧೮|| ತ್ವಂ-ನೀನು, ಆದಿಮಧ್ಯಾಂತರಹಿತಃ,-ಆದಿ-ಮೊದಲು, ಮಧ್ಯ-ಮಧ್ಯವು, ಅಂತ-ಕೊನೆಯು ಇವುಗಳಿಂದ,ರಹಿತಃ-ಕೂಡದೇಇರುವವನು, ಪರಿಪೂರ್ಣಃ-ವ್ಯಾಪ್ತನಾದವನು, ಅಚ್ಯುತಃ- ಸರ್ವಶಕ್ತಿಯುಳ್ಳವನು, ಅವ್ಯಯಃ- ನಾಶರಹಿತನು, ಪಾಣಿಪಾದರಹಿತಃ-ಕೈಕಾಲುಗಳಿಲ್ಲದವನು, ಚಕ್ಷುಃಶ್ರೋತ್ರವಿವರ್ಜಿತಃ-ಕಣ್ಣುಕಿವಿಗಳಿಲ್ಲದವನು ||೧೯|| (ಆದಾಗ್ಯೂ) ಶ್ರೋತಾ-ಕೇಳುವವನಾಗಿಯೂ, ದ್ರಷ್ಟಾ-ನೋಡುವವನಾಗಿಯೂ, ಗ್ರಹೀತಾ-ಗ್ರಹಿಸುವವನಾಗಿಯೂ, ಜವನಃ-ಗಮನಶಕ್ತಿಯುಳ್ಳವನಾಗಿಯೂ, ಖರಾಂತಕಃ-ಖರನೆಂಬರಾ ಕ್ಷಸನನ್ನು ಕೊಂದವನಾಗಿಯೂಇದ್ದೀ|| ಕೋಶೇಭ್ಯಃ-ಅನ್ನಮಯಾದಿಕೋಶಗಳಿಗಿಂತ, ವ್ಯತಿರಿಕ್ತಃ-ಬೇರೆಯಾಗಿದ್ದೀ || ತ್ವಂ-ನೀನು, ನಿರ್ಗುಣಃ-ಸ್ವತಃ-ನಿರ್ಗುಣನು, ನಿ ರುಪಾಶ್ರಯಃ-ಆಧಾರಾಂತರವಿಲ್ಲದವನು ಆಗಿದ್ದೀ ||೨೦|| ನಿರ್ವಿಕಲ್ಪಃ-ವಸ್ತುತಃ ನಿರ್ಧರ್ಮಿಕನಾದ್ದರಿಂದ ನಿರ್ವಿಕಲ್ಪಕಜ್ಞಾನವುಳ್ಳವನಿಗೆ ವಿಷಯನಾಗುವನೇ ಹೊರ್‍ತು, ಸವಿಕಲ್ಪಕಜ್ಞಾನವುಳ್ಳವನಿಗೆ ಅವಿಷಯನಾದವನು, ನಿರ್ವಿಕಾರಃ-ಜಾಯತೆ, ಅಸ್ತಿ, ವಿಪರಿಣಮತೆ, ವರ್ಧತೆ, ಅಪಕ್ಷೀಯತೆ, ನಶ್ಯತೀತಿ, ಎಂಬುವ ಷಡ್ಭಾವ ವಿಕಾ ರವಿಲ್ಲದವನು, ನಿರಾಕಾರಃ-ಆಕೃತಿರಹಿತನಾದವನು, ನಿರೀಶ್ವರಃ-ನಿನ್ನಿಂದ ಪೂಜಿಸಲ್ಪಡುವ ಈಶ್ವರಾಂತರವಿಲ್ಲದವನು, ಷಡ್ಭಾವರಹಿತಃ-ಷಟ್-ಆರುಸಂಖ್ಯೆಯಾದ, ಭಾವ- ತಿಳಿಯಲ್ಪಡುತ್ತಯಿದೆ, ಪರಿಣಾಮವನ್ನು ಹೊಂದುತ್ತೆ, ವೃದ್ಧಿಯಾಗುತ್ತೆ, ಕಮ್ಮಿಯಾಗುತ್ತೆ, ನಾಶವಾಗುತ್ತೆ ಎಂಬುವ ಭಾವಗಳಿಂದ, ರಹಿತಃ-ಕೂಡದೇ ಇರುವವನು,

ಪ್ರಕೃತೇಃಪರಃ ||೨೧|| ಮಾಯಯಾಗೃಹ್ಯಮಾಣಸ್ತ್ವಂಮನುಷ್ಯ ಇವಭಾವ್ಯಸೇ । ಜ್ಞಾತ್ವಾತ್ವಾಂನಿರ್ಗುಣಮಜಂವೈಷ್ಣವಾಮೋಕ್ಷಗಾಮಿನಃ ||೨೨|| ಅಹಂತ್ವತ್ಪಾದಸದ್ಭಕ್ತಿನಿಶ್ರೇಣೀಂಪ್ರಾಪ್ಯರಾಘವ । ಇಚ್ಛಾಮಿಜ್ಞಾನಯೋಗಾಖ್ಯಂಸೌಧಮಾರೋಢುಮೀಶ್ವರ ||೨೩|| ನಮಸ್ಸೀತಾಪತೇರಾಮನಮಃಕಾರುಣಿಕೋತ್ತಮ । ರಾವಣಾರೇನಮಸ್ತುಭ್ಯಂತ್ರಾಹಿಮಾಂಭವಸಾಗರಾತ್ ||೨೪|| ತತಃಪ್ರಸನ್ನಃಪ್ರೋವಾಚಶ್ರೀರಾಮೋಭಕ್ತವತ್ಸಲಃ । ವರಂವೃಣೀಷ್ವಭದ್ರಂತೇವಾಂಛಿತಂವರದೋಸ್ಮ್ಯಹಂ ||೨೫|| ವಿಭೀಷಣಉವಾಚ ||೨೬|| ಧನ್ಯೋಸ್ಮಿಕೃತಕೃತ್ಯೋಸ್ಮಿಕೃತಕಾರ್ಯೋಸ್ಮಿರಾಘವ।ತ್ವತ್ಪಾದದರ್ಶನಾದೇವ

ಅನಾದಿಃ-ಆದಿಯಿಲ್ಲದವನು, ಪ್ರಕೃತೇಃಪರಃ-ಪ್ರಕೃತಿದೋಷರೂಪವಾದ ಗುಣಗಳಿಂದ ಅಸಂಸ್ಪೃಷ್ಟನಾದವನು, ಪುರುಷಃ-ಪುರುಷನಾದನು, ||೨೧|| ಮಾಯಯಾ-ಮಾಯೆಯಿಂದ, ಗೃಹ್ಯಮಾಣಃ-ಅನುಸರಿಸಿದಾಗ, ತ್ವಂ-ನೀನು, ಮನುಷ್ಯಇವ-ಮನುಜನಂತೆ, ಭಾವ್ಯಸೇ-ತೋರಲ್ಪಡುತ್ತಿ || ಈ ಕಲ್ಪಿತರೂಪದರ್ಶನ ಮಾತ್ರದಿಂದುಂಟಾದ ಜ್ಞಾನದಿಂದ ಮುಕ್ತಿಯಾಗುವದಿಲ್ಲ, ವೈಷ್ಣವಾಃ-ಸರ್ವವ್ಯಾಪಕನಾದ ನಾರಾಯಣಮೂರ್ತಿಯಾದ ನಿನ್ನ ಭಕ್ತರು, ತ್ವಾಂ-ನಿನ್ನನ್ನು, ನಿರ್ಗುಣಂ-ನಿರ್ಗುಣನೆಂಬದಾಗಿಯೂ, ಅಜಂ-ಉತ್ಪತ್ತಿಯಿಲ್ಲದವನೆಂಬದಾಗಿಯೂ, ಜ್ಞಾತ್ವಾ-ತಿಳಿದು, ಮೋಕ್ಷಗಾಮಿನಃ-ಮುಕ್ತಿಯನ್ನು ಪಡೆಯುವವರಾಗುವರು ||೨೨|| ಈಶ್ವರ-ನಿಯಂತೃವಾದ, ರಾಘವ ರಾಮಚಂದ್ರನೇ, ಅಹಂ-ನಾನು, ತ್ವತ್ಪಾದಸದ್ಭಕ್ತಿನಿಶ್ರೇಣೀಂ-ತ್ವತ್ಪಾದ-ನಿನ್ನ ಚರಣಗಳಲ್ಲಿ, ಸದ್ಭಕ್ತಿ-ಭಕ್ತಿಯೆಂಬ,ನಿಶ್ರೇಣೀಂ-ನಿಚ್ಚಣಿಕೆಯನ್ನು, ಪ್ರಾಪ್ಯ-ಹೊಂದಿ, ಜ್ಞಾನಯೋಗಾಖ್ಯಂ-ಜ್ಞಾನಯೋಗವೆಂಬಹೆಸರುಳ್ಳ, ಸೌಧಂ-ಉಪ್ಪರಿಗೆಯನ್ನು, ಆರೋಢುಂ-ಹತ್ತುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ, ||೨೩|| ಸೀತಾಪತೇ-ಸೀತಾಪತಿಯಾದ, ರಾಮ-ರಾಮಚಂದ್ರನೇ, ನಮಃ-ನಮಸ್ಕಾರವು, ಕಾರುಣಿಕೋತ್ತಮ,- ಕಾರುಣಿಕ-ದಯಾಶಾಲಿಗಳೊಳಗ, ಉತ್ತಮ- ಶ್ರೇಷ್ಠನಾದವನೇ, ನಮಃ-ನಮಸ್ಕಾರವು, ರಾವಣಾರೇ, ರಾವಣ-ರಾವಣನಿಗೆ, ಅರೇ-ಶತ್ರುವಾದವನೇ, ನಮಃ-ನಮಸ್ಕಾರವು,ಭವಸಾಗರಾತ್- ಭವ-ಸಂಸಾರವೆಂಬ, ಸಾಗರಾತ್-ಸಮುದ್ರದದೆಸೆಯಿಂದ,ಮಾಂ-ನನ್ನನ್ನು, ತ್ರಾಹಿ-ಕಾಪಾಡುವವನಾಗು,||೨೪||ತತಃ-ಆ ಬಳಿಕ, ಭಕ್ತವತ್ಸಲಃ-ಭಕ್ತರಮೇಲೆ, ವತ್ಸಲಃ-ವಿಶ್ವಾಸವುಳ್ಳವನಾದ, ಶ್ರೀರಾಮಃ-ರಾಮಚಂದ್ರನು, ಪ್ರಸನ್ನಃ-ವಿಭೀಷಣನಮೇಲೆ ಅನುಗ್ರಹವುಳ್ಳವನಾಗಿ, ಪ್ರೋವಾಚ-ಹೇಳಿದನು, ವಾಂಛಿತಂ-ಬೇಕಾದ, ವರಂ-ವರವನ್ನು, ವೃಣೀಷ್ವ-ಬೇಡುವವನಾಗು, ಅಹಂ-ನಾನು, ವರದಃ-ನಿನಗೆವರವನ್ನುಕೊಡುವವನು, ಅಸ್ಮಿ-ಆಗಿದ್ದೇನೆ, ತೇ-ನಿನಗೆ, ಭದ್ರಂ-ಶುಭವು, (ಆಗಲಿ) ||೨೫|| ವಿಭೀಷಣಉವಾಚ-ವಿಭೀಷಣನು ಹೇಳುತ್ತಾನೆ ||೨೬|| ರಾಘವ-ರಾಮಚಂದ್ರನೇ, ಕೃತಕೃತ್ಯಃ-ಸರ್ವಧರ್ಮಜನಕವಾದ ಕರ್ಮಗಳನ್ನು ಮಾಡಿದವನು, ಅಸ್ಮಿ-ನಾನುಆಗಿದ್ದೇನೆ, ಧನ್ಯಃ-ಭಗವದ್ದರ್ಶನವು ಸರ್ವಧರ್ಮರೂಪವಾದ್ದರಿಂದ, ಸರ್ವಧರ್ಮಗಳನ್ನು ಪಡೆದವನಾಗಿದ್ದೇನೆ, ಕೃತಕಾರ್ಯಃ-ಹೊಂದಬೇಕಾದ ಕೆಲಸವನ್ನು ಹೊಂದಿದವನು, ಅಸ್ಮಿ-ಆಗಿದ್ದೇನೆ, ತ್ವತ್ಪಾದದರ್ಶನಾದೇವ,-ತ್ವತ್ಪಾದ-ನಿನ್ನ ಚರಣಗಳ,ದರ್ಶನಾದೇವ- ನೋಡುವಿಕೆಯಿಂ

ವಿಮುಕ್ತೋಽಸ್ಮಿ ನಸಂಶಯಃ ॥೩೭॥ ನಾಸ್ತಿ ಮತ್ಸದೃಶೋ ಧನ್ಯೋ ನಾಸ್ತಿ ಮತ್ಸದೃಶಃ ಶುಚಿಃ । ನಾಸ್ತಿ ಮತ್ಸದೃಶೋ ಲೋಕೇ ರಾಮ ತ್ವನ್ಮೂರ್ತಿದರ್ಶನಾತ್ ॥೩೮॥ ಕರ್ಮಬಂಧವಿನಾಶಾಯ ತ್ವದ್ಜ್ಞಾನಂ ಭಕ್ತಿಲಕ್ಷಣಂ । ತ್ವದ್ಧ್ಯಾನಂ ಪರಮಾರ್ಥಂ ಚ ದೇಹಿ ಮೇ ರಘುನಂದನ ॥೩೯॥ ನಯಾಚೇ ರಾಮ ರಾಜೇಂದ್ರ ಸುಖಂ ವಿಷಯಸಂಭವಂ । ತ್ವತ್ಪಾದಕಮಲೇ ಸಕ್ತಾ ಭಕ್ತಿರೇವ ಸದಾಸ್ತು ಮೇ ॥೪೦॥ ಓಮಿತ್ಯುಕ್ತ್ವಾ ಪುನಃ ಪ್ರೀತೋ ರಾಮಃ ಪ್ರೋವಾಚ ರಾಕ್ಷಸಂ । ಶೃಣು ವಕ್ಷ್ಯಾಮಿ ತೇ ಭದ್ರ ರಹಸ್ಯಂ ಮಮ ನಿಶ್ಚಿತಂ ॥೪೧॥ ಮದ್ಭಕ್ತಾನಾಂ ಪ್ರಶಾಂತಾನಾಂ ಯೋಗಿನಾಂ ವೀತರಾಗಿಣಾಂ । ಹೃದಯೇ ಸೀತಯಾ ನಿತ್ಯಂ ವಸಾಮ್ಯತ್ರ ನಸಂಶಯಃ ॥೪೨॥ ತಸ್ಮಾತ್ತ್ವಂ

ದಲೇ, ಮುಕ್ತಿಃ-ಸರ್ವಪುಣ್ಯಫಲರೂಪವಾದ ಮೋಕ್ಷವುಳ್ಳವನು, ಅಸ್ಮಿ-ಆಗಿದ್ದೇನೆ, ನಸಂಸಯಃ-ಸಂದೇಹವಿಲ್ಲ, ॥೩೭॥ ಮತ್ಸದೃಶಃ-ನನಗೆಸಮಾನನಾದ, ಧನ್ಯಃ-ಧನು, ನಾಸ್ತಿ-ಇಲ್ಲ, ಮತ್ಸದೃಶಃ-ನನಗೆಸಮಾನನಾದ, ಶುಚಿಃ-ಪರಿಶುದ್ಧನು, ನಾಸ್ತಿ-ಇಲ್ಲ, ರಾಮ-ರಾಮಚಂದ್ರನೆ, ತ್ವನ್ಮೂರ್ತಿದರ್ಶನಾತ್-ತ್ವನ್ಮೂರ್ತಿ-ನಿನ್ನ ಆಕೃತಿಯು, ದರ್ಶನಾತ್-ನೋಡುವಿಕೆಯಿಂದ, ಲೋಕೇ-ಲೋಕದಲ್ಲಿ, ಮತ್ಸದೃಶಃ-ನನಗೆ ಸರಿಯಾದವನು, ನಾಸ್ತಿ-ಇಲ್ಲ, ॥೩೮॥ ರಘುನಂದನ-ರಾಮಚಂದ್ರನೇ, ಕರ್ಮಬಂಧವಿನಾಶಾಯ=ಕರ್ಮ-ಕರ್ಮದಿಂದುಂಟಾಗುವ, ಬಂಧ-ಸಂಸಾರಬಂಧದ, ವಿನಾಶಾಯ-ಪರಿಹಾರಕ್ಕಾಗಿ, ಭಕ್ತಿಲಕ್ಷಣಂ-ಭಕ್ತಿಯೇ ಕರುಣವಾಗಿರುವ, ತ್ವದ್ಜ್ಞಾನಂ-ನಿನ್ನ ವಿಷಯಕವಾದ ಜ್ಞಾನವನ್ನು, ತ್ವದ್ಧ್ಯಾನಂ-ನಿನ್ನ ಧ್ಯಾನರೂಪವಾದ ಮುಖ್ಯಭಕ್ತಿಯನ್ನು, ಪರಮಾರ್ಥಂ-ಪರಮ-ಪ್ರತ್ಯಕ್ಷವಾದ, ಅರ್ಥಂ-ಮೋಕ್ಷರೂಪವಾದ ಪ್ರಯೋಜನವನ್ನು, ಮೇ-ನನಗೆ, ದೇಹಿ-ಕೊಡು, ॥೩೯॥ ರಾಜೇಂದ್ರ-ರಾಜಶ್ರೇಷ್ಠನಾದ, ರಾಮ-ರಾಮಚಂದ್ರನೇ,(ನಾನು)ವಿಷಯಸಂಭವಂ-ವಿಷಯ-ಸ್ರಕ್‌ಚಂದನ ವನಿತಾದಿವಿಷಯಗಳಿಂದ, ಸಂಭವಂ-ಹುಟ್ಟುವ, ಸುಖಂ-ಸುಖವನ್ನು, ನಯಾಚೆ-ಬೇಡುವವನಾಗುವದಿಲ್ಲ, ತ್ವತ್ಪಾದಕಮಲೇಸಕ್ತಭಕ್ತಿರೇವ,-ತ್ವತ್ಪಾದಕಮಲೇ-ನಿನ್ನ ಚರಣ ಕಮಲದಲ್ಲಿ, ಸಕ್ತಭಕ್ತಿರೇವ-ಆಸಕ್ತವಾದ ಭಕ್ತಿಯೇ, ಸದಾ-ಯಾವಾಗಲೂ, ಮೇ-ನನಗೆ, ಅಸ್ತು-ಉಂಟಾಗಿರಲಿ ॥೪೦॥ ಓಂಇತಿ-ಶುಭವು ಹಾಗೆ ಆಗಲಿಯೆಂಬದಾಗಿ,ಉಕ್ತ್ವಾ-ಹೇಳಿ, ಪುನಃ-ತಿರಿಗಿ, ಪ್ರೀತಃ-ಸಂತುಷ್ಟನಾದ, ರಾಮಃ-ರಾಮಚಂದ್ರನು, ಸಾದರಂ-ಆದರದಿಂದ ಕೂಡಿದಂತೆ, ರಾಕ್ಷಸಂ-ವಿಭೀಷಣನನ್ನು ಕುರಿತು, ಪ್ರೋವಾಚ-ಹೇಳಿದನು, ಭದ್ರ-ಶುಭಕರನಾದವನಾದ ವಿಭೀಷಣನೇ, ಶೃಣು-ಕೇಳು, ರಹಸ್ಯಂ-ಗೋಪ್ಯವಾದ, ಮಮ-ನನ್ನ, ನಿಶ್ಚಿತಂ-ತತ್ತ್ವವನ್ನು, ತೇ-ನಿನಗೆ, ವಕ್ಷ್ಯಾಮಿ-ಹೇಳುತ್ತೇನೆ ॥೪೧॥ ಪ್ರಶಾಂತಾನಾಂ-ಶಾಂತಚಿತ್ತರಾದ, ಮದ್ಭಕ್ತಾನಾಂ-ನನಗೆ, ಭಕ್ತರಾದ, ವೀತರಾಗಿಣಾಂ-ವೀತ-ಇಲ್ಲದೆಇರುವ, ಅನುರಾಗಿಣಾಂ-ವಿಷಯಾನುರಾಗವುಳ್ಳವರಾದ, ಯೋಗಿನಾಂ-ನನ್ನಲ್ಲಿ ಚಿತ್ತನಿರೋಧನಮಾಡಿಕೊಂಡು ಧ್ಯಾನಾದಿನಿಷ್ಠರಾದ, ಯೋಗಿಗಳ, ಹೃದಯೇ-ಹೃದಯದಲ್ಲಿ, ಸೀತಯಾ-ಸೀತೆಯಿಂದ ಕೂಡಿದವನಾಗಿ, ನಿತ್ಯಂ-ಯಾವಾಗಲೂ, ನಿವಸಾಮಿ-ಇರುತ್ತೇನೆ, ನಸಂಶಯಃ-ಸಂದೇಹವಿಲ್ಲ ॥೪೨॥ ತಸ್ಮಾತ್-ಆ ಕಾರಣದಿಂದ, ತ್ವಂ-ನೀನು, ಸರ್ವದಾ-ಯಾವಾಗಲೂ, ಶಾಂತಃ-ಶಾಂತನಾಗಿ (ಅಂದರೆ ಜಿತೇಂದ್ರಿ

ಸರ್ವದಾಶಾಂತಃಸರ್ವಕಲ್ಮಷವರ್ಜಿತಃ। ಮಾಂಧ್ಯಾತ್ವಾ ಮೋಕ್ಷ್ಯಸೆನಿತ್ಯಂಘೋರಸಂಸಾರಸಾಗರಾತ್ ॥೪೩॥ ಸ್ತೋತ್ರಮೇತತ್ಪಠೇದ್ಯಸ್ತು ಲಿಖೇದ್ಯಃಶೃಣುಯಾದಪಿ। ಮತ್ಪ್ರೀತಯೆಮಮಾಭೀಷ್ಟಂಸಾರೂಪ್ಯಂಸಮವಾಪ್ನುಯಾತ್ ॥೪೪॥ ಇತ್ಯುಕ್ತ್ವಾ ಲಕ್ಷ್ಮಣಂಪ್ರಾಹಶ್ರೀರಾಮೋಭಕ್ತವತ್ಸಲಃ। ಪಶ್ಯತ್ವಿದಾನೀಮೇವೈಷಃಮಮಸಂದರ್ಶನೇಫಲಂ ॥ ಲಂಕಾರಾಜ್ಯೇಭಿಷೇಕ್ಷ್ಯಾಮಿಜಲಮಾನಯಸಾಗರಾತ್। ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿಮೇದಿನೀ ॥೪೬॥ ಯಾವನ್ಮಮಕಥಾಲೋಕೇತಾವದ್ರಾಜ್ಯಂಕರೋತ್ವಸೌ॥ ಇತ್ಯುಕ್ತ್ವಾ ಲಕ್ಷ್ಮಣೇನಾಂಬುಹ್ಯಾನಾಯ್ಯಕಲಶೇನತಂ॥೪೭॥ ಲಂಕಾರಾಜ್ಯಾಧಿಪತ್ಯಾರ್ಥಮಭಿಷೇಕಂರ

ಯನಾಗಿ) ಸರ್ವಕಲ್ಮಷವರ್ಜಿತಃ-ಸರ್ವ-ಸಮಸ್ತ, ಕಲ್ಮಷ-ಪಾಪಗಳಿಂದ, ವರ್ಜಿತಃ-ಹೀನನಾಗಿ, ನಿತ್ಯಂ-ಯಾವಾಗಲೂ, ಮಾಂ-ನನ್ನನ್ನು, ಧ್ಯಾತ್ವಾ- ಧ್ಯಾನಮಾಡಿ, ಘೋರ-ಕ್ರೂರವಾದ, ಸಂಸಾರಬಂಧನಾತ್-ಸಂಸೃತಿಯಬಂಧದಿಂದ, ಮೋಕ್ಷ್ಯಸೆ-ಮುಕ್ತನಾಗುತ್ತೀ, ॥೪೩॥ ಯಸ್ತು-ಯಾವನುಆದಾಗ್ಯೂ, ಮಮ-ನನ್ನ, ಏತತ್-ಈ, ಸ್ತೋತ್ರಂ-ಸ್ತೋತ್ರವನ್ನು, ಮತ್ಪ್ರೀತಯೆ-ನನ್ನತೃಪ್ತಿಗೋಸ್ಕರ, ಪಠೇತ್-ಓದುತ್ತಾನೋ, ಯಃ-ಯಾವನು, ಲಿಖೇತ್- ಬರೆಯುತ್ತಾನೊ, ಶೃಣುಯಾದಪಿ-ಕೇಳುವವನಾದರೂ ಆಗುತ್ತಾನೋ,(ಸಃ-ಅವನು) ಅಭೀಷ್ಟಂ-ಅಪೇಕ್ಷಿಸಿದ ಕೋರಿಕೆಯನ್ನು, ಸಾರೂಪ್ಯಂ-ನನ್ನಂತೆ ಇರುವದೆಂಬ ಸಾರೂಪ್ಯ ಮುಕ್ತಿಯನ್ನು ಸಮವಾಪ್ನುಯಾತ್-ಹೊಂದುವನು, ॥೪೪॥ ಇತಿ-ಈ ಪ್ರಕಾರವಾಗಿ, ಉಕ್ತ್ವಾ-ಹೇಳಿ, ಭಕ್ತವತ್ಸಲಃ-ಭಕ್ತರಲ್ಲಿ ವಿಶ್ವಾಸವುಳ್ಳವನಾದ, ಶ್ರೀರಾಮಃ -ಶ್ರೀರಾಮಚಂದ್ರನು, ಲಕ್ಷ್ಮಣಂ- ಲಕ್ಷ್ಮಣನನ್ನು ಕುರಿತು, ಪ್ರಾಹ-ಹೇಳಿದನು, ಏಷಃ-ಈ ವಿಭೀಷಣನು, ಮಮ-ನನ್ನ, ಸಂದರ್ಶನೆ- ನೋಡುವಿಕೆಯಿಂದ, (ಉಂಟಾದ) ಫಲಂ- ಪ್ರಯೋಜನವನ್ನು, ಇದಾನೀಮೇವ-ಈಗಲೇ, ಪಶ್ಯತು-ನೋಡಲೀ ॥೪೫॥ ಲಂಕಾರಾಜ್ಯೇ-ಲಂಕಾಪಟ್ಟದ ರಾಜ್ಯದಲ್ಲಿ, ಅಭಿಷೇಕ್ಷ್ಯಾಮಿ-ದೊರೆತನದ ಪಟ್ಟವನ್ನು ಕಟ್ಟುತ್ತೇನೇ, ಸಾಗರಾತ್-ಸಮುದ್ರದಿಂದ, ಜಲಂ-ನೀರನ್ನು, ಆನಯ-ತೆಗದುಕೊಂಡು ಬಾ, ಯಾವತ್-ಯದುವರಿಗೆ, ಚಂದ್ರಶ್ಚ-ಚಂದ್ರನು,ಸೂರ್ಯಶ್ಚ-ಸೂರ್ಯನು, ಯಾವತ್-ಯದುವರಿಗೆ, ಮೇದಿನೀ-ಭೂಮಿಯು, ತಿಷ್ಠತಿ-ಇರುತ್ತೆಯೋ ॥೪೬॥ ಯಾವತ್-ಯದುವರಿಗೆ, ಲೋಕೇ-ಪ್ರಪಂಚದಲ್ಲಿ, ಮಮ-ನನ್ನ, ಕಥಾ-ಚರಿತ್ರೆಯು, ತಿಷ್ಠತಿ-ಇರುತ್ತೋ, ತಾವತ್-ಅದುವರಿಗೆ, ಅಸೌ-ಈ ವಿಭೀಷಣನು, ರಾಜ್ಯಂ-ರಾಜ್ಯವನ್ನು, ಕರೋತಿ-ಮಾಡುತ್ತಲಿರ್ಪಾನೆ, ಇತ್ಯುಕ್ತ್ವಾ-ಈಪ್ರಕಾರವಾಗಿಹೇಳಿ,ಲಕ್ಷ್ಮಣೇನ-ಲಕ್ಷ್ಮಣನಿಂದ, ಅಂಬು- ಉದಕವನ್ನು, ಆನಾಯ್ಯ-ತರಿಸಿ, ಕಲಶೇನ-ಮಂತ್ರಪೂತವಾದ ಕಲಶೋದಕದಿಂದ, ॥೪೭॥ ರಮಾಪತಿಃ-ಲಕ್ಷ್ಮೀಪತಿಯಾದ, ರಾಮಚಂದ್ರನು,ಲಂಕಾರಾಜ್ಯಾಧಿಪತ್ಯಾರ್ಥಂ-ಲಂಕಾರಾಜ್ಯ-ಲಂಕರಾಜ್ಯದ, ಆಧಿಪತ್ಯಾರ್ಥಂ-ದೊರೆತನಮಾಡುವದಕ್ಕೋಸ್ಕರವಾಗಿ, ಸಚಿವೈಃ-ಮಂತ್ರಿಗಳಿಂದಲೂ, ವಿಶೇಷತಃ-ವಿಶೇಷವಾಗಿ, ಲಕ್ಷ್ಮ

ಮೋಪತಿಃ। ಕಾರಯಾಮಾಸಸಚಿವೈರ್ಲಕ್ಷ್ಮಣೇನವಿಶೇಷಿತಃ॥೪೮॥ಸಾಧುಸಾಧ್ವಿತಿತೇಸರ್ವೇ ವಾನರಾಸ್ತುಷ್ಟುವುರ್ಭೃಶಂ। ಸು ಗ್ರೀವೋಪಿಪರಿಷ್ವಜ್ಯವಿಭೀಷಣಮಥಾಬ್ರವೀತ್ ॥೪೯॥ ವಿಭೀಷಣವಯಂಸರ್ವೇರಾಮಸ್ಯಪರಮಾತ್ಮನಃ । ಕಿಂಕರಾಸ್ತತ್ರ ಮುಖ್ಯಸ್ತ್ವಂಭಕ್ತ್ಯಾರಾಮಪರಿಗ್ರಹಾತ್ ॥೫೦॥ ರಾವಣಸ್ಯವಿನಾಶೇತ್ವಂಸಾಹಾಯ್ಯಂಕರ್ತುಮರ್ಹಸಿ ॥೫೧॥ ವಿಭೀ ಷಣಉವಾಚ॥ ॥೫೨॥ಅಹಂಕಿಯಾನ್ಸಹಾಯತ್ವೇರಾಮಸ್ಯಪರಮಾತ್ಮನಃ । ಕಿಂತುದಾಸ್ಯಂಕರಿಷ್ಯೇಹಂಭಕ್ತ್ಯಾಶಕ್ತ್ಯಾಹ್ಯ ಮಾಯಯಾ ॥೫೩॥ ದಶಗ್ರೀವೇಣಸಂದಿಷ್ಟಃಶುಕೋನಾಮಮಹಾಸುರಃ । ಸಂಸ್ಥಿತೋಹ್ಯಂಬರೇವಾಕ್ಯಂಸುಗ್ರೀವಮಿದ ಮಬ್ರವೀತ್ ॥೫೪॥ ತ್ವಾಮಾಹರಾವಣೋರಾಜಾಭ್ರಾತರಂರಾಕ್ಷಸಾಧಿಪಃ । ಮಹಾಕುಲಪ್ರಸೂತಸ್ತ್ವಂರಾಜಾಸಿವ

ಣೇನ-ಲಕ್ಷ್ಮಣನಿಂದಲೂ, ಅಭಿಷೇಕಂ-ಪಟ್ಟಾಭಿಷೇಕವನ್ನು, ಕಾರಯಾಮಾಸ-ಮಾಡಿಸಿದವನಾದನು ॥೪೮॥ ತೇ-ಆ, ಸರ್ವೇ-ಎಲ್ಲಾ, ವಾನರಾಃ-ಕಪಿಗಳು, ಸಾಧುಸಾಧ್ವಿತಿ--ಯೋಗ್ಯವಾಯಿತು ಎಂಬದಾಗಿ ಹೇಳುತ್ತಿರುವವರಾಗಿ, ಭೃಶಂ-ಅತ್ಯಂತವಾಗಿ, ತುಷ್ಟುವುಃ-ಸ್ತೋತ್ರಮಾಡಿದವರಾದರು, ಸುಗ್ರೀವೋಪಿ-ಸುಗ್ರೀವನೂ, ಪರಿಷ್ವಜ್ಯ- ಆಲಿಂಗಿಸಿಕೊಂಡು, ವಿಭೀಷಣಂ-ವಿಭೀಷಣನನ್ನು ಕುರಿತು, ಅಥ-ಆ ಬಳಿಕ, ಅಬ್ರವೀತ್-ಹೇಳಿದವನಾದನು ॥೪೯॥ ವಿಭೀಷಣ-ವಿಭೀಷಣನೇ, ಸರ್ವೇವಯಂ-ನಾವೆಲ್ಲರೂ, ಪರಮಾತ್ಮನಃ-ಪರಮಾತ್ಮನಾದ, ರಾಮಸ್ಯ-ರಾಮಚಂದ್ರನಿಗೆ, ಕಿಂಕರಾಃ-ಸೇವಕರು, ತತ್ರ-ಆ ಕಿಂಕರರೊಳಗೇ, ಭಕ್ತ್ಯಾ-ವಿಶ್ವಾಸದಿಂದ, ರಾಮಪರಿಗ್ರಹಾತ್ - ರಾಮಚಂದ್ರನಿಂದ, ಅಂಗೀಕರಿಸಲ್ಪಟ್ಟವನಾದ ದೆಸೆಯಿಂದ, ತ್ವಂ-ನೀನು, ಮುಖ್ಯಃ-ಗಣ್ಯನಾದವನು. ॥೫೦॥

ತ್ವಂ-ನೀನು, ರಾವಣಸ್ಯ-ರಾವಣನ, ವಿನಾಶೇ-ಸಂಹಾರದ ವಿಷಯದಲ್ಲಿ, ಸಾಹಾಯ್ಯಂ-ಸಹಾಯವನ್ನು, ಕರ್ತುಂ-ಮಾಡುವದಕ್ಕೆ, ಅರ್ಹಸಿ-ಸಮರ್ಥನಾಗು. ॥೫೧॥ ವಿಭೀಷಣಉವಾಚ-ವಿಭೀಷಣನು ಹೇಳುತ್ತಲಿದ್ದಾನೆ. ॥೫೨॥ ಪರಮಾತ್ಮನಃ-ಪರಮಾತ್ಮನಾದ, ರಾಮಸ್ಯ-ರಾಮಚಂದ್ರನಿಗೆ, ಸಹಾಯತ್ವೇ-ಸಹಾಯ ಮಾಡುವತನದಲ್ಲಿ, ಅಹಂ-ನಾನು, ಕಿಯಾನ್- ಯಷ್ಟರವನು, ಕಿಂತು-ಮತ್ತೇನೆಂದರೆ, ಭಕ್ತ್ಯಾ-ಭಕ್ತಿಯಿಂದಲೂ, ಶಕ್ತ್ಯಾ-ನನಗೆ ಉಂಟಾಗಿರುವ ಶಕ್ತಿಯಿಂದಲೂ, ಅಮಾಯಯಾ- ನಿರ್ವಂಚನೆಯಿಂದಲೂ, ದಾಸ್ಯಂ-ಸೇವೆಯನ್ನು, ಕರಿಷ್ಯೇ-ಮಾಡುತ್ತೇನೆ. ॥೫೩॥ ದಶಗ್ರೀವೇಣ-ರಾವಣನಿಂದ, ಸಂದಿಷ್ಟಃ-ಅಜ್ಞಪ್ತನಾದ, ಶುಕೋನಾಮ- ಶುಕನೆಂಬ ಹೆಸರುಳ್ಳ, ಮಹಾಸುರಃ-ದೊಡ್ಡ ರಾಕ್ಷಸನು, ಅಂಬರೇ-ಅಂತರಿಕ್ಷದಲ್ಲಿ, ಸಂಸ್ಥಿತಃ-ನಿಂತಿರುವವನಾಗಿ, ಸುಗ್ರೀವಂ-ಸುಗ್ರೀವನನ್ನು ಕುರಿತು, ಇದಂ-ಈ, ವಾಕ್ಯಂ- ಮಾತನ್ನು, ಅಬ್ರವೀತ್-ಹೇಳಿದನು.॥೫೪॥ರಾಕ್ಷಸಾಧಿಪಃ-ರಾಕ್ಷಸ-ರಾಕ್ಷಸರಿಗೆ, ಅಧಿಪಃ-ಸ್ವಾಮಿಯಾದ,(ಅಂದರೆ ರಾಕ್ಷಸರಿಗೆಲ್ಲಾ ಧೊರೆಯಾದ,) ರಾವಣಃ-ರಾವಣನು, ಭ್ರಾತರಂ-ಭ್ರಾತೃಸ

ನಚಾರಿಣಾಂ॥೫೫॥ಮಮಭ್ರಾತೃಸಮಾನಸ್ತ್ವಂತವನಾಸ್ತ್ಯರ್ಥವಿಪ್ಲವಃ। ಅಹಂಯದಹರಂಭಾರ್ಯಾಂರಾಜಪುತ್ರಸ್ಯಕಿಂತ
ವ ॥೫೬॥ ಕಿಷ್ಕಿಂಧಾಂಯಾಹಿಹರಿಭಿರ್ಲಂಕಾಶಕ್ಯಾನದೇವತೈಃ। ಪ್ರಾಪ್ತುಂಕಿಂಮಾನವೈರಲ್ಪಸತ್ವೈರ್ವಾನರಯೂಥ
ಪೈಃ ॥೫೭॥ ತಂಪ್ರಾಪಯಂತಂವಚನಂತೂರ್ಣಮುತ್ಪ್ಲುತ್ಯವಾನರಾಃ ।ಪ್ರಾಪದ್ಯಂತತದಾಕ್ಷಿಪ್ರಂನಿಹಂತುಂದೃಢಮುಷ್ಟಿ
ಭಿಃ ॥೫೮॥ವಾನರೈರ್ಹನ್ಯಮಾನಸ್ತುಶುಕೋರಾಮಮಥಾಬ್ರವೀತ್ ।ನದೂತಾನ್ಘ್ನಂತಿರಾಜೇಂದ್ರವಾನರಾನ್ವಾರಯಪ್ರ
ಭೋ॥೫೯॥ರಾಮಶ್ಚಶ್ರುತ್ವಾತದಾವಾಕ್ಯಂಶುಕಸ್ಯಪರಿದೇವಿತಂ।ಮಾವಧೀಷ್ಟೇತಿರಾಮಸ್ತುನ್ಯವಾರಯಾದ್ವಾನರಾನ್ ॥೬೦॥

ಮಾನನಾದ, ತ್ವಾಂ-ನಿನ್ನನ್ನು, ಕುರಿತು, ಆಹ-ಹೇಳಿದನು, (ಪೂರ್ವದಲ್ಲಿವಾಲಿಗೂ-ರಾವಣನಿಗೂ ಮಿತ್ರತ್ವವಾದಕಾಲದಲ್ಲಿ, ಇನ್ನುಮೇಲೆ ನಾವುಗಳು ಅಣ್ಣತಮ್ಮಂದಿರಂ ತೆ ವ್ಯವಹಾರವನ್ನು ಬೆಳಸಬೇಕೆಂದು ಪ್ರತಿಜ್ಞೆಮಾಡಿದ್ದರಾದಕಾರಣದಿಂದ,ವಾಲಿಯತಮ್ಮನಾದ ಸುಗ್ರೀವನವಿಷಯದಲ್ಲಿ ಭ್ರಾತೃಶಬ್ದವನ್ನು-ರಾವಣನು ಪ್ರಯೋಗಿಸಿದನೆಂಬ ಭಾವವು)ವನಚಾರಿಣಾಂ-ಕಪಿಗಳಿಗೆ, ರಾಜಾ-ದೊರೆಯಾದ, ತ್ವಂ-ನೀನು, ಮಹಾಕುಲಪ್ರಸೂತಃ, ಮಹಾಕುಲ-ದೊಡ್ಡವಂಶದಲ್ಲಿ, ಪ್ರಸೂತಃ-ಹುಟ್ಟಿದವನಾಗಿದ್ಧೀ, ॥ ತ್ವಂ-ನೀನು, ಮಮ-ನನಗೆ, ಭ್ರಾತೃಸಮಃ-ತಮ್ಮನಿಗೆಸಮಾನನಾದವನು, ತವ-ನಿನಗೆ, ಅರ್ಥವಿಪ್ಲವಃ-ಅರ್ಥ-ನನ್ನಿಂದುಂಟಾದಾರ್ಥದ, ವಿಪ್ಲವಃ-ನಾಶವು, ನಾಸ್ತಿ-ಇಲ್ಲ, ಅಹಂ-ನಾನು, ರಾಜಪುತ್ರಸ್ಯ-ದೊರೆಮಗನಾದ, ರಾಮಚಂದ್ರನ, ಭಾರ್ಯಾಂ-ಹೆಂಡತಿಯನ್ನು, ಯದ್ಯಹರಂ-ಅಪಹರಿಸಿದವನಾದರೆ, ತವ-ನಿನಗೆ, ಕಿಂ-ಏನು ॥೫೬॥ ಹರಿಭಿಃ ಕಪಿಗಳಿಂದಕೂಡಿದವನಾಗಿ, ಕಿಷ್ಕಿಂಧಾಂ-ಕಿಷ್ಕಿಂಧಾಪಟ್ಟಣವನ್ನುಕುರಿತು, ಯಾಹಿ-ಹೋಗು, ಲಂಕಾ- ಲಂಕಾಪಟ್ಟಣವು, ದೇವತೈಃ-ದೇವತೆಗಳಿಂದ, ಪ್ರಾಪ್ತುಂ-ಹೊಂದುವದಕ್ಕೆ, ನಶಕ್ಯಾ-ಅಸಾಧ್ಯವಾಗಿರುವದು, ಅಲ್ಪಸತ್ವೈಃ-ಸ್ವಲ್ಪಬಲರಾದ, ಮಾನವೈಃ-ಮನುಷ್ಯರಿಂದಲೂ, ವಾನರಯೂಥಪೈಃ-ಕಪಿಗಳಸೇನಾಪತಿಗಳಿಂದಲೂ, ಪ್ರಾಪ್ತುಂ-ಹೊಂದುವದಕ್ಕೆ, ಕಿಂ-ಸಾಧ್ಯವಾಗುವದೆ, ಅಂದರೆಅಸಾಧ್ಯವಾಗಿರುವದು ॥೫೭॥ ವಾನರಾಃ-ಕಪಿಗಳು, ವಚನಂ-ರಾವಣನು ಹೇಳಿಕಳುಹಿದಮಾತನ್ನು, ಪ್ರಾಪಯಂತಂ-ತಿಳಿಸುತ್ತಿರುವ, ಶುಕನೆಂಬರಾಕ್ಷಸನನ್ನು, ಉತ್ಪ್ಲುತ್ಯ-ಹಾರಿ, ತೂರ್ಣಂ-ಬೇಗನೆ, (ಗೃಹೀತ್ವಾ-ಹಿಡಿದುಕೊಂಡು) ತದಾ-ಆಗ, ಕ್ಷಿಪ್ರಂ-ಜಾಗ್ರತೆಯಾಗಿ, ದೃಢ-ಬಲವಾದ, ಮುಷ್ಟಿಭಿಃ-ಮುಷ್ಟಿಪ್ರಹಾರಗಳಿಂದ, ಹಂತುಂ-ಕೊಲ್ಲುವದಕ್ಕೆ, ಪ್ರಾಪದ್ಯಂತ ಪ್ರಯತ್ನಮಾಡಿದವರಾದರು, ॥೫೮॥ ಶುಕಃ-ಶುಕರಾಕ್ಷಸನು, ವಾನರೈಃ-ಕಪಿಗಳಿಂದ, ಹನ್ಯಮಾನಸ್ತು-ಹೊಡೆಯಲ್ಪಟ್ಟವನಾಗಿ, ಅಥ-ಅಬಳಿಕ, ರಾಮಂ-ರಾಮಚಂದ್ರನನ್ನುಕುರಿತು, ಅಬ್ರವೀತ್-ಹೇಳಿದನು, ರಾಜೇಂದ್ರ-ರಾಜಶ್ರೇಷ್ಠನಾದ, ಪ್ರಭೋ-ಸ್ವಾಮಿಯಾದ, ರಾಮಚಂದ್ರನೆ, ದೂತಾನ್-ತನ್ನಪ್ರಭುವುಹೇಳಿದಮಾತನ್ನು, ತಿಳಿಸುವದಕ್ಕೆ ಮಾತ್ರಬಂದಿರುವ ದೂತನನ್ನು, ನಘ್ನಂತಿ-ಯಾರುಕೊಲ್ಲುವದಿಲ್ಲ, (ಆದ್ದರಿಂದ) ವಾನ

ಪುನರಂಬರಮಾಸಾದ್ಯ ಶುಕಸ್ಸುಗ್ರೀವಮಬ್ರವೀತ್। ಬ್ರೂಹಿರಾಜನ್ ದಶಗ್ರೀವಂಕಿಂವಕ್ಷ್ಯಾಮಿವ್ರಜಾಮ್ಯಹಂ॥೬೮॥ ಸುಗ್ರೀವಉವಾಚ ॥೬೦॥ ಯಥಾವಾಲೀಮಮಭ್ರಾತಾತಥಾತ್ವಂರಾಕ್ಷಸಾಧಮ। ಹಂತವ್ಯಸ್ತ್ವಂಮಯಾಯತ್ನಾತ್ಸಪುತ್ರ ಬಲವಾಹನಃ ॥೬೩॥ ಬ್ರೂಹಿಮೇರಾಮಚಂದ್ರಸ್ಯ ಭಾರ್ಯಾಂಹೃತ್ವಾಕ್ವಯಾಸ್ಯಸಿ। ತತೋರಾಮಾಜ್ಞಯಾಧೃತ್ವಾಶುಕಂಬಧ್ವಾನ್ವರಕ್ಷಯತ್॥೬೪॥ ಶಾರ್ದೂಲೋಪಿತತಃಪೂರ್ವಂದೃಷ್ಟ್ವಾಕಪಿಬಲಂಮಹತ್। ಯಥಾವತ್ಕಥಯಾಮಾಸರಾವಣಾಯರಾಕ್ಷಸಃ॥೬೫॥ ದೀರ್ಘಚಿಂತಾಪರೋಭೂತ್ವಾನಿಶ್ವಸನ್ನಾಸಮಂದಿರೇ। ತತಸ್ಸಮುದ್ರಮಾವೇಷ್ಟ್ಯರಾಮೋರಕ್ತಾಂತಲೋ

ರ್ರಾ-ಕಪಿಗಳನ್ನು, ವಾರಯ-ದೂತನಾದವನನ್ನು ಕೊಲ್ಲದಂತೆ ಅಡ್ಡಿಯನ್ನು ಮಾಡು, ॥೫೯॥ ತದಾ-ಆಗ, ರಾಮಃ-ರಾಮಚಂದ್ರನು, ಶುಕಸ್ಯ-ಶುಕರಾಕ್ಷಸನಿಂದ, ಪರಿದೇವಿತಂ-ಗೋಳಾಡಲ್ಪಟ್ಟ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ರಾಮಚಂದ್ರನು, ಏಷಮಧೀಪ್ಸಿತಿ-ಶುಕನನ್ನು ಕೊಲ್ಲಬ್ಯಾಡಿರಿಎಂಬದಾಗಿ, ವರ್ರಾ-ಆ, ವಾನರ್ರಾ-ಕಪಿಗಳನ್ನು, ವಾರಯಾಮಾಸ, ಅಡ್ಡಿಮಾಡಿದನು, ॥೬೦॥ ಶುಕಃ-ಶುಕನು, ಪುನಃ-ತಿರಿಗಿ, ಅಂಬರಂ-ಅಂತರಿಕ್ಷವನ್ನು, ಅಸಾದ್ಯ-ಹೊಂದಿ, ಸುಗ್ರೀವಂ-ಸುಗ್ರೀವನನ್ನು ಕುರಿತು, ಇದಂ-ಈಮಾತನ್ನು, ಅಬ್ರವೀತ್-ಹೇಳಿದನು, ರಾಜನ್-ಧೊರೆಯಾದಸುಗ್ರೀವನೇ, ದಶಗ್ರೀವಂ-ರಾವಣನನ್ನು ಕುರಿತು, ಕಿಂ-ಯೇನು, ವಕ್ಷ್ಯಾಮಿ-ಹೇಳಲಿ, ಬ್ರೂಹಿ-ಹೇಳು, ಅಹಂ-ನಾನು, ವ್ರಜಾಮಿ-ನಿನ್ನ ಪ್ರತ್ಯುತ್ತರವನ್ನು ಪಡದುಹೋಗುತ್ತಲಿದ್ದೇನೆ, ॥೬೮॥ ಸುಗ್ರೀವಉವಾಚ-ಸುಗ್ರೀವನು ಹೇಳುತ್ತಲಿದ್ದಾನ॥೬೦॥ ರಾಕ್ಷಸಾಧಮ-ರಾಕ್ಷಸರೊಳಗೆ, ನೀಚನಾದರಾವಣನೇ, ಮಮ-ನನಿಗೆ, ವಾಲೀ-ವಾಲಿಯು, ಯಥಾ-ಹ್ಯಾಗೆ, ಭ್ರಾತಾ-ಅಣ್ಣನೊ, ತಥಾ-ಹಾಗೆ, ತ್ವಂ-ನೀನು, (ಅಣ್ಣನೇಸರಿ) ವಾಲಿಯು ಹ್ಯಾಗೆ ಭ್ರಾತೃಭಾರ್ಯಾತಿಕ್ರಮಮಾಡಿದ್ದರಿಂದ ಹ್ಯಾಗೆ ಸಂಹಾರಕ್ಕೆ ಅರ್ಹನಾದನೊ ಹಾಗೆಯೇ,ಸಪುತ್ರಬಲವಾಹನಃ-ಮಕ್ಕಳು ಸೈನ್ಯವು ಮತ್ತು ವಾಹನಗಳಿಂದಕೂಡಿದ, ತ್ವಂ-ನೀನು, ಮಯಾ-ನನ್ನಿಂದ, ಯತ್ನಾತ್-ಪ್ರಯತ್ನಪೂರ್ವಕವಾಗಿ, ಹಂತವ್ಯಃ-ಸಂಹರಿಸಲ್ಪಡತಕ್ಕವನು, ॥೬೩॥ ರಾಮಚಂದ್ರಸ್ಯ-ರಾಮಚಂದ್ರನ, ಭಾರ್ಯಾಂ-ಹೆಂಡತಿಯನ್ನು, ಹೃತ್ವಾ-ಅಪಹರಿಸಿ, ಕ್ವಯಾಸ್ಯಸಿ-ಎಲ್ಲಿಗೆಹೋಗುತ್ತೀ, ಮೇ-ಬ್ರೂಹಿ-ನನಿಗೆಹೇಳು, ತತಃ-ಆ ಬಳಿಕ, ರಾಮಾಜ್ಞಯಾ-ರಾಮ-ರಾಮಚಂದ್ರನ, ಆಜ್ಞಯಾ-ಅಪ್ಪಣೆಯಿಂದ, ಶುಕಂ-ಶುಕರಾಕ್ಷಸನನ್ನು, ಧೃತ್ವಾ-ಹಿಡಿದು, ಬಧ್ವಾ-ಕಟ್ಟಿ-ಅನ್ವರಕ್ಷಯತ್-ಕಾಪಾಡಿಸಿದಂಥವನಾದನು, ॥೬೪॥ ತತಃ-ಪೂರ್ವಂ ಶುಕನುಬರುವದಕ್ಕೆಮುಂಚೆಯೇ, ಶಾರ್ದೂಲೋಪಿ-ಶಾರ್ದೂಲನೆಂಬರಾಕ್ಷಸನು, ಮಹತ್-ಹೆಚ್ಚಾದ, ಕಪಿಬಲಂ-ಕಪಿಸೈನ್ಯವನ್ನು, ದೃಷ್ಟ್ವಾ-ನೋಡಿ, ಸಃ-ಅ, ರಾಕ್ಷಸಃ-ಶಾರ್ದೂಲನು, ರಾವಣಾಯ-ರಾವಣನಿಗೆ, ಯಥಾಯಾವತ್-ತಾನುನೋಡಿದಂತೆ, ಕಥಯಾಮಾಸ-ಹೇಳಿದನು, ॥೬೫॥

೨ ॥ ರಾ॥ ೩೦ ಚನಃ ॥೬೬॥ ಪಶ್ಯಲಕ್ಷ್ಮಣದುಷ್ಟೋಽಸೌವಾರಿಧಿರ್ಮಾಮುಪಾಗತಂ । ನಾಭಿನಂದತಿದುಷ್ಟಾತ್ಮಾದರ್ಶನಾರ್ಥಂಮಮೇಹಸಃ ॥
ಜಾನಾತಿಮಾನುಷೋಽಯಂಮೇಕಿಂಕರಿಷ್ಯತಿವಾನರೈಃ । ಅದ್ಯಪಶ್ಯಮಹಾಬಾಹೋಶೋಷಯಿಷ್ಯಾಮಿವಾರಿಧಿಂ ॥೬೮॥
ಪಾದೈರೇವಗಮಿಷ್ಯಂತಿವಾನರಾವಿಗತಜ್ವರಾಃ । ಇತ್ಯುಕ್ತ್ವಾಕ್ರೋಧತಾಮ್ರಾಕ್ಷಃಆರೋಪಿತಧನುರ್ಧರಃ ॥೬೯॥ ತೂ
ಣೀರಾದ್ಬಾಣಮಾದಾಯಕಾಲಾಗ್ನಿಸದೃಶಪ್ರಭಂ । ಸಂಧಾಯಚಾಪಮಾಕೃಷ್ಯರಾಮೋವಾಕ್ಯಮಥಾಬ್ರವೀತ್ ॥೭೦॥ ಯು॥ಕಾಂ
ಪಶ್ಯಂತುಸರ್ವಭೂತಾನಿರಾಮಸ್ಯಶರವಿಕ್ರಮಂ । ಇದಾನೀಂಭಸ್ಮಸಾತ್ಕುರ್ಮ್ಯಂಸಮುದ್ರಂಸರಿತಾಂಪತಿಂ ॥೭೧॥ ಏವಂ

ಟೀ॥ (ಆಗ ರಾವಣನು,) ದೀರ್ಘಚಿಂತಾಪರಃ-ದೀರ್ಘ-ಬಹಳವಾದ, ಚಿಂತಾಪರಃ-ಚಿಂತಾಸಕ್ತನು, ಭೂತ್ವಾ-ಆಗಿ, ನಿಶ್ವಸ್ಯ-ನಿಟ್ಟುಸುರನ್ನು ಬಿಡುತ್ತಾ, ಮಂದಿರೆ-ಮನೆಯಲ್ಲಿ, ಆಸ-ಇದ್ದನು, ತತಃ-ಅನಂತರದಲ್ಲಿ, ರಾಮಃ-ರಾಮಚಂದ್ರನು, ಸಮುದ್ರಂ-ಸಮುದ್ರವನ್ನು, ಅವೇಕ್ಷ್ಯ-ನೋಡಿ, ರಕ್ತಾಂತಲೋಚನಃ-ಕೆಂಪಾದ ನೇತ್ರಾಂತಗಳುಳ್ಳವನಾಗಿ. ॥೬೬॥ ಅನಘ-ನಿರ್ದುಷ್ಟನಾದ, ಲಕ್ಷ್ಮಣ-ಲಕ್ಷ್ಮಣನೆ, ಪಶ್ಯ-ನೋಡು, ಅಸೌ-ಈ, ದುಷ್ಟಃ-ದುಷ್ಟನಾದ, ವಾರಿಧಿಃ-ಸಮುದ್ರನು, ಉಪಾಗತಂ-ಸಮುದ್ರತೀರವನ್ನು ಕುರಿತು, ಬಂದಿರುವ, ಮಾಂ-ನನ್ನನ್ನು, ನಾಭಿನಂದತಿ-ಸಂತೋಷಿಸಲಿಲ್ಲ, ದುಷ್ಟಾತ್ಮಾ-ದುರ್ಬುದ್ಧಿಯುಳ್ಳವನಾದ ಸಮುದ್ರನು, ಮಮ-ನನ್ನ, ದರ್ಶನಾರ್ಥಂ-ನೋಡುವದಕ್ಕಾಗಿ, ನಾಯಾಸ್ಯತಿ-ಬರಲೊಲ್ಲ, ॥೬೭॥ ಅಯಂ-ಈ, ಮಾನುಷಃ-ಮನುಷ್ಯನು, ವಾನರೈಃ-ಕಪಿಗಳಿಂದ, ಕೂಡಿದವನಾಗಿ, ಮೇ-ನನಗೆ, ಕಿಂಕರಿಷ್ಯತಿ-ಏನುಮಾಡುತ್ತಾನೆ, ಜಾನಾತಿ-ಹೀಗೆ ತಿಳಿದಿರುವವನಾಗಿದ್ದಾನೆ, ಮಹಾಬಾಹೋ-ಉದ್ದವಾದ ತೋಳುಗಳುಳ್ಳ, ಲಕ್ಷ್ಮಣನೆ, ಅದ್ಯ-ಈಗ, ಪಶ್ಯ-ನೋಡು, ವಾರಿಧಿಂ-ಸಮುದ್ರವನ್ನು, ಶೋಷಯಿಷ್ಯಾಮಿ-ನೀರು ಬತ್ತಿಹೋಗುವಂತೆ ಮಾಡುತ್ತೇನೆ, ॥೬೮॥ ವಾನರಾಃ-ಕಪಿಗಳು, ವಿಗತಜ್ವರಾಃ-ವಿಗತ-ಹೋದಂಥಾ, ಜ್ವರಾಃ-ಬಾಧೆಯುಳ್ಳವರಾಗಿ, ಪಾದೈರೇವ-ಕಾಲುಗಳಿಂದಲೇ, ಗಮಿಷ್ಯಂತಿ-ನಡೆದುಕೋಗುತ್ತಾರೆ, ಇತ್ಯುಕ್ತ್ವಾ-ಈ ಪ್ರಕಾರವಾಗಿ ಹೇಳಿ, ಕ್ರೋಧತಾಮ್ರಾಕ್ಷಃ-ಕ್ರೋಧ-ಕೋಪದಿಂದ, ತಾಮ್ರ-ಕೆಂಪಾದ, ಅಕ್ಷಃ-ಕಣ್ಣುಗಳುಳ್ಳವನಾದ, ರಾಮಚಂದ್ರನು, ಆರೋಪಿತಧನುರ್ಧರಃ-ಆರೋಪಿತ-ಹೆದೆಯಿಂದ ಕೂಡಿಸಿರುವ, ಧನುಃ-ಧನುಸ್ಸನ್ನು, ಧರಃ-ಹಿಡಿದಿರುವನಾಗಿ, ॥೬೯॥ ತೂಣೀರಾತ್-ಬಾಣಬೇಲದಿಂದ, ಕಾಲನಲಸಮಪ್ರಭಂ,-ಕಾಲಾನಲ-ಪ್ರಳಯಕಾಲದ ಬೆಂಕಿಯಂತೆ, ಸಮಪ್ರಭಂ-ಸಮವಾದ ತೇಜಸ್ಸುಳ್ಳ, ಬಾಣಂ-ಬಾಣವನ್ನು, ಆದಾಯ-ತೆಗೆದುಕೊಂಡು, ಚಾಪಂ-ಬಿಲ್ಲಿನಲ್ಲಿ, ಸಂಧಾಯ-ಜೋಡಿಸಿ, ಆಕೃಷ್ಯ-ಎಳೆದು, ರಾಮಃ-ರಾಮಚಂದ್ರನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ॥೭೦॥ ಸರ್ವಭೂತಾನಿ-ಎಲ್ಲಾ ಭೂತಗಳು, ರಾಮಸ್ಯ-ರಾಮಚಂದ್ರನ, ಶರವಿಕ್ರಮಂ- ಶರ-ಬಾಣದ, ವಿಕ್ರಮಂ-ಸಾಮರ್ಥ್ಯವನ್ನು,

ಬ್ರುವತಿರಾಮೇತುಸಶೈಲವನಕಾನನಾ ॥ ಚಚಾಲವಸುಧಾದ್ಯೌಶ್ಚ ದಿಶಶ್ಚ ತಮಸಾವೃತಾಃ ॥೨೦॥ ಚುಕ್ಷುಭೇಸಾಗರೋವೇಲಾಂ ಭಯಾದ್ಯೋಜನಮತ್ಯಗಾತ್ ॥ ತಿಮಿನಕ್ರಝಷಾಮೀನಾಃಪ್ರತಪ್ತಾಃಪರಿತತ್ರಸುಃ ॥೨೧॥ ಏತಸ್ಮಿನ್ನಂತರೇಸಾಕ್ಷಾತ್ಸಾಗರೋದಿವ್ಯರೂಪಧೃತ್ ॥ ದಿವ್ಯಾಭರಣಸಂಪನ್ನಃಸ್ವಭಾಸಾಭಾಸಯನ್ದಿಶಃ ॥೨೨॥ ಸ್ವಾಂತಸ್ಥದಿವ್ಯರತ್ನಾನಿಕರಾಭ್ಯಾಂಪರಿಗೃಹ್ಯಸಃ। ಪಾದಯೋಃಪುರತಃಕ್ಷಿಪ್ತ್ವಾರಾಮಸ್ಯೋಪಾಯನಂಬಹು ॥೨೩॥ ದಂಡವತ್ಪ್ರಣಿಪತ್ಯಾಹರಾಮಂರಕ್ತಾಂತಲೋಚನಂ॥ತ್ರಾಹಿತ್ರಾಹಿಜಗನ್ನಾಥರಾಮತ್ರೈಲೋಕ್ಯರಕ್ಷಕ॥೨೪॥ ಜಡೋಹಂರಾಮತೇಸೃಷ್ಟಃಸೃಜಾತಾನಿಖಿಲಂಜಗತ್।

ಪಶ್ಯಂತು-ನೋಡಲಿ, ಸರಿತಾಂ-ನದಿಗಳಿಗೆ, ಪತಿಂ-ಗಂಡನಾದ, ಸಮುದ್ರಂ-ಸಮುದ್ರನನ್ನು, ಇದಾನೀಂ-ಈಗಲೇ, ಭಸ್ಮಸಾತ್-ಬೂದಿಯಾಗಿ, ಕುರ್ಯಾಂ-ಮಾಡುತ್ತೇನೆ ॥೨೦॥ ರಾಮೇ-ರಾಮಚಂದ್ರನು, ಏವಂ-ಈಪ್ರಕಾರವಾಗಿ, ಬ್ರುವತಿಸತಿ-ಹೇಳುತ್ತಿರಲು, ಸಶೈಲವನಕಾನನಾ-ಶೈಲ-ಬೆಟ್ಟಗಳು, ವನ-ಉದ್ಯಾನವನಗಳು, ಕಾನನಾ-ವಿಂಧ್ಯಾರಣ್ಯ-ಗಜಾರಣ್ಯಾಮುಂತಾದ ಅರಣ್ಯಗಳು ಇವುಗಳಿಂದ ಕೂಡಿರುವ, ವಸುಧಾ-ಭೂಮಿಯು, ಚಚಾಲ-ಕಂಪಿಸಿತು, ದ್ಯೌಃ-ಅಂತರಿಕ್ಷವು,ದಿಶಶ್ಚ-ದಿಕ್ಕುಗಳೂಕೂಡ, ತಮಸಾ-ಕತ್ತಲೆಯಿಂದ, ಆವೃತಾಃ-ಸುತ್ತಿಕೊಳ್ಳಲ್ಪಟ್ಟವು, ॥೨೦॥ ಸಾಗರಃ-ಸಮುದ್ರನು, ಚುಕ್ಷುಭೇ-ಕ್ಷೋಭೆಯನ್ನು ಹೊಂದಿದನು, ಭಯಾತ್-ಅಂಜಿಕೆಯಿಂದ, ಯೋಜನಂ-ಐದುಹರದಾರಿಯನೆಲವನ್ನು, ಅತ್ಯಗಾತ್-ದಡವನ್ನು ಬಿಟ್ಟು ಮುಂದಕ್ಕೆ ಹೋದನು, ತಿಮಿ-ತಿಮಿ-ಎಂಬ ಮತ್ಸ್ಯಗಳು,ನಕ್ರ-ಮೊಸಳೆಗಳು, ಝಷಾಃ-ಹಾವುಮೀನುಗಳು, ಮೀನಾಃ-ಮತ್ಸ್ಯಗಳು, ಪ್ರತಪ್ತಾಃ-ಜಲೋಷ್ಣತೆಯಿಂದ ತಪಿಸಲ್ಪಟ್ಟವುಗಳಾಗಿ, ಪರಿತತ್ರಸುಃ-ಭಯಪಟ್ಟವು, ॥೨೧॥ ಏತಸ್ಮಿನ್ನಂತರೇ-ಈಮಧ್ಯದಲ್ಲಿ, ದಿವ್ಯರೂಪಧೃತ್,-ದಿವ್ಯ-ದೇವತಾಯೋಗ್ಯವಾದರೂಪ ಆಕೃತಿಯನ್ನು, ಧೃಲ್-ಧರಿಸಿದವನಾದ, ದಿವ್ಯಾಭರಣಸಂಪನ್ನಃ-ದಿವ್ಯ- ದೇವತಾಯೋಗ್ಯವಾದ, ಆಭರಣ- ಒಡಿವೆಗಳಿಂದ, ಸಂಪನ್ನಃ- ಅಲಂಕೃತನಾದ, ಸಾಗರಃ-ಸಮುದ್ರನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಸ್ವಭಾಸಾ-ತನ್ನಕಾಂತಿಯಿಂದ, ದಿಶಃ-ದಿಕ್ಕುಗಳನ್ನು, ಭಾಸಯನ್- ಪ್ರಕಾಶಮಾಡುತ್ತಿರುವವನಾಗಿ, ॥೨೨॥ ಸ್ವಾಂತಸ್ಥದಿವ್ಯರತ್ನಾನಿ, ಸ್ವ-ತನ್ನ, ಅಂತಃ-ಒಳಗೆ, ಸ್ಥ-ಇರುವ, ದಿವ್ಯರತ್ನಾನಿ-ದೇವತಾಯೋಗ್ಯವಾದ ರತ್ನಗಳನ್ನು,ಕರಾಭ್ಯಾಂ-ಕೈಗಳಿಂದ, ಸಃ-ಆ ಸಮುದ್ರನು, ಪರಿಗೃಹ್ಯ-ಹಿಡಿದುಕೊಂಡು, ರಾಮಸ್ಯ-ರಾಮಚಂದ್ರನ, ಪಾದಯೋಃ-ಪಾದಗಳ, ಪುರತಃ-ಎದುರಿಗೆ, ಬಹು-ಹೆಚ್ಚಾದ, ಉಪಾಯನಂ-ಕಾಣಿಕೆಯನ್ನು, ಕ್ಷಿಪ್ತ್ವಾ-ಇರಿಸಿ, ॥೨೩॥ ದಂಡವತ್-ದಂಡದಂತೆ, ಪ್ರಣಿಪತ್ಯ-ನಮಸ್ಕರಿಸಿ, ರಕ್ತಾಂತಲೋಚನಂ-ಕೆಂಪಾದ ಕೊನೆಗಣ್ಣುಗಳುಳ್ಳ, ರಾಮಂ-ರಾಮಚಂದ್ರನನ್ನು ಕುರಿತು, ಆಹ-ಹೇಳಿದನು, ಜಗನ್ನಾಥ-ಜಗತ್ತಿಗೆಲ್ಲಾ ಒಡೆಯನಾದ, ತ್ರೈಲೋಕ್ಯರಕ್ಷಕ-ಮೂರುಲೋಕಗಳನ್ನು ಕಾಪಾಡುವವನಾದ, ರಾಮ-ರಾಮಚಂದ್ರನೆ, ತ್ರಾಹಿತ್ರಾ

ಸ್ವಭಾವಮನ್ಯಥಾಕರ್ತುಂಕಶ್ಶಕ್ತೋ ದೇವನಿರ್ಮಿತಂ ॥ ೭೭ ॥ ಸ್ಥೂಲಾನಿಪಂಚಭೂತಾನಿಜಡಾನ್ಯೇವಸ್ವಭಾವತಃ । ಸೃಷ್ಟಾನಿಭವತೈತಾನಿತ್ವದಾಜ್ಞಾಂಲಂಘಯಂತಿನ ॥೭೮॥ ತಾಮಸಾದಹಮೋರಾಮಭೂತಾನಿಪ್ರಭವಂತಿಹಿ ॥ ಕಾರಣಾನುಗಮಾತ್ತೇಷಾಂಜಡತ್ವಂತಾಮಸಂಸ್ವತಃ ॥೭೯॥ನಿರ್ಗುಣಸ್ತ್ವಂನಿರಾಕಾರೋಯದಾಮಾಯಾಗುಣಾನ್ಪ್ರಭೋ॥ಲೀಲಯಾಂಗೀಕರೋಷಿತ್ವಂತದಾವೈರಾಜನಾಮವಾನ್ ॥೮೦॥ ಗುಣಾತ್ಮನೋವಿರಾಜಶ್ಚ ಸತ್ವಾದ್ದೇವಾಬಭೂವಿರೆ ॥ ರಜೋಗುಣಾತ್ಪ್ರಜೇಶಾದ್ಯಾಃಮನ್ಯೋರ್ಭೂತಪತಿಸ್ತವ ॥೮೧॥ ತ್ವಾಮಹಂಮಾಯಯಾಚ್ಛನ್ನಂಲೀಲಯಾಮಾನುಷಾಕೃತಿಂ । ಜಡಬುದ್ಧಿರ್ಜ

ಹಿ-ಕಾಪಾಡುಕಾಪಾಡು॥೭೬॥ ರಾಮ-ರಾಮಚಂದ್ರನೇ, ನಿಖಿಲಂ-ಸಮಸ್ತವಾದ, ಜಗತ್-ಪ್ರಪಂಚವನ್ನು, ಸೃಜತಾ-ಸೃಷ್ಟಿಮಾಡುವವನಾದ, ತೇ-ನಿನ್ನಿಂದ, ಅಹಂ-ನಾನು, ಜಡಃ-ತಮೋಗುಣದಿಂದ ಮುಚ್ಚಲ್ಪಟ್ಟಜ್ಞಾನವುಳ್ಳವನಾಗಿ, ಸೃಷ್ಟಃ-ಉಂಟುಮಾಡಲ್ಪಟ್ಟವನಾಗಿದ್ದೇನೆ,ದೇವನಿರ್ಮಿತಂ,-ದೇವ-ಭಗವಂತನಾದ ನಿನ್ನಿಂದ, ನಿರ್ಮಿತಂ-ಉಂಟುಮಾಡಲ್ಪಟ್ಟ, ಸ್ವಭಾವಂ-ನನ್ನ ಜಡತ್ವವನ್ನು, ಅನ್ಯಥಾಕರ್ತುಂ-ಬದಲಾಯಿಸುವದಕ್ಕೆ, ಕಃ-ಯಾರು, ಶಕ್ತಃ-ಸಮರ್ಥನಾದಾನು॥೭೭॥ ಏತಾನಿ-ಈ, ಸ್ಥೂಲಾನಿ-ಸ್ಥೂಲಗಳಾದ, ಪಂಚಭೂತಾನಿ-ಭೂಜಲಾಗ್ನಿವಾಯ್ವಾಕಾಶಗಳೆಂಬ ಐದುಭೂತಗಳು, ಸ್ವಭಾವತಃ-ಇರುವರೀತಿಯಿಂದಲೇ, ಜಡಾನಿ-ತಮೋಗುಣಪ್ರಧಾನದ ಅಹಂಕಾರದಿಂದ ಆಛ್ಛಾದಿತವಾಗಿರುವವುಗಳನ್ನಾಗಿಯೆ, ಭವತಾ-ನಿನ್ನಿಂದ, ಸೃಷ್ಟಾನಿ-ಸೃಷ್ಟಿಸಲ್ಪಟ್ಟಿವೆ, ತ್ವದಾಜ್ಞಾಂ-ನಿನ್ನ ಕಟ್ಟಳೆಯನ್ನು, ನಲಂಘಯಂತಿ-ಅತಿಕ್ರಮಿಸೂವಿಲ್ಲ॥೭೮॥ ರಾಮ-ರಾಮಚಂದ್ರನೆ, ತಾಮಸಾತ್-ತಮೋಗುಣಪ್ರಧಾನವಾದ, ಅಹಮಃ-ಅಹಂಕಾರದಿಂದ, ಭೂತಾನಿ-ಪಂಚಭೂತಗಳು, ಪ್ರಭವಂತಿಹಿ-ಹುಟ್ಟುತ್ತಲಿವೆ, ಕಾರಣಾನುಗಮಾತ್-ಕಾರಣ-ಕಾರ್ಯಹೇತುವಾದ ಕಾರಣಗಳ ಗುಣಗಳೇ, ಅನುಗಮಾತ್-ಕಾರ್ಯಗುಣಪರಿಣಾಮವಾಗುವದ್ದರಿಂದ, ಸ್ವತಃ-ಸ್ವಭಾವದಿಂದ, ತಾಮಸಂ-ತಮೋಗುಣಾತ್ಮಕವಾದ,ಜಡತ್ವಂ-ಅಛಾದಿತಜ್ಞಾನತನವು, ತೇಷಾಂ-ಪಂಚಭೂತಗಳಿಗೆ, (ಸಂಭವತಿ-ಸಂಭಾವಿಸಿಥೆ)॥೭೯॥ತ್ವಂ-ನೀನು, ನಿರ್ಗುಣಃ-ಗುಣಶೂನ್ಯನು, ನಿರಾಕಾರಃ-ರೂಪವಿಲ್ಲದವನು,(ಆದಾಗ್ಯೂ) ಯದಾ-ಯಾವಾಗ, ಮಾಯಾಗುಣಾನ್-ಮಾಯಾಗುಣಗಳನ್ನು, ಪ್ರಭೋ-ರಾಮಚಂದ್ರನೆ, ಲೀಲಯಾ-ವಿಲಾಸದಿಂದ, ಅಂಗೀಕರೋಷಿ-ಅನುಸರಿಸುತ್ತೀಯೋ,ತದಾ-ಆಗ, ವೈರಾಜನಾಮವಾನ್-ವಿರಾಟ್ಪುರುಷನೆಂಬ ಹೆಸರುಳ್ಳವನು,(ಭವಸಿ-ಆಗುತ್ತೀ)॥೮೦॥ಗುಣಾತ್ಮನಃ-ಸತ್ವರಜಸ್ತಮೋಗುಣಾತ್ಮಕನಾದ, ವಿರಾಜಶ್ಚ-ವಿರಾಟ್ಪುರುಷನ, ಸತ್ವಾತ್-ಸತ್ವಗುಣದಿಂದ, ದೇವಾಃ-ಸನಕಾದಿಗಳು, ರಜೋಗುಣಾತ್-ರಜೋಗುಣದಿಂದ, ಪ್ರಜೇಶಾದ್ಯಾಃ-ಇಂದ್ರಾದಿದೇವತೆಗಳು ಮನ್ವಾದಿಗಳು, ತವ-ನಿನ್ನ-ಮನ್ಯೋಃ-ಕೋಪರೂಪವಾದ, ತಮೋಗುಣದಿಂದ, ಭೂತಪತಿಃ-ರುದ್ರನು, ಬಭೂವಿರೆ, ಉಂಟಾದರು, ॥೮೧॥ ಜಡಬುದ್ಧಿಃ-ತಮೋಗುಣದಿಂದ ಮುಚ್ಚಿರುವ

ಡೊಮೂರ್ಖಃಕಥಂಜಾನಾಮಿನಿರ್ಗುಣಂ ॥೮೧॥ ದಂಡಯೆಮಹಿಮೊಭರ್ತಾಣಾಂಸನ್ಮಾರ್ಗಪ್ರಾಪಕಃಪ್ರಭೋ । ಭೂತಾನಾಮಮರಶ್ರೇಷ್ಠ ಪಶೂನಾಂಲಗುಡೊಯಥಾ ॥೮೨॥ಶರಣಂತೆಪ್ರಜಾಮೀಶಶರಣ್ಯಂಭಕ್ತವತ್ಸಲ। ಅಭಯಂದೇಹಿಮೇರಾಮ ಲಂಕಾಮಾರ್ಗಂದದಾಮಿತೆ ॥೮೪॥ ರಾಮಉವಾಚ ॥೮೫॥ ಅಮೋಘೊಯಂಮಹಾಬಾಣಃಕಸ್ಮಿನ್‌ದೇಶೆನಿಪಾತ್ಯತಾಂ। ಲಕ್ಷ್ಯಂದರ್ಶಯಮೆಶೀಘ್ರಂಬಾಣಸ್ಯಾಮೋಘಪಾತಿನಃ ॥೮೬॥ರಾಮಸ್ಯವಚನಂಶ್ರುತ್ವಾಕರೆದೃಷ್ಟ್ವಾಮಹಾಶರಂ ।ಮಹೋದಧಿರ್ಮಹಾತೇಜಾರಾಘವಂವಾಕ್ಯಮಬ್ರವೀತ ॥೮೭॥ ರಾಮೊತ್ತರಪ್ರದೇಶೆತುದ್ರುಮಕುಲ್ಯ ಇತಿಶ್ರುತಃ ।ಪ್ರದೇಶಸ್ತತ್ರಬಹವಃಪಾಪಾತ್ಮಾನೋದಿವಾನಿಶಂ ॥೮೮॥ ಬಾಧಂತೆಪಾಂರಘುಶ್ರೇಷ್ಠ ತತ್ರತೆಪಾತ್ಯತಾಂಶರಃ।ರಾಮೇಣಸೃಷ್ಟೊಬಾಣಸ್ತುಕ್ಷಣಾದಾಭೀ

ಜ್ಞಾನವಿಲ್ಲವನು, ಜಡಃ-ಜಲರೂಪವಾಗಿರುವದ್ದರಿಂದ, ಆ ಕೃತಿಯುಜಡನು, ಮೂರ್ಖ-ಮೂಢನೂ ಆದ, ಅಹಂ-ನಾನು, ಮಾಯಯಾ- ಮಾಯೆಯಿಂದ, ಛನ್ನಂ-ಆಚ್ಛಾದಿತನಾದ, ಲೀಲಯಾ-ವಿಲಾಸದಿಂದ, ಮಾನುಷಾಕೃತಿಂ-ಮನುಷ್ಯನರೂಪವುಳ್ಳವನಾದ, ತ್ವಾಂ-ನಿನ್ನನ್ನು, ನಿರ್ಗುಣಂ-ಸರ್ವನಿಯಂತೃವಾದಪರಮೇಶ್ವರನೆಂಬದಾಗಿ, ಕಥಂ-ಹ್ಯಾಗೆ, ಜಾನಾಮಿ-ತಿಳಿದವನಾದೇನು, ॥೮೧॥ ಅಮರಶ್ರೇಷ್ಠ-ದೇವಶ್ರೇಷ್ಠನಾದ, ಪ್ರಭೋ-ಸಮರ್ಥನಾದ, ರಾಮಚಂದ್ರನೇ, ಪಶೂನಾಂ-ಹಸುವು ಎಮ್ಮೆ ಮುಂತಾದವುಗಳಿಗೆ, ಯಥಾ-ಹ್ಯಾಗೆ, ಲಗುಡಃ-ಕತ್ತಿಗೆಕಟ್ಟಿದಮರದತುಂಡು, ಸನ್ಮಾರ್ಗಪ್ರಾಪಕಃ-ಒಳ್ಳೆಮಾರ್ಗವನ್ನು ಹೊಂದಿಸುವದಾಗಿರುವದೊ, (ಹಾಗೆ) ಮೂಢಾನಾಂ ಅವಿವೇಕಿಗಳಾದ, ಭೂತಾನಾಂ-ಭೂತಗಳಿಗೆ (ಪ್ರಾಣಿಗಳಿಗೆ) ದಂಡಯೆಮ-ಶಿಕ್ಷೆಯೇ, ಸನ್ಮಾರ್ಗಪ್ರಾಪಕಃ-ಯೋಗ್ಯವಾದ ಜ್ಞಾನಮಾರ್ಗವನ್ನು ಹೊಂದಿಸುವಂಥಾದ್ದಾಗುವದು, ॥೮೨॥ ಭಕ್ತವತ್ಸಲ-ಭಕ್ತರಲ್ಲಿ ವಿಶ್ವಾಸವುಳ್ಳವನಾದ, ಈಶ-ಸ್ವಾಮಿಯಾದ, ರಾಮ-ರಾಮಚಂದ್ರನೆ, ಶರಣ್ಯಂ-ರಕ್ಷಿಸತಕ್ಕವನಾದ, ತೆ-ನಿನ್ನನ್ನು, ಶರಣಂ-ರಕ್ಷಕನನ್ನಾಗಿ, ಪ್ರಜಾಮಿ-ಹೊಂದಿದ್ದೇನೆ, ಮೆ-ನನಗೆ, ಅಭಯಂ-ಅಭಯವನ್ನು, ದೇಹಿ-ಕೊಡು, ತೆ-ನಿನಗೆ, ಲಂಕಾಮಾರ್ಗಂ-ಲಂಕಾ-ಲಕೆಗೆ-ಹೋಗಬೇಕಾದ, ಮಾರ್ಗಂ ದಾರಿಯನ್ನು, ದದಾಮಿ-ಕೊಡುತ್ತೇನೆ, ॥೮೪॥ ರಾಮಉವಾಚ- ರಾಮಚಂದ್ರನುಹೇಳುತ್ತಲಿದ್ದಾನೆ, ॥೮೫॥ ಅಯಂ-ಈ, ಮಹಾಬಾಣಃ-ಅಸ್ತ್ರಾಭಿಮಂತ್ರಿತವಾದದ್ದರಿಂದ ತೇಜೋಧಿಕವಾಗಿರುವಬಾಣವು, ಅಮೋಘಃ-ಸಂಧಾನಮಾಡಿದಬಳಿಕ ಬಿಡಬೇಕಾದ್ದೇಹೊರ್ತು, ಉಪಸಂಹಾರಾರ್ಹವಲ್ಲ, (ಆದ್ದರಿಂದ) ಕಸ್ಮಿನ್-ದೇಶೆ-ಯಾವ ಪ್ರದೇಶದಲ್ಲಿ, ನಿಪಾತ್ಯತಾಂ-ಬಿಡಲ್ಪಡಲಿ, ಅಮೋಘಪಾತಿನಃ, ಅಮೋಘ-ವ್ಯರ್ಥವಾಗದೆ-ಪಾತಿನಃ-ಬಿಡಬೇಕಾದ, ಬಾಣಸ್ಯ-ಬಾಣಕ್ಕೆ, ಲಕ್ಷ್ಯಂ-ಗುರಿಯಾದದ್ದನ್ನು, ಮೆ-ನನಗೆ, ಶೀಘ್ರಂ-ಬೇಗನೆ, ದರ್ಶಯ-ತೋರಿಸು, ರಾಮಸ್ಯ-ರಾಮಚಂದ್ರನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಮಹಾಶರಂ-ಮಹಾಬಾಣವನ್ನು, ಕರೆ-ಕೈಯಲ್ಲಿ,

ರಸೆಂಡಲಂ ॥೮೯॥ ಹತ್ವಾ ಪ್ರನಃ ಸಮಾಗತ್ಯ ತೂಣೀರೇ ಪೂರ್ವವತ್ಸ್ಥಿತಃ ॥ ತತೋಬ್ರವೀದ್ರಘುಶ್ರೇಷ್ಠಂ ಸಾಗರೋ ವಿನಯಾನ್ವಿತಃ ॥೯೦॥ ಅಸ್ಮಿನ್ಸೇತುಂ ಕರೋತ್ವಸ್ಮಿನ್ನಲೋ ಮೇ ವಿಶ್ವಕರ್ಮಣಃ ॥ ಸುತೋ ಧೀಮಾನ್ಸಮರ್ಥೋಸ್ಮಿನ್ಕಾರ್ಯೇ ಲಬ್ಧವರೋ ಹರಿಃ ॥೯೧॥ ಕೀರ್ತಿಂ ಜಾನಂತು ತೇ ಲೋಕಾಃ ಸರ್ವಲೋಕಮಲಾಪಹಾಂ ॥ ಇತ್ಯುಕ್ತ್ವಾ ರಾಘವಂ ನತ್ವಾ ಯಯೌ ಸಿಂಧುರದೃಶ್ಯತಾಂ ॥ ತತೋ ರಾಮಸ್ತು ಸುಗ್ರೀವಲಕ್ಷ್ಮಣಾಭ್ಯಾಂ ಸಮನ್ವಿತಃ ॥ ನಲಮಾಜ್ಞಾಪಯಚ್ಛೀಘ್ರಂ ವಾನರೈಃ ಸೇತುಬಂಧನೇ ॥೯೩॥ ಕರೊ

ದೃಷ್ಟ್ವಾ-ನೋಡಿ, ಮಹಾತೇಜಾಃ-ಮಹಾತೇಜಸ್ವಿಯಾದ, ಮಹೋದಧಿಃ-ಸಮುದ್ರನು, ರಾಘವಂ-ರಾಮಚಂದ್ರನನ್ನು ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ॥೮೭॥ ರಾಮ-ರಾಮಚಂದ್ರನೇ, ಉತ್ತರಪ್ರದೇಶೇ-ನನ್ನ ತೀರದ ಉತ್ತರದಿಕ್ಕಿನಲ್ಲಿ, ದ್ರುಮಕುಲ್ಯ ಇತಿ-ದ್ರುಮಕುಲ್ಯವೆಂಬ ಹೆಸರಿನಿಂದ, ಖ್ಯಾತಃ-ಪ್ರಸಿದ್ಧವಾದ, ಪ್ರದೇಶಃ-ಸ್ಥಳವು, (ಅಸ್ತಿ-ಇದೆ) ತತ್ರ-ಆ ಸ್ಥಳದಲ್ಲಿ, ಪಾಪಾತ್ಮಾನಃ-ಪಾಪಬುದ್ಧಿಯುಳ್ಳವರಾದ, ಬಹವಃ-ಅನೇಕರಾದ, ಆಭೀರರು, (ಸಂತಿ-ಇರುತ್ತಿರುವವರಾಗಿ) ದಿನಾನಿಶಂ-ರಾತ್ರಿಹಗಲೂ ಕೂಡ, ॥೮೮॥ ಮಾಂ-ನನ್ನನ್ನು, ಬಾಧಂತೇ-ಬಾಧೆಪಡಿಸುತ್ತಲಿದ್ದಾರೆ, ರಾಘುಶ್ರೇಷ್ಠ-ರಾಮಚಂದ್ರನೇ, ತೇರಃ-ನಿನ್ನ ಬಾಣವು, ತತ್ರ-ಅಲ್ಲಿ-ಪಾತ್ಯತಾಂ-ಬಿಡಲ್ಪಡಲಿ, ರಾಮೇಣ, ರಾಮಚಂದ್ರನಿಂದ-ಸೃಷ್ಟಃ, ಬಿಡಲ್ಪಟ್ಟಂಥ-ಬಾಣಃ, ಶರವು-ಕ್ಷಣಾತ್, ನಿಮಿಷದಲ್ಲಿ, ಅಭೀರಮಂಡಲಂ-ಅಭೀರ, ಬ್ಯಾಡರ-ಮಂಡಲಂ-ಸಮೂಹವನ್ನು, ॥೮೯॥ ಹತ್ವಾ-ಕೊಂದು, ಪ್ರನಃ-ತಿರಿಗಿ, ಸಮಾಗತ್ಯ-ಬಂದು, ತೂಣೀರೇ-ಬಾಣಬತ್ತಳಿಕೆಯಲ್ಲಿ, ಪೂರ್ವವತ್-ಎಂದಿನಂತೆ, ಸ್ಥಿತಃ-ಇರುವಂಥಾದ್ದಾಯಿತು, ತತಃ-ಆ ಬಳಿಕ, ಸಾಗರಃ-ಸಮುದ್ರನು, ವಿನಯಾನ್ವಿತಃ-ವಿನಯ-ನಡತೆಯಿಂದ, ಅನ್ವಿತಃ-ಕೂಡಿದವನಾಗಿ, ರಘುಶ್ರೇಷ್ಠ-ರಾಮಚಂದ್ರನನ್ನು ಕುರಿತು, ಅಬ್ರವೀತ್-ಹೇಳಿದನು, ॥೯೦॥ ವಿಶ್ವಕರ್ಮಣಃ-ವಿಶ್ವಕರ್ಮಬ್ರಹ್ಮನಿಗೆ, ಸುತಃ-ಮಗನಾದ, ಧೀಮಾನ್-ಬುದ್ಧಿಶಾಲಿಯಾದ, ಅಸ್ಮಿನ್ಕಾರ್ಯೆ-ಈ ಸೇತುವೆಯನ್ನು ಕಟ್ಟುವ ಕೆಲಸದಲ್ಲಿ, ಲಬ್ಧವರ್ಯ-ಲಬ್ಧ ಹೊಂದಲ್ಪಟ್ಟ, ವರಃ-ತಂದೆಯ ಪ್ರಸಾದವುಳ್ಳವನಾದ, ಸಮರ್ಥಃ-ಸೇತುವೆಯನ್ನು ಕಟ್ಟಲು ಶಕ್ತನಾದ, ನಲಃ-ನಲನೆಂಬ, ಹರಿಃ-ಕಪಿಯು, ಮೇ-ನನ್ನ, ಅಸ್ಮಿನ್-ಈ, ಜಲೆ-ಸಮುದ್ರದ ನೀರಿನ ಮೇಲೆ, ಸೇತುಂ-ಸೇತುವನ್ನು, ಕರೋತು-ಮಾಡಲಿ, ॥೯೧॥ ಸರ್ವ-ಸಮಸ್ತರಾದ, ಲೋಕಜನರ, ಮಲ-ಪಾಪವನ್ನು, ಅಪಹಾಂ ಹೋಗಲಾಡಿಸುವಂಥಾದ್ದಾದ, ತೇ-ನಿನ್ನ, ಕೀರ್ತಿಂ-ಯಶಸ್ಸನ್ನು, ಲೋಕಾಃ-ಜನರು, ಜಾನಂತು-ತಿಳಿಯಲಿ, ಇತ್ಯುಕ್ತ್ವಾ-ಹೀಗೆಹೇಳಿ, ರಾಘವಂ-ರಾಮಚಂದ್ರನನ್ನು ಕುರಿತು, ನತ್ವಾ-ನಮಸ್ಕಾರಮಾಡಿ, ಸಿಂಧುಃ-ಸಮುದ್ರನು, ಅದೃಶ್ಯತಾಂ-ಮರೆಯಾಗಿ, ಯಯೌ-ಹೋದನು, ಅಂದರೆ ಅಂತರ್ಧಾನವಾಗಿ ಹೊರಟುಹೋದನು, ॥೯೨॥ ತತಃ ಆ ಬಳಿಕ, ಸುಗ್ರೀವಲಕ್ಷ್ಮಣಾಭ್ಯಾಂ-ಸುಗ್ರೀವಲಕ್ಷ್ಮಣರಿಂದ, ಸಮನ್ವಿತಃ-ಕೂಡಿದವನಾದ, ರಾಮಃ-ರಾಮಚಂದ್ರನು, ವಾನರೈಃ-ಕಪಿಗಳಿಂದ ಕೂಡಿಕೊಂಡು, ಸೇತುಬಂಧನೇ-ಸೇತುವೆಯನ್ನು ಕಟ್ಟುವವಿಷಯದಲ್ಲಿ, ಶೀಘ್ರಂ-ಬೇಗನೇ, ನಲಂ-ನಲನನ್ನು ಕುರಿತು, ಅಜ್ಞಾಪಯತ್-ಅಪ್ಪಣೆಯನ್ನು ಮಾಡಿದನು ॥೯೩॥ ತತಃ-ಆ ಬಳಿಕ,

ತಿಹೃಷ್ಟಃಪ್ಲವಗೇಂದ್ರಯೂಥಪೋಮಹಾನಗೇಂದ್ರಪ್ರತಿಮೈರ್ಯುತೋನಲಃ । ಬಬಂಧಸೇತುಂಶತಯೋಜನಾಯುತಂಸುವಿಸ್ತೃತಂಪರ್ವತಪಾದಪೈರ್ದೃಢಂ ... ... ... ॥೯೪॥

ಇತಿ ಶ್ರೀಮದಧ್ಯಾತ್ಮ ರಾಮಾಯಣೇ ಉಮಾಮಹೇಶ್ವರಸಂವಾದೇ

—…ಯುದ್ಧಕಾಂಡೇ ತೃತೀಯಃಸರ್ಗಃ.…—

—…*…—

ಅತಿಹೃಷ್ಟಃ-ಸಂತೋಷಚಿತ್ತವುಳ್ಳವನಾದ, ಪ್ಲವಗೇಂದ್ರಯೂಥಪಃ-ಪ್ಲವಗೇಂದ್ರ-ಕಪಿಶ್ರೇಷ್ಠರ, ಯೂಥಪಃ-ಸಮೂಹಕ್ಕೆ ಅಧಿಪತಿಯಾದ, ನಲಃ-ನಲನು, ಮಹಾನಗೇಂದ್ರಪ್ರತಿಮೈಃ-ಮಹಾದೊಡ್ಡದಾದ, ನಗೇಂದ್ರ-ಬೆಟ್ಟಗಳಿಗೆ, ಪ್ರತಿಮೈಃ-ಸಮಾನರಾದ ಕಪಿಗಳಿಂದ, ಯುತಃ-ಕೂಡಿದವನಾಗಿ, ಪರ್ವತ-ಪಾದಪೈಃ- ಪರ್ವತ ಬೆಟ್ಟಗಳಿಂದ, ಪಾದಪೈಃ-ಮರಗಳಿಂದ, ಶತಯೋಜನಾಯುತಂ-ಶತ-ನೂರು, ಯೋಜನ ಗಾವುದದ, ಆಯುತಂ-ಉದ್ದವಾದ, ವಿಸ್ತೃತಂ-ಅಗಲವಾದ, ಸೇತುಂ- ಸೇತುವೆಯನ್ನು, ದೃಢಂ-ಭದ್ರವಾಗಿ, ಬಬಂಧ-ಕಟ್ಟಿದನು. ॥೯೪॥

—…ಇಂತು ಅಧ್ಯಾತ್ಮ ರಾಮಾಯಣದೊಳು ಉಮಾಮಹೇಶ್ವರ ಸಂವಾದದೊಳು ಯುದ್ಧಕಾಂಡದಲ್ಲಿ ಮೂರನೇಸರ್ಗವು …—

ಶ್ರೀಮಹಾದೇವಉವಾಚ ॥೧॥ ಸೇತುಮಾರಭಮಾಣಸ್ತು ತತ್ರರಾಮೇಶ್ವರಂಶಿವಂ । ಸಂಸ್ಥಾಪ್ಯಪೂಜಯಿತ್ವಾಹರಾಮೋ ಲೋಕಹಿತಾಯಚ ॥೨॥ ಪ್ರಣಮೇತ್ಸೇತುಬಂಧಂಯೋದೃಷ್ಟ್ವಾರಾಮೇಶ್ವರಂಶಿವಂ । ಬ್ರಹ್ಮಹತ್ಯಾದಿಪಾಪೇಭ್ಯೋಮುಚ್ಯತೇ

ಶ್ರೀಮಹಾದೇವ ಉವಾಚ॥ ಈಶ್ವರನು ಹೇಳುತ್ತಲಿದ್ದಾನೆ. ॥೧॥ ರಾಮಃ-ರಾಮಚಂದ್ರನು, ಸೇತುಂ-ಸೇತುವೆಯನ್ನು ಕಟ್ಟುವ ಕೆಲಸವನ್ನು, ಆರಭಮಾಣಃ-ಪ್ರಾರಂಭಿಸುತ್ತಿರುವವನಾಗಿ, ತತ್ರ-ಸೇತುವಿನ ಬುಡದಲ್ಲಿ, ಲೋಕಹಿತಾಯ, ಲೋಕ-ಜನರಿಗೆ, ಹಿತಾಯ-ಪುಣ್ಯಸಂಪಾದಕವಾಗಿ ಕ್ಷೇಮವಾಗುವದಕ್ಕೆ, ರಾಮೇಶ್ವರಂ-ರಾಮೇಶ್ವರನೆಂಬಹೆಸರುಳ್ಳ, ಶಿವಂ-ಶಿವಲಿಂಗವನ್ನು, ಸಂಸ್ಥಾಪ್ಯ-ಪ್ರತಿಷ್ಠೆ ಮಾಡಿ, ಪೂಜಯಿತ್ವಾ-ಪೂಜೆಯನ್ನು ಮಾಡಿಸಿ, ಆಹ-ಹೇಳಿದವನಾದನು, ॥೨॥ ಯಃ-ಯಾವನು, ಸೇತುಬಂಧಂ-ಸೇತು-ಸೇತುವಿನ, ಬಂಧಂ-ಕಟ್ಟಡವನ್ನು, ರಾಮೇಶ್ವರಂ-ರಾಮೇಶ್ವರನೆಂಬ, ಶಿವಂ-ಈಶ್ವರಲಿಂಗವನ್ನು, ದೃಷ್ಟ್ವಾ-ನೋಡಿ, ಪ್ರಣಮೇತ್-ನಮಸ್ಕಾರಮಾಡುತ್ತಾ

ಮದನುಗ್ರಹಾತ ॥೩॥ ಸೇತುಬಂಧೇನರಃಸ್ನಾತ್ವಾದೃಷ್ಟ್ವಾ ರಾಮೇಶ್ವರಂಹರಂ। ಸಂಕಲ್ಪನಿಯತೋಭೂತ್ವಾಗತ್ವಾವಾರಾಣಸೀಂನರಃ ॥೪॥ ಆನೀಯ್ಯಗಂಗಾಸಲಿಲಂರಾಮೇಶಮಭಿಷಿಚ್ಯಚ। ಸಮುದ್ರೇಕ್ಷಿಪ್ತತದ್ಭಾರೋಬ್ರಹ್ಮಪ್ರಾಪ್ನೋತ್ಯಸಂಶಯಂ ॥೫॥ ಕೃತಾನಿಪ್ರಥಮೇನಾಹ್ನಾಯೋಜನಾನಿಚತುರ್ದಶ । ದ್ವಿತೀಯೇನತಥಾಚಾಹ್ನಾಯೋಜನಾನಿತುವಿಂಶತಿಃ ॥೬॥ ತೃತೀಯೇನತಥಾಚಾಹ್ನಾಯೋಜನಾನ್ಯೇಕವಿಂಶತಿಃ । ಚತುರ್ಥೇನತಥಾಚಾಹ್ನಾದ್ವಾವಿಂಶತಿರಿತಿಶ್ರುತಂ ॥೭॥ ಪಂಚಮೇನತ್ರಯೋವಿಂಶದ್ಯೋಜನಾನಿಸಮಂತತಃ । ಬಬಂಧಸಾಗರೇಸೇತುಂನಲೋವಾನರಸತ್ತಮಃ ॥೮॥ ತೇನೈವಜಗ್ಮುಃಕಪಯೋ



ನೋ, (ಅವನು) ಮದನುಗ್ರಹಾತ್-ನನ್ನ ಅನುಗ್ರಹದಿಂದ, ಬ್ರಹ್ಮಹತ್ಯಾದಿ ಪಾಪೇಭ್ಯಃ- ಬ್ರಹ್ಮಹತ್ಯೆ-ಬ್ರಾಹ್ಮಣಹತ್ಯೆಯೇ, ಆದಿ-ಮೊದಲಾದ, ಪಾಪೇಭ್ಯಃ-ಪಾತಕಗಳಿಂದಲೆಯಿಂದ, ಮುಚ್ಯತೆ-ಬಿಡಲ್ಪಡುತ್ತಾನೆ, ॥೩॥ಸೇತುಬಂಧೇ-ಸೇತುವನ್ನು ಕಟ್ಟಿದಸ್ಥಳದಲ್ಲಿ, ನರಃ-ಮನುಷ್ಯನು, ಸ್ನಾತ್ವಾ-ಸ್ನಾನಮಾಡಿ, ರಾಮೇಶ್ವರಂ-ರಾಮೇಶ್ವರನೆಂಬ ಹೆಸರುಳ್ಳ, ಹರಂ-ಈಶ್ವರಲಿಂಗವನ್ನು, ದೃಷ್ಟ್ವಾ-ನೋಡಿ, ಸಂಕಲ್ಪನಿಯಮಿತಃ-ಸಂಕಲ್ಪನಿಯಮಯುಕ್ತನಾಗಿ, ಭೂತ್ವಾ-ಆಗಿ, ನರಃ-ಮನುಷ್ಯನು, ವಾರಾಣಸೀಂ-ಕಾಶಿಯನ್ನು ಕುರಿತು ಗತ್ವಾ-ಹೋಗಿ, ॥೪॥ ಗಂಗಾಸಲಿಲಂ-ಗಂಗಾನದಿಯತೀರ್ಥವನ್ನು, ಆನೀಯ್ಯ-ತಂದು, ರಾಮೇಶಂ-ರಾಮೇಶ್ವರನನ್ನು ಕುರಿತು, ಅಭಿಷಿಚ್ಯ-ಅಭಿಷೇಕಮಾಡಿ,ಸಮುದ್ರ-ಸಾಗರದಲ್ಲಿ, ಕ್ಷಿಪ್ತತದ್ಭಾರಃ- ಕ್ಷಿಪ್ತ-ಹಾಕಲ್ಪಟ್ಟ, ತದ್ಭಾರಃ- ಗಂಗೆಯನ್ನು ತಂದ ಪಾತ್ರೆಮುಂತಾದವಸ್ತುಗಳುಳ್ಳವನಾದರೆ, ಬ್ರಹ್ಮ-ಬ್ರಹ್ಮಸಾಯುಜ್ಯವನ್ನು, ಅಸಂಶಯಂ-ಸಂದೇಹವಿಲ್ಲದೇ, ಪ್ರಾಪ್ನೋತಿ-ಹೊಂದುತ್ತಲಿದ್ದಾನೆ, ॥೫॥ಪ್ರಥಮೇನ-ಮೊದಲನೇದಾದ, ಅಹ್ನಾ-ದಿನದಲ್ಲಿ, ಚತುರ್ದಶ-ಹದಿನಾಲ್ಕು, ಯೋಜನಾನಿ-ಗಾವುದಗಳು, ಕೃತಾನಿ-ಸೇತುಯುಕ್ತಗಳಾಗಿಮಾಡಲ್ಪಟ್ಟವು, ದ್ವಿತೀಯೇನ-ಎರಡನೇದಾದ, ಅಹ್ನಾ- ದಿನದಲ್ಲಿ, ವಿಂಶತಿಃ- ಯೋಜನಾನಿ, ಇಪ್ಪತ್ತುಯೋಜನಗಳ ವರಿಗೂ ಸೇತುವೆಯುಕಟ್ಟಲ್ಪಟ್ಟಿತ್ತು, ॥೬॥ತೃತೀಯೇನ-ಮೂರನೆದಾದ, ಅಹ್ನಾ-ದಿನದಲ್ಲಿ, ಏಕವಿಂಶತಿಃ-ಯೋಜನಾನಿ-ಇಪ್ಪತ್ತೊಂದು ಯೋಜನಗಳವರಿಗೂ ಸೇತುವೆಯು ಕಟ್ಟಲ್ಪಟ್ಟಿತ್ತು,ಚತುರ್ಥೇನ-ನಾಲ್ಕನೆ, ಅಹ್ನಾ-ದಿನದಲ್ಲಿ, ದ್ವಾವಿಂಶತಿಃ-ಇಪ್ಪತ್ತೆರಡುಯೋಜನ ವರಿಗೆ ಸೇತುವೆಯುಕಟ್ಟಲ್ಪಟ್ಟಿತೆಂದು,ಶ್ರುತಂ-ಪ್ರಸಿದ್ಧವಾಯಿತು,॥೭॥ಪಂಚಮೇನ-ಅಯಿದನೇ ದಿನದಲ್ಲಿ, ತ್ರಯೋವಿಂಶತ್-ಯೋಜನಾನಿ-ಇಪ್ಪತ್ತುಮೂರು ಯೋಜನಗಳವರಿಗೂ, ಸಮಂತತಃ-ಸುತ್ತಲೂ, ಸೇತುವೆಯುಕಟ್ಟಲ್ಪಟ್ಟಿತು,ವಾನರಸತ್ತಮಃ-ಕಪಿಶ್ರೇಷ್ಠನಾದ, ನಲಃ-ನಲನು, ಸಾಗರೇ-ಸಮುದ್ರದಲ್ಲಿ, ಸೇತುಂ-ಸೇತುವನ್ನು, ಬಬಂಧ-ಸಂಪೂರ್ಣವಾಗಿ ಕಟ್ಟಿದನು, ॥೮॥ ಕಪಯಃ-ಕೋಡುಗಗಳು, ತೇನೈವ-ಆ ಸೇತುವೆಯಿಂದಲೇ, ಯೋಜನಾನಾಂಶತಂ-ನೂರುಯೋಜನಗಳನ್ನು, ದ್ರುತಂ-ಜಾಗ್ರತೆಯಾಗಿ, ಜಗ್ಮುಃ-ದಾಟಿಹೋದರು, ಅಸಂಖ್ಯಾತಾಃ-ಲೆಖ್ಖವಿಲ್ಲದ, ಪ್ಲವಗೋತ್ತಮಾಃ ಕಪಿಶ್ರೇಷ್ಠರು

ಯೋಜನಾನಾಂಶತೆಂದ್ರುತಂ । ಅಸಂಖ್ಯಾತಾಸ್ಸುವೇಲಾದ್ರಿಂರುರುಧುಃಪ್ಲವಗೋತ್ತಮಾಃ ॥೯॥
ಆರುಹ್ಯಮಾರುತಿಂರಾಮೋಲಕ್ಷ್ಮಣೋಪ್ಯಂಗದಂತಥಾ । ದಿದೃಕ್ಷುಃರಾಘವೋಲಂಕಾಮಾರುರೋಹಾಚಲಂಮಹತ್ ॥೧೦॥
ದೃಷ್ಟ್ವಾಲಂಕಾಂಸುವಿಸ್ತೀರ್ಣಾಂನಾನಾಚಿತ್ರಧ್ವಜಾಕುಲಾಂ।ಚಿತ್ರಪ್ರಾಸಾದಸಂಬಾಧಾಂಸ್ವರ್ಣಪ್ರಾಕಾರತೋರಣಾಂ।೧೧॥
ಪರಿಖಾಭಿಃಶತಘ್ನೀಭಿಃಸಂಕ್ರಮೈಶ್ಚವಿರಾಜಿತಾಂ । ಪ್ರಾಸಾದೋಪರಿವಿಸ್ತೀರ್ಣಪ್ರದೇಶೆದಶಕಂಧರಃ ॥೧೨॥ಮಂತ್ರಿಭಿಸ್ಸಹಿ
ತೋವೀರೈಃಕಿರೀಟದಶಕೋಜ್ವಲಃ । ನೀಲಾದ್ರಿಶಿಖರಾಕಾರಃಕಾಲಮೇಘಸಮಪ್ರಭಃ ॥೧೩॥ರತ್ನದಂಡೈಃಸಿತಛತ್ರೈರ

ಸುವೇಲಾದ್ರಿಂ-ಸುವೇಲವೆಂಬ ಪರ್ವತವನ್ನು, ರುರುಧುಃ-ಅಡ್ಡಗಿಸಿದರು, ॥೯॥ ರಾಮಃ-ರಾಮಚಂದ್ರನು, ಮಾರುತಿಂ-ಆಂಜನೇಯನನ್ನು, ಲಕ್ಷ್ಮಣಃ-ಲಕ್ಷ್ಮಣನು, ಅಂಗದನನ್ನು, ತಥಾ-ಹಾಗೆ, ಆರುಹ್ಯ-ಏರಿ, ರಾಘವಃ-ರಾಮಚಂದ್ರನು, ಲಂಕಾಂ-ಲಂಕಾಪಟ್ಟಣವನ್ನು, ದಿದೃಕ್ಷುಃ-ನೋಡಲಿಚ್ಛೈಯುಳ್ಳವನಾಗಿ, ಮಹತ್-ದೊಡ್ಡದಾದ, ಅಚಲಂ-ಸುವೇಲಪರ್ವತವನ್ನು, ಆರುರೋಹ-ಹತ್ತಿದನು, ॥ ಮಹಚ್ಛಬ್ದಕ್ಕೆನಪುಂಸಕವಾಗಿ ಪ್ರಯೋಗವಾಗಿರುವದು ಆರ್ಷವು ॥೧೦॥ ಸುವಿಸ್ತೀರ್ಣಾಂ-ಅತ್ಯಂತವಿಸ್ತಾರವಾಗಿರುವ, ನಾನಾಚಿತ್ರಧ್ವಜಾಕುಲಾಂ-ನಾನಾ ಬಗೆಬಗೆಯಾದ, ಚಿತ್ರ-ಆಶ್ಚರ್ಯಕರವಾದ, ಧ್ವಜಾಕುಲಾಂ-ಧ್ವಜಗಳಿಂದ ಕೂಡಿರುವ, ಚಿತ್ರಪ್ರಾಸಾದಸಂಬಾಧಾಂ- ಚಿತ್ರ-ಅದ್ಭುತವಾದ, ಪ್ರಾಸಾದ-ಸೌಧಗಳಿಂದಲೂ, ಮತ್ತು ದೇವಾಲಯಗಳಿಂದಲೂ, ಸಂಬಾಧಾಂ-ಸೇರಿರುವ, ಸ್ವರ್ಣಪ್ರಾಕಾರತೋರಣಾಂ-ಸ್ವರ್ಣ-ಭಂಗಾರಮಯವಾದ, ಪ್ರಾಕಾರ-ಕೋಟೆಯುಗೋಡೆಯು, ತೋರಣಾಂ-ಪುರದ್ವಾರವೂ ಉಳ್ಳ, ॥೧೧॥ ಪರಿಖಾಭಿಃ- ಅಗಳ್ತೆಗಳಿಂದಲೂ, ಶತಘ್ನೀಭಿಃ-ಪಿರಂಗಿಗಳಿಂದಲೂ, ಸಂಕ್ರಮೈಃ-ಬುರುಜುಗಳಿಂದಲೂ, ವಿರಾಜಿತಾಂ-ಪ್ರಕಾಶಿಸುತ್ತಿರುವ, ಲಂಕಾಂ-ಲಂಕಾಪಟ್ಟಣವನ್ನು, ದೃಷ್ಟ್ವಾ-ನೋಡಿ, (ಆ ದಿನದಲ್ಲಿ-ಸುವೇಲಪರ್ವತದಲ್ಲಿ ವಾಸಮಾಡಲು, ರಾಮಚಂದ್ರನು ಅಪ್ಪಣೆಕೊಟ್ಟವನಾದನು) ಪ್ರಾಸಾದೋಪರಿ-ಉಪ್ಪರಿಗೆಯಮೇಲೆ, ವಿಸ್ತೀರ್ಣಪ್ರದೇಶೆ-ವಿಸ್ತಾರವಾದ ಸ್ಥಳದೊಳಗೆ, (ಆಸೀನಃ-ಕೂತಿರುವನಾದ,) ದಶಕಂಧರಃ- ಹತ್ತು ತಲೆಗಳುಳ್ಳ ರಾವಣನು, ॥೧೨॥ವೀರೈಃ-ಶೂರರಾದ, ಮಂತ್ರಿಭಿಃ-ಮಂತ್ರಿಗಳಿಂದ, ಸಹಿತಃ-ಕೂಡಿದವನಾಗಿ, ಕಿರೀಟದಶಕೋಜ್ವಲಃ-ಕಿರೀಟದಶಕ- ಹತ್ತು ಕಿರೀಟಗಳಿಂದ, ಉಜ್ವಲಃ-ಪ್ರಕಾಶಮಾನನಾಗಿ, ನೀಲಾದ್ರಿಶಿಖರಾಕಾರಃ-ನೀಲ-ನೀಲಬಣ್ಣವಾದ, ಅದ್ರಿ-ಪರ್ವತದ, ಶಿಖರ-ಶೃಂಗದಂತೆ, ಆಕಾರಃ-ಆಕೃತಿಯುಳ್ಳವನಾಗಿ, ಕಾಲಮೇಘಸಮಪ್ರಭಃ- ಕಾಲಮೇಘ-ವರ್ಷಾಕಾಲದಮುಗಿಲಿಗೆ, ಸಮ-ಸರಿಯಾದ, ಪ್ರಭಃ-ಕಾಂತಿ ಯುಳ್ಳವನಾಗಿ ॥೧೩॥ ರತ್ನ-ರತ್ನಗಳಿಂದ ಮಾಡಲ್ಪಟ್ಟ, ದಂಡೈಃ-ನಾಳಗಳುಳ್ಳ, ಸಿತಛತ್ರೈಃ-ಶ್ವೇತಛತ್ರಗಳಿಂದಲೂ, ಅನ್ಯೈಃ-ಅನೇಕಗಳಾದ, ರಾಜಬಿರುದುಗಳಿಂದಲೂ, ಪರಿಶೋಭಿತಃ-ಅಲಂಕೃತನಾಗಿ, (ಇದ್ದನು) ಏತಸ್ಮಿನ್ನಂತರೆ-ಈ ಮಧ್ಯದಲ್ಲಿ, ಬದ್ಧಃ-ಕಪಿಗಳಿ

ನೆಕ್ಯೈಪ್ಪರಿಶೋಭಿತಃ। ಏತಸ್ಮಿನ್ನಂತರೆಬದ್ಧೋ ಮುಕ್ತೋ ರಾಮೇಣವೈಶುಕಃ॥೧೪॥ವಾನರೈಸ್ತಾಡಿತಸ್ಸಮ್ಯಗ್ದಶಾನನಮುಪಾಗತಃ॥ಪ್ರಹಸನ್ರಾವಣಃಪ್ರಾಹಪೀಡಿತಃಕಿಂಪರೈಶ್ಶುಕ ॥ ರಾವಣಸ್ಯವಚಶ್ರುತ್ವಾಶುಕೋವಚನಮಬ್ರವೀತ್। ಸಾಗರಸ್ಯೋತ್ತರೆತೀರೆಬ್ರುವಂತೆವಚನಂಯಥಾ ॥೧೬॥ ತತಉತ್ಪ್ಲುತ್ಯಕಪಯೋಗೃಹಿತ್ವಾಮಾಂಕ್ಷಣಾತ್ತತಃ। ಮುಷ್ಟಿಭಿರ್ನಖದಂತೈಶ್ಚಹಂತುಂಲೋಪ್ತುಂಪ್ರಚಕ್ರಮುಃ॥೧೭॥ತತೋಮಾಂರಾಮರಕ್ಷೇತಿಕ್ರೋಶಂತಂರಘುಪುಂಗವಃ। ವಿಸೃಜ್ಯತಾಮಿತಿಪ್ರಾಹವಿಸೃಷ್ಟೋಹಂಕಪೀಶ್ವರೈಃ ॥೧೮॥ ತತೋಹಮಾಗತೋಭೀತ್ಯಾದೃಷ್ಟ್ವಾತದ್ವಾನರಂಬಲಂ॥೧೯॥ ರಾಕ್ಷಸಾನಾಂಬಲೌಘಸ್ಯವಾನರೇಂದ್ರಬಲಸ್ಯಚ । ನೆತಯೋರ್ವಿದ್ಯತೆಸಂಧಿರ್ದೇವದಾನವಯೋರಿವ ॥೨೦॥ಪುರಾಪ್ರಾಕಾರಮಾಯಾಂತಿಕ್ಷಿಪ್ರಮೇಕತರಂಕುರು।

ಬಂಧದಲ್ಲಿ ಇರಸಲ್ಪಟ್ಟವನಾಗಿದ್ದ, ಶುಕಃ-ಶುಕನೆಂಬ ರಾಕ್ಷಸನು, ರಾಮೇಣ-ರಾಮಚಂದ್ರನಿಂದ, ಮುಕ್ತಃ-ಬಿಡಿಸಲ್ಪಟ್ಟವನಾದನು ॥೧೪॥ ಸಮ್ಯಕ್-ಚನ್ನಾಗಿ, ವಾನರೈಃ-ಕಪಿಗಳಿಂದ, ತಾಡಿತಃ-ಹೊಡೆಯಲ್ಪಟ್ಟವನಾದ ಶುಕನು, ದಶಾನನಂ-ರಾವಣನನ್ನು ಕುರಿತು, ಉಪಾಗತಃ-ಬಂದವನಾದನು, ಶುಕ-ಎಲೈ ಶುಕನೆ, ಪರೈಃ-ಶತ್ರುಗಳಿಂದ, ಪೀಡಿತಃಕಿಂ-ಬಾಧೆಯನ್ನು ಹೊಂದಿದವನಾದೆಯೊ ಎಂಬದಾಗಿ, ರಾವಣಃ-ರಾವಣನು, ಪ್ರಹಸನ್-ನಗುತ್ತಿರುವವನಾಗಿ, ಪ್ರಾಹ-ಹೇಳಿದನು. ॥೧೫॥ ರಾವಣಸ್ಯ-ರಾವಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಶುಕಃ-ಶುಕನು, ವಚನಂ-ಮಾತನ್ನು, ಅಬ್ರವೀತ್-ಹೇಳಿದನು, ಯಥಾ-ಹ್ಯಾಗೆ, ತೆ-ನಿನ್ನಿಂದ, ವಚನಂ-ಮಾತು ಹೇಳಲ್ಪಟ್ಟಿತ್ತೋ ಹಾಗೆ, ಸಾಗರಸ್ಯ-ಸಮುದ್ರದ, ಉತ್ತರೆತೀರೆ-ಉತ್ತರದಡದಲ್ಲಿ, ತೆ-ನಿನ್ನ, ವಚನಂ-ಮಾತನ್ನು, ಅಬ್ರುವಂ-ಹೇಳಿದೆನು ॥೧೬॥ ತತಃ-ನಿನ್ನಮಾತನ್ನು ನಾನುತಿಳುಹಿದಕೂಡಲೇ, ಕಪಯಃ-ಕಪಿಗಳು, ಉತ್ಪ್ಲುತ್ಯ-ಹಾರಿ, ಕ್ಷಣಾತ್-ನಿಮಿಷದಲ್ಲಿ, ಮಾಂ-ನನ್ನನ್ನು, ಗೃಹಿತ್ವಾ-ಹಿಡಿದುಕೊಂಡು, ತತಃ-ಅಮೇಲೆ, ಮುಷ್ಟಿಭಿಃ-ಗುದ್ದುಗಳಿಂದ, ಹಂತುಂ-ಹೊಡೆಯುವದಕ್ಕೂ, ನಖದಂತೈಃ-ನಖ-ಉಗುರುಗಳಿಂದಲೂ, ದಂತೈಃ- ಹಲ್ಲುಗಳಿಂದಲೂ, ಲೋಪ್ತುಂ-ನನ್ನನ್ನು ಕಚ್ಚುವದಕ್ಕೂ, ಅಥವಾ ರೆಕ್ಕೆಗಳನ್ನು ಕೀಳುವದಕ್ಕೂ, ಪ್ರಚಕ್ರಮುಃ-ಉಪಕ್ರಮಿಸಿದನು ॥೧೭॥ ರಘುಪುಂಗವಃ-ರಾಮಚಂದ್ರನು, ತತಃ-ಆ ಬಳಿಕ, ರಾಮ-ರಾಮಚಂದ್ರನೇ, ರಕ್ಷೇತಿ- ಕಾಪಾಡು ಎಂಬದಾಗಿ, ಕ್ರೋಶಂತಂ-ಕೂಗುತ್ತಿರುದ, ಮಾಂ-ನನ್ನನ್ನು ಕುರಿತು. ವಿಸೃಜ್ಯತಾಮಿತಿ-ದೂತನಾಗಿಬಂದಿರುವ ಶುಕರಾಕ್ಷಸನು ಬಿಡಲ್ಪಡಲಿ, ಎಂಬದಾಗಿ, ಪ್ರಾಹ-ಹೇಳಿದನು, ಆ ಬಳಿಕ,) ಕಪೀಶ್ವರೈಃ-ಕಪಿಶ್ರೇಷ್ಠರಿಂದ, ಅಹಂ-ನಾನು, ವಿಸೃಷ್ಟಃ-ಬಿಡಲ್ಪಟ್ಟವನಾದನು. ॥೧೮॥

ಅಹಂ-ನಾನು, ತತಃ-ಆ ಮೇಲೆ, ಭೀತ್ಯಾ-ಭಯದಿಂದ, ತದ್ವಾನರಂ-ಆ ಕಪಿಗಳಸಂಬಂಧವಾದ, ಬಲಂ-ಸೈನ್ಯವನ್ನು, ದೃಷ್ಟ್ವಾ-ನೋಡಿ, ಆಗತಃ-ಬಂದವನಾದೆನು ॥೧೯॥ ರಾಕ್ಷಸಾನಾಂ-ರಾಕ್ಷಸರ, ಬಲೌಘಸ್ಯ-ಸೈನ್ಯಸಮೂಹಕ್ಕೂ, ವಾನರೇಂದ್ರಬಲಸ್ಯಚ - ವಾನರೇಂದ್ರ-ಸುಗ್ರೀವನ, ಬಲಸ್ಯ-ಸೈನ್ಯಕ್ಕೂ, ಸಂಧಿಃ-ಸಮಾಧಾನವು, ದೇವ

ಸೀತಾಂವಾಸ್ಮೈ ಪ್ರಯಚ್ಛಾಶುಯುದ್ಧಂವಾದೀಯತಾಂಪ್ರಭೋ ॥೨೧॥ ಮಾಮಾಹರಾಮಸ್ತ್ವಂಬ್ರೂಹಿರಾವಣಂಮದ್ವಚಃ ಶುಕ । ಯದ್ಬಲಂಚಸಮಾಶ್ರಿತ್ಯಸೀತಾಂಮೇಹೃತವಾನಸಿ ॥೨೨॥ ತದ್ದರ್ಶಯಯಥಾಕಾಮಂಸಸೈನ್ಯಸ್ಸಹಬಾಂಧವಃ।ಶ್ವಃ ಕಾಲೇನಗರೀಂಲಂಕಾಂಸಪ್ರಾಕಾರಾಂಸತೋರಣಾಂ ॥೨೩॥ ರಾಕ್ಷಸಂಚಬಲಂಪಶ್ಯಶರೈರ್ವಿಧ್ವಂಸಿತಂಮಯಾ। ಘೋರಂ ರೋಷಮಹಂಮೋಕ್ಷ್ಯೇಬಲಂಧಾರಯರಾವಣ ॥೨೪॥ ಇತ್ಯುಕ್ತ್ವೋಪರರಾಮಾಥರಾಮಃಕಮಲಲೋಚನಃ । ಏಕಸ್ಥಾನಗತಾಯತ್ರಚತ್ವಾರಃಪುರುಷರ್ಷಭಾಃ ॥೨೫॥ ಶ್ರೀರಾಮೋಲಕ್ಷ್ಮಣಶ್ಚೈವಸುಗ್ರೀವಶ್ಚವಿಭೀಷಣಃ । ಏತಏವಸಮ

ದಾನವನಿಯೊರಿವ-ದೇವಾಸುರರಬಲದಂತೆ, ಏತಯೋಃ-ಕಪಿರಾಕ್ಷಸಬಲಗಳಿಗೆ,ನವಿದ್ಯತೆ-ಸಮಾಧಾನವು ಉಂಟಾಗುವದಿಲ್ಲ,॥೨೦॥ಪ್ರರಾ-ಮುಂಚೆ, ಪ್ರಾಕಾರಂ-ಪ್ರಾಕಾರವನ್ನು ಕುರಿತು, ಆಯಾಂತಿ-ಬರುತ್ತಲಿದ್ದಾರೆ, ಪ್ರಭೋ-ಸ್ವಾಮಿಯಾದ ರಾವಣನೆ, ಸೀತಾಂ-ಸೀತೆಯನ್ನು, ಅಸ್ಮೈ-ರಾಮಚಂದ್ರನಿಗೆ, ಆಶು-ಬೇಗನೆ,ಪ್ರಯಚ್ಛ-ಕೊಡು,ಯುದ್ಧಂವಾ-ಯುದ್ಧವಾದರೂ, ದೀಯತಾಂ-ಕೊಡಲ್ಪಡಲಿ, ಕ್ಷಿಪ್ರಂ-ಅತಿಜಾಗ್ರತೆಯಾಗಿ, ಏಕತರಂ-ಯಾವದ್ದಾದರೂ ಒಂದುಕೆಲಸವನ್ನು, ಕುರು-ಮಾಡು, ॥೨೧॥ ಮಾಂ-ನನ್ನನ್ನು ಕುರಿತು, ರಾಮಃ-ರಾಮಚಂದ್ರನು, ಆಹ-ಹೇಳಿದನು, ಶುಕಃ-ಶುಕನೆ, ತ್ವಂ-ನೀನು, ರಾವಣಂ-ರಾವಣನನ್ನು ಕುರಿತು, ಮದ್ವಚಃ-ನಾನುಹೇಳಿದಮಾತನ್ನು ಬ್ರೂಹಿ-ಹೇಳು, ಯದ್ಬಲಂ-ಯಾವಬಲವನ್ನು, ಸಮಾಶ್ರಿತ್ಯ-ಆಶ್ರಯಿಸಿದವನಾಗಿ,ಮೇ-ನನ್ನ, (ಹೆಂಡತಿಯಾದ) ಸೀತಾಂ-ಸೀತೆಯನ್ನು,ಹೃತವಾನ್-ಅಪಹರಿಸಿದವನು,ಅಸಿ-ಆಗಿದ್ದೀಯೊ, ॥೨೨॥ ಸಸೈನ್ಯಃ-ಸೇನೆಯಿಂದಕೂಡಿದವನಾಗಿ, ಸಹಬಾಂಧವಃ-ಬಂಧುಗಳಿಂದಕೂಡಿದವನಾಗಿ, ಯಥಾಕಾಮಂ-ಇಷ್ಟವಿದ್ದಂತೆ, ತತ್-ಆ ಬಲವನ್ನು, ದರ್ಶಯ-ತೋರಿಸು, ಶ್ವಃ-ಕಾಲೆ-ನಾಳೆಬೆಳಗಿನಕಾಲದಲ್ಲಿ, ಸಪ್ರಾಕಾರಾಂ-ಪ್ರಾಕಾರದಿಂದ, ಕೂಡಿದ, ಸತೋರಣಾಂ-ಪುರದದ್ವಾರಗಳಿಂದಕೂಡಿದ, ಲಂಕಾಂನಗರೀಂ-ಲಂಕಾಪಟ್ಟಣವನ್ನು, ॥೨೩॥ ರಾಕ್ಷಸಂ-ಬಲಂಚ-ರಾಕ್ಷಸಸೈನ್ಯವನ್ನು, ಮಯಾ-ನನ್ನಿಂದ, ಶರೈಃ-ಬಾಣಗಳಿಂದ, ವಿಧ್ವಂಸಿತಂ-ನಾಶಮಾಡಲ್ಪಟ್ಟದ್ದಾಗಿ,ಪಶ್ಯ-ನೋಡು, ಘೋರಂ-ಕ್ರೂರವಾದ, ರೋಷಂ-ಕೋಪವನ್ನು, ಅಹಂ-ನಾನು, ಮೋಕ್ಷ್ಯೇ-ಬಿಡುತ್ತಲಿದ್ದೇನೆ, ರಾವಣ-ರಾವಣನೇ, ಬಲಂ-ಸಾಮರ್ಥ್ಯವನ್ನು, ಧಾರಯ, ಮಹಿಸು, ॥೨೪॥ ಇತ್ಯುಕ್ತ್ವಾ-ಹೀಗೆಹೇಳಿ, ಕಮಲಲೋಚನಃ-ಕಮಲಕ್ಕೆಸರಿಯಾದ ಕಣ್ಣುಗಳುಳ್ಳ, ರಾಮಃ-ರಾಮಚಂದ್ರನು, ಅಥ-ಆಮೇಲೆ, ಉಪರರಾಮ-ಸುಮ್ಮನಾದನು, ಚತ್ವಾರಃ-ನಾಲ್ಕುಮಂದಿಯಾದ, ಪುರುಷರ್ಷಭಾಃ-ಪುರುಷರೊಳಗೆ ಶ್ರೇಷ್ಠರಾದ, ರಾಮ ಲಕ್ಷ್ಮಣ ಸುಗ್ರೀವ ವಿಭೀಷಣರು,ಯತ್ರ-ಯಲ್ಲಿ, ಏಕಸ್ಥಾನಗತಾಃ-ಒಂದೇಕಡೆಯಲ್ಲಿ ಸೇರಿಯಿರುತ್ತಾರೊ ॥೨೫॥ (ತತ್ರ-ಅಲ್ಲಿ) ಶ್ರೀರಾಮಃ-ರಾಮಚಂದ್ರನು, ಲಕ್ಷ್ಮಣಃ-ಲಕ್ಷ್ಮಣನು, ಸುಗ್ರೀವಶ್ಚ-ಸುಗ್ರೀವನು, ವಿಭೀಷಣಶ್ಚ-ವಿಭೀಷಣನೂ,ತೆ-ಪ್ರಸಿದ್ಧರಾದ, ಏತೆಏವ- ಈ ನಾಲ್ಕುಮಂದಿ

ಧರ್ಷಸ್ತೇ ಲಂಕಾಂನಾಶಯಿತುಂಪ್ರಭೋ॥೨೬॥ಉತ್ಪಾಟ್ಯ ಭಸ್ಮೀಕರಣೇಸರ್ವೇತಿಷ್ಠಂತುವಾನರಾಃ। ತಸ್ಯ ಯಾದೃಗ್ಬಲಂದೃಷ್ಟಂ ರೂಪಂಪ್ರಹರಣಾನಿಚ ॥೨೭॥ ವಧಿಷ್ಯತಿಪುರಂಸರ್ವಮೇಕಸ್ತಿಷ್ಠಂತುತೇತ್ರಯಃ। ಪಶ್ಯ ವಾನರಸೇನಾಂತಾಮಸಂಖ್ಯಾತಾಂಪ್ರಪೂರಿತಾಂ ॥೨೮॥ ಗರ್ಜಂತಿವಾನರಸ್ತತ್ರಪಶ್ಯಪರ್ವತಸನ್ನಿಭಾಃ। ನಶಕ್ಯಾಸ್ತೇಗಣಯಿತುಂಪ್ರಾಧಾನ್ಯೇನಬ್ರವೀಮಿತೇ॥೨೯॥ ಏಷಯೋಭಿಮುಖೋಲಂಕಾಂನರ್ದತಿಷ್ಠತಿವಾನರಃ । ಯೂಥಪಾನಾಂಸಹಸ್ರಾಣಾಂಶತೇನಪರಿವಾರಿತಃ ॥೩೦॥ ಸುಗ್ರೀವಸೇನಾಧಿಪತಿರ್ನೀಲೋನಾಮಾಗ್ನಿನಂದನಃ। ಏಷಪರ್ವತಶೃಂಗಾಭಃಪದ್ಮಕಿಂಜಲ್ಕಸನ್ನಿಭಃ॥೩೧॥ಸ್ಫೋಟಯತ್ಯಭಿಸಂರಬ್ಧೋ

ಯೋ, ಪ್ರಭೋ-ರಾವಣನೇ, ಲಂಕಾಂ-ಲಂಕಾಪುರವನ್ನು, ನಾಶಯಿತುಂ-ಹಾಳುಮಾಡುವದಕ್ಕೆ, ಸಮರ್ಥಾಃ-ಶಕ್ತರಾದವರು, ಆಗಿದ್ದಾರೆ, ॥೨೬॥ (ಈ ನಾಲ್ಕುಮಂದಿಯೇ,) ಉತ್ಪಾಟ್ಯ-ಕಿತ್ತು, ಭಸ್ಮೀಕರಣೇ-ಲಂಕೆಯನ್ನು ಬೂದಿಯಾಗಿ ಮಾಡುವದರಲ್ಲಿ, (ಅಲಂ-ಸಾಕು) ಸರ್ವೇ-ಸಮಸ್ತರಾದ, ವಾನರಾಃ-ಕಪಿಗಳು- ತಿಷ್ಠಂತು- ಇರಲಿ ತಸ್ಯ-ಆರಾಮಚಂದ್ರನ, ಬಲಂ-ಸಾಮರ್ಥ್ಯವು, ರೂಪಂ-ಆಕೃತಿಯು, ಪ್ರಹರಣಾನಿಚ-ಆಯುಧಗಳು, ಯಾದೃಕ್-ಯಂಥಾದ್ದೆಂದು, ದೃಷ್ಟಂ-ನೋಡಲ್ಪಟ್ಟಿತೊ, (ಅದನ್ನು ಯೋಚಿಸಿದರೆ,) ॥೨೭॥ ಏಕಃ-ಆ ರಾಮಚಂದ್ರನೊಬ್ಬನೇ, ಸರ್ವಂ-ಸಮಸ್ತವಾದ, ಪುರಂ-ಪಟ್ಟಣವನ್ನು, ವಧಿಷ್ಯತಿ-ಕೊಲ್ಲುತ್ತಾನೆ, ತೇ-ಆ, ತ್ರಯಃ-ಲಕ್ಷ್ಮಣ-ಸುಗ್ರೀವ, ವಿಭೀಷಣರು, ತಿಷ್ಠಂತು-ಹಾಗೇಇರಲಿ, ॥ ಪ್ರಪೂರಿತಾಂ-ಯಲ್ಲಿಯೂ ತುಂಬಿಕೊಂಡಿರುವ, ಅಸಂಖ್ಯಾತಾಂ-ಲೆಖ್ಖವಿಲ್ಲದೇಇರುವ, ತಾಂ-ಆ, ವಾನರಸೇನಾಂ-ಕಪಿಸೇನೆಯನ್ನು, ಪಶ್ಯ-ನೋಡು ॥೨೮॥ ತತ್ರ-ಸೈನ್ಯದೊಳಗೆ, ಪರ್ವತಸನ್ನಿಭಾಃ-ಬೆಟ್ಟಕ್ಕೆ-ಸಮಾನರಾದ,ವಾನರಾಃ-ಕಪಿಗಳು,ಗರ್ಜಂತಿ-ಘರ್ಜನೆಮಾಡುತ್ತಿದ್ದಾರೆ, ಪಶ್ಯ-ನೋಡು, ತೇ-ಆ ಕಪಿಗಳು, ಗಣಯಿತುಂ-ಲೆಖ್ಖಮಾಡುವದಕ್ಕೆ, ನಶಕ್ಯಾಃ-ಅಸಾಧ್ಯರಾಗಿದ್ದಾರೆ, ಪ್ರಾಧಾನ್ಯೇನ-ಮುಖ್ಯತೆಯಿಂದ, ತೇ-ನಿನಗೆ, ಬ್ರವೀಮಿ-ಆಕಪಿಗಳ ಹೆಸರುಗಳನ್ನು, ಹೇಳುತ್ತೇನೆ. ॥೨೯॥ ಯಃ-ಯಾವನು, ಲಂಕಾಂ-ಲಂಕಾಪಟ್ಟಣವನ್ನುಕುರಿತು, ಅಭಿಮುಖಃ-ಎದುರಾಗಿರುವ ಮುಖವುಳ್ಳವನಾಗಿ, ನರ್ದ- ಧ್ವನಿಮಾಡುತ್ತಾಇರುವವನಾಗಿ, ತಿಷ್ಠತಿ-ಇದ್ದಾನೊ, ಏಷ-ಈ, ವಾನರಃ-ಕಪಿಯು, ಯೂಥಪಾನಾಂ-ಕಪಿಸಮೂಹಗಳಿಗೆ, ಧೊರೆಗಳಾದ, ಅಥವಾಪಾಲಕರಾದ, ಸಹಸ್ರಾಣಾಂ-ಸಹಸ್ರಸಂಖ್ಯಾಕರಾದ, ಕಪಿಗಳ, ಶತೇನ-ನೂರುಸಂಖ್ಯೆಯ ಕಪಿಸಮೂಹದಿಂದ, ಆವೃತಃ-ಕೂಡಿದವನಾದ, ॥೩೦॥ ಅಗ್ನಿನಂದನಃ-ಯಜ್ಞೇಶ್ವರನಿಗೆಮಗನಾದ, ನೀಲೋನಾಮ-ನೀಲನೆಂಬ ಹೆಸರುಳ್ಳವನಾದ, ಸುಗ್ರೀವಸೇನಾಧಿಪತಿಃ-ಸುಗ್ರೀವ-ಸುಗ್ರೀವನ, ಸೇನಾ – ಕಾಲಾಳುಗಳಿಗೆ, ಅಧಿಪತಿಃ- ಒಡೆಯನಾದವನು, ಪರ್ವತಶೃಂಗಾಭಃ-ಪರ್ವತಬೆಟ್ಟದ, ಶೃಂಗ-ಶಿಖರದ, ಆಭಃ-ಆಕಾರವುಳ್ಳವನಾದ, ಪದ್ಮಕಿಂಜಲ್ಕಸನ್ನಿಭಃ- ಪದ್ಮ-ಕಮಲದಲ್ಲಿರುವ, ಕಿಂಜಲ್ಕ-ಕೇಸರಗಳಿಗೆ, ಸನ್ನಿಭಃ-ಸಮಾನವಾದಕಾಂತಿಯುಳ್ಳವನಾದ, ಅಭಿಸಂರಬ್ಧಃ-ಸುತ್ತಲೂ ತ್ವರೆಯುಳ್ಳವನಾದ, ಏಷಃ-ಈ ಕಪಿಯು, ಲಾಂಗುಲಂ-ಬಾಲವನ್ನು, ಪುನಃಪುನಃ-ತಿರಿಗಿ ತಿರಿಗಿ, ಸ್ಫೋಟಯತಿ-ನೆಲಕ್ಕೆ ಹೊಡೆಯುತ್ತಲಿದ್ದಾ

ಲಾಂಗೂಲಂಚ ಪುನಃಪುನಃ । ಯುವರಾಜೋಂಗದೋನಾಮ ವಾಲಿಪುತ್ರೋತಿವೀರ್ಯವಾನ್ ॥೨೨॥ ಯೇನದೃಷ್ಟಾ ಜನಕಜಾ ರಾಮಸ್ಯಾತೀವವಲ್ಲಭಾ । ಹನೂಮಾನೇಷವಿಖ್ಯಾತೋ ಹತೋಯೇನತವಾತ್ಮಜಃ ॥೨೩॥ ಶ್ವೇತೋರಜತಸಂಕಾಶಃ ಮಹಾಬುದ್ಧಿ ಪರಾಕ್ರಮಃ । ತೂರ್ಣಂಸುಗ್ರೀವಮಾಗತ್ಯ ಪುನರ್ಗಚ್ಛತಿ ವಾನರಃ ॥೨೪॥ ಯಸ್ತ್ವೇಷ ಸಿಂಹಸಂಕಾಶಃ ಪಶ್ಯತ್ಯತುಲವಿಕ್ರಮಃ । ರಂಭೋನಾಮ ಮಹಾಸತ್ವೋ ಲಂಕಾಂನಾಶಯಿತುಂ ಕ್ಷಮಃ ॥೨೫॥ ಏಷ ಪಶ್ಯತಿ ವೈ ಲಂಕಾಂ ದಿಧಕ್ಷನ್ನಿವ ವಾನರಃ । ಶರಭೋನಾಮ ರಾಜೇಂದ್ರ ಕೋಟಿಯೂಥಪನಾಯಕಃ ॥೨೬॥ ಪನಸಶ್ಚ ಮಹಾವೀರ್ಯೋ ಮೈಂದಶ್ಚ ದ್ವಿವಿದಸ್ತಥಾ ॥ ನಲಶ್ಚ ಸೇತುಕರ್ತಾಸೌ ವಿಶ್ವಕರ್ಮಸುತೋ ಬಲೀ ॥೨೭॥ ವಾನರಾಣಾಂ ವರ್ಣನೇ ವಾ ಸಂಖ್ಯಾನೇ ವಾ ಕ ಈಶ್ವರಃ । ಶೂರಾಸ್ಸರ್ವೇಮ

ನೆ, ಈತನು, ಯುವರಾಜಃ-ಕಪಿಗಳಿಗೆ ಎರಡನೇ ಧೊರೆಯಾದ, ವೀರ್ಯವಾನ್-ಪರಾಕ್ರಮ ಶಾಲಿಯಾದ, ವಾಲಿಪುತ್ರಃ-ವಾಲಿಗೆ ಮಗನಾದ, ಅಂಗದೋನಾಮ-ಅಂಗದನೆಂಬ ಹೆಸರುಳ್ಳವನು, ||೨೨|| ರಾಮಸ್ಯ-ರಾಮಚಂದ್ರನಿಗೆ, ಅತೀವವಲ್ಲಭಾ-ಅತ್ಯಂತಪ್ರೀತಿ ಪಾತ್ರಳಾದ, ಜನಕಜಾ-ಸೀತೆಯು, ಯೇನ-ಯಾವನಿಂದ, ದೃಷ್ಟಾ-ನೋಡಲ್ಪಟ್ಟಳೋ, ತವ-ನಿನ್ನ, ಆತ್ಮಜಃ-ಮಗನಾದ ಅಕ್ಷನು, ಯೇನ-ಯಾವನಿಂದ, ಹತಃ-ಸಂಹರಿಸಲ್ಪಟ್ಟನೋ, ವಿಖ್ಯಾತಃ-ಮೊದಲೇ ಪ್ರಸಿದ್ಧನಾಗಿರುವ, ಏಷಃ-ಈ ಕಪಿಯು, ಹನೂಮಾನ್-ಆಂಜನೇಯನು ||೨೩|| ತೂರ್ಣಂ-ಜಾಗ್ರತೆ, ಸುಗ್ರೀವಂ-ಸುಗ್ರೀವನನ್ನು ಕುರಿತು, ಆಗತ್ಯ-ಬಂದು, ಪುನಃ-ತಿರಿಗಿ, ಗಚ್ಛತಿ-ಹೋಗುತ್ತಿದ್ದಾನೆ, ಏಷಃವಾನರಃ-ಈ ಕಪಿಯು, ರಜತಸಂಕಾಶಃ ರಜತ-ಬೆಳ್ಳಿಗೆ, ಸಂಕಾಶಃ-ಸಮವಾದ ಕಾಂತಿಯುಳ್ಳವನಾದ, ಮಹಾಬುದ್ಧಿಪರಾಕ್ರಮಃ-ಮಹ-ಹೆಚ್ಚಾದ, ಬುದ್ಧಿ-ಜ್ಞಾನವು, ಪರಾಕ್ರಮಃ-ಸಾಮರ್ಥ್ಯವೂ ಉಳ್ಳವನಾದ, ಶ್ವೇತಃ-ಶ್ವೇತನೆಂಬ ಕಪಿಯು ||೨೪|| ಸಿಂಹಸಂಕಾಶಃ-ಸಿಂಹಕ್ಕೆ, ಸಂಕಾಶಃ-ಸಮಾನವಾದ ರೂಪವುಳ್ಳ, ಯಸ್ತು-ಯಾವ, ಏಷಃ-ಈ ಕಪಿಯು, ಪಶ್ಯತಿ-ನೋಡುತ್ತಿದ್ದಾನೆ, (ಸಃ-ಅವನು) ಅತುಲವಿಕ್ರಮಃ-ಅತುಲ-ಸರಿಯಿಲ್ಲದ, ವಿಕ್ರಮಃ-ಸಾಮರ್ಥ್ಯವುಳ್ಳವನಾದ, ಮಹಾಸತ್ವಃ-ಅಧಿಕಬಲವುಳ್ಳವನಾದ, ಲಂಕಾಂ-ಲಂಕಾಪಟ್ಟಣವನ್ನು, ನಾಶಯಿತುಂ-ಹಾಳುಮಾಡುವದಕ್ಕೆ, ಕ್ಷಮಃ-ಸಮರ್ಥನಾದ, ರಂಭೋನಾಮ-ರಂಭನೆಂಬ ಕಪಿಯು ||೨೫||ಲಂಕಾಂ-ಲಂಕಾಪಟ್ಟಣವನ್ನು, ದಿಧಕ್ಷನ್ನಿವ-ಸುಡುವವನಂತೆ, ಪಶ್ಯತಿ-ಯಾವನು ನೋಡುತ್ತಿದ್ದಾನೋ, ಏಷಃ-ಇವನು, ರಾಜೇಂದ್ರ-ರಾಜಶ್ರೇಷ್ಠನಾದ ರಾವಣನೇ, ಕೋಟಿಯೂಥಪನಾಯಕಃ-ಕೋಟಿ-ಕೋಟಿಸಂಖ್ಯೆಯುಳ್ಳ, ಯೂಥಪ-ಸೇನಾಧಿಪತಿಗಳಿಗೆ, ನಾಯಕಃ-ಧೊರೆಯಾದವನಾದ, ಶರಭೋನಾಮ-ಶರಭನೆಂಬ ಹೆಸರುಳ್ಳ, ವಾನರಃ-ಕಪಿಯು, ||೨೬|| ಪನಸಶ್ಚ - ಪನಸನೆಂಬ ಕಪಿಯು, ಮೈಂದಶ್ಚ - ಮೈಂದನೆಂಬ ಕಪಿಯು, ತಥಾ-ಹಾಗೆ, ದ್ವಿವಿದಃ-ದ್ವಿವಿದನೆಂಬ ಕಪಿಯು, ಸೇತುಕರ್ತಾ-ಸೇತುವೆಯನ್ನು ಮಾಡಿದವನಾದ, ನಲಶ್ಚ-ನಲನೆಂಬ ಕ

ಹಾಕಾಯಾಃಸರ್ವೆಯುದ್ಧಾಭಿಕಾಂಕ್ಷಿಣಃ ॥೩೭॥ ಶಕ್ತಾಃಸರ್ವೆಚೂರ್ಣಯಿತುಂಲಂಕಾಂರಕ್ಷೋಗಣೈಸ್ಸಹ । ಏತೆಷಾಂ
ಬಲಸಂಖ್ಯಾನಂಪ್ರತ್ಯೇಕಂವಚ್ಮಿತೆಶೃಣು ॥೩೯॥ ಏಷಾಂಕೋಟಿಸಹಸ್ರಾಣಿನವಪಂಚಚಸಪ್ತಚ । ತಥಾಶಂಖಸಹಸ್ರಾಣಿ
ತಥಾಬೃಂದಶತಾನಿಚ॥೪೦॥ ಸುಗ್ರೀವಸಚಿವಾನಾಂತೆಬಲಮೇತತ್ಪ್ರಕೀರ್ತಿತಂ।ಅನ್ಯೇಷಾಂತುಬಲಂನಾಹಂವಕ್ತುಂಶಕ್ನೋಸ್ಮಿ
ರಾವಣ॥೪೧॥ರಾಮೋನಮಾನುಷಸ್ಸಾಕ್ಷಾದಾದಿನಾರಾಯಣಃಪರಃ।ಸೀತಾಸಾಕ್ಷಾಜ್ಜಗದ್ಧೇತುಶ್ಚಿಚ್ಛಕ್ತಿರ್ಜಗದಾತ್ಮಿಕಾ॥೪೨॥

ಪಿಯು, ಅಸೌ-ಇವನು, ಬಲೀ-ಬಲವುಳ್ಳವನು, ವಿಶ್ವಕರ್ಮಸುತಃ-ವಿಶ್ವಕರ್ಮಬ್ರಹ್ಮನಿಗೆ ಮಗನಾದವನು ॥೩೭॥ ವಾನರಾಣಾಂ-ಕಪಿಗಳ, ವರ್ಣನ-ಅವರ, ಜನನಬಲ-ಗುಣಮುಂತಾದವುಗಳನ್ನು ಹೇಳುವವಿಷಯದಲ್ಲ, ಸಂಖ್ಯಾನವಾ-ಇಂಥವನಿಗೆ ಇಷ್ಟೆಸೈನ್ಯವೆಂಬದಾಗಿ ಲೆಖ್ಖವನ್ನು ಮಾಡುವದರಲ್ಲಿಯೂ, ಕಃ-ಯಾರು, ಈಶ್ವರಃ- ಸಿಯಾಮಕನಾದವನು, ಸರ್ವೆ-ಎಲ್ಲಾಕಪಿಗಳು, ಶೂರಾಃ-ವೀರರಾಗಿಯೂ, ಮಹಾಕಾಯಾಃ-ಅಧಿಕದೇಹವುಳ್ಳವರಾಗಿಯೂ, ಸರ್ವೆ-ಯೆಲ್ಲರೂ, ಯುದ್ಧಾಭಿಕಾಂಕ್ಷಿಣಃ-ಯುದ್ಧ - ರಣವನ್ನು, ಅಭಿಕಾಂಕ್ಷಿಣಃ- ಅಪೇಕ್ಷಿಸುವರಾಗಿಯೂ ಇದ್ದಾರೆ ॥೩೮॥ ಸರ್ವೆ-ಯೆಲ್ಲರೂ ಕಪಿಗಳು, ರಕ್ಷೋಗಣೈಃ-ರಾಕ್ಷಸಸಮೂಗಳಿಂದ ಸಹ ಕೂಡೆ, ಲಂಕಾಂ-ಲಂಕಾಪಟ್ಣವನ್ನು, ಚೂರ್ಣಯಿತುಂ-ಪುಡಿಮಾಡುವದಕ್ಕೆ, ಶಕ್ತಾಃ- ಶಕ್ತರಾಗಿದ್ದಾರೆ, ಏತೇಷಾಂ- ಈ ಕಪಿಗಳ, ಬಲಸಂಖ್ಯಾನಾಂ-ಬಲಸೈನ್ಯದ, ಸಂಖ್ಯಾನಂ - ಲೆಖ್ಖವನ್ನು, ತೆ-ನಿನಗೆ, ಪ್ರತ್ಯೇಕಂ-ಒಬ್ಬೊಬ್ಬಕಪಿಗೆ ಇರುವಬಲವನ್ನು ಬೇರೆಯಾಗಿ, ವಚ್ಮಿ-ಹೇಳುತ್ತೇನೆ, ಶೃಣು-ಕೇಳು, ॥೩೯॥ ಸುಗ್ರೀವಸಚಿವಾನಾಂ- ಸುಗ್ರೀವ-ಸುಗ್ರೀವನಿಗೆ, ಸಚಿವಾನಾಂ- ಮಂತ್ರಿಗಳಾದ, ಏಷಾಂ-ನೀಲ ೧, ಅಂಗದ ೨, ಹನುಮಂತ ೩, ಶ್ವೇತ ೪, ರಂಭ ೫, ಶರಭ ೬, ಪನಸ ೭, ಮೈಂದ ೮, ದ್ವಿವಿದ ೯, ನಲ ರೆಂಬ ಹೆಸರುಳ್ಳ, ಹತ್ತು-ಕಪಿಗಳಿಗೆ, ನವ, ಪಂಚಚ, ಸಪ್ತಚ, ನವ ಪ್ರೋಭತ್ತು, ಪಂಚ- ಐದು, ಸಪ್ತ-ಏಳು, (ಇಪ್ಪತ್ತೊಂದು,) ಕೋಟಿಸಹಸ್ರಾಣಿ-ಸಾವಿರಕೋಟಿಗಳು, ತಥಾ-ಹಾಗೆ, ಶಂಖಸಹಸ್ರಾಣಿ-ಇಪ್ಪತ್ತೊಂದುಸಾವಿರ ಶಂಖಗಳು, ತಥಾ-ಹಾಗೆ, ಬೃಂದಶತಾನಿ- ಇಪ್ಪತ್ತೊಂದುನೂರುಬೃಂದಗಳೂ,(ಸೇರಿ) ಏತದ್ಬಲಂ-ಈ ಇಪ್ಪತ್ತೊಂದು ನೂರುಬೃಂದಗಳೂ, ಇಪ್ಪತ್ತೊಂದುಸಾವಿರಶಂಖಗಳೂ, ಇಪ್ಪತ್ತೊಂದುಸಾವಿರಕೋಟಿ ಕಪಿಬಲವು, ತೆ-ನಿನಗೆ, ಪ್ರಕೀರ್ತಿತಂ-ಒಬ್ಬೊಬ್ಬನಿಗೆ ಇರುತ್ತೆಂದು ಹೇಳಲ್ಪಟ್ಟಿತು॥ ಅನ್ಯೇಷಾಂ-ಇತರಕಪಿಗಳ, ಬಲಂತು-ಬಲವನ್ನಾದರೇನೊ, ಅಹಂ-ನಾನು, ವಕ್ತುಂ-ಹೇಳುವದಕ್ಕೆ, ರಾವಣ-ರಾವಣನೆ, ಶಕ್ತಃ-ಸಮರ್ಥನು, ನಾಸ್ಮಿ-ಆಗಲಾರೆನು ॥೪೧॥ ರಾಮಃ-ರಾಮಚಂದ್ರನು, ನಮಾನುಷಃ-ಮನುಷ್ಯನಲ್ಲ, ಸಾಕ್ಷಾತ್-ಪ್ರತ್ಯಕ್ಷವಾಗಿ, ಪರಃ-ಶ್ರೇಷ್ಠನಾದ, ಆದಿನಾರಾಯಣಃ- ಆದಿವಿಷ್ಣುವು ಆಗಿದ್ದಾನೆ, ಸೀತಾ-ಸೀತೆಯು, ಸಾಕ್ಷಾತ್-ಪ್ರತ್ಯಕ್ಷವಾಗಿ, ಜಗದ್ಧೇತುಃ-ಜಗದುತ್ಪತ್ತಿಗೆಕಾರಣಭೂತಳಾಗಿಯೂ, ಜಗದಾತ್ಮಿಕಾ-ಜಗತ್ಸ್ವರೂಪಳಾದ ಮಾಯೆಯಾಗಿಯೂ, ಸಾಕ್ಷಾತ್-ಪ್ರತ್ಯಕ್ಷವಾಗಿ, ಚಿಚ್ಛಕ್ತಿಃ-ಜ್ಞಾನಶಕ್ತಿಯಾಗಿಯೂ, ಇದ್ದಾಳೆ, ॥೪೨॥ ತಾಭ್ಯಾಂ-ಆ ಪ್ರಕೃತಿಪುರುಷರಿಂದ, ಸ್ಥಾವರಜಂಗಮಂ-ಚರಾಚರಾತ್ಮಕವಾದ, ಜಗತ್-ಪ್ರಪಂಚವು, ಸವು

ತಾಭ್ಯಾಮೇವಸಮುತ್ಪನ್ನಂಜಗತ್ಸ್ಥಾವರಜಂಗಮಂ । ತಸ್ಮಾದ್ರಾಮಶ್ಚ ಸೀತಾಚಜಗತಸ್ತಸ್ಥುಷಶ್ಚ ತೌ ॥೪೩॥ ಪಿತರಾಪೃಥಿವೀಪಾಲತಯೋರ್ವೈರೀಕಥಂಭವೇತ್ । ಅಜಾನತಾತ್ವಯಾನೀತಾ ಜಗನ್ಮಾತೈವಜಾನಕೀ ॥೪೪॥ ಕ್ಷಣನಾಶಿನಿಸಂಸಾರೇಶರೀರೇ ಕ್ಷಣಭಂಗುರೇ । ಪಂಚಭೂತಾತ್ಮಕೇರಾಜಚ್ಚತುರ್ವಿಂಶತಿತತ್ತ್ವಕೇ ॥೪೫॥ ಮಲಮಾಂಸಾಸ್ಥಿದುರ್ಗಂಧಭೂಯಿಷ್ಠೇ ಹಂಕೃತಾಲಯೇ । ಕೈವಾಸ್ಥಾವ್ಯತಿರಿಕ್ತಸ್ಯಕಾಯೇತವಜಡಾತ್ಮಕೇ ॥೪೬॥ ಯತ್ಕೃತೇಬ್ರಹ್ಮಹತ್ಯಾದಿಪಾತಕಾನಿಕೃತಾನಿತೇ । ಭೋಗಭೋಕ್ತಾತುಯೋದೇಹಃಸದೇಹಾತ್ರಪತಿಷ್ಯತಿ ॥೪೭॥ ಪುಣ್ಯಪಾಪೇಸಮಾಯಾತೋಜೀವೇನಸುಖದುಃಖಯೋಃ । ಕಾರಣೇದೇ

ತ್ಪನ್ನಂ-ಸ್ಥೂಲರೂಪದಿಂದ ಹುಟ್ಟಿದ್ದಾಯಿತು, ತಸ್ಮಾತ್-ಆ ಕಾರಣದಿಂದ, ರಾಮಶ್ಚ-ರಾಮಚಂದ್ರನು, ಸೀತಾಚ-ಸೀತೆಯು, ಜಗತಃ-ಪ್ರಪಂಚಕ್ಕೆ, ತಸ್ಥುಷಃ-ಮೂಲಭೂತರಾದವರು, ॥೪೩॥ ತೌ-ಆ ಸೀತಾರಾಮಚಂದ್ರರು, ಪೃಥಿವೀಪಾಲತಯಾ, ಪೃಥಿವೀ-ಭೂಮಿಯನ್ನು, ಪಾಲತಯಾ-ರಕ್ಷಿಸುಪಿಕೆಯಿಂದ, ಪಿತರೌ-ತಾಯಿತಂದೆಗಳು, (ಆಗಿದ್ದಾರೆ) ತಯೋಃ-ಅಂಥಾ ಪ್ರಪಂಚ ಮಾತಾಪಿತೃಗಳಿಗೆ, ವೈರೀ-ಶತ್ರುವಾದವನು, ಕಥಂಭವೇತ್-ಹ್ಯಾಗಿದ್ದಾನು, ಅಜಾನತಾ-ತಿಳಿಯದೇಇರುವ, ತ್ವಯಾ-ನಿನ್ನಿಂದ, ಜಗನ್ಮಾತಾ-ಜಗತ್ತಿಗೆತಾಯಿಯಾದ, ಜಾನಕೀ-ಸೀತೆಯು, ನೀತಾ-ತರಲ್ಪಟ್ಟಳು, ॥೪೪॥ ರಾಜನ್-ಧೊರೆಯಾದರಾವಣನೇ, ಕ್ಷಣನಾಶಿನಿ-ನಿಮಿಷದಲ್ಲಿ, ನಾಶವುಳ್ಳದ್ದಾಗಿರುವ, ಸಂಸಾರೇ-ಸಂಸಾರದಲ್ಲಿ, ಕ್ಷಣಭಂಗುರೇ-ಕ್ಷಣಮಾತ್ರದಲ್ಲಿ ನಶ್ವರವಾದ, ಪಂಚಭೂತಾತ್ಮಕೇ-ಪಂಚಭೂತ ಪರಿಣಾಮವಾಗಿರುವ, ಚತುರ್ವಿಂಶತಿ ತತ್ತ್ವಕೇ- ಇಪ್ಪತ್ತುನಾಲ್ಕು ತತ್ತ್ವಗಳಿಂದಕೂಡಿರುವದಾದ, ಶರೀರೇ-ದೇಹದಲ್ಲಿ, ಕೈವಾಸ್ಥಾ-ಯಾವಅಪೇಕ್ಷೆಯು ॥೪೫॥ ಮಲಮಾಂಸಾಸ್ಥಿ ದುರ್ಗಂಧಭೂಯಿಷ್ಠೇ, ಮಲ-ಅಮೇಧ್ಯ, ಮಾಂಸ-ಮಾಂಸವು, ಅಸ್ಥಿ-ಎಲುಬು, ದುರ್ಗಂಧ-ದುರ್ವಾಸನೆ, ಇವುಗಳಿಗೆ, ಭೂಯಿಷ್ಠೇ-ಆಯುವಾಗಿರುವದಾದ, ಹಂಕೃತಾಲಯೇ- ಅಹಂಕಾರಕ್ಕೆ ಸ್ಥಾನಭೂತವಾದ, ಜಡಾತ್ಮಕೇ-ಜಡಸ್ವರೂಪವಾದ, ಕಾಯೇ-ದೇಹದಲ್ಲಿ, ವ್ಯತಿರಿಕ್ತಸ್ಯ-ಬುದ್ಧಿ, ಅಹಂಕಾರ, ಏಕಾದಶೇಂದ್ರಿಯಗಳು, ಪಂಚಭೂತಗಳು, ರೂಪ, ರಸ, ಗಂಧ, ಸ್ಪರ್ಶಶಬ್ದಗಳು, ಪ್ರಕೃತಿ, ಮಹತ್ತತ್ತ್ವಗಳಿಗಿಂತ ಬೇರೆಯಾಗಿರುವ, ತವ-ನಿನಗೆ, ಕೈವಾಸ್ಥಾ-ಯೇನುಆಸಕ್ತಿಯು, ಅಂದರೆ ಈ ಅಭಿಮಾನ ಪ್ರಯುಕ್ತವಾದದ್ದಲ್ಲವು, ॥೪೬॥ ಯತ್ಕೃತೇ-ಯಾವದೇಹದ ಪೋಷಣೆಗೋಸ್ಕರವಾಗಿ, ತೇ-ನಿನ್ನಿಂದ, ಬ್ರಹ್ಮಹತ್ಯಾದಿ, ಬ್ರಾಹ್ಮಣನರನ್ನು ಕೊಲ್ಲುವದೇ ಆದಿಯಾದ, ಪಾತಕಾನಿ- ಪಾಪಗಳು, ಕೃತಾನಿ-ಮಾಡಲ್ಪಟ್ಟವು, ಯಃ-ದೇಹಃ-ಯಾವದೇಹವು, ಭೋಗಭೋಕ್ತಾ-ಸುಖವನ್ನು ಅನುಭವಿಸುತ್ತಿರುವದೊ, ಸದೇಹಃ-ಆ ಸ್ಥೂಲಶರೀರವು, ಅತ್ರ-ಈಲೋಕದಲ್ಲಿಯೇ, ಪತಿಷ್ಯತಿ-ನಾಶವಾಗುತ್ತಿದೆ,॥೪೭॥ ಸುಖದುಃಖಯೋಃ-ಸುಖದುಃಖಗಳಿಗೆ, ಕಾರಣೇ-ಹೇತುಗಳಾದ, ಪುಣ್ಯಪಾಪೇ-ಪುಣ್ಯಪಾಪಗಳು, ಜೀವೇನ-ಜೀವಾತ್ಮನಕೂಡ, ಸಮಾಯಾತಃ-ಬರುತ್ತೇವೆ,(ತೇ-ಆ ಪುಣ್ಯಪಾಪಗಳು

ಹಯೋಗಾದಿನಾತ್ಮನಃಕುರುತೇಽನಿಶಂ ॥೪೮॥ ಯಾವದ್ದೇಹೋಸ್ಮಿ ಕರ್ತಾಸ್ಮೀತ್ಯಾತ್ಮಾಹಂಕುರುತೇವಶಃ। ಅಧ್ಯಾಸಾತ್ತಾವದೇವಸ್ಯಾ ಜನ್ಮನಾಶಾದಿಸಂಭವಃ ॥೪೯॥ ತಸ್ಮಾತ್ತ್ವಂತ್ಯಜದೇಹಾದಾವಭಿಮಾನಂಮಹಾಮತೇ । ಆತ್ಮಾತಿನಿರ್ಮಲಶ್ಶುದ್ಧೋ ವಿಜ್ಞಾನಾತ್ಮಾಚಲೋವ್ಯಯಃ ॥೫೦॥ ಸ್ವಾಜ್ಞಾನವಶತಶ್ಶ್ಬಂಧಂಪ್ರತಿಪದ್ಯವಿಮುಹ್ಯತಿ । ತಸ್ಮಾತ್ತ್ವಂಶುದ್ಧಭಾವೇನಜ್ಞಾತ್ವಾತ್ಮಾನಂಸದಾಸ್ಮರ ॥೫೧॥ ವಿರತಿಂಭಜಸರ್ವತ್ರಪುತ್ರದಾರಗೃಹಾದಿಷು । ನಿರಯೇಷ್ವಪಿಭೋಗಸ್ಸ್ಯಾಚ್ಛ್ವಸೂಕರತನಾವಪಿ॥ ಕೋವಿದೇಹಂಲಬ್ಧ್ವಾವಿವೇಕಾರ್ಹ್ಯಂದ್ವಿಜತ್ವಂಚವಿಶೇಷತಃ । ತತ್ರಾಪಿಭಾರತೇವರ್ಷೇಕರ್ಮಭೂಮೌಸುದುರ್ಲಭಂ॥೫೨॥

ದೇಹಯೋಗಾದಿನಾ-ಶರೀರಸಂಬಂಧವೇಮೊದಲಾದವುಗಳಿಂದ, ಆತ್ಮನಃ-ಆತ್ಮನಿಗೆ, ಅನಿಶಂ-ಯಾವಾಗಲೂ, (ಸುಖದುಃಖೇ-ಸುಖದುಃಖಗಳನ್ನು) ಕುರುತಃ-ಮಾಡುವವಗಳಾಗುತ್ತವೆ, ॥೪೮॥ ಆತ್ಮಾ-ಆತ್ಮನು, ಅವಶಃ-ಅಸ್ವಾಧೀನನಾಗಿ, ದೇಹೋಸ್ಮಿ-ದೇಹವೇನಾನಾಗಿದ್ದೇನೆ, ಕರ್ತಾಸ್ಮಿ-ಮಾಡುವವನಾಗಿದ್ದೇನೆ, ಇತಿ-ಹೀಗೆಂದು, ಅಹಂಕುರುತೇ-ಅಹಂಕಾರವನ್ನು ಹೊಂದುವನೋ, ತಾವದೇವ-ಅದುವರಿಗೂ, ಅಧ್ಯಾಸಾತ್-ಆರೋಪಣೆಯಿಂದ, ಜನ್ಮನಾಶಾದಿಸಂಭವಃ-ಜನ್ಮ-ಹುಟ್ಟುವದು, ನಾಶ-ಸಾಯುವದು, ಆದಿ-ಮೊದಲಾದವುಗಳ, ಸಂಭವಃ-ಪ್ರಾಪ್ತಿಯು, ಸ್ಯಾತ್-ಉಂಟಾಗುತ್ತದೆ, ॥೪೯॥ ಮಹಾಮತೇ-ಮಹಾಬುದ್ಧಿಶಾಲಿಯಾದ ರಾವಣನೆ, ತಸ್ಮಾತ್-ಆಕಾರಣದಿಂದ, ದೇಹಾದೌ-ಶರೀರಾದಿಗಳಮೇಲೆ, ಅಭಿಮಾನಂ-ಅಹಂಭಾವವನ್ನು, ತ್ಯಜ-ಬಿಡು, ಆತ್ಮಾ-ಆತ್ಮನು, ಅತಿನಿರ್ಮಲಃ-ಅತ್ಯಂತವಾಗಿ ಪಾಪರಹಿತನು, ಶುದ್ಧಃ-ನಿರ್ಲಿಪ್ತನಾದ, ವಿಜ್ಞಾನಾತ್ಮಾ-ವಿಜ್ಞಾನಸ್ವರೂಪನಾದವನು, ಅಚಲಃ-ಅಚಂಚಲನು, ಅವ್ಯಯಃ-ನಾಶರಹಿತನೂ, ಆಗಿದ್ದಾನೆ, ॥೫೦॥ ಸ್ವಾಜ್ಞಾನವಶತಃ-ಸ್ವಾಜ್ಞಾನಂ-ಆತ್ಮನು ಶುದ್ಧಬುದ್ಧ ಮುಕ್ತಸ್ವಭಾವನೆಂಬುವ ಸ್ವಸ್ವರೂಪಾಜ್ಞಾನದ, ವಶತಃ-ಸ್ವಾಧೀನನಾಗುವದರಿಂದ, ಬಂಧಂ-ಶರೀರಾದಿ ಸಂಬಂಧವನ್ನು, ಪ್ರತಿಪದ್ಯ - ಹೊಂದಿ, ವಿಮುಹ್ಯತಿ-ಮೋಹಿತನಾಗುತ್ತಾನೆ ॥ ತಸ್ಮಾತ್-ಆಕಾರಣದಿಂದ, ಆತ್ಮಾನಂ-ಆತ್ಮನನ್ನು, ಶುದ್ಧಭಾವೇನ- ಶುದ್ಧಬುದ್ಧ ಮುಕ್ತಸ್ವಭಾವನೆಂಬದಾಗಿ, ಜ್ಞಾತ್ವಾ-ತಿಳಿದು, ಸದಾ-ಯಾವಾಗಲೂ, ಸ್ಮರ-ಸ್ಮರಣೆಮಾಡುವವನಾಗು ॥೫೧॥ ಪುತ್ರದಾರಗೃಹಾದಿಷು-ಮಕ್ಕಳು ಹೆಂಡತಿ ಮನೆ ಮೊದಲಾದವುಗಳಲ್ಲಿಯೂ, ಸರ್ವತ್ರ-ಇತರ ಯಲ್ಲಾ ವಿಷಯಗಳಲ್ಲಿಯೂ, ವಿರತಿಂ-ವಿರಾಗವನ್ನು, ಭಜ-ಹೊಂದು, ನಿರಯೇಷು-ನರಕಗಳಲ್ಲಿ, ಶ್ವಸೂಕರತನಾವಪಿ-ನಾಯಿ ಹಂದಿ ಮುಂತಾದವುಪ್ರಾಣಿಗಳ ದೇಹಗಳಲ್ಲಿಯೂ, ಭೋಗಃ-ಭೋಗಿಸುವಸುಖವು, ಸ್ಯಾತ್-ಉಂಟಾಗುತ್ತೆ, ಆದ್ದರಿಂದ ಇವುಗಳೆಲ್ಲಾ ಹೇಯಗಳಾಗಿವೆ. ॥೫೨॥ ವಿವೇಕಾರ್ಹ್ಯಂ- ಯುಕ್ತಾಯುಕ್ತ ವಿಚಾರವನ್ನು ಮಾಡಲು ಯೋಗ್ಯವಾದ, ದೇಹಂ-ಶರೀರವನ್ನು, ಭಾರತವರ್ಷೇ-ಭರತವರ್ಷದಲ್ಲಿ. ಕರ್ಮಭೂಮೌ-ಕರ್ಮಮಾಡಲು ಅರ್ಹವಾದ ಭೂಪ್ರದೇಶದಲ್ಲಿ, ಲಬ್ಧ್ವಾ-ಹೊಂದಿ, ತತ್ರಾಪಿ- ವಿವೇಕವುಳ್ಳದೇಹಗಳಾದ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೊಳು, ಸುದುರ್ಲಭಂ-ಹೊಂದಲಸಾಧ್ಯವಾದ, ದ್ವಿಜತ್ವಂ-ಬ್ರಾಹ್ಮಣತ್ವವನ್ನು, ವಿಶೇಷತಃ-ಹೆಚ್ಚಾಗಿ, ಲಬ್ಧ್ವಾ-ಹೊಂದಿ, ॥೫೨॥

ದಾತ್ಮಾನಾತ್ಮಸಾತ್ಕೃತ್ವಾದೇಹಂಭೋಗಾನುಗೋಭವೇತ್ । ಅತಸ್ತ್ವಂಬ್ರಾಹ್ಮಣೋಭೂತ್ವಾಪೌಲಸ್ತ್ಯತನಯಶ್ಶುಭ ಸರ್ಗ॥೫೪॥ ಅಜ್ಞಾನೀವಸದಾಭೋಗಾನನುಧಾವಸಿಕಿಂಮುಧಾ । ಇತಃಪರಂವಾತ್ಯಕ್ತ್ವಾತ್ವಂಸರ್ವಸಂಗಂಸಮಾಶ್ರಯ ॥೫೫॥ ರಾಮಮೇವಪರಾತ್ಮಾನಂಭಕ್ತಿಭಾವೇನಸರ್ವದಾ । ಸೀತಾಂಸಮರ್ಪ್ಯರಾಮಾಯತತ್ಪಾದಾನುಚರೋಭವ ॥೫೬॥ ವಿಮುಕ್ತಃಸ್ಸರ್ವಪಾಪೇಭ್ಯೋವಿಷ್ಣುಲೋಕಂಪ್ರಯಾಸ್ಯಸಿ । ನೋಚೇದ್ಗಮಿಷ್ಯಸೇಘೋರಃಪುನರಾವರ್ತಿವರ್ಜಿತಃ ॥೫೭॥ ಅಂಗೀಕುರುಷ್ವಮದ್ವಾಕ್ಯಂಹಿತಮೇವವದಾಮಿತೇ ॥೫೮॥ ಸತ್ಸಂಗತಿಂಕುರುಭಜಸ್ವಹರಿಂಶರಣ್ಯಂಶ್ರೀರಾಘವಂಮರಕತೋಪಲ

ಕೋವಿದ್ವಾನ್-ಯಾವಪಂಡಿತನಾದರು, ದೇಹಂ-ದೇಹವನ್ನು, ಅತ್ಮಸಾತ್ಕೃತ್ವಾ-ಆತ್ಮಾಧೀನವಾಗಿಮಾಡಿ,ಅಂಗರೆ-ದೇಹವೇ ಅತ್ಮವೆಂದು ಅಧ್ಯಸ್ತನಾಗಿ, ಭೋಗಾನುಗಃ-ಸುಖಗಳನ್ನು ಅನುಸರಿಸಿಹೋಗುವನು, ಭವೇತ್-ಆದಾನು, ಅತಃ-ಅದುಕಾರಣ, ತ್ವಂ-ನೀನು, ಬ್ರಾಹ್ಮಣಃ-ಬ್ರಾಹ್ಮಣನು, ಭೂತ್ವಾ-ಆಗಿದ್ದು, ಪೌಲಸ್ತ್ಯ-ಪುಲಸ್ತ್ಯಬ್ರಹ್ಮನಿಗೆ ಮಗನಾದವಿಶ್ರವಸ್ಸಿಗೆ, ತನಯಸ್ಸನ್-ಮಗನಾಗಿದ್ದು ಅಜ್ಞಾನೀವ-ಅವಿವೇಕಿಯಂತೆ, ಸದಾ-ಯಾವಾಗಲೂ, ಭೋಗಾನ್-ಸುಖಗಳನ್ನು ಕುರಿತು, ಮುಧಾ-ವ್ಯರ್ಥವಾಗಿ, ಕಿಂ-ಏನು, ಅನುಧಾವಸಿ- ಅನುಸರಿಸಿಹೋಗುತ್ತೀ, ಇತಃಪರಂವಾ-ಇನ್ನು ಮೇಲೆ ಆದಾಗ್ಯೂ, ತ್ವಂ-ನೀನು, ಸರ್ವಸಂಗಂ-ಸಮಸ್ತಸಂಸಾರ ಸಂಬಂಧವನ್ನು, ತ್ಯಕ್ತ್ವಾ-ಬಿಟ್ಟು ॥೫೫॥ ಸರ್ವದಾ-ಯಾವಾಗಲೂ, ಭಕ್ತಿಭಾವೇನ-ಭಕ್ತಿಭಾವದಿಂದ, ಪರಾತ್ಮಾನಂ-ಪರಮಾತ್ಮನಾದ ರಾಮಮೇವ-ರಾಮನನ್ನೇ, ಸಮಾಶ್ರಯ-ಆಶ್ರಯಿಸು , ರಾಮಾಯ-ರಾಮಚಂದ್ರನಿಗೆ, ಸೀತಾಂ- ಸೀತೆಯನ್ನು, ಸಮರ್ಪ್ಯ-ಒಪ್ಪಿಸಿ, ತತ್ಪಾದಾನುಚರಃ- ತತ್ಪದ-ಆರಾಮಚಂದ್ರನ ಪಾದಗಳಿಗೆ, ಅನುಚರಃ-ಸೇವೆಮಾಡುವವನು, ಭವ-ಆಗು, ॥೫೬॥ ಸರ್ವಪಾಪೇಭ್ಯಃ- ಸಮಸ್ತಪಾತಕಗಳಿಂದ, ವಿಮುಕ್ತಃ-ಬಿಡಲ್ಪಟ್ಟವನಾಗಿ, ವಿಷ್ಣುಲೋಕಂ-ವಿಷ್ಣುಲೋಕವನ್ನು ಕುರಿತು, ಪ್ರಯಾಸ್ಯಸಿ-ಹೋಗುತ್ತಲಿದ್ದೀ, ನೋಚೇತ್-ಹಾಗೆನೀನು ಮಾಡದೇಹೋದರೆ, ಪುನರಾವರ್ತಿವರ್ಜಿತಃ-ಪುನರಾವೃತ್ತಿ-ಉತ್ತಮ ಲೋಕಗಳಿಂದ, ವರ್ಜಿತಃ-ಇಲ್ಲದವನಾಗಿ, ಅಧೋಧಃ-ನರಕದಲ್ಲಿ, ಪತಿಷ್ಯಸೆ-ಬೀಳುತ್ತಿದ್ದೀ ॥೫೭॥ ಮದ್ವಾಕ್ಯಂ-ನನ್ನ ಮಾತನ್ನು, ಅಂಗೀಕುರುಷ್ವ-ಅಂಗೀಕರಿಸಿದವನಾಗು, ತೇ-ನಿನಗೆ, ಹಿತಮೇವ- ಕ್ಷೇಮಕರ ಮಾತನ್ನೇ, ವದಾಮಿ-ಹೇಳುತ್ತೇನೆ, ॥೫೮॥ ಸತ್ಸಂಗತಿಂ-ಸತ್ಪುರುಷರ ಸಹವಾಸವನ್ನು, ಕುರು-ಮಾಡು, ಶರಣ್ಯಂ-ರಕ್ಷಕನಾದ, ಹರಿ-ನಾರಾಯಣನಾದ, ಮರಕತೋಪಲಕಾಂತಿಕಾಂತಂ-ಮರಕತ-ಮರಕತದ, ಉಪಲ-ಶಿಲೆಯ, ಕಾಂತಿ-ಕಾಂತಿಯಂತೆ, ನಾಂತಂ-ಮನೋಹರನಾದ, ಸೀತಾಸಮೇತಂ-ಸೀತೆಯಿಂದ ಕೂಡಿರುವವ

ಕಾಂತಿಕಾಂತಂ || ಸೀತಾಸಮೇತಮನಿಶಂಧೃತಚಾಪಬಾಣಂಸುಗ್ರೀವಲಕ್ಷ್ಮಣವಿಭೀಷಣಸೇವಿತಾಂಘ್ರಿಂ ||೫೯||

ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರ ಸಂವಾದೇಯುದ್ಧಕಾಂಡೇ ಚತುರ್ಥಃಸರ್ಗಃ.

——……*……——

ಶ್ರೀಮಹಾದೇವಉವಾಚ ||೧|| ಶ್ರುತ್ವಾಶುಕಮುಖೋದ್ಗೀತಂವಾಕ್ಯಮಜ್ಞಾನನಾಶನಂ।ರಾವಣಃಕ್ರೋಧತಾಮ್ರಾಕ್ಷೋ ದಹನ್ನಿವತಮಬ್ರವೀತ್ ||೨|| ಅನುಜೀವ್ಯಸುದುರ್ಬುದ್ಧೇಗುರುವದ್ಭಾಷಸೇಕಥಂ । ಶಾಸಿತಾಹಂತ್ರಿಜಗತಾಂತ್ವಂಮಾಂಶಿಕ್ಷಸ್ಯಲಜ್ಜಸೇ||೩|| ಇದಾನೀಮೇವಹನ್ಮಿತ್ವಾಂಕಿಂತುಪೂರ್ವಕೃತಂತವ ।ಸ್ಮರಾಮಿತೇನರಕ್ಷಾಮಿತ್ವಾಂಯದ್ಯಪಿವಧೋಚಿತಂ ||೪||

ನಾದ, ಧೃತಚಾಪ-ಬಾಣ, ಧೃತ-ಧರಿಸಲ್ಪಟ್ಟ, ಚಾಪ-ಬಿಲ್ಲು, ಬಾಣ-ಅಂಬುಗಳುಳ್ಳವನಾದ, ಸುಗ್ರೀವಲಕ್ಷ್ಮಣವಿಭೀಷಣಸೇವಿತಾಂಘ್ರಿಂ,-ಸುಗ್ರೀವ-ಸುಗ್ರೀವನಿಂದಲೂ, ಲಕ್ಷ್ಮಣ-ಲಕ್ಷ್ಮಣನಿಂದ, ವಿಭೀಷಣ-ವಿಭೀಷಣನಿಂದ, ಸೇವಿತ- ಸೇವಿಸಲ್ಪಟ್ಟ, ಅಂಘ್ರಿಂ-ಪಾದಗಳುಳ್ಳವನಾದ, ಶ್ರೀರಘುವಂ-ಶ್ರೀರಾಮಚಂದ್ರನನ್ನು, ಅನಿಶಂ-ಯಾವಾಗಲೂ, ಭಜಸ್ವ-ಸೇವಿಸು. … … ||೫೯||

—ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದೊಳು ಯುದ್ಧಕಾಂಡದಲ್ಲಿ ನಾಲ್ಕನೆಯಸರ್ಗವು.—



ಶ್ರೀಮಹಾದೇವ ಉವಾಚ|| ಈಶ್ವರನು ಹೇಳುತ್ತಲಿದ್ದಾನೆ, ||೧|| ರಾವಣಃ-ರಾವಣನು, ಶುಕಮುಖೋದ್ಗೀತಂ-ಶುಕ-ಶುಕನೆಂಬ ರಾಕ್ಷಸನ, ಮುಖ - ಬಾಯಿಯಿಂದ, ಉದ್ಗೀತಂ-ಹೇಳಲ್ಪಟ್ಟ, ಅಜ್ಞಾನನಾಶನಂ-ಅಜ್ಞಾನ-ಕೆಟ್ಟಬುದ್ಧಿಯನ್ನು, ನಾಶನಂ-ಹೋಗಲಾಡಿಸುವ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಕ್ರೋಧತಾಂ ಮ್ರಾಕ್ಷಃ-ಕ್ರೋಧ-ಕೋಪದಿಂದ, ತಾಮ್ರ-ಕೆಂಪಾದ, ಅಕ್ಷಃ-ಕಣ್ಣುಗಳುಳ್ಳವನಾಗಿ, ತಂ-ಆ ಶುಕನನ್ನು, ದಹನ್ನಿವ-ಸುಡುವವನಂತೇ, ಅಬ್ರವೀತ್-ಹೇಳಿದನು ||೨|| ಸುದುರ್ಬುದ್ಧೇ-ಕೆಟ್ಟಜ್ಞಾನವುಳ್ಳಶುಕನೇ, ಅನುಜೀವ್ಯ-ನನ್ನನ್ನು, ಅನುಸರಿಸಿ ಜೀವನಮಾಡಿಕೊಂಡಿದ್ದು, ಗುರುವತ್-ಈಗ ಗುರುವಿನಂತೆ, ಕಥಂ-ಹ್ಯಾಗೆ, ಭಾಷಸೆ - ಮಾತನಾಡುತ್ತೀ, ಅಹಂ-ನಾನು, ತ್ರಿಜಗತಾಂ-ಮೂರುಲೋಕಗಳಿಗೆ, ಶಾಸಿತಾ-ಆಜ್ಞೆಮಾಡುವಂಥಾವನು, ಮಾಂ-ಇಂಥಾವನನ್ನು ಕುರಿತು, ಶಿಕ್ಷಸಿ- ಬುದ್ಧಿ ಹೇಳುತ್ತಿರುವವನಾಗಿ, ನಲಜ್ಜಸೇ-ನಾಚಿಕೆಪಡದೆ ಇರುವವನಾಗಿದ್ದೀ ||೩||ಇದಾನೀಮೇವ-ಈಗಲೇ, ತ್ವಾಂ-ನಿನ್ನನ್ನು, ಹನ್ಮಿ-ಕೊಲ್ಲುವೆನು, ಕಿಂತು-ಆದರೆ, ತವ-ನಿನಿನಿಂದ, ಪೂರ್ವ

ಇತೋಗಚ್ಛವಿಮೂಢತ್ವಮೇವಂಶ್ರೋತುಂನಮೇಕ್ಷಮಂ । ಮಹಾಪ್ರಸಾದಇತ್ಯುಕ್ತ್ವಾವ್ಯಥಮಾನೋಗೃಹಂಯಯೌ ॥೫॥
ಶುಕೋಪಿಬ್ರಾಹ್ಮಣಃಪೂರ್ವಂಬ್ರಹ್ಮಿಷ್ಠೋಬ್ರಹ್ಮವಿತ್ತಮಃ । ವಾನಪ್ರಸ್ಥವಿಧಾನೇನವನೇತಿಷ್ಠನ್ಸ್ವಕರ್ಮಕೃತ ॥೬॥ ದೇವಾ
ನಾಮಭಿವೃದ್ಧ್ಯರ್ಥಂವಿನಾಶಾಯಸುರದ್ವಿಷಾಂ । ಚಕಾರಯಜ್ಞವಿತತಿಮವಿಚ್ಛಿನ್ನಾಂಮಹಾಮತಿಃ ॥೭॥ ರಾಕ್ಷಸಾನಾಂವಿ
ರೋಧೋಭೂಚ್ಛುಕೇದೇವಹಿತೋದ್ಯತಃ । ವಜ್ರದಂಷ್ಟ್ರಇತಿಖ್ಯಾತಃತತ್ರೈಕೋರಾಕ್ಷಸೋಮಹಾನ್ ॥೮॥ ಅಂತರಂಪ್ರೇ
ಪ್ಸುರಾತಿಷ್ಠಚ್ಛುಕಾಪಕರಣೋದ್ಯತಃ । ಕದಾಚಿದಾಗತೋಗಸ್ತ್ಯಸ್ತಸ್ಯಾಶ್ರಮಪದಂಮುನಿಃ ॥೯॥ ತೇನಸಂಪೂಜಿತೋಗ

ಕೃತಂ-ಹಿಂದಕ್ಕೆ ಮಾಡಲ್ಪಟ್ಟ ಉಪಕಾರವನ್ನು, ಸ್ಮರಾಮಿ-ನೆನೆಯುತ್ತೇನೆ, ಯದ್ಯಪಿ-ಹ್ಯಾಗಾದರೂ, ವಧೋಚಿತಂ-ವಧಸಂಹಾರಕ್ಕೆ, ಉಚಿತಂ-ಯೋಗ್ಯನಾದ, ತ್ವಾಂ-ನಿನ್ನನ್ನು, ತೇನ-ಆ ಪೂರ್ವದಲ್ಲಿ ಉಪಕಾರಮಾಡಿದವನಾದ್ದರಿಂದ, ರಕ್ಷಾಮಿ-ಕಾಪಾಡಿದ್ದೇನೆ ॥೪॥ ಮೂಢ-ಮುಗ್ಧನೆ, ತ್ವಂ-ನೀನು, ಇತಃ-ಇಲ್ಲಿಂದ, ಗಚ್ಛ - ಆಚೆಹೋಗು, ಏವಂ-ಈ ಪ್ರಕಾರವಾಗಿ, ಶ್ರೋತುಂ-ಕೇಳುವದಕ್ಕೆ, ಮೇ-ನನಗೆ, ನಕ್ಷಮಂ-ತಕ್ಕದ್ದಲ್ಲ, (ಆಗ ಶುಕನು,) ಮಹಾಪ್ರಸಾದಇತಿ-ಹೆಚ್ಚಾದ ನಿನ್ನ ದಯೆಗೆಪಾತ್ರನಾದೆನೆಂದು, ಉಕ್ತ್ವಾ-ಉಪಚಾರೋಕ್ತಿಯನ್ನು ಹೇಳಿ, ವ್ಯಥಮಾನಃ-ವ್ಯಥೆಯುಳ್ಳವನಾಗಿ, ಗೃಹಂ-ವೈಖಾನಸಾಶ್ರಮವನ್ನು ಕುರಿತು, ಯಯೌ-ಹೊರಟುಹೋದನು॥೫॥ ಶುಕೋಪಿ-ಶುಕನು, ಪೂರ್ವಂ-ಹಿಂದಕ್ಕೆ, ಬ್ರಹ್ಮವಿತ್ತಮಃ-ಬ್ರಹ್ಮಜ್ಞಾನವುಳ್ಳವನಾದ, ಬ್ರಹ್ಮಿಷ್ಠಃ-ಬ್ರಹ್ಮಧ್ಯಾನ ನಿಷ್ಠನಾದ, ಬ್ರಾಹ್ಮಣಃ- ಬ್ರಾಹ್ಮಣನಾಗಿ, ವನೇ-ಅರಣ್ಯದಲ್ಲಿ, ವಾನಪ್ರಸ್ಥವಿಧಾನೇನ-ವಾನಪ್ರಸ್ಥ-ವಾನಪ್ರಸ್ಥಾಶ್ರಮದ, ವಿಧಾನೇನ-ರೀತಿಯಿಂದ, ಸ್ವಕರ್ಮಕೃತ್-ಸ್ವ-ತನ್ನ, ಕರ್ಮಕೃತ್-ನಿತ್ಯಕರ್ಮವನ್ನು ಮಾಡುತ್ತಿರುವವನಾಗಿ, ಗೃಹೇ-ಮನೆಯಲ್ಲಿ, ತಿಷ್ಠನ್-ಇರುತ್ತಿರುವವನಾಗಿ, ॥೬॥ದೇವಾನಾಂ-ದೇವತೆಗಳಿಗೆ, ಅಭಿವೃದ್ಧ್ಯರ್ಥಂ-ಕ್ಷೇಮಕ್ಕೋಸ್ಕರವಾಗಿ,ಸುರದ್ವಿಷಾಂ-ರಾಕ್ಷಸರ, ವಿನಾಶಾಯ-ನಾಶಕ್ಕೋಸ್ಕರವಾಗಿ, ಮಹಾಮತಿಃ-ಮಹಾಬುದ್ಧಿಶಾಲಿಯಾದ, ಶುಕನು, ಯಜ್ಞವಿತತಿಂ-ಯಜ್ಞ ಯಾಗಗಳ, ವಿತತಿಂ-ಸಮೂಹವನ್ನು, ಅವಿಚ್ಛಿನ್ನಾಂ-ವಿರಾಮವಿಲ್ಲದಂತೆ, ಚಕಾರ-ಮಾಡಿದನು. ॥೭॥ ಶುಕಃ-ಶುಕನು, ದೇವಹಿತೋದ್ಯತಃ-ದೇವ-ದೇವತೆಗಳ, ಹಿತ-ಕ್ಷೇಮಚಿಂತನೆಯಲ್ಲಿ, ಉದ್ಯತಃ-ಪ್ರಯತ್ನಪರನು (ಎಂಬುದಾಗಿ ತಿಳಿದು,) ರಾಕ್ಷಸಾನಾಂ-ರಾಕ್ಷಸರಿಗೆ, ವಿರೋಧಃ-ಶುಕನಮೇಲೆ ದ್ವೇಷವು, ಅಭೂತ್-ಉಂಟಾಯಿತು, ತತ್ರ-ರಾಕ್ಷಸರೊಳಗೆ, ಮಹಾನ್-ದೊಡ್ಡವನಾದ, ವಜ್ರದಂಷ್ಟ್ರಇತಿ-ವಜ್ರದಂಷ್ಟ್ರನೆಂಬದಾಗಿ, ಖ್ಯಾತಃ- ಪ್ರಸಿದ್ಧನಾದ, ಏಕಃ-ಒಬ್ಬನಾದ, ರಾಕ್ಷಸಃ-ರಾಕ್ಷಸನು ॥೮॥ ಶುಕಾಪಕರಣೋದ್ಯತಃ-ಶುಕ-ಶುಕನಿಗೆ, ಅಪಕರಣ-ಅಪಕಾರಮಾಡುವದರಲ್ಲಿ, ಉದ್ಯತಃ- ಉದ್ಯುಕ್ತನಾಗಿ, ಅಂತರಂ-ಸಮಯವನ್ನು, ಪ್ರೇಪ್ಸುಃ-ನೋಡುತ್ತಿರುವವನಾಗಿ, ಅತಿಷ್ಠತ್-ಇದ್ದನು॥ಕದಾಚಿತ್-ಒಂದಾನೊಂದುದಿನದಲ್ಲಿ, ಅಗಸ್ತ್ಯಃ-ಅಗಸ್ತ್ಯಋಷಿಯು, ಮುನಿಃ-ಮನನಶೀಲನಾದ, ತಸ್ಯ-ಆ ಶುಕನ, ಆಶ್ರಮಪದಂ-ಆಶ್ರಮಸ್ಥಾನವನ್ನು ಕುರಿತು, ಆಗತಃ-ಬಂದವನಾದನು, ॥೯॥ ತೇನ-ಶುಕನಿಂದ, ಪೂಜಿತಃ-ಅರ್ಚಿಸಲ್ಪಟ್ಟವನಾದ, ಅಗ

ಸ್ತ್ಯೋಭೋಜನಾರ್ಥಂನಿಮಂತ್ರಿತಃ । ತತೋಸ್ನಾತುಂಮುನೌಕುಂಭಸಂಭವೇಪ್ರಾಪ್ಯಚಾಂತರಂ ॥೧೦॥ ಅಗಸ್ತ್ಯರೂಪ
ಧೃಕ್ಸೋಪಿರಾಕ್ಷಸಃಶುಕಮಬ್ರವೀತ । ಯದಿದಾಸ್ಯಸಿಮೆಬ್ರಹ್ಮನ್ ಭೋಜನಂದೇಹಿಸಾಮಿಷಂ ॥೧೧॥ ಬಹುಕಾಲಂನಭು
ಕ್ತಂಮೆನಾಂಸಂಛಾಗಾಂಗಸಂಭವಂ । ತಥೇತಿತಾರಯಾಮಾಸಮಾಂಸಭೋಜ್ಯಂಸವಿಸ್ತರಂ ॥೧೨॥ ಉಪವಿಷ್ಟೇಮುನೌ
ಭೋಕ್ತುಂರಾಕ್ಷಸೋತೀವಸುಂದರಂ । ಶುಕಭಾರ್ಯಾವಪುರ್ಧೃತ್ವಾ ಕಾಂಚಾಂತರ್ಹ್ಯೋಹರ್ಯ ಖಲಃ ॥೧೩॥ ನರಮಾಂ
ಸಂದದೌತಸ್ಮೈಸುಪಕ್ವಂಬಹುವಿಸ್ತರಂ । ದತ್ವೈವಾಂತರ್ದಧೇರಕ್ಷಃಕತೋದೃಷ್ಟ್ವಾಚುಕೋಪಸಃ ॥೧೪॥ ಅಮೇಧ್ಯಂ

ಸ್ತ್ಯಃ-ಅಗಸ್ತ್ಯಮುನಿಯು, ಭೋಜನಾರ್ಥಂ-ಭೋಜನಮಾಡುವದಕ್ಕೆ, ನಿಮಂತ್ರಿತಃ-ಕರೆಯಲ್ಪಟ್ಟನು, ತತಃ-ಆ ಬಳಿಕ, ಕುಂಭಸಂಭವೇ-ಅಗಸ್ತ್ಯಮುನಿಯು, ಸ್ನಾತುಂ-ಸ್ನಾನಮಾಡುವದಕ್ಕೆ, (ಗತೇ-ಹೋಗಿರಲು,) ಅಂತರಂ-ಸಮಯವನ್ನು, ಪ್ರಾಪ್ಯ-ಹೊಂದಿ, ॥೧೦॥ಸೋಪಿ-ಆ, ರಾಕ್ಷಸಃ-ವಜ್ರದಂಷ್ಟ್ರನು, ಅಗಸ್ತ್ಯರೂಪಧೃತ್-ಅಗಸ್ತ್ಯ-ಅಗಸ್ತ್ಯಮುನಿಯ, ರೂಪ-ಆಕೃತಿಯನ್ನು, ಧೃಕ್-ಧರಿಸಿದವನಾಗಿ, ಶುಕಂ-ಶುಕಮುನಿಯನ್ನು ಕುರಿತು, ಅಬ್ರವೀತ್- ಹೇಳಿದನು, ಯದಿದಾಸ್ಯಸಿಚೇತ್-ನನಗೆ ಭೋಜನವನ್ನು ಮಾಡಿಸಬೇಕಾಗಿದ್ದರೆ, ಸಾಮಿಷಂ-ಮಾಂಸದಿಂದ ಕೂಡಿದ, ಭೋಜನಂ-ಭೋಜನವನ್ನು, ದೇಹಿ-ಕೊಡುವವನಾಗು ॥೧೧॥ ಬಹುಕಾಲಂ-ಬಹಳ ದಿನಗಳಿಂದ ಲೂ, ಮೆ-ನನ್ನಿಂದ, ಛಾಗಾಂಗಸಂಭವಂ - ಛಾಗ-ಆಡಿನ, ಅಂಗ-ಅಂಗಗಳಲ್ಲಿ, ಸಂಭವಂ-ಹುಟ್ಟಿದ, ಮಾಂಸಂ-ಮಾಂಸವು, ನಭುಕ್ತಂ-ತಿನ್ನಲ್ಪಡಲಿಲ್ಲ, ತಥೇತಿ-ಹಾಗೆ ಆಗಲೀಯೆಂದು, (ಶುಕನು) ಮಾಂಸಭೋಜ್ಯಂ - ಮಾಂಸದಿಂದ ಭೋಜನಾರ್ಹವಾದ ವಸ್ತುವನ್ನು, ಸವಿಸ್ತರಂ-ವಿಶೇಷವಾಗಿ, ಕಾರಯಾಮಾಸ-ಮಾಡಿಸಿದನು ॥೧೨॥ ಮುನೌ-ಅಗಸ್ತ್ಯಮುನಿಯು, ಭೋಕ್ತುಂ- ಭೋಜನಮಾಡಲು,ಉಪವಿಷ್ಟೇ-ಕೂತಿರಲು, ರಾಕ್ಷಸಃ-ವಜ್ರದಂಷ್ಟ್ರನು, ಅತೀವಸುಂದರಂ-ಅತ್ಯಂತಚಲುವಾದ, ಶುಕಭಾರ್ಯಾ-ಶುಕನ ಹೆಂಡತಿಯ, ವಪುಃ-ದೇಹವನ್ನು, ಧೃತ್ವಾ- ಧರಿಸಿ, ತಾಂ-ಶುಕಮುನಿಯ ಹೆಂಡತಿಯನ್ನು, ಅಂತಃಪೋಹರ್ಯ - ಮಾಯೆಯಿಂದ ಶುಕಮುನಿಯ ಹೆಂಡತಿಯೊಳುಪ್ರವೇಶಿಸಿ,ಆಕೆಯು ಪಾಕಶಾಲೆಯಿಂದ ಆಚೆಗೆ ಹೋಗುವಂತೆ ಮೋಸಮಾಡಿ, ಖಲಃ-ನೀಚನಾದ, ವಜ್ರದಂಷ್ಟ್ರ-ರಾಕ್ಷಸನು ॥೧೩॥ ತಸ್ಮೈ - ಅಗಸ್ತ್ಯನಿಗೆ, ಸುಪಕ್ವಂ-ಚನ್ನಾಗಿ ಅಡಿಗೆಮಾಡಲ್ಪಟ್ಟ, ನರಮಾಸಂ - ಮನುಷ್ಯಮಾಸವನ್ನು, ಬಹುವಿಸ್ತರಂ-ಅತ್ಯಧಿಕವಾಗಿ, ದದೌ-ಬೊಡಿಸಿದನು, ದತ್ವೈವ- ಹೀಗೆ ಮನುಷ್ಯಮಾಂಸವನ್ನು ಅಗಸ್ತ್ಯನಿಗೆ ಬೊಡಿಸಿದವನಾಗಿಯೆ, ರಕ್ಷಃ-ಆ ವಜ್ರದಂಷ್ಟ್ರರಾಕ್ಷಸನು, ಅಂತರ್ದಧೆ-ಅಂತರ್ಧಾನವಾದನು, ತತಃ-ಆ ಬಳಿಕ, ಸಃ- ಅಗಸ್ತ್ಯಮುನಿಯು, ದೃಷ್ಟ್ವಾ- ಆ ಮನುಷ್ಯಮಾಂಸವನ್ನು ನೋಡಿ, ಚುಕೋಪ-ಕೋಪಯುಕ್ತನಾದನು ॥೧೪॥ ಅಗಸ್ತ್ಯಃ-ಅಗಸ್ತ್ಯಮುನಿಯು, ಮಾನುಷಂ - ಮನುಷ್ಯ

ಮಾನುಷಂಮಾಂಸಮಗಸ್ತ್ಯಃಶುಕಮಬ್ರವೀತ್ । ಅಭಕ್ಷ್ಯಂಮಾನುಷಂಮಾಂಸಂದತ್ತವಾನಸಿದುರ್ಮತೇ ॥೧೫॥ ಮಹ್ಯಂತ್ವ
ರಾಕ್ಷಸೋಭೂತ್ವಾತಿಷ್ಠತ್ವಂಮಾನುಷಾಶನಃ । ಇತಿಶಪ್ತಃಪುರೋಭೀತ್ವಾಪ್ರಾಹಾಗಸ್ತ್ಯಂಮುನೇತ್ವಯಾ ॥೧೬॥ ಇದಾ
ನೀಭಾಷಿತಂಮೇದದ್ಯಮಾಂಸಂದೇಹೀತಿವಿಸ್ತರಂ ।ತಥೈವದತ್ತಂಮೇದೇವಕಿಂಮೇಶಾಪಂಪ್ರದಾಸ್ಯಸಿ॥೧೭॥ಶ್ರುತ್ವಾಶುಕಸ್ಯವಚ
ನಂಮುಹೂರ್ತಂಧ್ಯಾನಮಾಸ್ಥಿತಃ । ಜ್ಞಾತ್ವಾರಕ್ಷಃಕೃತಂಸರ್ವಂತತಃಪ್ರಾಹಶುಕಂಸುಧೀಃ ॥೧೮॥ ತವಾಪಕಾರಿ
ಣಾಸರ್ವಂರಾಕ್ಷಸೇನಕೃತಂತ್ವಿದಂ । ಅವಿಚಾರ್ಯ್ಯವಮೇದತ್ತಃಶಾಪಸ್ತೇಮುನಿಸತ್ತಮ ॥೧೯॥

ಸಂಬಂಧವಾದ, ಮಾಂಸಂ-ಮಾಂಸವು, ಅಮೇಧ್ಯಂ-ಭೋಜನಕ್ಕೆ ಅಯೋಗ್ಯವೆಂದು, (ಜ್ಞಾತ್ವಾ-ತಿಳಿದು,) ಶುಕಃ-ಶುಕನನ್ನು ಕುರಿತು, ಅಬ್ರವೀತ್- ಹೇಳಿದನು, ದುರ್ಮ
ತೇ-ದುರ್ಬುದ್ಧಿಯುಳ್ಳ ಶುಕನೆ, ತ್ವಂ-ನೀನು, ಅಭಕ್ಷ್ಯಂ-ತಿನ್ನಬಾರದಂಥ, ಮಾನುಷಂ-ಮನುಷ್ಯಸಂಬಂಧವಾದ, ಮಾಂಸಂ-ಮಾಂಸವನ್ನು, ಮಹ್ಯಂ-ನನಗೆ, ದತ್ತವಾನ್-
ಕೊಟ್ಟಂಥವನು, ಅಸಿ-ಆಗಿದ್ದೀ ॥೧೫॥ ಅದ್ದರಿಂದ, ರಾಕ್ಷಸೋಭೂತ್ವಾ- ರಾಕ್ಷಸನಾಗಿ, ಮಾನುಷಾಶನಃ-ಮನುಷ್ಯನನ್ನು ಭಕ್ಷಿಸುವವನಾಗಿ, ತಿಷ್ಠ-ಇರು, ಇ
ತಿ-ಈ ರೀತಿಯಾಗಿ, ಶಪ್ತಃ-ಶಾಪವನ್ನು ಹೊಂದಿದವನಾಗಿ, ಶುಕನು, ಭೀತ್ವಾ - ಭಯದಿಂದ, ಪುರಃ-ಅಗಸ್ತ್ಯರುಷಿಯಮುಂದೆ, ಪ್ರಾಹ- ಹೇಳಿದನು, ಅಗಸ್ತ್ಯಮು
ನೇ-ಅಗಸ್ತ್ಯರುಷಿಯೇ, ತ್ವಯಾ-ನಿನ್ನಿಂದ, ॥೧೬॥ ಅದ್ಯ-ಈಗ ಭೋಜನಕಾಲದಲ್ಲಿ, ಮೇ-ನನಗೆ, ಮಾಂಸಂ-ಮಾಂಸವನ್ನು, ವಿಸ್ತರಂ-ಹೆಚ್ಚಾಗಿ, ದೇಹಿ- ಭೋಜ
ನಕಾಲದಲ್ಲಿ ಕೊಡುವವನಾಗು ಎಂಬದಾಗಿ, ಇದಾನೀಂ-ಈಗಲೇ, ಭಾಷಿತಂ- ನಿನ್ನಿಂದಹೇಳಲ್ಪಟ್ಟಿತು, ದೇವ-ಮಹರ್ಷಿಯೆ, ತಥೈವ- ಹಾಗೆಯೆ, ಮೇ - ನನ್ನಿಂದ, ದ
ತ್ತಂ-ಮಾಂಸವು ಭೋಜನಾರ್ಥವಾಗಿ ಕೊಡಲ್ಪಟ್ಟಿತು, ಮೇ-ನನಗೆ, ಕಿಂ-ಏನು, ಶಾಪಂ - ಶಾಪವನ್ನು, ಪ್ರದಾಸ್ಯಸಿ- ಕೊಡುವವನಾಗುತ್ತೀ, ॥೧೭॥ಶುಕಸ್ಯ-ಶುಕ
ನ, ವಚನಂ - ಮಾತನ್ನು, ಶ್ರುತ್ವಾ-ಕೇಳಿ, ಮುಹೂರ್ತಂ-ಮುಹೂರ್ತಕಾಲದವರೆಗೆ, ಧ್ಯಾನಂ- ಯೋಜನೆಯನ್ನು, ಆಸ್ಥಿತಃ-ಮಾಡಿದವನಾಗಿ, ಸುಧೀಃ- ಬುದ್ಧಿಶಾ
ಲಿಯಾದ ಅಗಸ್ತ್ಯಮುನಿಯು, ರಕ್ಷಃಕೃತಂ-ವಜ್ರದಂಷ್ಟ್ರನೆಂಬ ರಾಕ್ಷಸನಿಂದಮಾಡಲ್ಪಟ್ಟ, ಸರ್ವಂ- ಎಲ್ಲಾ ಕೆಲಸವನ್ನೂ, ಜ್ಞಾತ್ವಾ-ತಿಳಿದು, ತತಃ- ಆ ಬಳಿಕ, ಶು
ಕಂ-ಶುಕನನ್ನು ಕುರಿತು, ಪ್ರಾಹ-ಹೇಳಿದನು ॥೧೮॥ತವ-ನಿನಗೆ, ಅಪಕಾರಿಣಾ-ಅಪಕಾರವನ್ನು ಮಾಡಿದವನಾದ, ರಾಕ್ಷಸನ-ರಾಕ್ಷಸನಿಂದ, ಇದಂಸರ್ವಂ - ಇದೆಲ್ಲವು,
ಕೃತಂ-ಮಾಡಲ್ಪಟ್ಟಿತು, ಮುನಿಸತ್ತಮ-ರುಷಿಶ್ರೇಷ್ಠನಾದ ಶುಕನೇ, ಅವಿಚಾರ್ಯ-ವಿಚಾರಮಾಡದೆನೇ, ತೇ-ನಿನಗೆ, ಮೇ-ನನ್ನಿಂದ, ಶಾಪಃ-ಶಾಪವು, ದತ್ತಃ-ಕೊಡಲ್ಪಟ್ಟಿತು॥೧೯॥
ತಥಾಪಿ-ಆದಾಗ್ಯೂ ಮೇ-ವಚಃ-ನನ್ನ ಮಾತು, ಅಮೋಘಂ-ತಪ್ಪುವದಿಲ್ಲ, ಏವಮೇವ-ನಾನುಕೊಟ್ಟ ಶಾಪದಂತೆ, ಭವಿಷ್ಯತಿ-ಆಗುತ್ತೆ, ರಾಕ್ಷಸಂ-ರಾಕ್ಷಸಸಂಬಂಧವಾದ, ವ

ಕಥಾಪಿಮೆಸಿಚೆಕೊವೊಘವೆಮೆವೆಮೆವಭವಿಷ್ಯತಿ । ರಾಕ್ಷಸಂವಪುರಾಸ್ಥಾಯರಾವಣಸ್ಯಸಹಾಯಕೃತ್ ॥೨೦॥ ತಿಷ್ಠತಾವದ್ಯ
ದಾರಾಮೊದಶಾನನವಧಾಯಹಿ । ಆಗಮಿಷ್ಯತಿಲಂಕಾಯಾಃಸಮೀಪಂವಾನರೈಸ್ಸಹ ॥೨೧॥ ಪ್ರೇಷಿತೋರಾವಣೇನತ್ವಂಚಾ
ರೋಭೂತ್ವಾರಘೂತ್ತಮಂ । ದೃಷ್ಟ್ವಾಶಾಪಾದ್ವಿನಿರ್ಮುಕ್ತೋಬೋಧಯಿತ್ವಾಚರಾವಣಂ ॥೨೨॥ತತ್ವಜ್ಞಾನಂತತೋಮು
ಕ್ತಃಪರಂಪದಮವಾಪ್ಸ್ಯಸಿ । ಇತ್ಯುಕ್ತೋಗಸ್ತ್ಯಮುನಿನಾಶುಕೋಬ್ರಾಹ್ಮಣಸತ್ತಮಃ ॥೨೩॥ ಬಭೂವರಾಕ್ಷಸಃಸದ್ಯೋ
ರಾವಣಂಪ್ರಾಪ್ಯಸಂಸ್ಥಿತಃ । ಇದಾನೀಂಚಾರರೂಪೇಣದೃಷ್ಟ್ವಾರಾಮಂಸಹಾನುಜಂ ॥೨೪॥ ರಾವಣಂತತ್ವವಿಜ್ಞಾನಂ
ಬೋಧಯಿತ್ವಾಪುನರ್ದೃತಂ । ಪೂರ್ವವದ್ಬ್ರಾಹ್ಮಣೋಭೂತ್ವಾಸ್ಥಿತೋವೈಖಾನಸೈಸ್ಸಹ॥೨೫॥ ತತಸ್ಸಮಾಗಮದ್ವೃದ್ಧೋ

ರ್ದೃಃ-ದೇಹವನ್ನು, ಆಸ್ಥಾಯ-ವಹಿಸಿ, ರಾವಣಸ್ಯ-ರಾವಣನಿಗೆ, ಸಹಾಯಕೃತ್-ಸಹಾಯವನ್ನುಮಾಡುವವನಾಗಿ, ॥೨೦॥ಯದಾ-ಯಾವಾಗ, ರಾಮಚಂದ್ರನು, ದಶಾನನವಧಾಯ, ದಶಾನನ-ರಾವಣನ, ವಧಾಯ-ಸಂಹಾರಕ್ಕಾಗಿ, ವಾನರೈಸ್ಸಹ-ಕಪಿಗಳಿಂದಕೂಡಿದವನಾಗಿ, ಲಂಕಾಯಾಃ-ಲಂಕಾಪಟ್ಟಣದ, ಸಮೀಪಂ-ಸಮೀಪವನ್ನು, ಕುರಿತು, ಆಗಮಿಷ್ಯತಿ-ಬರುತ್ತಲಿದ್ದಾನೊ, ತಾವತ್-ಅದುವರಿಗೆ, ತಿಷ್ಠ-ರಾವಣನಬಳಿಯಲ್ಲಿಇರು, ॥೨೧॥ ತ್ವಂ-ನೀನು ರಾವಣೇನ-ರಾವಣನಿಂದ, ಪ್ರೇಷಿತಃ-ಕಳುಹಿಸಲ್ಪಟ್ಟವನಾದ, ಚಾರಃ-ದೂತನು, ಭೂತ್ವಾ-ಆಗಿ, ರಘೂತ್ತಮಂ-ರಾಮಚಂದ್ರನನ್ನು, ದೃಷ್ಟ್ವಾ-ನೋಡಿ, ರಾವಣಂ-ರಾವಣನನ್ನುಕುರಿತು, ಬೋಧಯಿತ್ವಾ-ಬುದ್ಧಿಮಾತುಗಳನ್ನುಹೇಳಿ ಶಾಪಾತ್-ಶಾಪದಿಂದ, ವಿನಿರ್ಮುಕ್ತಃ-ಬಿಡುಗಡೆಯಾದವನಾಗಿ,॥೨೨॥ತತಃ-ಆ ಬಳಿಕ, ತತ್ವಜ್ಞಾನಂ-ಆತ್ಮಜ್ಞಾನವನ್ನು,(ಲಬ್ಧ್ವಾ-ಹೊಂದಿ,)ಮುಕ್ತಃ-ಸಂಸಾರಬಂಧದಿಂದಮುಕ್ತನಾಗಿ, ಪರಂಪದಂ-ವೈಕುಂಠವನ್ನು, ಅವಾಪ್ಸ್ಯಸಿ-ಹೊಂದುತ್ತಿ॥ ಅಗಸ್ತ್ಯಮುನಿನಾ-ಅಗಸ್ತ್ಯಮುನಿಯಿಂದ, ಇತ್ಯುಕ್ತಃ-ಹೀಗೆಹೇಳಲ್ಪಟ್ಟವನಾದ, ಬ್ರಾಹ್ಮಣಸತ್ತಮಃ-ಬ್ರಾಹ್ಮಣಶ್ರೇಷ್ಠನಾದ, ಶುಕಃ-ಶುಕಮುನಿಯು, ॥೨೩॥ ಸದ್ಯಃ-ಆಗಲೇ, ರಾಕ್ಷಸಃ-ರಾಕ್ಷಸನು, ಬಭೂವ-ಆದನು, ರಾವಣಂ-ರಾವಣನನ್ನು, ಪ್ರಾಪ್ಯ-ಹೊಂದಿ, ಸಂಸ್ಥಿತಃ-ಇರುತ್ತಿದ್ದನು, ಇದಾನೀಂ-ಈಗ, ಚಾರರೂಪೇಣ-ಭೃತ್ಯರೂಪದಿಂದ, ಸಹಾನುಜಂ-ತಮ್ಮನಿಂದಕೂಡಿದ, ರಾಮಂ-ರಾಮಚಂದ್ರನನ್ನು, ದೃಷ್ಟ್ವಾ-ನೋಡಿ, ॥೨೪॥ ರಾವಣಂ-ರಾವಣನನ್ನುಕುರಿತು, ತತ್ವಜ್ಞಾನಂ-ಆತ್ಮಜ್ಞಾನವನ್ನು, ಬೋಧಯಿತ್ವಾ-ಬುದ್ಧಿಹೇಳಿ, ಪುನಃ-ತಿರಿಗಿ, ದ್ರುತಂ-ಜಾಗ್ರತೆಯಾಗಿ ಪೂರ್ವವತ್-ಎಂದಿನಂತೆ, ಬ್ರಾಹ್ಮಣಃ-ಬ್ರಾಹ್ಮಣನು, ಭೂತ್ವಾ-ಆಗಿ, ವೈಖಾನಸೈಸ್ಸಹ-ವೈಖಾನಸರಸಂಗಡ, ಸ್ಥಿತಃ-ಇರುವವನಾದನು ॥೨೫॥ ತತಃ-ಆ ಬಳಿಕ, ವೃದ್ಧಃ-ಮುದುಕನಾದ, ಮಹಾ-ದೊಡ್ಡವನಾದ, ಬುದ್ಧಿಮಾರ್ಗ-ಜ್ಞಾನವಂತನಾದ, ನೀತಿನಿಪುಣಃ, ನೀತಿ-ರಾಜಧರ್ಮಗಳನ್ನುಹೇಳುವದರಲ್ಲಿ, ನಿಪುಣಃ-ದಕ್ಷನಾದ, ರಾಜ್ಞಃ-

ಮಾಲ್ಯವಾನ್ರಾಕ್ಷಸೋಮಹಾನ್ । ಬುದ್ಧಿಮಾನ್ನೀತಿನಿಪುಣೋರಾಜ್ಞೋಮಾತುಃಪ್ರಿಯಃಪಿತಾ ||೨೬|| ಪ್ರಾಹತಂರಾಕ್ಷಸಂವೀರಂಪ್ರಶಾಂತೇನಾಂತರಾತ್ಮನಾ । ಶೃಣುರಾಜನ್ವಚೋಮದ್ಯಶ್ರುತ್ವಾಕುರುಯಥೇಪ್ಸಿತಂ ||೨೭|| ಯದಾಪ್ರವಿಷ್ಟಾನಗರೀಂಜಾನಕೀರಾಮವಲ್ಲಭಾ । ತದಾದಿಪುರ್ಯ್ಯಾಂದೃಶ್ಯಂತೇನಿಮಿತ್ತಾನಿದಶಾನನ ||೨೮|| ಘೋರಾಣಿನಾಶಹೇತೂನಿತಾನಿಮೇವದತಃಶೃಣು । ಖರಸ್ತನಿತನಿರ್ಘೋಷಾಮೇಘಾಅತಿಭಯಂಕರಾಃ ||೨೯|| ಶೋಣಿತೇನಾಭಿವರ್ಷಂತಿಲಂಕಾಮುಷ್ಣೇನಸರ್ವದಾ । ರುದಂತಿದೇವಲಿಂಗಾನಿಸ್ವಿದ್ಯಂತಿಪ್ರಚಲಂತಿಚ ||೩೦|| ಕಾಳಿಕಾಪಾಂಡರೈರ್ದಂತೈಃಪ್ರಹಸಂತ್ಯಗ್ರತಃಸ್ಥಿತಾ । ಖರಾಗೋಷುಪ್ರಜಾಯಂತೇಮೂಷಕಾನಕುಲೈಸ್ಸಹ ||೩೧|| ಮಾರ್ಜಾರೇಣಚಯುಧ್ಯಂತಿಪನ್ನಗಾಗರುಡೇನಚ । ಕರಾಳೋವಿಕಟೋಮುಂ

ಧೊರೆಯಾದರಾವಣನಿಗೆ, ಪಿತಾ-ತಂದೆಯಾದ, ಪ್ರಿಯಃ-ರಾಜನಾದರಾವಣನಿಗಿಷ್ಟನಾದ, ಮಾಲ್ಯವಾನ್-ಮಾಲ್ಯವಂತನೆಂಬಹೆಸರುಳ್ಳ, ರಾಕ್ಷಸಃ-ರಾಕ್ಷಸನು, ||೨೬|| ಪ್ರಶಾಂತೇನ-ಸಮಾಧಾನವಾದ, ಅಂತರಾತ್ಮನಾ-ಅಂತರಾತ್ಮನಿಂದ, ವೀರಂ-ಶೂರನಾದ, ತಂ-ಆ, ರಾಕ್ಷಸಂ-ರಾವಣನನ್ನು ಕುರಿತು, ಪ್ರಾಹ-ಹೇಳಿದನು, ರಾಜನ್-ಧೊರೆಯಾದರಾವಣನೇ, ಅದ್ಯ-ಈಗ, ಮೇ-ನನ್ನ, ವಚಃ-ಮಾತುಗಳನ್ನು, ಶೃಣು-ಕೇಳು, ಶ್ರುತ್ವಾ-ಕೇಳಿ, ಯಥೇಪ್ಸಿತಂ-ಇಷ್ಟವಿದ್ದಂತೆ, ಕುರು-ಮಾಡು, ||೨೭|| ಯದಾ-ಯಾವಾಗ, ರಾಮವಲ್ಲಭಾ-ರಾಮಚಂದ್ರನಿಗೆಹೆಂಡತಿಯಾದ, ಜಾನಕೀ-ಸೀತೆಯು, ನಗರೀಂ-ಲಂಕಾಪಟ್ಣವನ್ನು, ಪ್ರವಿಷ್ಟಾ-ಸೇರಿದವಳಾದಳೋ, ದಶಾನನ-ರಾವಣನೇ, ತದಾದಿ ಅದು ಮೊದಲಾಗಿ, ಪುರ್ಯ್ಯಾಂ-ಲಂಕಾಪಟ್ಣದಲ್ಲಿ, ನಿಮಿತ್ತಾನಿ-ದುರ್ನಿಮಿತ್ತಗಳು, ದೃಶ್ಯಂತೇ-ಕಾಣುತ್ತಿರುವವು, ||೨೮|| ನಾಶಹೇತೂನಿ-ನಾಶವಾಗುವದಕ್ಕೆ ಕಾರಣಗಳಾಗಿರುವ, ಘೋರಾಣಿ-ಕ್ರೂರಗಳಾದ, ತಾನಿ-ಆನಿಮಿತ್ತಗಳನ್ನು, ವದತಃ-ಹೇಳುತ್ತಿರುವ, ಮೇ-ನನ್ನ, (ವಚಃ-ಮಾತನ್ನು) ಶೃಣು-ಕೇಳು, ಖರಸ್ತನಿತನಿರ್ಘೋಷಾಃ-ಖರ-ಕತ್ತೆಯ, ಸ್ತನಿತ-ಘರ್ಜನೆಯಂತೆ, ನಿರ್ಘೋಷಾಃ-ಘರ್ಜನೆಯುಳ್ಳ, ಅತಿಭಯಂಕರಾಃ-ಅತ್ಯಂತ ಭಯಂಕರಗಳಾದ, ಮೇಘಾಃ-ಮೇಘಗಳು, ||೨೯|| ಸರ್ವದಾ-ಯಾವಾಗಲೂ, ಉಷ್ಣೇನ-ಬಿಸಿಯಾದ, ಶೋಣಿತೇನ-ರಕ್ತದಿಂದ, ಲಂಕಾಂ-ಲಂಕಾಪಟ್ಣವನ್ನು ಕುರಿತು, ಅಭಿವರ್ಷಂತಿ-ಮಳೆಯನ್ನು ಮಾಡುತ್ತಿವೆ, ದೇವಲಿಂಗಾನಿ-ದೇವತೆಗಳ, ಲಿಂಗಾನಿ-ಮೂರ್ತಿಗಳು, ರುದಂತಿ-ಅಳುತ್ತವೆ, ಸ್ವಿದ್ಯಂತಿ-ಬೆವರುತ್ತವೆ, ಪ್ರಚಲಂತಿ-ಕದಲುತ್ತಿವೆ, ||೩೦|| ಕಾಳಿಕಾ-ಕಾಳಿಯು, ಪಾಂಡರೈಃ-ಬಿಳುಪಾದ, ದಂತೈಃ-ಹಲ್ಲುಗಳಿಂದ, ಪ್ರಹಸಂತೀ-ನಗುತ್ತಾ, ಅಗ್ರತಃ-ಪ್ರತಿರಾಕ್ಷಸನಮುಂದೆ, ಸ್ಥಿತಾ-ಇರುತ್ತಿದ್ದಾಳೆ, ಖರಾಃ-ಕತ್ತೆಗಳು, ಗೋಷು-ಹಸುಗಳಲ್ಲಿ, ಪ್ರಜಾಯಂತೇ-ಹುಟ್ಟುತ್ತಲಿವೆ, ಮೂಷಕಾಃ-ಇಲಿಗಳು, ನಕುಲೈಃ-ಮುಂಗಸಿಗಳಿಂದ, (ಯುದ್ಧಂ ಕುರ್ವಂತಿ- ಯುದ್ಧವನ್ನು ಮಾಡುತ್ತವೆ,) ||೩೧|| (ಮತ್ತು ಮೂಷಕಗಳು) ಮಾರ್ಜಾರೇಣ-ಬೆಕ್ಕಿನ

ಡಃಪುರುಷಃಪೃಷ್ಣಪಿಂಗಳಃ ||೨೧|| ಕಾಲೋಗೃಹಾಣಿಸರ್ವೇಷಾಂಕಾಲೇಕಾಲೇನ್ವವೇಕ್ಷತೇ । ಏತಾನ್ಯನ್ಯಾನಿದೃಶ್ಯಂತೇನಿಮಿತ್ತಾನ್ಯುದ್ಭವಂತಿಚ ||೨೨|| ಅತಃಕುಲಸ್ಯರಕ್ಷಾರ್ಥಂಶಾಂತಿಂಕುರುದಶಾನನ । ಸೀತಾಂಸತ್ಕೃತ್ಯಸಧನಾಂರಾಮಾಯಾಶುಪ್ರಯಚ್ಛಭೋ ||೨೪|| ರಾಮಂನಾರಾಯಣಂವಿದ್ಧಿವಿದ್ವೇಷಂತ್ಯಜರಾಘವೇ।ಯತ್ಪಾದಪೋತಮಾಶ್ರಿತ್ಯಜ್ಞಾನಿನೋಭವಸಾಗರಾತ್ ||೨೫||ತರಂತಿಭಕ್ತಿಪೂತಾಂತಾಸ್ತತೋರಾಮೋನಮಾನುಷಃ।ಭಜಸ್ವಭಕ್ತಿಭಾವೇನರಾಮಂಸರ್ವಹೃದಾಲಯಂ||೨೬|| ಯದ್ಯಪಿತ್ವಂದುರಾಚಾರೋಭಕ್ತ್ಯಾಪೂತೋಭವಿಷ್ಯಸಿ । ಮದ್ವಾಕ್ಯಂಕುರುರಾಜೇಂದ್ರಕುಲಕೌಶಲಹೇತವೇ ||೨೭||



ಸಂಗಡೆ, ಪನ್ನಗಾಃ-ಸರ್ಪಗಳು, ಗರುಡೇನಚ-ಗರುತ್ಮಂತನಸಂಗಡಲೂ, ಯುಧ್ಯಂತಿ-ಯುದ್ಧವನ್ನು ಮಾಡುತ್ತಿವೆ, ಕರಾಳಃ-ಭಯಂಕರವಾದ, ವಿಕಟಃ-ವಿಕಾರರೂಪವುಳ್ಳವನಾದ, ಮುಂಡಃ-ತಲೆಮಾತ್ರವುಳ್ಳವನಾದ, ಕೃಷ್ಣಪಿಂಗಳಃ-ಕೃಷ್ಣವರ್ಣವೂ ಪಿಂಗಳಬಣ್ಣವುಳ್ಳವನಾದ, ಕಾಲಃ-ಮೃತ್ಯುಸ್ವರೂಪನಾದ, ಪುರುಷಃ-ಪುರುಷನು, ||೨೧|| ಸರ್ವೇಷಾಂ-ಸಮಸ್ತರಾಕ್ಷಸರ, ಗೃಹಾಣಿ-ಮನೆಗಳನ್ನು, ಕಾಲೇಕಾಲೇ-ಪ್ರಾತಸ್ಸಾಯಂಕಾಲಗಳಲ್ಲಿ, ಅನ್ವವೇಕ್ಷತೇ-ನೋಡುತ್ತಲಿದ್ದಾನೆ, ಏತಾನಿ-ಈ) ನಿಮಿತ್ತಾನಿ-ಸೂಚನೆಗಳು, ದೃಶ್ಯಂತೇ-ಕಾಣುತ್ತಲಿವೆ, ಅನ್ಯಾನಿ-ಇನ್ನು ಇತರಗಳಾದ ಅನೇಕದುರ್ನಿಮಿತ್ತಗಳು, ಉದ್ಭವಂತಿಚ-ಹುಟ್ಟುತ್ತಲಿವೆ, ||೨೨|| ಅತಃ-ಆದ್ದರಿಂದ, ದಶಾನನ-ರಾವಣನೇ, ಕುಲಸ್ಯ-ವಂಶದ, ರಕ್ಷಾರ್ಥಂ-ಕಾಪಾಡುವಿಕೆಗಾಗಿ ಶಾಂತಿಂ-ಸಮಾಧಾನವನು, ಕುರು-ಮಾಡು, ಭೋ-ರಾವಣನೇ, ಸಧನಾಂ-ಧನದಿಂದಕೂಡಿರುವ, ಸೀತಾಂ-ಸೀತೆಯನ್ನು: ರಾಮಾಯ-ರಾಮಚಂದ್ರನಿಗೆ, ಸತ್ಕೃತ್ಯ-ಮರ್ಯಾದೆಯನ್ನು ಮಾಡಿ, ಆಶು-ಬೇಗನೆ, ಪ್ರಯಚ್ಛ-ಕೊಡು, ||೨೪|| ರಾಮಂ-ರಾಮಚಂದ್ರನನ್ನು, ನಾರಾಯಣಂ-ನಾರಾಯಣನನ್ನಾಗಿ, ವಿದ್ಧಿ-ತಿಳಿ, ರಾಘವೇ-ರಾಮಚಂದ್ರನಮೇಲೆ, ವಿದ್ವೇಷಂ-ಕ್ರೋಧವನ್ನು, (ಹಗೆತನವನ್ನು,) ತ್ಯಜ-ಬಿಡು, ಜ್ಞಾನಿನಃ-ವಿವೇಕಿಗಳು, ಯತ್ಪಾದಪೋತಂ-ಯಾವರಾಮಚಂದ್ರನ ಪಾದಗಳೆಂಬ ತೆಪ್ಪವನ್ನು, ಆಶ್ರಿತ್ಯ-ಆಶ್ರಯಿಸಿ, ಭವಸಾಗರಾತ್-ಸಂಸಾರವೆಂಬ ಸಮುದ್ರದದೆಸೆಯಿಂದ, ||೨೫|| ಭಕ್ತಿಪೂತಾಂತಾಃ- ಭಕ್ತಿ-ಭಕ್ತಿಯಿಂದ, ಪೂತಾ-ಪರಿಶುದ್ಧವಾದ, ಅಂತಾಃ-ಅಂತಃಕರಣವುಳ್ಳವರಾಗಿ, ತರಂತಿ-ದಾಟಿಹೋಗುತ್ತಾರೆ, ತತಃ-ಆಕಾರಣದಿಂದ, ರಾಮಃ-ರಾಮಚಂದ್ರನು, ನಮಾನುಷಃ-ಮನುಷ್ಯನಲ್ಲ, ಸರ್ವ-ಸಮಸ್ತಪ್ರಾಣಿಗಳ, ಹೃದಾಲಯಂ-ಹೃದಯವೇ ಮನೆಯಾಗಿರುವವನಾದ, ರಾಮಂ-ರಾಮಚಂದ್ರನನ್ನು, ಭಕ್ತಿಭಾವೇನ-ಭಕ್ತಿತನದಿಂದ, ಭಜಸ್ವ-ಸೇವಿಸು, ||೨೬|| ತ್ವಂ-ನೀನು, ಯದ್ಯಪಿದುರಾಚಾರಃ-ಕೆಟ್ಟನಡತೆಯುಳ್ಳವನಾಗಿದ್ದಾಗ್ಯೂ, ಭಕ್ತ್ಯಾ-ಭಕ್ತಿಯಿಂದ, ಪೂತಃ-ಪರಿಶುದ್ಧನು, ಭವಿಷ್ಯಸಿ-ಆಗುತ್ತೀ, ರಾಜೇಂದ್ರ-ರಾಜಶ್ರೇಷ್ಠನಾದರಾವಣನೇ, ಕುಲಕೌಶಲಹೇತವೇ-ಕುಲ-ವಂಶದ, ಕೌಶಲ-ಕ್ಷೇಮದ, ಹೇತವೇ-ಕಾರಣಕ್ಕಾಗಿ, ಮದ್ವಾಕ್ಯಂ-ನನ್ನ ಮಾತನ್ನು, ಕುರು-ಮಾಡು, ||೨೭||

ತತ್ತುಮಾಲ್ಯವತೋವಾಕ್ಯಂಹಿತಮುಕ್ತಂದಶಾನನಃ । ನಮರ್ಷಯತಿದುಷ್ಟಾತ್ಮಾಕಾಲಸ್ಯವಶಮಾಗತಃ ॥೩೮॥ಮಾನವಂ ಕೃಪಣಂರಾಮಮೇಕಂಶಾಖಾಮೃಗಾಶ್ರಯಂ । ಸಮರ್ಥಂಮನ್ಯಸೇಕೇನಹೀನಂಪಿತ್ರಾಮುನಿಪ್ರಿಯಂ ॥೩೯॥ ರಾಮೇಣ ಪ್ರೇಷಿತೋನೂನಂಭಾಷಸೇತ್ವಮನರ್ಗಳಂ । ಗಚ್ಛವೃದ್ಧೋಸಿಬಂಧುಸ್ತ್ವಂಸೋಢಂಸರ್ವಂತ್ವಯೋದಿತಂ ॥೪೦॥ ಇತೋಮ ತ್ಕರ್ಣಪದವೀಂದಹತ್ಯೇತದ್ವಚಸ್ತವ । ಇತ್ಯುಕ್ತ್ವಾಸರ್ವಸಚಿವೈಃಸಹಿತಃಪ್ರಸ್ಥಿತಸ್ತದಾ ॥೪೧॥ ಪ್ರಾಸಾದಾಗ್ರೇ

ದಶಾನನಃ-ರಾವಣನು, ಮಾಲ್ಯವತಃ-ಮಾಲ್ಯವಂತನಿಂದ, ಉಕ್ತಂ-ಹೇಳಲ್ಪಟ್ಟ, ಹಿತಂ-ಕ್ಷೇಮಕರವಾದ, ತತ್‌ವಾಕ್ಯಂ-ಆ ಮಾತನ್ನು, ದುಷ್ಟಾತ್ಮಾ- ಕೆಟ್ಟಯೋಚನೆ ಯುಳ್ಳವನಾಗಿ, ಕಾಲಸ್ಯ-ಮೃತ್ಯುವಿನ, ವಶಂ-ಅಧೀನವನ್ನು, ಆಗತಃ-ಹೊಂದಿದವನಾಗಿ, ನಮರ್ಷಯತಿ-ಸಹಿಸಿದವನಾಗಲಿಲ್ಲ ॥೩೮॥ ಮಾನವಂ-ಮನುಷ್ಯನಾದ,ಅ ಥವಾ ಧರ್ಮಸಂಸ್ಥಾಪನಾರ್ಥವಾಗಿ ಮನುಜರೂಪನಾಗಿ ಹುಟ್ಟಿರುವ, ಕೃಪಣಂ-ದರಿದ್ರನಾದ, ಅಥವಾ ಲೌಕಿಕವಿಕ್ಷೇಪಕಾದಿಗಳಿಲ್ಲದೆ ಇರುವವನಾದ, ಶಾಖಾಮೃಗಾಶ್ರ ಯಂ-ಶಾಖಾಮೃಗ-ಕಪಿಗಳ, ಆಶ್ರಯಂ-ಆಸರೆವೃಕ್ಷವನಾದ, ಅಥವಾ ಶಾಖಾ-ಉಪನಿಷತ್ತುಗಳಿಂದ, ಮೃಗ-ಹುಡುಕಲ್ಪಡುತ್ತಿರುವ, ಆಶ್ರಯಂ- ಅಧಿಷ್ಠಾನಭೂತನಾದ, ಅಂದರೆ ವೇದವಾಕ್ಯಗಳಿಗೆ ಆ ವಿಷಯನಾದ, ಏಕ-ಒಂಟಿಗನಾದ, ಅಥವಾ ಅದ್ವಿತೀಯನಾದ, ಪಿತ್ರಾ-ತಂದೆಯಿಂದ, ಹೀನಂ-ತ್ಯಜಿಸಲ್ಪಟ್ಟವನಾದ, ಅಥವಾ ತನಗೆ ಜ ನ್ಮಾದಿಗಳಿಲ್ಲದ್ದರಿಂದ, ಜನಕನಿಲ್ಲದವನಾದ, ಮುನಿಪ್ರಿಯಂ-ಋಷಿಗಳಾದವರಿಗೆ ಮಾತ್ರಪ್ರಿಯನಾದ, ಅಥವಾ-ಮುನಿಮನನ ಶೀಲರಾದಧ್ಯಾನನಿಷ್ಠರಿಗೆ, ಪ್ರಿಯಂ-ಇಷ್ಟನಾ ದ, ರಾಮಂ-ರಾಮಚಂದ್ರನನ್ನು, ಅಥವಾರಾಮಂ- ಪರಬ್ರಹ್ಮನನ್ನು, ಕೇನ-ಯಾವಕಾರಣದಿಂದ, ಸಮರ್ಥಂ-ನಮ್ಮಗಳನ್ನು ಜಯಿಸತಕ್ಕವನೆಂಬದಾಗಿ, ಮನ್ಯಸೆ- ತಿ ಳಿಯುತ್ತೀಯೆ, ಅಂದರೆ ಸಮರ್ಥನಲ್ಲ, ಕೇನ-ಯಾವ ಕಾರಣದಿಂದ, ಸಮರ್ಥಂ-ನಮ್ಮರಾಕ್ಷಸ ಕುಲವನ್ನು, ಸಂಹಾರಮಾಡುವದಕ್ಕೆ ಶಕ್ತನನ್ನಾಗಿ,ಮನ್ಯಸೆಕಿಂ-ನೀನು ತಿಳಿ ಯುವದಿಲ್ಲವೆ, ಅಂದರೆ-ನೀನೂ ತಿಳಿದೇಇದ್ದೀ ॥೩೯॥ತ್ವಂ-ನೀನು, ರಾಮೇಣ-ರಾಮಚಂದ್ರನಿಂದ,ಪ್ರೇಷಿತಃ-ಕಳುಹಿಸಲ್ಪಟ್ಟವನಾಗಿ, ಅನರ್ಗಳಂ-ಅಡ್ಡಿಯಿಲ್ಲದೇ ತೋರಿದಮಾ ತನ್ನು, ಭಾಷಸೆ-ಆಡುತ್ತೀ, ತ್ವಂ-ನೀನು, ವೃದ್ಧಃ-ಮುದುಕನು, ಬಂಧುಃ-ಅಜ್ಜನು, (ಆದ್ದರಿಂದ) ತ್ವಯಾ-ನಿನ್ನಿಂದ, ಉದಿತಂ-ಹೇಳಲ್ಪಟ್ಟ, ಸರ್ವಂ-ಎಲ್ಲವನ್ನು, ಸೋಢಂ-ನಾನು ಸಹಿಸಿದ್ದೇನೆ, ಗಚ್ಛ-ಹೋಗು, ॥೪೦॥ಇತಃ-ಇಲ್ಲಿಂದೀಚೆಗೆ, ತವ-ನಿನ್ನ, ತದ್ವಚಃ-ಆ ಮಾತು, ಮತ್ಕರ್ಣಪದವೀಂ-ನನ್ನ ಕಿವಿಗಳ ಪ್ರದೇಶವನ್ನು, ದಹತಿ ಸುಡುತ್ತಲಿಧೆ, ಇತ್ಯುಕ್ತ್ವಾ-ಮಾಲ್ಯವಂತನಿಗೆ ಈ ಪ್ರಕಾರವಾಗಿ ಹೇಳಿ, ಸರ್ವಸಚಿವೈಃ-ಎಲ್ಲಾಮಂತ್ರಿಗಳಿಂದಲು, ಸಹಿತಃ-ಕೂಡಿದವನಾಗಿ, ತದಾ-ಆಗ, ಪ್ರಸ್ಥಿತಃ- ಹೊರಟಂಥವನಾದನು, ॥೪೧॥ ಪ್ರಾಸಾದಾಗ್ರೇ-ಉಪ್ಪರಿಗೆಯ ಕೊನೆಯಲ್ಲಿ, ಸಮಾಸೀನಃ-ಕೂತಿರುವವನಾ, ವಾನರಸೈನಿಕಾನ್- ಕಪಿಸೇನೆಯಲ್ಲಿ ಇರುವಕಪಿಗಳನ್ನು,

ಸಮಾಸೀನಃಪಶ್ಯನ್ವಾನರಸೈನಿಕಾನ್ । ಯುದ್ಧಾಯಯೋಜಯತ್ಸರ್ವರಾಕ್ಷಸಾನ್ಸಮುಪಸ್ಥಿತಾನ್ ॥೪೧॥ ರಾಮೋ
ಪಿಧನುರಾದಾಯಲಕ್ಷ್ಮಣೇನಸಮಾಹೃತಂ । ದೃಷ್ಟ್ವಾರಾವಣಮಾಸೀನಂಕೋಪೇನಕಲುಷೀಕೃತಃ ॥೪೨॥ ಕಿರೀಟಿನಂ
ಸಮಾಸೀನಂಮಂತ್ರಿಭಿಃಪರಿವೇಷ್ಟಿತಂ । ಶಶಾಂಕಾರ್ಧನಿಭೈರ್ನೈವಬಾಣೈಸ್ತೈಃನರಾಘವಃ ॥೪೩॥ ಶ್ವೇತಛತ್ರಸಹಸ್ರಾಣಿಕಿರೀ
ಟದಶಕಂತಥಾ । ಚಿಚ್ಛೇದನಿಮಿಷಾರ್ಧೇನತದದ್ಭುತಮಿವಾಭವತ್ ॥೪೪॥ ಲಜ್ಜಿತೋರಾವಣಸ್ತೂರ್ಣಂಪಿವೇಶಭವನಂಸ್ವ
ಕಂ । ಆಹೂಯರಾಕ್ಷಸಾನ್ಸರ್ವಾನ್ಪ್ರಹಸ್ತಪ್ರಮುಖಾನ್ಬಲಃ ॥೪೫॥ ವಾನರೈಸ್ಸಹಯುದ್ಧಾಯನೋದಯಾಮಾಸಸ
ತ್ವರಃ । ತತೋಭೇರೀಮೃದಂಗಾದ್ಯೈಃಪಣವಾನಕಗೋಮುಖೈಃ ॥೪೬॥ ಮಹಿಷೋಷ್ಟ್ರಖರೈಃಸಿಂಹೈರ್ದ್ವೀಪಿಭಿಃಕೃ

ಪಶ್ಯನ್-ನೋಡುತ್ತಿರುವವನಾಗಿ, ಸಮುಪಸ್ಥಿತಾನ್-ಸಿದ್ಧರಾಗಿರುವ, ಸರ್ವರಾಕ್ಷಸಾನ್-ಸಮಸ್ತ ರಾಕ್ಷಸರನ್ನು, ಯುದ್ಧಾಯ-ಯುದ್ಧಮಾಡುವದಕ್ಕೆ, ಯೋಜಯನ್-ನೇಮಿಸುತ್ತಿರುವವನಾಗಿ, ॥೪೧॥ ರಾಮೋಪಿ-ರಾಮಚಂದ್ರನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಸಮಾಹೃತಂ-ತರಲ್ಪಟ್ಟ, ಧನುಃ-ಬಿಲ್ಲನ್ನು, ಆದಾಯ-ತೆಗೆದುಕೊಂಡು, ಆಸೀನಂ-ಕೂತಿರುವ, ರಾವಣಂ-ರಾವಣನನ್ನು, ದೃಷ್ಟ್ವಾ-ನೋಡಿ, ಕೋಪೇನ-ಆಗ್ರಹದಿಂದ, ಕಲುಷೀಕೃತಃ-ಚಿಂತಾಯುಕ್ತನಾಗಿ ॥೪೨॥ ಸಮಾಸೀನಂ-ಕುಳಿತಿರುವವನಾದ, ಮಂತ್ರಿಭಿಃ-ಮಂತ್ರಿಗಳಿಂದ, ಪರಿವೇಷ್ಟಿತಂ-ಸುತ್ತಿರುವವನಾದ, ಕಿರೀಟಿನಂ-ಕಿರೀಟವನ್ನು ಧರಿಸಿರುವರಾವಣನನ್ನು, ದೃಷ್ಟ್ವಾ-ನೋಡಿ, ಶ್ವೇತಛತ್ರಸಹಸ್ರಾಣಿ-ಸಾವಿರ ಬಿಳಿಛತ್ರಿಗಳನ್ನು, ಕಿರೀಟದಶಕಂ-ಹತ್ತುತಲೆಗಳ ಕಿರೀಟಗಳನ್ನು, ತಥಾ-ಹಾಗೆ, ನಿಮಿಷಾರ್ಧೇ-ಅರ್ಧನಿಮಿಷದಲ್ಲಿ, ಚಿಚ್ಛೇದ-ಕತ್ತರಿಸಿದನು, ತತ್ - ಅದು, ಅದ್ಭುತಮಿವ-ಆಶ್ಚರ್ಯಕರವಾಗಿ, ಅಭವತ್-ಆಯಿತು ॥೪೪॥ ರಾವಣಃ-ರಾವಣನು, ಲಜ್ಜಿತಃ-ನಾಚಿಕೆಪಟ್ಟವನಾಗಿ, ಸ್ವಕಂ-ಸ್ವಂತವಾದ, ಭವನಂ-ಮನೆಯನ್ನು, ತೂರ್ಣಂ-ಬ್ಯಾಗನೇ, ವಿವೇಶ-ಹೊಕ್ಕನು, ಬಲಃ-ಸೀಜನಾದ ರಾವಣನು, ಸರ್ವಾನ್-ಸಮಸ್ತರಾದ, ಪ್ರಹಸ್ತಪ್ರಮುಖಾನ್ -ಪ್ರಹಸ್ತನೇಮೊದಲಾದ, ರಾಕ್ಷಸಾನ್-ರಾಕ್ಷಸರನ್ನು, ಆಹೂಯ-ಕರೆಸಿ, ॥೪೫॥ ಸತ್ವರಂ-ಜಾಗ್ರತೆಯುಳ್ಳವನಾಗಿ, ವಾನರೈಸ್ಸಹ- ಕಪಿಗಳಸಂಗಡ, ಯುದ್ಧಾಯ- ಯುದ್ಧಮಾಡುವದಕ್ಕೆ, ನೋದಯಾಮಾಸ-ಅಪ್ಪಣೆಯನ್ನು ಮಾಡಿದನು, ತತಃ-ಆ ಬಳಿಕ, ಭೇರೀಮೃದಂಗಾದ್ಯೈಃ-ಭೇರೀ-ಭೇರಿಎಂಬ ವಾದ್ಯದಿಂದಲೂ, ಮೃದಂಗ-ಮೃದಂಗವೆಂಬ ವಾದ್ಯದಿಂದಲೂ, ಪಣವಾನಕಗೋಮುಖೈಃ-ಪಣವ-ತಪಟೆಗಳಿಂದಲೂ, ಆನಕ-ಮದ್ದಲೆಗಳಿಂದಲೂ, ಗೋಮುಖೈಃ- ಪೂರಕವಾದ್ಯವಿಶೇಷದಿಂದಲೂ, ॥೪೬॥ ಧ್ವನಿಮಾಡುತ್ತಿರುವವರಾಗಿ. ಮಹಿಷೋಷ್ಟ್ರಖರೈಃ-ಮಹಿಷ-ಕೋಣಗಳಿಂದ, ಉಷ್ಟ್ರ-ಒಂಟೆಗಳಿಂದ, ಖರೈಃ-ಕತ್ತೆಗಳಿಂದಲೂ, ಸಿಂಹೈಃ -ಸಿಂಹಗಳಿಂದಲೂ, ದ್ವೀಪಿಭಿಃ-ಹುಲಿಗಳಿಂದಲೂ, ಕೃತ-ಮಾಡ

ತೇವಾಹನಾಃ । ಖಡ್ಗಶೂಲಧನುಃಪಾಶಯಷ್ಟಿತೋಮರಶಕ್ತಿಭಿಃ॥೪೮॥ ಲಕ್ಷಿತಾಃಸರ್ವತೋಲಂಕಾಂಪ್ರತಿದ್ವಾರಮುಪಾಯ
ಯುಃ । ತತ್ಪೂರ್ವಮೇವರಾಮೇಣನೋದಿತಾವಾನರರ್ಷಭಾಃ ॥೪೯॥ ಉದ್ಯಮ್ಯಗಿರಿಶೃಂಗಾಣಿಶಿಖರಾಣಿಮಹಾಂತಿಚ ।
ತರೂಂಶ್ಚೋತ್ಪಾಟ್ಯವಿವಿಧಾನ್ಯುದ್ಧಾಯಹರಿಯೂಥಪಾಃ ॥೫೦॥ ಪ್ರೇಕ್ಷಮಾಣಾರಾವಣಸ್ಯತಾನ್ಯನೀಕಾನಿಭಾಗಶಃ ।ರಾ
ಘವಪ್ರಿಯಕಾಮಾರ್ಥಂಲಂಕಾಮಾರುರುಹುಸ್ತದಾ ॥೫೧॥ ತೇದ್ರುಮೈಃಪರ್ವತಾಗ್ರೈಶ್ಚಮುಷ್ಟಿಭಿಶ್ಚಪ್ಲವಂಗಮಾಃ। ತತ
ಕೋಟೀಶತಯುತಾಶ್ಚಾನ್ಯೇರುರುಧುರ್ನಗರಂಭೃಶಂ ॥ ಆಪ್ಲವಂತಃಪ್ಲವಂತಶ್ಚಗರ್ಜಂತಶ್ಚಪ್ಲವಂಗಮಾಃ ॥೫೨॥

ಲ್ಪಟ್ಟ, ವಾಹನಾಃ- ವಾಹನಗಳುಳ್ಳವರಾಗಿ, ಖಡ್ಗಶೂಲಧನುಃಪಾಶಯಷ್ಟಿತೋಮರಶಕ್ತಿಭಿಃ-ಖಡ್ಗ-ಕತ್ತಿಗಳಿಂದ, ಶೂಲ-ಶೂಲಗಳಿಂದ, ಧನುಃ- ಬಿಲ್ಲುಗಳಿಂದ, ಪಾ
ಸ-ಪ್ರಾಸಾಯುಧಗಳಿಂದ, ಯಷ್ಟಿ-ಯಷ್ಟ್ಯಾಯುಧಗಳಿಂದ, ತೋಮರ-ತೋಮರಾಯುಧಗಳಿಂದ, ಶಕ್ತಿಭಿಃ-ಶಕ್ತ್ಯಾಯುಧಗಳಿಂದ ॥೪೮॥ ಲಕ್ಷಿತಾಃ-ಕೂಡಿದವರಾ
ದ, ರಾಕ್ಷಸರು, ಲಂಕಾಂ-ಲಂಕಾಪಟ್ಟಣವನ್ನು, (ರಕ್ಷಿತುಂ-ಕಾಪಾಡುವದಕ್ಕಾಗಿ) ಸರ್ವತಃ-ಸುತ್ತಲೂ, ಪ್ರತಿದ್ವಾರಂ-ಪ್ರತಿಭಾಗಿಲನ್ನು ಕುರಿತು, ಉಪಾಯಯುಃ-
ಬಂದರು, ತತ್ಪೂರ್ವಮೇವ-ಅದಕ್ಕೆ ಮುಂಚೆಯೆ, ರಾಮೇಣ-ರಾಮಚಂದ್ರನಿಂದ, ನೋದಿತಾಃ-ಅಜ್ಞಪ್ತರಾದ, ವಾನರರ್ಷಭಾಃ- ಕಪಿಶ್ರೇಷ್ಠರು, ಗಿರಿಶೃಂಗಾಣಿ -ಪರ್ವತ
ಶಿಖರಗಳನ್ನು, ಉದ್ಯಮ್ಯ-ಎತ್ತಿಕೊಂಡು, ಮಹಾಂತಿಚ-ಅತ್ಯಂತಗಾತ್ರವಾಗಿರುವ, ಶಿಖರಾಣಿ-ಶೃಂಗಗಳನ್ನೂ, ಉದ್ಯಮ್ಯ-ಎತ್ತಿಕೊಂಡು, ಹರಿಯೂಥಪಾಃ- ಕಪಿಸೇನಾಪತಿ
ಗಳು, ವಿವಿಧಾನ್-ಬಗೆಬಗೆಯಾದ, ತರೂನ್-ಗಿಡಗಳನ್ನು, ಉತ್ಪಾಟ್ಯ-ಕಿತ್ತುಕೊಂಡು, ಯುದ್ಧಾಯ-ಯುದ್ಧಕ್ಕೆ, (ಸ್ಥಿತಾಃ-ಇದ್ದವರಾದರು ॥೪೯॥ ರಾವಣಸ್ಯ-
ರಾವಣನ, ಭಾಗಶಃ-ತಮ್ಮತಮ್ಮಗಳಿಗೆ ಕಾಪಾಡುವದಕ್ಕೆ ಗೊತ್ತಾಗಿರುವ ಪ್ರದೇಶಗಳಲ್ಲಿ, ಭಾಗವಾಗಿರುವ, ತಾನಿ-ಆ, ಅನೀಕಾನಿ-ರಾಕ್ಷಸರ ಸೇನೆಗಳನ್ನು, ಪ್ರೇಕ್ಷಮಾ
ಣಾಃ-ನೋಡುತ್ತಿರುವವರಾದ ಕಪಿಗಳು, ರಾಘವಪ್ರಿಯಕಾಮಾರ್ಥಂ-ರಾಘವ-ರಾಮಚಂದ್ರನಿಗೆ, ಪ್ರಿಯ-ಹಿತವಾದ, ಕಾಮಾರ್ಥಂ - ಕೋರಿಕೆಯು ನೆರವೇರುವದಕ್ಕೋ
ಸ್ಕರವಾಗಿ, ತದಾ-ಆಗ, ಲಂಕಾಂ-ಲಂಕಾಪಟ್ಟಣವನ್ನು, ಆರುರುಹುಃ-ಹತ್ತಿದವರಾದರು ॥೫೦॥ ತೇ-ಪ್ಲವಂಗಮಾಃ-ಆಕಪಿಗಳು, ದ್ರುಮೈಃ-ಮರಗಳಿಂದ, ಪರ್ವತಾಗ್ರೈಃ-ಬೆ
ಟ್ಟದಶಿಖರಗಳಿಂದಲೂ, ಮುಷ್ಟಿಭಿಃ-ಮುಷ್ಟಿಗಳಿಂದಲೂ, (ಉಪಲಕ್ಷಿತಾಃ-ಕಾಣಲ್ಪಡುತ್ತಿರುವವರಾಗಿ, ತತಃ-ಆ ಬಳಿಕ, ಸಹಸ್ರಂಘಾಃ-ಸಾವಿರಸಂಖ್ಯೆಯಾದ ಕಪಿಗ
ಮೂಹಗಳು, ಕೋಟಿಯೂಥಾಃ-ಕೋಟಿಸಂಖ್ಯೆಯಾದ ಸಮೂಹಗಳುಳ್ಳವರಾದ, ಯೂಥಪಾಃ-ಸೇನಾನಾಯಕರು, ॥೫೧॥ ಕೋಟೀಶತಯುತಾಃ- ನೂರುಕೋಟಿಸೈ
ನ್ಯದಿಂಕೂಡಿದವರಾದ, ಅನ್ಯೇ-ಕೆಲವರು ಸೇನಾಧಿಪತಿಗಳು, ನಗರಂ-ಲಂಕಾಪಟ್ಟಣವನ್ನೂ, ಭೃಶಂ-ಅತ್ಯಂತವಾಗಿ, ರುರುಧುಃ-ಮುತ್ತಿಗೆಯನ್ನೂ ಹಾಕಿದರು, ಪ್ಲವಂಗಮಾಃ-ಕ
ಪಿಗಳು, ಆಪ್ಲವಂತಃ-ಮೇಲಕ್ಕೆಹಾರುವಂಥವರಾಗಿ, ಪ್ಲವಂತಃ-ಕೆಳಕ್ಕೆ ಇಳಿಯುವಂಥವರಾಗಿ, ಗರ್ಜಂತಶ್ಚ-ಸಿಂಹಧ್ವನಿಯಂತೆ ಘರ್ಜನೆಯನ್ನೂ ಮಾಡುವವರಾಗಿ, ॥೫೨॥

ರಾಮೋಜಯತ್ಯತಿಬಲೋಲಕ್ಷ್ಮಣಶ್ಚ ಮಹಾಬಲಃ । ರಾಜಾಜಯತಿಸುಗ್ರೀವೋರಾಘವೇಣಾಭಿಪಾಲಿತಃ ॥೫೪॥ ಇತ್ಯೇವಂ
ಘೋಷಯಂತಶ್ಚ ಸಮುಂಯುಯುಧಿರೇರಿಭಿಃ। ಹನೂಮಾನಂಗದಶ್ಚೈವಕುಮುದೋನೀಲಏವಚ ॥೫೫॥ ನಲಶ್ಚ ಶರಭಶ್ಚೈ
ವಮೈಂದೋದ್ವಿವಿದಏವಚ । ಜಾಂಬವಾನ್ದಧಿವಕ್ತ್ರಶ್ಚ ಕೇಸರೀತಾರಏವಚ ॥೫೬॥ ಅನ್ಯೇಚಬಲಿನಸ್ಸರ್ವೇಯೂಥಪಾಶ್ಚ ಪ್ಲ
ವಂಗಮಾಃ । ದ್ವಾರಾಣ್ಯುತ್ಪ್ಲುತ್ಯಲಂಕಾಯಾಃಸರ್ವತೋರುರುಧುರ್ಭೃಶಂ ॥೫೭॥ ತದಾವೃಕ್ಷೈರ್ಮಹಾಕಾಯಾಃಪರ್ವ
ತಾಗ್ರೈಶ್ಚ ವಾನರಾಃ । ನಿಜಘ್ನುಸ್ತಾನಿರಕ್ಷಾಂಸಿನಖೈರ್ದಂತೈಶ್ಚ ವೇಗಿತಾಃ ॥೫೮॥ ರಾಕ್ಷಸಾಶ್ಚ ತದಾಭೀಮಾದ್ವಾರೇಭ್ಯ
ಸ್ಸರ್ವತೋರುಷಾ । ನಿರ್ಗತ್ಯಭಿಂಡಿಪಾಲೈಶ್ಚ ಖಡ್ಗೈಶ್ಶೂಲೈಃಪರಶ್ವಧೈಃ । ನಿಜಘ್ನುರ್ವಾನರಾನೀಕಂಮಹಾಕಾಯಾಮ

ಅತಿಬಲಃ-ಅತ್ಯಂತಬಲಶಾಲಿಯಾದ, ರಾಮಃ-ರಾಮಚಂದ್ರನು, ಜಯತಿ-ಜಯವನ್ನು ಪಡೆಯುತ್ತಾನೆ, ಮಹಾಬಲಃ-ಅಧಿಕಬಲವುಳ್ಳವನಾದ, ಲಕ್ಷ್ಮಣಃ-ಲಕ್ಷ್ಮಣನು, ಜ ಯತಿ-ಜಯಿಸುತ್ತಾನೆ, ರಾಘವೇನ-ರಾಮಚಂದ್ರನಿಂದ, ಅಭಿಪಾಲಿತಃ-ರಕ್ಷಿಸಲ್ಪಟ್ಟ, ರಾಜಾ-ಕಪಿಗಳಿಗೆ ಧೊರೆಯಾದ, ಸುಗ್ರೀವಃ- ಸುಗ್ರೀವನು, ಜಯತಿ-ಜಯಿಸುತ್ತಾ ನೆ, ॥೫೪॥ ಇತ್ಯೇವಂ-ಹೀಗೆಂದು, ಘೋಷಯಂತಃ-ಕೂಗುತ್ತಿರುವವರಾಗಿ, ಅರಿಭಿಃ-ಸಮಂ-ಶತ್ರುಗಳಸಂಗಡ, ಸರಿಯಾಗಿ, ಯುಯುಧಿರೇ- ಯುದ್ಧಮಾಡಿದರು, ಹನೂ ಮಾನ್-ಆಂಜನೇಯನು, ಅಂಗದಃ-ಅಂಗದನು, ಕುಮುದಃ-ಕುಮುದನು, ನೀಲಏವಚ-ನೀಲನೂ॥೫೫॥ನಲಶ್ಚ-ನಲನೂ,ಶರಭಶ್ಚ-ಶರಭನೂ, ಮೈಂದಃ-ಮೈಂದನು, ದ್ವಿವಿದ ಏವಚ-ದ್ವಿವಿದನು, ಜಾಂಬವಾನ್-ಜಾಂಬವಂತನು, ದಧಿವಕ್ತ್ರಶ್ಚ-ದಧಿಮುಖನೂ, ಕೇಸರೀ-ಕೇಸರಿಯು, ತಾರಏವಚ-ತಾರನೂ, ॥೫೬॥ ಬಲಿನಃ-ಬಲಿಷ್ಠರಾದ, ಅನ್ಯೇ-ಇತರರಾದ, ಸರ್ವೇ-ಸಮಸ್ತರಾದ, ಯೂಥಪಾಃ-ಸೇನಾನಾಯಕರಾದ, ಪ್ಲವಂಗಮಾಃ-ಕಪಿಗಳು, ಲಂಕಾಯಾಃ-ಲಂಕಾಪಟ್ಟಣದ, ದ್ವಾರಾಣಿ-ಬಾಗಲುಗಳನ್ನು ಕುರಿತು, ಉ ತ್ಪ್ಲುತ್ಯ-ಹಾರಿ, ಸರ್ವತಃ-ಯಲ್ಲಾದಿಕ್ಕುಗಳಲ್ಲಿಯೂ, ಭೃಶಂ-ಅತ್ಯಂತವಾಗಿ, ರುರುಧುಃ-ಮುತ್ತಿಗೆಯನ್ನು ಮಾಡಿದವರಾದರು, ॥೫೭॥ ತದಾ-ಆಗ, ಮಹಾಕಾ ಯಾಃ-ಅಧಿಕದೇಹಗಳಾದ, ವಾನರಾಃ-ಕಪಿಗಳು, ವೇಗಿತಾಃ-ತ್ವರೆಯುಳ್ಳವರಾಗಿ, ವೃಕ್ಷೈಃ-ಮರಗಳಿಂದಲೂ, ಪರ್ವತಾಗ್ರೈಶ್ಚ-ಬೆಟ್ಟದ ಶಿಖರಗಳಿಂದಲೂ, ನಖೈಃ-ಉಗುರು ಗಳಿಂದಲೂ, ದಂತೈಃ-ಹಲ್ಲುಗಳಿಂದಲೂ, ರಕ್ಷಾಂಸಿ-ರಾಕ್ಷಸರನ್ನು, ನಿಜಘ್ನುಃ-ಹೊಡೆದರು, ॥೫೮॥ ತದಾ-ಆಗ, ಭೀಮಾಃ-ಭಯಂಕರರಾದ, ರಾಕ್ಷಸಾಃ-ರಾಕ್ಷಸರು, ರುಷಾ-ಕೋಪದಿಂದ, ಸರ್ವತಃ-ಸುತ್ತಲೂ, ದ್ವಾರೇಭ್ಯಃ-ಬಾಗಲುಗಳಿಂದ, ನಿರ್ಗತ್ಯ-ಹೊರಟು, ಭಿಂಡಿಪಾಲೈಃ-ಉಕ್ಕಿನಅಲಗುಳ್ಳ ಕಟ್ಟಿಗೆಗಳಿಂದಲೂ, ಖಡ್ಗೈಃ-ಕತ್ತಿಗ ಳಿಂದಲೂ, ಶೂಲೈಃ-ಶೂಲಗಳಿಂದಲೂ, ಪರಶ್ವಧೈಃ-ಪರಶುವೆಂಬ ಗೊಡ್ಡಲಿಗಳಿಂದಲೂ, ಮಹಾಕಾಯಾಃ-ಅಧಿಕದೇಹವುಳ್ಳವರಾದ, ಮಹಾಬಲಾಃ- ಅಧಿಕಬಲರಾದ, ರಾಕ್ಷಸ

ವಾ॥ ರಾ॥ ೫೯

ಶ್ಚಾಬಲಾಃ ॥೫೯॥ ರಾಕ್ಷಸಾನ್ ತಥಾಜಘ್ನುರ್ವಾನರಾಜಿತಕಾಶಿನಃ । ತಥಾಬಭೂವಸಮರೋಮಾಂಸಶೋಣಿತಕರ್ದ ಮಃ ॥೬೦॥ ರಕ್ಷಸಾಂವಾನರಾಣಾಂಚಸಂಬಭೂವಾದ್ಭುತೋಪಮಃ । ತೇಹಯೈಶ್ಚಗಜೈಶ್ಚೈವರಥೈಃಕಾಂಚನಸಂನಿ ಭೈಃ ॥೬೧॥ ರಕ್ಷೋವ್ಯಾಘ್ರಾಯುಯುಧಿರೇನಾದಯಂತೋದಿಶೋದಶ । ರಾಕ್ಷಸಾಶ್ಚಕಪೀಂದ್ರಾಶ್ಚಪರಸ್ಪರಜಯೈಷಿಣಃ ॥ ರಾಕ್ಷಸಾನ್ವಾನರಾಜಘ್ನುರ್ವಾನರಾಂಶ್ಚೈವರಾಕ್ಷಸಾಃ । ರಾಮೇಣವಿಷ್ಣುನಾದೃಷ್ಟಾಹರಯೋದಿವಿಜಾಂಶಜಾಃ । ಬಭೂ ವುರ್ಬಲಿನೋಹೃಷ್ಟಾಸ್ತದಾಪೀತಾಮೃತಾಇವ। ಸೀತಾಭಿಮರ್ಶಪಾಪೇನರಾವಣೇನಾಭಿಪಾಲಿತಾನ್ ॥೬೪॥

ರು, ವಾನರಾನೀಕಂ-ಕಪಿಸೈನ್ಯವನ್ನು, ನಿಜಘ್ನುಃ-ಹೊಡೆದವರಾದರು, ॥೫೯॥ ಜಿತಕಾಶಿನಃ-ಜಯಶೀಲರಾದ, ವಾನರಾಃ-ಕಪಿಗಳು, ರಾಕ್ಷಸಾನ್-ರಾಕ್ಷಸರನ್ನು, ತಥಾ-ಹಾಗೆ, ಜಘ್ನುಃ-ಹೊಡೆದವರಾದರು, ತಥಾ-ಹಾಗೆ, ಮಾಂಸಶೋಣಿತಕರ್ದಮಃ, ಮಾಂಸ-ಮಾಂಸದಿಂದಲೂ, ಶೋಣಿತ-ರಕ್ತದಿಂದಲೂ, ಕರ್ದಮಃ-ಕೆಸರಾಗಿರುವ, ಸಮರಃ-ಯುದ್ಧವು, ಬಭೂವ-ಆಯಿತು, ॥೬೦॥ ರಕ್ಷಸಾಂ-ರಾಕ್ಷಸರಿಗೂ, ವಾನರಾಣಾಂಚ-ಕಪಿಗಳಿಗೂ, ಅದ್ಭುತೋಪಮಃ-ಆಶ್ಚರ್ಯಕ್ಕೆ ಸರಿಯಾದ, ಯುದ್ಧವು, ಸಂಬಭೂವ-ಉಂಟಾಯಿತು, ತೇ-ಆ ಕಪಿಗಳು, ಹಯೈಃ-ಕುದುರೆಗಳಿಂದಲೂ, ಗಜೈಶ್ಚ-ಆನೆಗಳಿಂದಲೂ, ಕಾಂಚನ-ಭಂಗಾರಕ್ಕೆ, ಸನ್ನಿಭೈಃ-ಸಮವಾಗಿರುವ, ರಥೈಃ-ತೇ ರುಗಳಿಂದಲೂ, ॥೬೧॥ ಕೂಡಿದವರಾಗಿ, ರಕ್ಷೋವ್ಯಾಘ್ರಾಃ-ರಾಕ್ಷಸಶ್ರೇಷ್ಠರು, ದಶ-ಹತ್ತಾದ, ದಿಶಃ-ದಿಕ್ಕುಗಳನ್ನು, ನಾದಯಂತಃ-ಶಬ್ದದಿಂದ ಯುಕ್ತವಾದಂತೆ ಮಾಡುತ್ತಿರುವವರಾಗಿ, ಯುಯುಧಿರೇ- ಯುದ್ಧವನ್ನು ಮಾಡಿದರು, ರಾಕ್ಷಸಾಶ್ಚ-ರಾಕ್ಷಸರೂ, ಕಪೀಂದ್ರಾಶ್ಚ- ಕಪಿಗಳು, ಪರಸ್ಪರ-ಜಯೈಷಿಣಃ, ಪರಸ್ಪರ-ಅ ನ್ಯೋನ್ಯವಾಗಿ, ಜಯೈಷಿಣಃ-ಜಯಾಪೇಕ್ಷೆಯುಳ್ಳವರಾಗಿ, ॥೬೨॥ ವಾನರಾಃ-ಕಪಿಗಳು, ರಾಕ್ಷಸಾನ್-ರಾಕ್ಷಸರನ್ನು, ರಾಕ್ಷಸಾಃ-ರಾಕ್ಷಸರು, ವಾನರಾನ್-ಕಪಿಗ ಳನ್ನು, ಜಘ್ನುಃ-ಹೊಡೆದರು, ದಿವಿಜಾಂಶಜಾಃ, ದಿವಿಜ-ದೇವತೆಗಳ, ಅಂಶ-ಅಂಶದಿಂದ, ಜಾಃ-ಹುಟ್ಟಿದವರಾಗಿರುವ, ಹರಯಃ-ಕಪಿಗಳು, ವಿಷ್ಣುನಾ-ವಿಷ್ಣುವಾಗಿ ಅ ವತಾರಮಾಡಿದ, ರಾಮೇಣ-ರಾಮಚಂದ್ರನಿಂದ, ದೃಷ್ಟಾಃ-ನೋಡಲ್ಪಟ್ಟವರಾಗಿ, ॥೬೩॥ ಪೀತಾಮೃತಾಇವ-ಅಮೃತಪಾನವನ್ನು ಮಾಡಿದವರಂತೆ, ತದಾ-ಆಗ, ಹೃ ಷ್ಟಾಃ-ಹರ್ಷವುಳ್ಳವರು, ಬಲಿನಃ-ಬಲಶಾಲಿಗಳೂ, ಬಭೂವುಃ-ಆದರು, ಸೀತಾಭಿಮರ್ಶಪಾಪೇನ- ಸೀತಾ- ಸೀತಾದೇವಿಯನ್ನು, ಅಭಿಮರ್ಶ- ದ್ವೇಷಬುದ್ಧಿಯಿಂದ, ಮುಟ್ಟಿದ್ದರಿಂದ, ಪುಂಟಾದ, ಪಾಪೇನ-ದುರಿತಉಳ್ಳವನಾದ, ರಾವಣೇನ-ರಾವಣನಿಂದ, ಅಭಿಪಾಲಿತಾನ್-ಕಾಪಾಡಲ್ಪಟ್ಟವರಾದ. ॥೬೪॥

ಹತಶ್ರೀಕಾನ್-ನಷ್ಟವಾದ ಸಂಪತ್ತುಳ್ಳವರಾದ, ಹತ-ನಷ್ಟವಾದ, ಬಲಾನ್-ಶಕ್ತಿಯುಳ್ಳವರಾದ, ರಾಕ್ಷಸಾನ್-ರಾಕ್ಷಸರನ್ನು, ಓಜಸಾ-ತೇಜಸ್ಸಿನಿಂದ, ಜಘ್ನುಃ-ಹೊಡೆದರು, ರಾಕ್ಷಸಂ-ಬಲಂ-ರಾಕ್ಷಸ ದಳವು, ಚತುರ್ಥಾಂಶಾವಶೇಷೇಣ-ಚತುರ್ಥ-ನಾಲ್ಕರಲ್ಲಿ, ಅಂಶ-ಒಂದು ಭಾಗವಾದ ಬಲವು, ಅವಶೇಷೇಣ-ನಿಲ್ಲುವಂತೆ, ನಿಹತಂ-ಮೂರುಭಾಗ ಬಲ

ಯು॥ ಕಾಂ

ಹತಶ್ರೀಕಾನ್ತಬಲಾನಾಂ ಕ್ಷಸೇರ್ಜಘ್ನುರೋಜಸಾ । ಚತುರ್ಥಾಂಶಾವಶೇಷೇಣ ನಿಹತಂ ರಾಕ್ಷಸಂ ಬಲಂ ॥೬೫॥ ಸ್ವಸೈನ್ಯಂ ನಿಹತಂ ದೃಷ್ಟ್ವಾ ಮೇಘನಾದೋಽತಿದುಷ್ಟಧೀಃ । ಬ್ರಹ್ಮದತ್ತವರಶ್ರೀಮಾನಂತರ್ಧಾನಗತೋಽಸುರಃ ॥೬೬॥ ಸರ್ವಾಸ್ತ್ರಕುಶಲೋ ವ್ಯೋಮ್ನಿ ಬ್ರಹ್ಮಾಸ್ತ್ರೇಣ ಸಮಂತತಃ । ನಾನಾವಿಧಾನಿ ಶಸ್ತ್ರಾಣಿ ವಾನರಾನೀಕಮರ್ದಯನ್ ॥೬೭॥ ವವರ್ಷ ಶರಜಾಲಾನಿ ತದದ್ಭುತಮಿವಾಭವತ್ । ರಾಮೋಽಪಿ ಮಾನಯನ್ನಸ್ತ್ರಂ ಬ್ರಾಹ್ಮಮಸ್ತ್ರವಿದಾಂ ವರಃ ॥೬೮॥ ಕ್ಷಣಂ ತೂಷ್ಣೀಮುವಾಸಾಥ ದದರ್ಶ ಪತಿತಂ ಬಲಂ । ವಾನರಾಣಾಂ ರಘುಶ್ರೇಷ್ಠಶ್ಚುಕೋಪಾನಲಸನ್ನಿಭಃ ॥೬೯॥ ಚಾಪಮಾನಯ ಸೌಮಿತ್ರೇ ಬ್ರಹ್ಮಾಸ್ತ್ರೇಣಾಸುರಂ ಕ್ಷಣಾತ್ । ಭಸ್ಮೀಕರೋಮಿ ಮೇ ಪಶ್ಯ ಬಲಮದ್ಯ ರಘೂತ್ತಮ ॥ ॥೭೦॥

ವು, ಸಹ್ಕಾರ ಮಾಡಲ್ಪಟ್ಟಿತು. ॥೬೫॥ ಮೇಘನಾದಃ-ಇಂದ್ರಜಿತುವು, ನಿಹತಂ-ಕೊಲ್ಲಲ್ಪಟ್ಟ, ಸ್ವಸೈನ್ಯಂ-ತನ್ನ ಸೇನೆಯನ್ನು, ದೃಷ್ಟ್ವಾ-ನೋಡಿ, ಅತಿದುಷ್ಟಧೀಃ-ಅತ್ಯಂತವಾಗಿ ಮೋಸದಿಂದ ಕೊಲ್ಲಬೇಕೆಂಬ ಕೆಟ್ಟಬುದ್ಧಿ ಯುಳ್ಳವನಾಗಿ, ಬ್ರಹ್ಮದತ್ತವರಃ-ಬ್ರಹ್ಮ-ಚತುರ್ಮುಖಬ್ರಹ್ಮನಿಂದ, ದತ್ತ-ಕೊಡಲ್ಪಟ್ಟ, ವರಃ- ವರವುಳ್ಳವನಾದ, ಶ್ರೀಮಾನ್-ಸಂಪತ್ತುಳ್ಳವನಾದ, ಅಸುರಃ-ರಾಕ್ಷಸನಾದ ಇಂದ್ರಜಿತುವು, ಅಂತರ್ಧಾನಗತಃ-ಅದೃಶ್ಯನಾಗಿ, ವ್ಯೋಮ್ನಿ- ಅಂತರಿಕ್ಷದಲ್ಲಿ, ಸ್ಥಿತಃ-ಇರುತ್ತಿರುವವನಾಗಿ॥೬೬॥ ಸರ್ವಾಸ್ತ್ರಕುಶಲಃ-ಸರ್ವ-ಸಮಸ್ತವಾದ, ಅಸ್ತ್ರ-ಅಸ್ತ್ರಗಳಲ್ಲಿ, ಕುಶಲಃ-ಪ್ರಯೋಗಕೌಶಲ್ಯಉಳ್ಳವನಾಗಿ, ಬ್ರಹ್ಮಾಸ್ತ್ರದಿಂದ, ಸಮಂತತಃ- ಯಲ್ಲಾ ಕಡೆಯಲ್ಲಿಯೂ, ನಾನಾವಿಧಾನಿ-ಅನೇಕ ವಿಧಗಳಾದ, ಶಸ್ತ್ರಾಣಿ-ಶಸ್ತ್ರಗಳನ್ನು, (ಮುಂಚನ್-ಬಿಡುತ್ತಿರುವವನಾಗಿ, ) ವಾನರಾನೀಕಂ-ಕಪಿಸೈನ್ಯವನ್ನು, ಅರ್ದಯನ್-ಹೊಡೆಯುತ್ತಿರುವವನಾಗಿ. ॥೬೭॥ ಶರಜಾಲಾನಿ-ಶರ-ಬಾಣಗಳ, ಜಾಲಾನಿ-ಸಮೂಹಗಳನ್ನು, ವವರ್ಷ-ಮಳೆಯಂತೆ ಸುರಿಸಿದನು, ತತ್-ಆ ಬಾಣಗಳ ಮಳೆಯು, ಅದ್ಭುತಮಿವ-ಆಶ್ಚರ್ಯವಾಗಿ, ಅಭವತ್-ಆಯಿತು, ಅಸ್ತ್ರವಿದಾಂ-ಅಸ್ತ್ರಜ್ಞರೊಳು, ವರಃ-ಶ್ರೇಷ್ಠನಾದ, ರಾಮಃ-ರಾಮಚಂದ್ರನು, ಬ್ರಾಹ್ಮಂ-ಬ್ರಹ್ಮದೇವತಾಕವಾದ, ಅಸ್ತ್ರಂ- ಅಸ್ತ್ರವನ್ನು, ಮಾನಯನ್-ಸನ್ಮಾನ ಮಾಡುತ್ತಿರುವವನಾಗಿ. ॥೬೮॥ ಕ್ಷಣಂ-ನಿಮಿಷಮಾತ್ರವು, ತೂಷ್ಣೀಂ-ಸುಮ್ಮನೆ, ಉವಾಸ-ಇದ್ದನು, ಪತಿತಂ-ಪೆಟ್ಟುತಿಂದು ಬಿದ್ದಿರುವ, ವಾನರಾಣಾಂ-ಕಪಿಗಳ, ಬಲಂ-ಸೈನ್ಯವನ್ನು, ದದರ್ಶ-ನೋಡಿದನು, ರಘುಶ್ರೇಷ್ಠಃ-ರಾಮಚಂದ್ರನು, ಅನಲಸನ್ನಿಭಃ-ಅನಲ-ಬೇಕಿಗೆ, ಸನ್ನಿಭಃ-ಸಮನಾಗಿ, ಚುಕೋಪ-ಶಿಟ್ಟನ್ನು, ಮಾಡಿದನು. ॥೬೯॥ ಸೌಮಿತ್ರೇ-ಲಕ್ಷ್ಮಣನೇ, ಚಾಪಂ-ಬಿಲ್ಲನ್ನು, ಆನಯ-ತಕ್ಕೊಂಡುಬಾ, ಬ್ರಹ್ಮಾಸ್ತ್ರೇಣ- ಬ್ರಹ್ಮಾಸ್ತ್ರದಿಂದ, ಅಸುರಂ-ಇಂದ್ರಜಿತುವನ್ನು, ಕ್ಷಣಾತ್-ನಿಮಿಷದಲ್ಲಿ, ಭಸ್ಮೀಕರೋಮಿ-ಬೂದಿಯಾಗುವಂತೆ ಮಾಡುತ್ತೇನೆ, ರಘೂತ್ತಮ-ಲಕ್ಷ್ಮಣನೆ, ಅದ್ಯ-ಈಗ, ಮೇ-ನನಗೆ, ಬಲಂ-ಸಾಮರ್ಥ್ಯವನ್ನು, ಪಶ್ಯ-ನೋಡು. ॥೭೦॥ ಮೇಘನಾದೋಽಪಿ- ಇಂದ್ರಜಿತುವು, ತತ್-ಆ, ರಾಮವಾಕ್ಯಂ-ರಾಮಚಂದ್ರನ ಮಾತನ್ನು, ಶ್ರುತ್ವಾ-ಕೇಳಿ, ಅತಂದ್ರಿತಃ- ಎಚ್ಚರವುಳ್ಳ,

ಮೇಘನಾದೋಪಿತಚ್ಛ್ರುತ್ವಾ ರಾಮವಾಕ್ಯಮತಂದ್ರಿತಃ । ತೂರ್ಣಂಜಗಾಮನಗರಂಮಾಯಯಾಮಾಯಿಕೋಸುರಃ ॥೭೧॥
ಪತಿತಂವಾನರಾನೀಕಂ ದೃಷ್ಟ್ವಾರಾಮೋತಿದುಃಖಿತಃ । ಉವಾಚಮಾರುತಿಂಶೀಘ್ರಂಗತ್ವಾಕ್ಷೀರಮಹೋದಧಿಂ ॥೭೨॥
ತತ್ರದ್ರೋಣಗಿರಿರ್ನಾಮ ದಿವ್ಯೌಷಧಿಸಮುದ್ಭವಃ। ತಮಾನಯದ್ರುತಂಗತ್ವಾ ಸಂಜೀವಯಮಹಾಮತೇ॥೭೩॥ ವಾನರೌಘಾನ್ಮಹಾಸತ್ವಾನ್ಕೀರ್ತಿಸ್ತೇ ಸುಸ್ಥಿರಾಭವೇತ್ । ಆಜ್ಞಾಪ್ರಮಾಣಮಿತ್ಯುಕ್ತ್ವಾ ಜಗಾಮಾನಿಲನಂದನಃ ॥೭೪॥ ಆನೀಯ್ಯ

ಮಾಯಿಕಃ-ಮಾಯೆಗಳನ್ನು, ಮಾಡುವಶಕ್ತಿಯುಳ್ಳವನಾದ, ಅಸುರಃ-ರಾಕ್ಷಸನಾದ ಇಂದ್ರಜಿತುವು, ಮಾಯಯಾ-ಮಾಯೆಯಿಂದ, ತೂರ್ಣಂ-ಬೇಗನೆ, ನಗರಂ-ಲಂಕಾಪುರವನ್ನು ಕುರಿತು, ಜಗಾಮ-ಹೊರಟುಹೋದನು ॥೭೧॥ ಪತಿತಂ-ನೆಲದಮೇಲೆ ಪೆಟ್ಟುಬಿದ್ದಿರುವ, ವಾನರಾನೀಕಂ-ವಾನರ-ಕಗಳ, ಅನೀಕಂ-ಸೈನ್ಯವನ್ನು, ದೃಷ್ಟ್ವಾ-ನೋಡಿ, ರಾಮಃ-ರಾಮಚಂದ್ರನು, ಅತಿ-ಅತ್ಯಂತವಾಗಿ, ದುಃಖಿತಃ-ವ್ಯಥೆಯುಳ್ಳವನಾಗಿ, ಮಾರುತಿಂ-ಆಂಜನೇಯನನ್ನು ಕುರಿತು, ಉವಾಚ-ಹೇಳಿದನು, ಕ್ಷೀರಮಹೋದಧಿಂ-ಹಾಲಿನಕಡಲನ್ನು ಕುರಿತು, ಶೀಘ್ರಂ-ಬೇಗನೇ, ಗತ್ವಾ-ಹೋಗಿ, ॥೭೨॥ ತತ್ರ-ಹಾಲಿನಕಡಲಿನಲ್ಲಿ, ದಿವ್ಯೌಷಧಿಸಮುದ್ಭವಃ-ದಿವ್ಯ-ಯೋಗ್ಯವಾದ, ಔಷಧಿ-ಸುವರ್ಣಕರಿಣೀ-ಸಂಧಾನಕರಿಣೀ, ವಿಶಲ್ಯಕರಿಣೀ, ಸಂಜೀವಕರಿಣೀ ಎಂಬ ನಾಲ್ಕುಮೂಲಿಕೆಗಳ, ಉತ್ಪತ್ತಿಯುಳ್ಳ, ದ್ರೋಣಗಿರಿರ್ನಾಮ-ದ್ರೋಣವೆಂಬ ಹೆಸರುಳ್ಳ ಪರ್ವತವು, (ಅಸ್ತಿ-ಇದೆ) ದ್ರುತಂ-ಜಾಗ್ರತೆಯಾಗಿ, ಗತ್ವಾ-ಹೋಗಿ, ತಂ-ಆ ಪರ್ವತವನ್ನು, ಆನಯ- ತಕ್ಕೊಂಡುಬಾ, ಮಹಾಮತೇ-ಮಹಾಬುದ್ಧಿಶಾಲಿಯಾದ, ಆಂಜನೇಯನೇ, ಸಂಜೀವಯ-ಕಪಿಗಳನ್ನು, ಬದುಕಿಸು, ॥೭೩॥ ಮಹಾಸತ್ವಾನ್-ಅಧಿಕಬಲರಾದ, ವಾನರೌಘಾನ್-ವಾನರ-ಕಪಿಗಳ, ಓಘಾನ್-ಸಮೂಹಗಳನ್ನು, (ಸಂಜೀವಯಸಿ-ಯದಿ-ಬದುಕಿಸಿದ್ದೇ ಆದರೆ, ತೇ-ನಿನಗೆ, ಕೀರ್ತಿಃ-ಯಶಸ್ಸು, ಸುಸ್ಥಿರಾ-ಯಂದಿಗೂ ಇರುವಂಥಾದ್ದು, ಭವೇತ್-ಆದೀತು, ಆಜ್ಞಾಪ್ರಮಾಣಮಿತಿ-ಅಪ್ಪಣೆಪ್ರಕಾರವು, ಆಗಲೀಯೆಂದು, ಉಕ್ತ್ವಾ-ಹೇಳಿ, ಅನಿಲನಂದನಃ-ವಾಯುಪುತ್ರನಾದ ಆಂಜನೇಯನು, ಜಗಾಮ-ಹೊರಟುಹೋದನು ॥೭೪॥ ಗಿರಿಂ-ಪರ್ವತವನ್ನೂ, ಆನೀಯ್ಯ- ತಂದವನಾಗಿ, ವಾನರರ್ಷಭಃ-ಕಪಿಶ್ರೇಷ್ಠನಾದ ಆಂಜನೇಯನು, ಸರ್ವಾನ್-ಸಮಸ್ತರಾದ, ವಾನರಾನ್-ಕಪಿಗಳನ್ನು, ಜೀವಯಿತ್ವಾ-ಬದುಕಿಸಿ, ಪುನಃ-ತಿರಿಗಿ, ತತ್ರ-ಕ್ಷೀರಸಮುದ್ರದಲ್ಲಿ, ಸ್ಥಾಪಯಿತ್ವಾ-ಆದ್ರೋಣ ಪರ್ವತವನ್ನು ಇರಿಸಿ, ದ್ರುತಂ-ಶೀಘ್ರವಾಗಿ, ಆಯಯೌ-ಬಂದನು ॥ ಪ್ರಾಣಘಾತಯ ರೋಗಾದಿಗಳ ಭಾಧೆಯನ್ನು ತಪ್ಪಿಸಿ ದೇಹವನ್ನು ಸುವರ್ಣದಂತೆಮಾಡುವದರಿಂದ ಸುವರ್ಣಕರಿಣಿಯೆಂಬ ಹೆಸರಾಯಿತು, ತುಂಡುತುಂಡಾದ ಕಾಲು ಮೊದಲಾದ ಅಂಗಗಳನ್ನೂ ಜೋಡಿಸಿ ಮೂಲಿಕೆಯನು ಉಪಯೋಗಿಸಿದರೆ, ಅಂಗಗಳು ಮೊದಲಿನಂತೆ ಕೂಡುವ ಶಕ್ತಿಉಳ್ಳದ್ದಾದ್ದರಿಂದ ಸಂಧಾನಕರಿಣಿಯೆಂಬ ಹೆಸರಾಯಿತು, ಬಾಣಗಳ ತುದಿಗಳು ದೇಹದ ಮಾಂಸದಲ್ಲಿ ಚಾತು ಹೊಕ್ಕು ಮು

ಚಗಿರಿಂಸರ್ವಾ ನ್ಸ್ವಾನರಾನ್ಸ್ವಾನರರ್ಷಭಃ । ಜೀವಯಿತ್ವಾ ಪ್ರನಸ್ತತ್ರಸ್ಥಾಪಯಿತ್ವಾ ಯಯೌಗೃಹಂ ॥೨೫॥ ಪೂರ್ವವ
ದ್ಭೈರವಂನಾದಂ ವಾನರಾಣಾಂಬಲೌಘತಃ । ಶ್ರುತ್ವಾವಿಸ್ಮಯಮಾಪನ್ನೋರಾವಣೋವಾಕ್ಯಮಬ್ರವೀತ್ ॥೨೬॥ ರಾಘವೋ
ಮಮಹಾನ್ಯತ್ರುಃ ಪ್ರಾಪ್ತೋದೇವವಿನಿರ್ಮಿತಃ । ಹಂತುಂತಂಸಮರೇಶೀಘ್ರಂ ಗಚ್ಛಂತುಮಮಯೂಥಪಾಃ ॥೨೭॥ ಮಂತ್ರಿ
ಬಾಂಧವಾಃಶೂರಾಃಯೇಚಮತ್ಪ್ರಿಯಕಾಂಕ್ಷಿಣಃ । ಸರ್ವೆಗಚ್ಛಂತುಯುದ್ಧಾಯ ತ್ವರಿತಂಮಮಶಾಸನಾತ್ ॥೨೮॥ ನಗ
ಚ್ಛಂತಿಯುದ್ಧಾಯಭೀರವಃಪ್ರಾಣವಿಪ್ಲವಾತ್ । ತಾನ್ಹನಿಷ್ಯಾಮ್ಯಹಂಸರ್ವಾನ್ಮಚ್ಛಾಸನಪರಾಙ್ಮುಖಾನ್ ॥೨೯॥ ಶಲ್ಯ

ಶೂಗಳಂತೆ, ತೆಗೆಯಲು, ಅಸಾಧ್ಯವಾಗಿರುವಾಗ್ಯೆ ಉಪಯೋಗಿಸಿದ ಈಮೂಲಿಕೆಯ ಸ್ಪರ್ಶಮಾತ್ರದಿಂದ ಮಾಂಸದೊಳಗೆ ವ್ಯಾಪಿಸಿರುವಬಾಣಗಳ ತುದಿಗಳು, ಬಾಧೆಯಿಲ್ಲದೆ ತನ್ನತನ್ನಷ್ಟಕ್ಕೆ ತಾನೆ ಈಚೆಗೆ ದೇಹದಿಂದ ಬೀಳುವಶಕ್ತಿಉಳ್ಳದ್ದಾದ್ದರಿಂದ ವಿಶಲ್ಯಕರಣೀಯೆಂಬ ಹೆಸರಾಯಿತು, ಸಾಯುತ್ತಾನೆಂದು ನಿಶ್ಚಯಿಸಲ್ಪಟ್ಟು ಪ್ರಾಣಮಾತ್ರವಿರುವಕಾಲದಲ್ಲಿ, ಉಪಯೋಗಿಸಿದರೆ, ಆಯುರ್ವೃದ್ಧಿಯನ್ನುಮಾಡಿ, ಬದುಕಿಸುವ ಶಕ್ತಿಯುಳ್ಳದಾದ್ದರಿಂದ ಸಂಜೀವಕರಣೀಯೆಂಬ ಹೆಸರಾಯಿತು, ॥೨೫॥ ಪೂರ್ವವತ್-ಹಿಂದಿನಂತೆ, ಭೈರವ -ಭಯಕರರೂಪದ, ನಾದಂ-ಶಬ್ದವನ್ನು, ವಾನರಾಣಾಂ-ಕಪಿಗಳ, ಬಲೌಘತಃ-ಸೇನಾಸಮೂಹಗಳ ದೆಸೆಯಿಂದ, ಶ್ರುತ್ವಾ-ಕೇಳಿ, ವಿಸ್ಮಯಂ-ಆಶ್ಚರ್ಯವನ್ನು ಆಪನ್ನಃ-ಹೊಂದಿದವನಾದ, ರಾವಣಃ-ರಾವಣನವನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ॥೨೬॥ ರಾಘವಃ-ರಾಮಚಂದ್ರನು, ದೇವವಿನಿರ್ಮಿತಃ, ದೇವ-ದೇವತೆಗಳಿಂದ, ವಿನಿರ್ಮಿತಃ-ಉಂಟುಮಾಡಲ್ಪಟ್ಟ, ಮೆ-ನನಗೆ, ಮಹಾಶತ್ರುಃ-ಮಹಾಶತ್ರುವು, ಪ್ರಾಪ್ತಃ-ಬಂದನು, ಸಮರೇ-ಯುದ್ಧದಲ್ಲಿ, ತಂ-ರಾಮಚಂದ್ರನನ್ನು, ಹಂತುಂ ಕೊಲ್ಲಲು, ಶೀಘ್ರಂ-ಬೇಗನೆ, ಮಮ-ನನ್ನ, ಯೂಥಪಾಃ-ಸೇನಾಧಿಪತಿಗಳು, ಗಚ್ಛಂತು-ಹೋಗಲಿ; ॥೨೭॥ ಮಂತ್ರಿಣಃ-ಸಚಿವರು, ಬಾಂಧವಾಃ-ದೇಹಬಂಧುಗಳು, ಯೇಚ-ಯಾರು, ಮತ್ಪ್ರಿಯಕಾಂಕ್ಷಿಣಃ, ಮತ್ಪ್ರಿಯ-ನನಗೆ, ಹಿತವನ್ನು, ಕಾಂಕ್ಷಿಣಃ-ಬಯಸುತ್ತಿರುವವರೊ, ಶೂರಾಃ-ಅಂಥಾಶೂರರಾದವರು, ಸರ್ವೆ-ಯೆಲ್ಲರೂ, ಮಮ-ನನ್ನ, ಶಾಸನಾತ್-ಅಪ್ಪಣೆಯಿಂದ, ತ್ವರಿತಂ-ಬೇಗನೆ, ಯುದ್ಧಾಯ-ರಣಕ್ಕೆ, ಗಚ್ಛಂತು-ಹೋಗಲಿ, ॥ ೨೮ ॥ ಪ್ರಾಣವಿಪ್ಲವಾತ್, ಪ್ರಾಣ-ಪ್ರಾಣಗಳ, ವಿಪ್ಲವಾತ್-ನಾಶವಾಗುತ್ತೆಂಬುವದರಿಂದ, ಭೀರವಃ-ಭಯಪಡುತ್ತಿರುವವರಾದ, ಯೆ-ಯಾರು, ಯುದ್ಧಾಯ-ಕೊಳುಗುಳಕ್ಕೆ, ನಗಚ್ಛಂತಿ-ಹೋಗುವದಿಲ್ಲವೋ; ತಾನ್-ಅಂಥಾವರಾದ, ಮಚ್ಛಾಸನಪರಾಙ್ಮುಖಾನ್-ಮಚ್ಛಾಸನ-ನನ್ನ ಅಪ್ಪಣೆಯನ್ನು, ಪರಾಙ್ಮುಖಾನ್-ತಿರಸ್ಕಾರಮಾಡಿದವರಾದ, ಸರ್ವಾನ್-ಸಮಸ್ತರಾಕ್ಷಸರನ್ನು, ಅಹಂ-ನಾನು, ಹನಿಷ್ಯಾಮಿ-ಕೊಲ್ಲುತ್ತೇನೆ, ॥೨೯॥ ತತ್-ಆ ರಾವಣನುಹೇಳಿದಮಾತನ್ನು, ಶ್ರುತ್ವಾ-ಕೇಳಿ, ಭಯಸಂತ್ರಸ್ತಾಃ-ಭಯ-ಅಂಜಿಕೆಯಿಂದ, ಸಂತ್ರಸ್ತಾಃ-ನಡುಗುವವರಾದ,

ತ್ವಾ ಭಯಸಂತ್ರಸ್ತಾ ನಿರ್ಜಗ್ಮುಃ ರಣಕೋವಿದಾಃ । ಅತಿಕಾಯಃ ಪ್ರಹಸ್ತಶ್ಚ ಮಹಾನಾದಮಹೋದರೌ ||೮೦|| ದೇವಶತ್ರುರ್ನಿಕುಂಭಶ್ಚ ದೇವಾಂತಕನರಾಂತಕೌ । ಅಪರೇಬಲಿನಸ್ಸರ್ವೇ ಯಯುರ್ಯುದ್ಧಾಯ ವಾನರೈಃ ||೮೧|| ಏತೇಚಾನ್ಯೇಚಬಹವಃ ಶೂರಾಃ ಶತಸಹಸ್ರಶಃ । ಪ್ರವಿಶ್ಯ ವಾನರಂ ಸೈನ್ಯಂ ಮಮಂಥುರ್ಬಲದರ್ಪಿತಾಃ ||೮೨|| ಭುಶುಂಡಿಬಿಂಡಿಪಾಲೈಶ್ಚ ಬಾಣೈಃ ಖಡ್ಗೈಃ ಪರಶ್ವಧೈಃ । ಅನ್ಯೈಶ್ಚ ವಿವಿಧೈರಸ್ತ್ರೈರ್ನಿಜಘ್ನುರ್ಹರಿಯೂಥಪಾನ್ ||೮೩|| ತೇ ಪಾದಪೈಃ ಪರ್ವತಾಗ್ರೈಃ ನಖದಂಷ್ಟ್ರೈಶ್ಚ ಮುಷ್ಟಿಭಿಃ । ಪ್ರಾಣೈರ್ವಿಯೋಜಯಾಮಾಸುಃ ಸರ್ವರಾಕ್ಷಸಯೂಥಪಾನ್ ||೮೪|| ರಾಮೇಣನಿಹತಾಃ ಕೇಚಿ

ರಣಕೋವಿದಾಃ, ರಣ-ಯುದ್ಧಮಾರ್ಗಗಳನ್ನು, ಕೋವಿದಾಃ-ತಿಳಿದವರಾದ, ರಾಕ್ಷಸರು, ನಿರ್ಜಗ್ಮುಃ-ಯುದ್ಧಕ್ಕೋಸ್ಕರ ಹೊರಟುಹೋದರು; ಅತಿಕಾಯಃ-ಕುಂಭಕರ್ಣನಂತೆ, ದೇಹಪುಷ್ಟಿವುಳ್ಳವನಾದ, ಅತಿಕಾಯನು, ಪ್ರಹಸ್ತಶ್ಚ-ಸೇನಾಧಿಪತಿಯಾದ ಪ್ರಹಸ್ತನು, ಮಹಾನಾದ ಮಹೋದರೌ ರಾವಣನಿಗೆ-ಮಂತ್ರಿಗಳಾಗಿಯೂ ಸಹೋದರರಾದ, ಮಹಾನಾದ-ಮಹೋದರರು; ||೮೦|| ದೇವಶತ್ರುಃ-ದೇವತೆಗಳಿಗೆ, ಶತೃವಾದ, ದೇವಶತೃವು, ನಿಕುಂಭಶ್ಚ, ಕುಂಭಕರ್ಣನಮಗನಾದ, ನಿಕುಂಭನು, ದೇವಾಂತಕ ನರಾಂತಕೌ-ದೇವತೆಗಳನ್ನು ಕೊಲ್ಲುವವನಾದ, ದೇವಾಂತಕನು, ಮನುಷ್ಯರನ್ನು ಕೊಲ್ಲುವವನಾದ ನರಾಂತಕನು, ಬಲಿನಃ-ಬಲಶಾಲಿಗಳಾದ, ಅಪರೇ-ಇತರರಾದ, ಸರ್ವೇ-ಸಮಸ್ತರಾದ, ಕುಂಭನೇ ಮೊದಲಾದ ರಾಕ್ಷಸರು, ವಾನರೈಃ-ಕಪಿಗಳಸಂಗಡ, ಯುದ್ಧಾಯ-ಜಗಳಕ್ಕೆ, ಯಯುಃ-ಹೊರಟುಹೋದರು, ||೮೧|| ಏತೇಚ-ಈ ರಾಕ್ಷಸರು, ಶೂರಾಃ-ಪರಾಕ್ರಮಿಗಳಾದ, ಅನ್ಯೇಚ-ಇತರರಾದ, ಬಹವಃ-ಅನೇಕರಾದ ರಾಕ್ಷಸರು, ಶತಸಹಸ್ರಶಃ-ಲಕ್ಷಾಂತರಸಂಖ್ಯೆಯಾಗಿ, ಬಲ-ದರ್ಪಿತಾಃ-ಬಲ-ಸಾಮರ್ಥ್ಯದಿಂದ, ದರ್ಪಿತಾಃ-ಗರ್ವಿಷ್ಠರಾಗಿ, ವಾನರಂ ಸೈನ್ಯಂ-ಕಪಿಗಳಸೇನೆಯನ್ನು, ಪ್ರವಿಶ್ಯ-ಹೊಕ್ಕು, ಮಮಂಥುಃ-ಕಲಕಿದವರಾದರು, ||೮೨|| ಭುಶುಂಡಿ- ಒನಕೆಯಂತೆ ಇರುವ ಉಕ್ಕಿನಿಂದ ಮಾಡಿದ ಈಟಿಗಳಿಂದಲೂ, ಬಿಂಡಿಪಾಲೈಶ್ಚ-ಈಟಿಗಳಿಂದಲೂ, ಬಾಣೈಃ-ಅಂಬುಗಳಿಂದಲೂ, ಖಡ್ಗೈಃ-ಕತ್ತಿಗಳಿಂದಲೂ, ಪರಶ್ವಧೈಃ-ಪರಶು-ಕೊಡಲಿಗಳಿಂದಲೂ, ವಿವಿಧೈಃ-ನಾನಾಬಗೆಗಳಾದ, ಅನ್ಯೈಃ-ಇತರಗಳಾದ ಆಯುಧಗಳಿಂದಲೂ, ಅಸ್ತ್ರೈಃ-ಮಂತ್ರಾಸ್ತ್ರಗಳಿಂದಲೂ, ಹರಿಯೂಥಪಾನ್-ಕಪಿಸೇನಾಪತಿಗಳನ್ನು, ನಿಜಘ್ನುಃ-ಹೊಡೆದರು, ||೮೩|| ತೇ-ಆ ಕಪಿಗಳು, ಪಾದಪೈಃ-ಮರಗಳಿಂದಲೂ, ಪರ್ವತಾಗ್ರೈಃ-ಬೆಟ್ಟದಶಿಖರಗಳಿಂದಲೂ, ನಖದಂಷ್ಟ್ರೈಃ- ಉಗುರುಗಳಿಂದಲೂ ಹಲ್ಲುಗಳಿಂದಲೂ, ಮುಷ್ಟಿಭಿಃ-ಗುದ್ದುಗಳಿಂದಲೂ, ಸರ್ವರಾಕ್ಷಸಯೂಥಪಾನ್-ಸರ್ವ-ಸಮಸ್ತರಾದ, ರಾಕ್ಷಸಯೂಥಪಾನ್-ರಾಕ್ಷಸ-ನಾಯಕರನ್ನು, ಪ್ರಾಣೈಃ-ಪ್ರಾಣಗಳಿಂದ, ವಿಯೋಜಯಾಮಾಸುಃ-ಇಲ್ಲದವರನ್ನಾಗಿ-ಮಾಡಿದರು, ||೮೪|| ಕೇಚಿತ್-ಕೆಲರುರಾಕ್ಷಸರು, ರಾಮೇಣ-ರಾಮಚಂದ್ರನಿಂದ, ನಿಹತಾಃ-ಕೊಲ್ಲಲ್ಪಟ್ಟರು, ತಥಾ-ಹಾಗೆ, ಅಪರೇ-ಇತರರು ಕೆಲವರು

ತ್ಸುಗ್ರೀವೇಣತಥಾಪರೇ । ಹನೂಮತಾಚಾಂಗದೇನ ಲಕ್ಷ್ಮಣೇನಮಹಾತ್ಮನಾ ॥೮೫॥ ವಿಭೀಷಣೇನನೀಲೇನ ನಲೇನಚತಥಾ ಪ್ರಿಯೇ । ಯೂಥಪೈರ್ವಾನರಾಣಾಂತೇನಿಹತಾಃಸರ್ವರಾಕ್ಷಸಾಃ ॥೮೬॥ ರಾಮತೇಜಸ್ಸಮಾವಿಷ್ಟಾಃವಾನರಾಬಲಿನೋ ಭವನ್ । ರಾಮಶಕ್ತಿವಿಹೀನಾನಾಮೇವಂಶಕ್ತಿಃಕುತೋಭವೇತ್ ॥೮೭॥ ಸರ್ವೇಶ್ವರಸ್ಸರ್ವಮಯೋವಿಧಾತಾಮಾಯಾಮ ನುಷ್ಯತ್ವವಿಡಂಬನೇನ । ಸದಾಚಿದಾನಂದಮಯೋಪಿರಾಮೋಯುದ್ಧಾದಿಲೀಲಾಂವಿತನೋತಿಮಾಯಯಾ ॥೮೮॥ 

—...ಇತಿ ಶ್ರೀಮದಧ್ಯಾತ್ಮ ರಾಮಾಯಣೇ ಉಮಾಮಹೇಶ್ವರ ಸಂವಾದೇ ಯುದ್ಧಕಾಂಡೇ ಪಂಚಮಃಸ್ಸರ್ಗಃ...—

---

ರಾಕ್ಷಸರು, ಸುಗ್ರೀವೇಣ-ಸುಗ್ರೀವನಿಂದ, ಹನೂಮತಾ-ಆಂಜನೇಯನಿಂದ, ಕೆಲವರು, ರಾಕ್ಷಸರು, ಅಂಗದೇನ-ಅಂಗದನಿಂದ, ರಾಕ್ಷಸರು ಮಹಾತ್ಮನಾ-ಮಹಾಬುದ್ಧಿಶಾಲಿಯಾದ, ಲಕ್ಷ್ಮಣೇನ-ಲಕ್ಷ್ಮಣನಿಂದ, ಕೆಲವರು ರಾಕ್ಷಸರು, ॥೮೫॥ ವಿಭೀಷಣೇನ-ವಿಭೀಷಣನಿಂದ ಕೆಲವರು ರಾಕ್ಷಸರು, ನಲೇನ-ನಳನಿಂದ, ಕೆಲವರು ರಾಕ್ಷಸರು, ಪ್ರಿಯೇ-ಪ್ರಿಯಳಾದ ಪಾರ್ವತಿಯೇ, (ನಿಹತಾಃ-ಕೊಲ್ಲಲ್ಪಟ್ಟರು) ವಾನರಾಣಾಂ-ಕಪಿಗಳೊಳಗೆ ಯೂಥಪೈಃ-ನಾಯಕರಾದಕಪಿಗಳಿಂದ, ತೇ-ಆ, ಸರ್ವರಾಕ್ಷಸಾಃ-ಸಮಸ್ತರಾಕ್ಷಸರು, ನಿಹತಾಃ-ಕೊಲ್ಲಲ್ಪಟ್ಟರು, ॥೮೬॥ ರಾಮತೇಜಸ್ಸಮಾವಿಷ್ಟಾಃ-ರಾಮ-ರಾಮಚಂದ್ರನ,ತೇಜಃ-ಕಳೆಯಿಂದ,ಸಮಾವಿಷ್ಟಾಃ-ಕೂಡಿದವರಾದ,ವಾನರಾಃ-ಕಪಿಗಳು, ಬಲಿನಃ-ಶಕ್ತಿವುಳ್ಳವರು, ಅಭವನ್-ಆದರು, ರಾಮಶಕ್ತಿವಿಹೀನಾನಾಂ, ರಾಮ-ರಾಮಚಂದ್ರನ, ಶಕ್ತಿ-ತೇಜೋಶಕ್ತಿಯಿಂದ, ವಿಹೀನಾನಾಂ-ಶೂನ್ಯರಾದವರಿಗೆ, ಏವಂ-ಹೀಗೆಇರುವ, ಶಕ್ತಿಃ-ಬಲವು,ಕುತಃ-ಯಲ್ಲಿಂದ, ಭವೇತ್-ಆದೀತು,॥೮೭॥ವಿಧಾತಾ-ಸೃಷ್ಟಿಕರ್ತೃವಾದ, ಸರ್ವಮಯಃ-ಅಂತರ್ಯಾಮಿಯಾಗಿರುವದ್ದರಿಂದ, ಸರ್ವಮಯನಾದ, ಸದಾ-ಯಾವಾಗಲೂ, ಚಿದಾನಂದಮಯ, ಜ್ಞಾನಸ್ವರೂಪನೂ-ಆನಂದಸ್ವರೂಪನಾದ, ರಾಮಃ-ರಾಮಚಂದ್ರನು. ಸರ್ವೇಶ್ವರೋಪಿ-ಸಂಕಲ್ಪಮಾತ್ರದಿಂದ, ಸಮಸ್ತವನ್ನು ಸಂಹರಿಸುವಶಕ್ತಿಯುಳ್ಳವನಾದಾಗ್ಯೂ, ಮಾಯಾ-ಮನುಷ್ಯತ್ವವಿಡಂಬನೇನ, ಮಾಯಾ-ಮಾಯಾಕಲ್ಪಿತವಾದ, ಮನುಷ್ಯತ್ವ-ಮನುಷ್ಯಭಾವದ,ವಿಡಂಬನೇನ-ನಟನೆಯಿಂದ, ಮಾಯಯಾ-ಕಲ್ಪನೆಯಿಂದ, ಯುದ್ಧಾದಿಲೀಲಾಂ-ಯುದ್ಧ-ಜಗಳವೇ, ಆದಿ-ಮೊದಲಾದ, ಲೀಲಾಂ-ವಿಲಾಸವನ್ನು, ವಿತನೋತಿ-ಮಾಡುತ್ತಲಿದ್ದಾನೆ. ॥೮೮॥

ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಯುದ್ಧಕಾಂಡೇ ಪಂಚಮಸರ್ಗಃ.

---

ಶ್ರೀ ಮಹಾದೇವ ಉವಾಚ॥೧॥ ಶೃತ್ವಾಯುದ್ಧೆ ಬಲಂನಷ್ಟ ಮತಿಕಾಯಮುಖಂಮಹತ್ । ರಾವಣೋದುಃಖ ಸಂತಪ್ತಃ ಕ್ರೋಧೆನಮಹತಾವೃತಃ ॥೨॥ ನಿಧಾಯೇಂದ್ರಜಿತಂಲಂಕಾ ರಕ್ಷಣಾರ್ಥಂಮಹಾದ್ಯುತಿಃ । ಸ್ವಯಂಜಗಾಮಯುದ್ಧಾಯರಾಮೆಣಸಹರಾಕ್ಷಸಃ॥೩॥ ದಿವ್ಯಸ್ಯಂದನಮಾರುಹ್ಯಸರ್ವಶಸ್ತ್ರಾಸ್ತ್ರಸಂಯುತಃ।ರಾಮಮೆವಾಭಿದುದ್ರಾವರಾಕ್ಷಸೇಂದ್ರೋಮಹಾಬಲಃ ॥೪॥ ವಾನರಾನ್ಬಹುಶೋಹತ್ವಾಬಾಣೈರಾಶೀವಿಷೋಪಮೈಃ । ಪಾತಯಾಮಾಸಸುಗ್ರೀವಪ್ರಮುಖಾನ್ಯೂಥನಾಯಕಾನ್ ॥೫॥ ಗದಾಪಾಣಿಂಮಹಾಸತ್ವಂತತ್ರದೃಷ್ಟ್ವಾವಿಭೀಷಣಂ।ಉತ್ಸಸರ್ಜಮಹಾಶಕ್ತಿಂಮಯದತ್ತಾಂವಿಭೀಷಣೆ॥೬॥

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ, ॥೧॥ ಯುದ್ಧೆ-ಬವರದಲ್ಲಿ, ನಷ್ಟಂ-ನಾಶವಾದ, ಅತಿಕಾಯಮುಖಂ-ಅತಿಕಾಯನೇಮೊದಲಾಗುಳ್ಳ, ಮಹತ್-ಹೆಚ್ಚಾದ, ಬಲಂ-ಸೈನ್ಯವನ್ನು, ಶೃತ್ವಾ-ಕೇಳಿ, ದುಃಖ ಸಂತಪ್ತ-ದುಃಖವ್ಯಸನದಿಂದ, ಸಂತಪ್ತಃ-ಪೀಡಿತನಾದ, ರಾವಣಃ-ರಾವಣನು, ಮಹತ್-ಹೆಚ್ಚಾದ, ಕ್ರೋಧೆನ-ಕೋಪದಿಂದ, ವೃತಃ-ಕೂಡಿದವನಾಗಿ, ॥೨॥ ಲಂಕಾ-ಲಂಕಾಪಟ್ಟಣದ, ರಕ್ಷಣಾರ್ಥಂ-ಕಾಪಾಡುವಿಕೆಗಾಗಿ, ಇಂದ್ರಜಿತಂ-ಇಂದ್ರಜಿತುವೆಂಬಮಗನನ್ನು, ನಿಧಾಯ-ಇಟ್ಟು, ಮಹಾದ್ಯುತಿಃ-ಅಧಿಕವಾದಕಾಂತಿಯುಳ್ಳವನಾದ, ರಾವಣಃ-ರಾವಣನು, ಯುದ್ಧಾಯ-ರಣಕ್ಕೆ, ಸ್ವಯಂ-ತಾನೇ, ಸಹರಾಕ್ಷಸಃ- ರಾಕ್ಷಸರಿಂದಕೂಡಿದವನಾಗಿ, ಜಗಾಮ-ಹೊರಟುಹೋದನು; ॥೩॥ ದಿವ್ಯ-ಯೋಗ್ಯವಾದ, ಸ್ಯಂದನಂ-ತೇರನ್ನು, ಆರುಹ್ಯ-ಹತ್ತಿ- ಸರ್ವಶಸ್ತ್ರಾಸ್ತ್ರಸಂಯುತಃ, ಸರ್ವ-ಸಮಸ್ತವಾದ, ಶಸ್ತ್ರ ಕತ್ತಿಮೊದಲಾದ ಆಯುಧಗಳಿಂದಲೂ, ಅಸ್ತ್ರ-ಆಗ್ನೇಯಾದಿ ಅಸ್ತ್ರಗಳಿಂದಲೂ, ಸಂಯುತಃ-ಕೂಡಿದವನಾಗಿ, ಮಹಾಬಲಃ- ಅಧಿಕಬಲನಾದ, ರಾಕ್ಷಸೇಂದ್ರಃ-ರಾಕ್ಷಸರಿಗೆದೊರೆಯಾದ, ರಾವಣನು, ರಾಮಮೆವ-ರಾಮಚಂದ್ರನನ್ನುಕುರಿತೇ, ಅಭಿದುದ್ರಾವ-ಯೆದುರುಬಿದ್ದುಬಂದವನಾದನು, ॥೪॥ ಆಶೀವಿಷೋಪಮೈಃ, ಆಶೀವಿಷ-ಸರ್ಪಗಳಿಗೆ, ಉಪಮೈಃ-ಸಮಗಳಾದ, ಬಾಣೈಃ-ಅಂಬುಗಳಿಂದ, ವಾನರಾನ್-ಕಪಿಗಳನ್ನು, ಬಹುಶಃ-ಬಹಳವಾಗಿ, ಹತ್ವಾ-ಕೊಂದು, ಸುಗ್ರೀವಪ್ರಮುಖಾನ್-ಸುಗ್ರೀವನೇಮೊದಲಾದ, ಯೂಥನಾಯಕಾನ್-ಸೇನಾನಾಯಕರನ್ನು, ಪಾತಯಾಮಾಸ-ನೆಲಕ್ಕೆಕೆಡವಿದನು, ॥೫॥ ಮಹಾಸತ್ವಂ-ಅಧಿಕಬಲನಾದ, ಗದಾಪಾಣಿಂ- ಕೈಯಲ್ಲಿ ಗದೆಯನ್ನುಹಿಡಿದಿರುವ, ವಿಭೀಷಣಂ-ವಿಭೀಷಣನನ್ನು, ತತ್ರ-ಸೈನ್ಯಮಧ್ಯದಲ್ಲಿ ದೃಷ್ಟ್ವಾ-ನೋಡಿ, ವಿಭೀಷಣೆ-ವಿಭೀಷಣನಮೇಲೆ, ಮಯದತ್ತಾಂ-ಮಯನೆಂಬರಾಕ್ಷಸನಿಂದಕೊಡಲ್ಪಟ್ಟ, ಮಹಾಶಕ್ತಿಂ-ಅಮೋಘವಾದ, ಅಷ್ಟಘಂಟಾಶಕ್ತಿಯನ್ನು, ಉತ್ಸಸರ್ಜ-ಬಿಟ್ಟವನಾದನು. ॥೬॥

ತಾಮಾಪತಂತೀಮಾಲೋಕ್ಯವಿಭೀಷಣವಿಘಾತಿನೀಂ । ದತ್ತಾಭಯೋಽಯಂರಾಮೇಣವಧಾರ್ಹೋನಾಯಮಾಸುರಃ ॥೭॥
ಇತ್ಯುಕ್ತ್ವಾಲಕ್ಷ್ಮಣೋಭೀಮಂಚಾಪಮಾದಾಯವೀರ್ಯವಾನ್ । ವಿಭೀಷಣಸ್ಯಪುರತಃಸ್ಥಿತೋಕಂಪಯಿಇವಾಚಲಃ ॥೮॥
ಸಾಶಕ್ತಿರ್ಲಕ್ಷ್ಮಣತನುಂವಿವೇಶಾಮೋಘಶಕ್ತಿತಃ । ಯಾವಂತ್ಯಃಶಕ್ತಯೋಲೋಕೇ ಮಾಯಾಯಾಃಸಂಭವಂತಿಹಿ ॥೯॥
ತಾಸಾಮಾಧಾರಭೂತಸ್ಯ ಲಕ್ಷ್ಮಣಸ್ಯಮಹಾತ್ಮನಃ । ಮಾಯಾಶಕ್ತ್ಯಾಭವೇತ್ಕಿಂವಾಶೇಷಾಂಶಸ್ಯಹರೇಸ್ತನೋಃ ॥೧೦॥
ತಥಾಪಿಮಾನುಷಂಭಾವಮಾಪನ್ನಸ್ತದನುವ್ರತಃ । ಮೂರ್ಛಿತಃಪತಿತೋಭೂಮೌ ತಮಾದಾತುಂದಶಾನನಃ ॥೧೧॥

(ಆಗ ಲಕ್ಷ್ಮಣನು,) ಆಪತಂತೀಂ-ವಿಭೀಷಣನಮೇಲೆ ಬೀಳಲು ಸಿದ್ಧವಾಗಿರುವ, ವಿಭೀಷಣ-ವಿಭೀಷಣನನ್ನು, ವಿಘಾತಿನೀಂ-ಕೊಲ್ಲುವಂಥ, ತಾಂ-ಆ ಶಕ್ತಿಯನ್ನು, ವಿಲೋಕ್ಯ-ನೋಡಿ, ಅಯಂ-ಈ, ಆಸುರಃ-ರಾಕ್ಷಸನಾದ ವಿಭೀಷಣನು, ರಾಮೇಣ-ರಾಮಚಂದ್ರನಿಂದ, ದತ್ತಾಭಯಃ-ದತ್ತ-ಕೊಡಲ್ಪಟ್ಟ, ಅಭಯಃ-ಅಭಯದಾನವುಳ್ಳವನು, (ಆದ್ದರಿಂದ) ನವಧಾರ್ಹಃ-ರಾವಣನಿಂದ ಸಂಹಾರವನ್ನು ಹೊಂದಲು, ತಕ್ಕವನಲ್ಲ, ॥೭॥ ಇತ್ಯುಕ್ತ್ವಾ-ಈಪ್ರಕಾರವಾಗಿಹೇಳಿ, ವೀರ್ಯವಾನ್-ಪರಾಕ್ರಮಶಾಲಿಯಾದ, ಲಕ್ಷ್ಮಣಃ-ಲಕ್ಷ್ಮಣನು, ಭೀಮಂ-ಭಯಂಕರವಾದ, ಚಾಪಂ-ಬಿಲ್ಲನ್ನು, ಆದಾಯ-ತೆಗದುಕೊಂಡು, ವಿಭೀಷಣಸ್ಯ-ವಿಭೀಷಣನ, ಪುರತಃ-ಮುಂದೆ, ಅಕಂಪಃ-ಕದಲದೇಇರುವ, ಅಚಲಇವ-ಬೆಟ್ಟದಂತೆ, ಸ್ಥಿತಃ-ನಿಂತಿದ್ದನು, ॥೮॥ ಸಾ-ಆ, ಶಕ್ತಿಃ-ಅಷ್ಟಘಂಟಾಶಕ್ತಿಯು, ಅಮೋಘಶಕ್ತಿತಃ-ವ್ಯರ್ಥವಾಗದ ಶಕ್ತ್ಯಾಯುಧನಾದ್ದರದೆಯಿಂದ, ಲಕ್ಷ್ಮಣತನುಂ-ಲಕ್ಷ್ಮಣ-ಲಕ್ಷ್ಮಣನತನುಂ-ದೇಹವನ್ನು, ವಿವೇಶ-ಹೊಕ್ಕಿತು, ಲೋಕೇ-ಪ್ರಪಂಚದಲ್ಲಿ, ಯಾವಂತ್ಯಃ-ಯಷ್ಟುವಿಧಗಳಾದ, ಶಕ್ತಯಃ-ಶಕ್ತಿಗಳು, ಮಾಯಾಯಾಃ-ಮಾಯೆಯ ದೆಸೆಯಿಂದ, ಸಂಭವಂತಿಹಿ-ಹುಟ್ಟುತ್ತವೆ,॥೯॥ ತಾಸಾಂ-ಅಂಥಾಸಮಸ್ತಗಳಾದ ಮಾಯಾ-ಶಕ್ತಿಗಳಿಗೆ, ಆಧಾರಭೂತಸ್ಯ-ಆ ಕರನಾಗಿರುವ, ಮಹಾತ್ಮನಃ-ಮಹಾಬುದ್ಧಿಯುಳ್ಳವನಾದ, ಲಕ್ಷ್ಮಣಸ್ಯ-ಲಕ್ಷ್ಮಣನೆಂಬ ಹೆಸರುಳ್ಳ, ಹರೇಃ-ವಿಷ್ಣುವಿನ, ತನೋಃ-ಶರೀರವಾಗಿರುವ, ಶೇಷಾಂಶಸ್ಯ-ಆದಿಶೇಷನ ಅವತಾರವಾಗಿರುವವನಿಗೆ, ಮಾಯಾ-ಶಕ್ತ್ಯಾ-ಮಾಯಾಶಕ್ತಿಯಿಂದ, ಕಿಂವಾಭವೇತ್-ಏನಾಧೀತು, ॥೧೦॥ ತಥಾಪಿ-ಅಂಥಾಆದಿಶೇಷಾವತಾರನಾಗಿದ್ದಾಗ್ಯೂ, ಮನುಷ್ಯಭಾವಂ-ಮನುಷ್ಯತ್ವವನ್ನು, ಆಪನ್ನಃ-ಹೊಂದಿದವನಾದ ಲಕ್ಷ್ಮಣನು, ತದನುವ್ರತಃ-ಮಾಯಾಶಕ್ತಿಯನ್ನು ಅನುಸರಿಸಿದವನಾಗಿ, ಭೂಮೌ-ನೆಲದಲ್ಲಿ, ಮೂರ್ಛಿತಃ-ಪ್ರಜ್ಞೆಯಿಲ್ಲದವನಾಗಿ, ಪತಿತಃ-ಬಿದ್ದನು, ದಶಾನನಃ-ರಾವಣನು, ತಂ-ಆ ಮೂರ್ಛಿತಲಕ್ಷ್ಮಣನನ್ನು, ಆದಾತುಂ-ತೆಗದುಕೊಳ್ಳುವದಕ್ಕೆ,॥೧೧॥

ಹಸ್ತೈಸ್ತೋಲಯಿತುಂಶಕ್ತೋನಬಭೂವಾತಿವಿಸ್ಮಿತಃ । ಸರ್ವಸ್ಯಜಗತಸ್ಸಾರಂವಿರಾಜಂಪರಮೇಶ್ವರಂ ॥೧೨॥ ಕಥಂಲೋಕಾಶ್ರಯಂವಿಷ್ಣುಂತೋಲಯೆಲ್ಲಘುರಾಕ್ಷಸಃ ।ಗೃಹೀತುಕಾಮಂಸೌಮಿತ್ರಿಂರಾವಣಂವೀಕ್ಷ್ಯಮಾರುತಿಃ ॥೧೩॥ ಆಜಘಾನೋರಸಿಕ್ರುದ್ಧೋವಜ್ರಕಲ್ಪೇನಮುಷ್ಟಿನಾ । ತೇನಮುಷ್ಟಿಪ್ರಹಾರೇಣಜಾನುಭ್ಯಾಮಪತದ್ಭುವಿ ॥೧೪॥ ಆಸ್ಯೈಶ್ಚನೈತ್ರೈಃಶ್ರವಣೈರುದ್ವಮನ್ರುಧಿರಂಬಹು ।ವಿಘೂರ್ಣಮಾನನಯನೋರಥೋಪಸ್ಥಉಪಾವಿಶತ ॥೧೫॥ ಅಥಲಕ್ಷ್ಮಣಮಾದಾಯಹನುಮಾನ್ರಾವಣಾರ್ದಿತಂ । ಆನಯದ್ರಾಮಸಾಮೀಪ್ಯಂಬಾಹುಭ್ಯಾಂಪರಿಗೃಹ್ಯತಂ ॥೧೬॥ ಹನೂಮತಃಸುಹೃತ್ವೇ

ಟೀ॥ ಹಸ್ತೈಃ-ಕೈಗಳಿಂದ, ತೋಲಯಿತುಂ-ಯತ್ತುವದಕ್ಕೆ, ಶಕ್ತಃ-ಸಮರ್ಥನು, ನಬಭೂವ-ಆಗಲಿಲ್ಲ, (ಆದ್ದರಿಂದ) ವಿಸ್ಮಿತಃ-ಆಶ್ಚರ್ಯವುಳ್ಳವನು ಆದನು, ಸರ್ವಸ್ಯ-ಸಮಸ್ತವಾದ, ಜಗತಃ-ಪ್ರಪಂಚಕ್ಕೆ, ವಿರಾಜಂ-ವಿರಾಟ್ಸ್ವರುಪನಾಗಿ ಪ್ರಕಾಶಿಸುತ್ತಿರುವ, ಸಾರಂ-ಸ್ಥಿರನಾದ, ಪರಮೇಶ್ವರಂ, ಪರಮ-ಉತ್ಕೃಷ್ಟನಾದ, ಈಶ್ವರಂ-ನಿಯಾಮಕನಾದ, ॥೧೨॥ ಲೋಕಾಶ್ರಯಂ-ಪ್ರಪಂಚಕ್ಕೆ, ಆಧಾರಭೂತನಾದ, ವಿಷ್ಣುಂ-ವ್ಯಾಪಕನಾದ, ಲಕ್ಷ್ಮಣನನ್ನು, ಲಘುರಾಕ್ಷಸಃ-ಅಲ್ಪನಾದರಕ್ಕಸನು ಕಥಂ-ಹ್ಯಾಗೆ, ತೋಲಯೇತ್-ಯೆತ್ತುವವನಾದನು, ಮಾರುತಿಃ-ಆಂಜನೇಯನು, ಸೌಮಿತ್ರಿಂ-ಲಕ್ಷ್ಮಣನನ್ನು, ಗೃಹೀತುಕಾಮಂ-ಯತ್ತಿಕೊಂಡುಹೋಗಲು ಅಪೇಕ್ಷಿಸುತ್ತಿರುವವನಾದ, ರಾವಣಂ-ರಾವಣನನ್ನು, ವೀಕ್ಷ್ಯ-ನೋಡಿ, ॥ ೧೩ ॥ ವಜ್ರ ಕಲ್ಪೇನ-ವಜ್ರಕ್ಕೆಸಮವಾದ, ಮುಷ್ಟಿನಾ-ಹಿಡಿಯಿಂದ, ಉರಸಿ-ಯೆದೆಯಲ್ಲಿ, ಕ್ರುದ್ಧಃ-ಕೋಪಿಷ್ಠನಾಗಿ, ಆಜಘಾನ-ಹೊಡೆದನು, ತೇನ-ಆ, ಮುಷ್ಟಿಪ್ರಹಾರೇಣ-ಮುಷ್ಟಿಯಪೆಟ್ಟಿನಿಂದ, ಭುವಿ-ಭೂಮಿಯಲ್ಲಿ, ಜಾನುಭ್ಯಾಂ-ಮಣಕಾಲುಗಳಿಂದ ಉರಿಕೊಂಡು, ಅಪತತ್-ರಾವಣನು ಬಿದ್ದವನಾದನು, ॥ ೧೪ ॥ ಆಸ್ಯೈಃ-ಮುಖಗಳಿಂದಲೂ, ನೈತ್ರೈಃ-ಕಣ್ಣುಗಳಿಂದಲೂ, ಶ್ರವಣೈಃ-ಕಿವಿಗಳಿಂದಲೂ, ಬಹು-ಅಧಿಕವಾದ, ರುಧಿರಂ-ರಕ್ತವನ್ನು, ಉದ್ವಮನ್-ಕಾರುತ್ತಿರುವವನಾಗಿ, ವಿಘೂರ್ಣಮಾನನಯನಃ, ವಿಘೂರ್ಣಮಾನ-ತಿರುಗುತ್ತಿರುವ, ನಯನಃ-ಕಣ್ಣುಗಳುಳ್ಳವನಾಗಿ, ರಥ-ತೇರಿನ, ಉಪಸ್ಥೆ-ಬಳಿಯಲ್ಲಿ, ಉಪಾವಿಶತ್-ಕೂತುಕೊಂಡನು ॥ ೧೫ ॥ ಅಥ-ಅಬಳಿಕ, ಹನುಮಾನ್-ಆಂಜನೇಯನು, ರಾವಣ-ರಾವಣನಿಂದ, ಅರ್ದಿತಂ-ಹೊಡೆಯಲ್ಪಟ್ಟವನಾದ, ಲಕ್ಷ್ಮಣಂ-ಲಕ್ಷ್ಮಣನನ್ನು, ಆದಾಯ-ಎತ್ತಿಕೊಂಡು, ಬಾಹುಭ್ಯಾಂ-ತೋಳುಗಳಿಂದ, ಪರಿಗೃಹ್ಯ-ಹಿಡಿದುಕೊಂಡು, ರಾಮಸಾಮಿಪ್ಯಂ, ರಾಮ-ರಾಮಚಂದ್ರನ, ಸಾಮೀಪ್ಯಂ-ಹತ್ರವನ್ನುಕುರಿತು, ಆನಯತ್-ತಂದವನಾದನು, ॥ ೧೬ ॥ ಹನೂಮತಃ-ಆಂಜನೇಯನ, ಭಕ್ತ್ಯಾ-ಭಕ್ತಿಯಿಂದಲೂ, ಸುಹೃತ್ವೇನ-ಮಿತ್ರತ್ವದಿಂದಲೂ, ಅಜಃ-ಉತ್ಪತ್ತಿಯಿಲ್ಲದವನಾದ, ದೇವಃ-ಸ್ವಾಮಿಯಾದ, ಪರಮೇಶ್ವರಃ-ಉತ್ತಮನಾಗಿಯೂ ನಿಯಾಮಕನಾಗಿಯೂ ಇರುವ, (ಲಕ್ಷ್ಮಣನು) ಗುರುಣಾಂ-ಭಾರವಾದ ವಸ್ತುಗಳಿಗಿಂತೆ, ಗು

ನಭಕ್ತ್ಯಾಚಪರಮೇಶ್ವರಃ । ಲಘುತ್ವಮಗಮದ್ದ್ವೇಗುರೂಣಾಂಗುರುರಪ್ಯಜಃ ||೧೭|| ಸಾಶಕ್ತಿರಪಿತಂತ್ಯಕ್ತ್ವಾಜ್ಞಾ ತ್ವಾನಾರಾಯಣಾಂಶಜಂ । ರಾವಣಸ್ಯರಥಂಪ್ರಾಗಾದ್ರಾವಣೋಪಿಶನೈಸ್ತತಃ ||೧೮|| ಸಂಜ್ಞಾಮವಾಪ್ಯಜಗ್ರಾಹಬಾಣಾ ಸನಮಥೋರುಷಾ । ರಾಮಮೇವಾಭಿದುದ್ರಾವದೃಷ್ಟ್ವಾರಾಮೋಪಿತಂಕ್ರುಧಾ ||೧೯|| ಆರುಹ್ಯಜಗತಾಂನಾಥಃಹನೂಮಂ ತಂಮಹಾಬಲಂ । ರಥಸ್ಥಂರಾವಣಂದೃಷ್ಟ್ವಾಅಭಿದುದ್ರಾವರಾಘವಃ ||೨೦|| ಜ್ಯಾಶಬ್ದಮಕರೋತ್ತೀವ್ರಂವಜ್ರನಿಷ್ಪೇ ಷನಿಸ್ವನಂ । ರಾಮೋಗಂಭೀರಯಾವಾಚಾರಾಕ್ಷಸೇಂದ್ರಮುವಾಚಹ ||೨೧|| ರಾಕ್ಷಸಾಧಮತಿಷ್ಠಾದ್ಯಕ್ವಗಮಿಷ್ಯಸಿಮೆ ಪುರಃ । ಕೃತ್ವಾಪರಾಧಮೇವಂಮೆಸರ್ವತ್ರಸಮದರ್ಶಿನಃ ||೨೨|| ಯೇನಬಾಣೇನನಿಹತಾರಾಕ್ಷಸಾಸ್ತೇಜನಾಲಯೆ । ತೈಸ್ತೈ

ರುರಪಿ ಭಾರವಾದವನಾಗಿದ್ದಾಗ್ಯೂ, ಅಥವಾ-ಅಜ್ಞಾನನಿವೃತ್ತಿಯನ್ನು ಮಾಡುವವರಿಗೆ, ತಾನುಗುರುವಾದವನಾದಾಗ್ಯೂ, ಲಘುತ್ವಂ-ಹಗುರಾಗಿರುವ-ತನವನ್ನು, ಅಗಮತ್-ಹೊಂದಿದನು, ||೧೭|| ಸಾ-ಆ, ಶಕ್ತಿರಪಿ-ಶಕ್ತಿಯು, ನಾರಾಯಣಾಂಶಜಂ, ನಾರಾಯಣ-ವಿಷ್ಣುವಿನ, ಅಂಶಜಂ-ಅಂಶೆಯಿಂದ ಹುಟ್ಟಿದವನನ್ನಾಗಿ, ಜ್ಞಾತ್ವಾ-ತಿಳಿದು, ತಂ-ಲಕ್ಷ್ಮಣನನ್ನು, ತ್ಯಕ್ತ್ವಾ-ಬಿಟ್ಟು, ರಾವಣಸ್ಯ-ರಾವಣನ, ರಥಂ-ತೇರನ್ನು ಕುರಿತು, ಪ್ರಾಗಾತ್-ಬಂದು ಸೇರಿತು, ತತಃ-ಆಬಳಿಕ, ರಾವಣೋಪಿ-ರಾವಣನು, ಶನೈಃ-ಮೆಲ್ಲಗೆ, ||೧೮|| ಸಂಜ್ಞಾಂ-ಚೇತನವನ್ನು, ಅವಾಪ್ಯ-ಹೊಂದಿ, ಅಥ-ಅನಂತರ, ರುಷಾ-ಕೋಪದಿಂದ, ಬಾಣಾಸನಂ-ಬಿಲ್ಲನ್ನು, ಜಗ್ರಾಹ-ತೆಗೆದುಕೊಂಡನು, ರಾಮಮೇವ- ರಾಮಚಂದ್ರನನ್ನು ಕುರಿತು, ಅಭಿದುದ್ರಾವ- ಅಭಿಮುಖನಾಗಿ, ಎದುರುಬಿದ್ದು ಬಂದನು, ರಾಮೋಪಿ-ರಾಮಚಂದ್ರನು, ತಂ-ರಾವಣನನ್ನು, ಕ್ರುಧಾ-ಕೋಪದಿಂದ, ದೃಷ್ಟ್ವಾ-ನೋಡಿ ||೧೯|| ಜಗತಾಂ-ಲೋಕಗಳಿಗೆ, ನಾಥಃ-ಸ್ವಾಮಿಯಾದ, ರಾಘವಃ-ರಾಮಚಂದ್ರನು, ಮಹಾಬಲಂ-ಅಧಿಕಬಲನಾದ, ಹನೂಮಂತಂ- ಆಂಜನೇಯನನ್ನು, ಆರುಹ್ಯ-ಏರಿ, ರಥಸ್ಥಂ- ತೇರಿನಲ್ಲಿಇರುವ, ರಾವಣಂ- ರಾವಣನನ್ನು, ದೃಷ್ಟ್ವಾ-ನೋಡಿ, ಅಭಿದುದ್ರಾವ- ಅಭಿಮುಖನಾಗಿ ಯೆದುರುಬಿದ್ದು ಹೋದನು ||೨೦|| ವಜ್ರನಿಷ್ಪೇಷಸನ್ನಿಭಂ-ವಜ್ರ-ನಿಷ್ಪೇಷ-ಸಿಡಿಲಿನ ಧ್ವನಿಗೆ, ಸನ್ನಿಭಂ-ಸಮಾನವಾದ, ಜ್ಯಾಶಬ್ದಂ- ಜ್ಯಾಹೆದೆಯ, ಶಬ್ದಂ- ಟಂಕಾರಧ್ವನಿಯನ್ನು, ತೀವ್ರಂ-ಜಾಗ್ರತೆಯಾಗಿ, ಅಕರೋತ್-ಮಾಡಿದನು, ರಾಮ-ರಾಮಚಂದ್ರನು, ಗಂಭೀರಯಾ ನಿದಾನವಾದ, ವಾಚಾ-ಮಾತಿನಿಂದ, ರಾಕ್ಷಸೇಂದ್ರಂ-ರಾವಣನನ್ನು ಕುರಿತು, ಉವಾಚಹ- ಹೇಳಿದನು, ||೨೧|| ರಾಕ್ಷಸಾಧಮ-ರಕ್ಕಸರೊಳಗೆ ನೀಚನಾದ ರಾವಣನೇ, ಸರ್ವತ್ರ-ಎಲ್ಲರಲ್ಲಿಯೂ, ಸಮದರ್ಶಿನಃ- ಒಂದೇರೀತಿಯಾದ ಸಮದೃಷ್ಟಿಯಾಗಿ ನೋಡುವವನಾದ, ಮೆ-ನನಗೆ, ಏವಂ-ಈರೀತಿಯಾಗಿ, ಅಪರಾಧಂ-ದ್ರೋಹವನ್ನು, ಕೃತ್ವಾ-ಮಾಡಿ, ಅದ್ಯ-ಈಗ, ಕ್ವಗಮಿಷ್ಯಸಿ- ಎಲ್ಲಿಗೆಹೋಗುತ್ತೀ, ಮೆ-ನನ . ಪುರಃ-ಮುಂದೆ, ತಿಷ್ಠ-ನಿಲ್ಲು, ||೨೨|| ಜನಾಲಯೆ-ಜನಸ್ಥಾನದಲ್ಲಿ, ತೇ-ನಿನ್ನ, ಕಡೆಯವರಾದ, ರಾಕ್ಷಸಾಃ-ಖರದೂಷಣ ತ್ರಿಶಿರಾದಿರಾಕ್ಷಸರು, ಯೇನ-ಯಾ

ವತ್ವಾಂಹನಿಷ್ಯಾಮಿತಿಷ್ಠ ದ್ಯಮಮಗೋಚರೆ ॥೭೩॥ ಶ್ರೀರಾಮಸ್ಯವಚಶ್ಶ್ರುತ್ವಾರಾವಣೋಮಾರುತಾತ್ಮಜಂ । ವಹಂತಂ ರಾಘವಂಸಂಖ್ಯೇಶರೈಸ್ತೀಕ್ಷ್ಣೈರತಾಡಯತ ॥೭೪॥ ಹತಸ್ಯಾಪಿಶರೈಸ್ತೀಕ್ಷ್ಣೈಃವಾಯುಸೂನೋಸ್ಸ್ವತೇಜಸಾ । ವ್ಯವರ್ಧತಪುನಸ್ತೇಜೋನನರ್ದಚಮಹಾಕಪಿಃ ॥೭೫॥ ತತೋದೃಷ್ಟ್ವಾಹನೂಮಂತಂಸವ್ರಣಂರಘುಸತ್ತಮಃ । ಕ್ರೋಧಮಾಹಾರಯಾಮಾಸಕಾಲರುದ್ರಇವಾಪರಃ ॥೭೬॥ ಸಾಶ್ವಂಧ್ವಜಂರಥಂಸೂತಂಶಸ್ತ್ರೌಘಂಧನುರಂಜಸಾ । ಛತ್ರಂಪತಾಕಂ ತರಸಾಚಿಚ್ಛೇದಶಿತಸಾಯಕೈಃ ॥೭೭॥ ತತೋಮಹಾಶರಣಾಶುರಾವಣಂರಘುಸತ್ತಮಃ । ಪಿವ್ಯಾಧವಜ್ರಕಲ್ಪೇನಪಾಕಾರಿ

ನ, ಬಾಣೇನ-ಅಂಬಿನಿಂದ, ನಿಹತಾಃ-ಕೊಲ್ಲಲ್ಪಟ್ಟರೋ, ತೇನೈವ-ಅದೇ ಬಾಣದಿಂದ, ತ್ವಾಂ-ನಿನ್ನನ್ನು, ಹನಿಷ್ಯಾಮಿ-ಕೊಲ್ಲುತ್ತೇನೆ, ಮಮ-ನನ್ನ, ಗೋಚರೇ- ದೃಷ್ಟಿವಿಷಯದಲ್ಲಿ, ಅದ್ಯ-ಈಗ, ತಿಷ್ಠ-ನಿಲ್ಲು ॥೭೩॥ ಶ್ರೀರಾಮಸ್ಯ-ರಾಮಚಂದ್ರನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾವಣಃ-ರಾವಣನು, ರಾಘವಂ- ರಾಮಚಂದ್ರನನ್ನು, ವಹಂತಂ-ಹೊತ್ತುಕೊಂಡಿರುವ, ಮಾರುತಾತ್ಮಜಂ- ವಾಯುಪುತ್ರನಾದ ಆಂಜನೇಯನನ್ನು, ಸಂಖ್ಯೇ-ಯುದ್ಧದಲ್ಲಿ, ತೀಕ್ಷ್ಣೈಃ-ಹದವುಳ್ಳವುಗಳಾದ, ಬಾಣೈಃ-ಅಂಬುಗಳಿಂದ, ಅತಾಡಯತ್- ಹೊಡೆದನು ॥೭೪॥ ತೀಕ್ಷ್ಣೈಃ-ಹದವುಳ್ಳವುಗಳಾದ, ಶರೈಃ-ಬಾಣಗಳಿಂದ, ಹತಸ್ಯಾಪಿ-ಹೊಡೆಯಲ್ಪಟ್ಟವನಾದ, ವಾಯುಸೂನೋಃ-ವಾಯುವಿಗೆ ಮಗನಾದಆಂಜನೇಯನಿಗೆ, ಸ್ವ-ತನ್ನ, ತೇಜಸಾ- (ಹನೂಮಾನ್ರುದ್ರ ಸಂಭವಃ-) ಎಂಬುವಂತೆ ರುದ್ರಾಂಶೆಯಿಂದ ಹುಟ್ಟಿದವನಾದ್ದರಿಂದ ಆ ರುದ್ರತೇಜಸ್ಸಿನಿಂದ, ಪುನಃ-ತಿರಿಗಿ, ತೇಜಃ-ಬಲವು, ಅಥವಾ ಪ್ರತಾಪವು, ವ್ಯವರ್ಧತ-ವೃದ್ಧಿಯನ್ನು ಹೊಂದುತ್ತಾಲೇ ಇತು, ಮಹಾಕಪಿಃ-ಆಂಜನೇಯನು, ನನರ್ದ-ಧ್ವನಿಯನ್ನು ಮಾಡಿದವನಾದನು ॥೭೫॥ ತತಃ-ಆ ಬಳಿಕ, ರಘುಸತ್ತಮಃ-ರಾಮಚಂದ್ರನು, ಸವ್ರಣಂ-ರಾವಣನ ಬಾಣಗಳಿಂದ ಘಾಯವಾಗಿರುವವನಾದ, ಹನೂಮಂತಂ- ಆಂಜನೇಯನನ್ನು, ದೃಷ್ಟ್ವಾ-ನೋಡಿ, ಅಪರಃ-ಮತ್ತೊಬ್ಬನಾದ, ಕಾಲರುದ್ರಇವ- ಪ್ರಳಯಕಾಲದಲ್ಲಿ ಲಯವನ್ನು ಮಾಡುವ ರುದ್ರನಂತೆ, ಕ್ರೋಧಂ-ಕೋಪವನ್ನು, ಆಹಾರಯಾಮಾಸ-ಹೊಂದಿದವನಾದನು ॥೭೬॥ ಸಾಶ್ವಂ-ಕುದುರೆಗಳಿಂದ ಕೂಡಿರುವ, ರಥಂ-ತೇರನ್ನು, ಧ್ವಜಂ-ಟೆಕ್ಕೆಯನ್ನು, ಸೂತಂ-ಸಾರಥಿಯನ್ನು, ಶಸ್ತ್ರೌಘಂ- ಆಯುಧಸಮೂಹವನ್ನು, ಧನುಃ-ಬಿಲ್ಲನ್ನು, ಛತ್ರ-ಕೊಡೆಯನ್ನು, ಪತಾಕಂ-ರಥಾಲಂಕಾರಕ್ಕಾಗಿರುವ ಪತಾಕವೆಂಬ ಸಣ್ಣದಾದ ಕೇತುವನ್ನು, ಶಿತಸಾಯಕೈಃ-ಶಿತ-ತೀಕ್ಷ್ಣಗಳಾದ, ಸಾಯಕೈಃ- ಬಾಣಗಳಿಂದ, ಅಂಜಸಾ-ಬೇಗನೇ, ತರಸಾ-ವೇಗದಿಂದ, ಚಿಚ್ಛೇದ-ಕತ್ತರಿಸಿದನು ॥೭೭॥ ತತಃ-ಆ ಬಳಿಕ, ರಘುಸತ್ತಮಃ-ರಾಮಚಂದ್ರನು, ಪಾಕಾರಿಃ-ಇಂದ್ರನು ಪರ್ವತಮಿನ-ಪರ್ವತವನ್ನು ಹೊಡೆದಂತೆ, ಆಶು-ಜಾಗ್ರತೆಯಾಗಿ, ವಜ್ರಕಲ್ಪೇನ-ವಜ್ರ-ವಜ್ರಾಯುಧಕ್ಕೆ, ಕಲ್ಪೇನ-ಸಮವಾದ, ಮಹಾಶರೇಣ- ಅಸ್ತ್ರಾಭಿಮಂತ್ರಿತವಾದ

ರಿವಪರ್ವತಂ ||೭೮|| ರಾಮಬಾಣಹತೋವೀರಶ್ಚಚಾಲಚಮುಮೋಹಚ । ಹಸ್ತಾತ್ಸ್ನಿಪತಿತಶ್ಚಾಪಃತಂಸವೀಕ್ಷ್ಯರಘೂತ್ತಮಃ ||೭೯|| ಅರ್ಧಚಂದ್ರೇಣಚಿಚ್ಛೇದತತ್ಕಿರೀಟಂರವಿಪ್ರಭಂ । ಅನುಜಾನಾಮಿಗಚ್ಛತ್ವಮಿದಾನೀಂಬಾಣಪೀಡಿತಃ ||೩೦|| ಪ್ರವಿಶ್ಯಲಂಕಾಮಾಶ್ವಾಸ್ಯಶ್ವಃಪಶ್ಯಸಿಬಲಂಮಮ । ರಾಮಬಾಣೇನಸಂವಿದ್ಧೋಹತದರ್ಪೋಥರಾವಣಃ ||೩೧|| ಮಹತ್ಯಾಲಜ್ಜಯಾಯುಕ್ತೋಲಂಕಾಂಪ್ರವಿಶದಾತುರಃ । ರಾಮೋಪಿಲಕ್ಷ್ಮಣಂದೃಷ್ಟ್ವಾಮೂರ್ಛಿತಂಪತಿತಂಭುವಿ ||೩೨|| ಮಾನುಷತ್ವಮುಪಾಶ್ರಿತ್ಯಲೀಲಯಾನುಶುಶೋಚಹ । ತತಃಪ್ರಾಹಹನೂಮಂತಂವತ್ಸಜೀವಯಲಕ್ಷ್ಮಣಂ ||೩೩|| ಮಹೋ

ದೊಡ್ಡ ಬಾಣದಿಂದೆ, ರಾವಣಂ-ರಾವಣನನ್ನು, ವಿವ್ಯಾಧ- ಹೊಡೆದನು ||೭೮|| ವೀರಃ-ಶೂರನಾದ ರಾವಣನು, ರಾಮಬಾಣಹತಃ-ರಾಮ-ರಾಮಚಂದ್ರನ, ಬಾಣ-ಅಂಬಿನಿಂದ, ಹತಃ-ಹೊಡೆಯಲ್ಪಟ್ಟವನಾಗಿ, ಚಚಾಲ-ಕಂಪಿಸಿದವನಾದನು, ಮುಮೋಹಚ-ಮೂರ್ಛೆಯನ್ನು ಪಡೆದವನಾದನು, ಹಸ್ತಾತ್-ಕೈಯಿಂದ, ಚಾಪಃ -ಬಿಲ್ಲು, ನಿಪತಿತಃ-ಬಿದ್ದಂಥಾದ್ದಾಯಿತಂ, ರಘೂತ್ತಮಃ-ರಾಮಚಂದ್ರನು, ತಂ-ಆ ರಾವಣನನ್ನು, ಸಮೀಕ್ಷ್ಯ-ನೋಡಿ, ||೭೯|| ಅರ್ಧಚಂದ್ರೇಣ- ಅರ್ಧಚಂದ್ರ ಬಾಣದಂತೆ ಇರುವಬಾಣದಿಂದ, ರವಿಪ್ರಭಂ-ಸೂರ್ಯನಿಗೆ ಸರಿಯಾದಕಾಂತಿಯುಳ್ಳ, ತತ್ಕಿರೀಟಂ-ಆ ರಾವಣನ ಕಿರೀಟವನ್ನು, ಚಿಚ್ಛೇದ-ಕತ್ತರಿಸಿದನು (ರಾವಣನೆ) ಇದಾನೀಂ- ಈಗ, ಬಾಣಪೀಡಿತಃ-ಬಾಣ- ಬಾಣಗಳಿಂದ ಪೆಟ್ಟುತಿಂದು, ಪೀಡಿತಃ-ಶ್ರಮೆ ಪಡುವವನಾದೆ, ತ್ವಂ-ನೀನು, ಗಚ್ಛ-ಹೋಗು, ಅನುಜಾನಾಮಿ- ಅಪ್ಪಣೆ ಕೊಟ್ಟಿದ್ದೇನೆ ||೩೦|| ಲಂಕಾಂ- ಲಂಕಾಪಟ್ಟಣವನ್ನು, ಪ್ರವಿಶ್ಯ-ಹೊಕ್ಕು, ಆಶ್ವಾಸ್ಯ-ಸುಧಾರಿಸಿಕೊಂಡು, (ಬಂದರೆ) ಶ್ವಃ-ನಾಳೆ ಬೆಳಿಗ್ಗೆ, ಮಮ-ನನ್ನ, ಬಲಂ-ಸಾಮರ್ಥ್ಯವನ್ನೂ, ಪಶ್ಯಸಿ- ನೋಡುತ್ತಲಿದ್ದೀ, ಅಥ-ಆ ಬಳಿಕ, ರಾಮಬಾಣೇನ-ರಾಮಚಂದ್ರನ ಅಂಬಿನಿಂದ, ಸಂವಿದ್ಧಃ-ಹೊಡೆಯಲ್ಪಟ್ಟವನಾದ, ರಾವಣಃ-ರಾವಣನು, ಹತದರ್ಪಃ- ಹೆಮ್ಮೆಯಿಲ್ಲದವನಾಗಿ ||೩೧|| ಮಹತ್ಯಾ-ಅಧಿಕವಾದ ಲಜ್ಜೆಯಿಂದ, ಯುಕ್ತಃ-ಕೂಡಿದವನಾಗಿ, ಆತುರಃ-ತ್ವರೆಯುಳ್ಳವನಾಗಿ, ಲಂಕಾಂ-ಲಂಕಾಪಟ್ಟಣವನ್ನು, ಪ್ರವಿಶತ್- ಹೊಕ್ಕನು, ರಾಮೋಪಿ-ರಾಮಚಂದ್ರನು, ಭುವಿ-ನೆಲದಲ್ಲಿ, ಪತಿತಂ-ಬಿದ್ದಿರುವವನಾದ, ಮೂರ್ಛಿತಂ-ಪ್ರಜ್ಞೆಯಿಲ್ಲದೆ ಇರುವ, ಲಕ್ಷ್ಮಣಂ-ಲಕ್ಷ್ಮಣನನ್ನು, ದೃಷ್ಟ್ವಾ-ನೋಡಿ||೩೨|| ಮಾನುಷತ್ವಂ-ಮನುಷ್ಯರ ನಡತೆಯನ್ನು, ಉಪಾಶ್ರಿತ್ಯ-ಅನುಸರಿಸಿ, ಲೀಲಯಾ-ವಿಲಾಸದಿಂದ, ಅನುಶುಶೋಚ-ದುಃಖಿಸಿದನು, ತತಃ-ಆ ಬಳಿಕ, ಹನೂಮಂತಂ- ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದನು, ವತ್ಸ-ಬಾಲಕನಾದ ಆಂಜನೇಯನೇ, ಲಕ್ಷ್ಮಣಂ-ಲಕ್ಷ್ಮಣನನ್ನೂ, ಜೀವಯ-ಬದುಕಿಸು ||೩೩|| ಪೂರ್ವವತ್-ಹಿಂದೆ ಮಾಡಿದಂತೆ, ಮಹೌಷಧೀಃ-ಸೌವರ್ಣಕರಿಣೀ-ಸಂಧಾನಕರಿಣೀ, ವಿಶಲ್ಯಕರಣೀ, ಸಂಜೀವಕರಿಣೀ, ಎಂಬ ನಾಲ್ಕು ಓಷಧಿಗಳನ್ನು, ಸಮಾನೀಯ-ತಂದು, ವಾನರಾನಪಿ-ಕಪಿ

ಯಸ್ಮಿನ್ನಕಿಂಚಿಲ್ಲೋಕೇಸ್ಮಿನ್ತಸ್ಮೈತೇಬ್ರಹ್ಮಣೇನಮಃ ॥ ೪೦ ॥ ಪ್ರಕೃತಿಂಪುರುಷಂಕಾಲಂವ್ಯಕ್ತಾವ್ಯಕ್ತಸ್ವರೂಪಿಣಂ ।
ಯಂಜಾನಂತಿಮುನಿಶ್ರೇಷ್ಠಾಃತಸ್ಮೈರಾಮಾಯತೇನಮಃ ॥ ೪೧ ॥ ವಿಕಾರರಹಿತಂಶುದ್ಧಂಜ್ಞಾನರೂಪಂಶ್ರುತಿರ್ಜಗೌ ।
ತ್ವಾಂಸರ್ವಜಗದಾಕಾರ ಮೂರ್ತಿಂಚಾಪ್ಯಾಹಸಾಶ್ರುತಿಃ ॥ ೪೨ ॥ ವಿರೋಧೋದೃಶ್ಯತೇದೇವ ವೈದಿಕೋವೇದವಾದಿನಾಂ । ನಿ
ಶ್ಚಯಂನಾಧಿಗಚ್ಛಂತಿತ್ವತ್ಪ್ರಸಾದಂವಿನಾಬುಧಾಃ ॥ ೪೩ ॥ ಮಾಯಯಾಕ್ರೀಡತೋದೇವ ನವಿರೋಧೋಮನಾಗಪಿ । ರಶ್ಮಿ
ಜಾಲಂರವೇರ್ಯದ್ವದ್ದೃಶ್ಯತೇಜಲಚಂದ್ರಮಾತ್ ॥ ೪೪ ॥ ಭ್ರಾಂತಿಜ್ಞಾನಾತ್ತಥಾರಾಮತ್ವಯಿಸರ್ವಂಪ್ರಕಲ್ಪ್ಯತೇ । ಮನ
ಸೋವಿಷಯೋದೇವರೂಪಂತೇನಿರ್ಗುಣಂಪರಂ ॥ ೪೫ ॥ ಕಥಂದೃಶ್ಯಂಭವೇದ್ದೇವದೃಶ್ಯಾಭಾಸೇಭವೇತ್ಕಥಂ । ಅತಸ್ತಾವತಾ

ಹೇಜಾ ದ ವಸ್ತುವು, ಕಿಂಚಿತ್-ತುಸವಾದರೂ, ನ-ಇಲ್ಲವೋ, ತಸ್ಮೈ-ಅಂಥಾ-ಬ್ರಹ್ಮಣೇ-ಬ್ರಹ್ಮ ಸ್ವರೂಪನಾದ, ತೇ-ನಿನಗೆ, ನಮಃ-ನಮಸ್ಕಾರವು ॥ ೪೦ ॥ ಯಂ-ಯಾರನ್ನು, ಪ್ರಕೃತಿಂ-ಶಕ್ತಿ ಶಕ್ತಿಮತ್ತಿಗೆ ಅಭೇದವಾದ್ದರಿಂದ ಪ್ರಕೃತಿಯೆಂಬವನಾಗಿ, ಪುರುಷಂ-ಅಂಶಾಂಶಿಗಳಿಗೆ ಅಭೇದದಿಂದ ಪುರುಷನನ್ನಾಗಿಯೂ, ವ್ಯಕ್ತಾವ್ಯಕ್ತ ಸ್ವರೂಪಿಣಂ-ವ್ಯಕ್ತ-ಸ್ಪಷ್ಟವಾದ ಸ್ವರೂಪವುಳ್ಳ ಸಿರಿಮಿಷಾದಿಗಳು, ಅವ್ಯಕ್ತಃ-ಸ್ಪಷ್ಟವಾಗದೆ ಇರುವ ಕ್ಷಣಾದಿಗಳು, ಸ್ವರೂಪಿಣಂ-ಈ ಉಭಯಾತ್ಮಕನಾದ, ಕಾಲಂ-ಕಾಲ ಸ್ವರೂಪನನ್ನಾಗಿ, ಮುನಿಶ್ರೇಷ್ಠಾಃ-ಋಷಿಶ್ರೇಷ್ಠರು, ಜಾನಂತಿ-ತಿಳಿಯುವವರಾಗುತ್ತಾರೋ, ತಸ್ಮೈ-ಅಂಥಾವನಾದ, ರಾಮಾಯ-ರಾಮಚಂದ್ರನಾದ, ತೇ-ನಿನಗೆ, ನಮಃ-ನಮಸ್ಕಾರವು ॥ ೪೧ ॥ ಶ್ರುತಿಃ-ಉಪನಿಷದ್ವಾಕ್ಯವು, ತ್ವಾಂ-ನಿನ್ನನ್ನು, ವಿಕಾರರಹಿತಂ-ಪರಿಣಾಮಾದಿ ವಿಕಾರವಿಲ್ಲದವನನ್ನಾಗಿಯೂ, ಶುದ್ಧಂ-ಅಲಿಪ್ತನನ್ನಾಗಿಯೂ, ಜ್ಞಾನರೂಪಂ-ಜ್ಞಾನ ಸ್ವರೂಪನನ್ನಾಗಿಯೂ, ಜಗೌ-ಹೇಳುತ್ತಿದೆ, ಸಾಶ್ರುತಿಃ-ಅದೇ ಶ್ರುತಿಯೇ, ತ್ವಾಂ-ನಿನ್ನನ್ನು, ಸರ್ವಜಗದಾಕಾರಮೂರ್ತಿಂಚ-ಸಮಸ್ತ ಜಗದ್ರೂಪನಾಗಿರುವ ವಿರಾಟ್ಪುರುಷ ಸ್ವರೂಪನನ್ನಾಗಿಯೂ, ಆಹ-ಹೇಳುತ್ತಿದೆ ॥ ೪೨ ॥ ವೇದವಾದಿನಾಂ-ವೇದಗಳನ್ನು ಹೇಳುವ ಋಷಿಗಳಿಗೆ, ವೈದಿಕಃ-ವೇದ ಜನ್ಯವಾದ, ವಿರೋಧಃ-ಪರಸ್ಪರ ವ್ಯತ್ಯಾಸವು, ದೃಶ್ಯತೇ-ಕಾಣುತ್ತಲಿದೆ, ಬುಧಾಃ-ಪಂಡಿತರು, ತ್ವತ್ಪ್ರಸಾದಂ-ನಿನ್ನ ಅನುಗ್ರಹವನ್ನು, ವಿನಾ-ಬಿಟ್ಟು, ನಿಶ್ಚಯಂ-ತತ್ವವನ್ನು, ನಾಧಿಗಚ್ಛಂತಿ-ಹೊಂದುವವರಾಗುವದಿಲ್ಲ ॥ ೪೩ ॥ ಹೇದೇವ-ಎಲೈ ಸ್ವಾಮಿಯೇ, ಮಾಯಯಾ-ಯೋಗ ಮಾಯೆಯಿಂದ ಕ್ರೀಡತಃ-ಆಡುತ್ತಿರುವ ನಿನಗೆ, ಮನಾಗಪಿ-ಕೊಂಚವಾದರೂ, ವಿರೋಧಃ-ವಿರೋಧವು, ನ-ಇಲ್ಲ, ರವೇಃ-ಸೂರ್ಯನ, ರಶ್ಮಿಜಾಲಂ-ಕಿರಣ ಸಮೂಹವನ್ನು, ಜಲಚಂದ್ರಮಾತ್-ಮರುಭೂಮಿಯಲ್ಲಿ ಮೃಗಗಳಿಗೆ ಉಂಟಾಗುವ ಜಲ ಸಮೂಹವೆಂಬುವದು, ಯದ್ವತ್-ಹ್ಯಾಗೆ, ದೃಶ್ಯತೇ-ಕಾಣುತ್ತದೋ ॥ ೪೪ ॥ ರಾಮ-ರಾಮಚಂದ್ರನೇ, ತಥಾ-ಹಾಗೆ, ತ್ವಯಿ-ನಿನ್ನಲ್ಲಿ, ಭ್ರಾಂತಿಜ್ಞಾನಾತ್-ಭ್ರಮಾತ್ಮಕ ಜ್ಞಾನದಿಂದ, ಸರ್ವಂ-ಸಮಸ್ತವೂ, ಕಲ್ಪ್ಯತೇ-ಆರೋಪಿಸಲ್ಪಡುತ್ತೆ, ದೇವ-ಸ್ವಾಮಿಯೇ, ತೇ-ನಿನ್ನ, ಪರಂ-ಉತ್ಕೃಷ್ಟವಾದ, ನಿರ್ಗುಣಂರೂಪಂ-ನಿರ್ಗುಣ ರೂಪವು, ಮನಸಃ-ಶ್ರವಣ ಮನನ ನಿಧಿಧ್ಯಾಸನಗಳಿಂದ ಸಂಸ್ಕಾರವುಳ್ಳ ಮನಸ್ಸಿಗೆ, ವಿಷಯಃ-ಗೋಚರವಾಗುತ್ತೆ, (ದೃಶ್ಯತೇತ್ವಗ್ರಯಾಬುದ್ಧ್ಯೇತಿಶ್ರುತೇಃ) ॥ ೪೫ ॥ ದೇವ-ಸ್ವಾಮಿಯೇ,

ರೇಷು ರೂಪಾಣಿನಿಪುಣಾಭುವಿ || ೪೬ || ಭಜಂತಿಬುದ್ಧಿಸಂಪನ್ನಾಸ್ತರಂತ್ಯೇವಭವಾರ್ಣವಾತ್ | ಕಾಮಕ್ರೋಧಾದಯಸ್ತ್ರ
ತ್ರ)ಬಹವಃಪರಿಪಂಥಿನಃ || ೪೭|| ಭೀಷಯಂತಿಸದಾ ಚೇತೋಮಾರ್ಜಾರಾ ಮೂಷಕಂಯಥಾ | ತ್ವನ್ನಾಮಸ್ಮರತಾಂನಿತ್ಯಂ
ತ್ವದ್ರೂಪಮಪಿಮಾನಸೇ || ೪೮|| ತ್ವತ್ಪೂಜಾನಿರತಾನಾಂತೇಕಥಾಮೃತಪರಾತ್ಮನಾಂ | ತ್ವದ್ಭಕ್ತಸಂಗಿನಾಂರಾಮಸಂಸಾ
ರೋಗೋಷ್ಪದಾಯತೇ || ೪೯ || ಅತಸ್ತೇಸಗುಣಂರೂಪಂ ಧ್ಯಾತ್ವಾಹಂಸರ್ವದಾಹೃದಿ | ಮುಕ್ತಶ್ಚರಾಮಿಲೋಕೇಷುಪೂ
ಜ್ಯೋಹಂಸರ್ವದೇವತೈಃ||೫೦||ರಾಮತ್ವಯಾಮಹತ್ಕಾರ್ಯಂಕೃತಂದೇವಹಿತೇಚ್ಛಯಾ | ಕುಂಭಕರ್ಣವಧೇನಾದ್ಯಭೂಭಾರಾ

(ಅಂಥಾ ನಿರ್ಗುಣ ರೂಪವು,) ದ್ರಷ್ಟವ್ಯಂ-ಚಕ್ಷುರಾದಿಗಳಿಗೆ ವಿಷಯವಾದದ್ದು, ಕಥಂ-ಹ್ಯಾಗೆ, ಭವೇತ್-ಆದೀತು, ದೃಷ್ಟಾಭಾವೇ-ಇಂದ್ರಿಯಗಳಿಗೆ ಆ ರೂಪವು ವಿಷಯವಾಗದೆ ಹೋದ ರೆ, ಕಥಂ-ಹ್ಯಾಗೆ, ಭವೇತ್-ಸೇವೆಯನ್ನು ಮಾಡುವದಕ್ಕೆ ಆದೀತು, ಅತಃ-ಆದ್ದರಿಂದ, ಭುವಿ-ಭೂಮಿಯಲ್ಲಿ, ನಿಪುಣಾಃ-ವಿವೇಕಿಗಳಾದವರು, ತವ-ನಿನ್ನ, ಅವತಾರೇಷು-ಲೀಲಾ ಮೂರ್ತಿಗಳಲ್ಲಿ, ರೂಪಾಣಿ-ಉಂಟಾಗಿರುವ ಆಕಾರಗಳನ್ನು, ಭಜಂತಿ-ಸೇವಿಸುತ್ತಾರೆ, ಬುದ್ಧಿಸಂಪನ್ನಾಃ-ಹೀಗೆ ಜ್ಞಾನವಂತರಾದವರು, ಭವಾರ್ಣವಾತ್-ಸಂಸಾರವೆಂಬ ಸಮುದ್ರದ ದೆಸೆಯಿಂದ, ತರಂತಿ-ದಾಟಿ ಹೋಗುತ್ತಾರೆ, ತತ್ರ-ನಿನ್ನ ಭಜನೆಯನ್ನು ಮಾಡುವದರಲ್ಲಿ, ಬಹವಃ-ಅನೇಕಗಳಾದ, ಪರಿಪಂಥಿನಃ-ಶತ್ರುಗಳಾಗಿರುವ, ಕಾಮಕ್ರೋಧಾದಯಃ-ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು || ೪೭ || ಸದಾ-ಯಾವಾಗಲೂ, ಚೇತಃ-ಚಿತ್ತವನ್ನು, ಮಾರ್ಜಾರಾಃ-ಬೆಕ್ಕುಗಳು, ಮೂಷಕಂ-ಇಲಿಯನ್ನು, ಯಥಾ-ಹ್ಯಾಗೆ (ಭಯಪಡಿಸುತ್ತವೆಯೋ,) (ಹಾಗೆ)ಭೀಷಯಂತಿ-ಭಯಪಡಿಸುತ್ತವೆ, ನಿತ್ಯಂ-ಪ್ರತಿದಿನದಲ್ಲಿಯೂ, ತ್ವನ್ನಾಮ-ನಿನ್ನ ಹೆಸರನ್ನು, ಸ್ಮರತಾಂ-ಉಚ್ಚರಿಸುತ್ತಿರುವವರಿಗೆ, ಮಾನಸೇ-ಚಿತ್ತದಲ್ಲಿ, ತ್ವದ್ರೂಪಂ-ನಿನ್ನ ದಿವ್ಯವಿಗ್ರಹವನ್ನು, ಸ್ಮರತಾಂ-ಧ್ಯಾನಮಾಡುವವರಿಗೆ || ೪೮ || ತ್ವತ್ಪೂಜಾನಿರತಾನಾಂ-ತ್ವತ್ಪೂಜಾ-ನಿನ್ನ ಪೂಜೆಯಲ್ಲಿ, ನಿರತಾನಾಂ-ಆಸಕ್ತರಾದವರಿಗೆ, ತೇ-ನಿನ್ನ, ಕಥಾಮೃತಪರಾತ್ಮನಾಂ-ಕಥಾಮೃತ-ಚರಿತ್ರೆಯೆಂಬ ಅಮೃತದಲ್ಲಿ, ಪರ-ಅಭಿರುಚಿಯುಳ್ಳ, ಆತ್ಮನಾಂ-ಸ್ವಭಾವವುಳ್ಳವರಾದವರಿಗೆ, ತ್ವದ್ಭಕ್ತಸಂಗಿನಾಂ-ತ್ವತ್-ನಿನ್ನ ಭಕ್ತ-ಸೇವಕರ, ಸಂಗಿನಾಂ-ಸಹವಾಸವುಳ್ಳವರಿಗೆ, ರಾಮ-ರಾಮಚಂದ್ರನೇ, ಸಂಸಾರಃ-ಸಂಸಾರವು, ಗೋಷ್ಪದಾಯತೇ-ದಾಟುವದಕ್ಕೆ ಹಸುವಿನ ಹೆಜ್ಜೆಯಂತೆ ಸುಲಭವಾಗಿರುವದು || ೪೯ || ಅತಃ-ಆದಕಾರಣ, ಅಹಂ-ನಾನು, ಸರ್ವದಾ-ಯಾವಾಗಲೂ, ಹೃದಿ-ಹೃದಯದಲ್ಲಿ, ತೇ-ನಿನ್ನ, ಸಗುಣಂ-ಗುಣಗಳುಳ್ಳದ್ದಾದ, ರೂಪಂ-ಆಕೃತಿಯನ್ನು, ಧ್ಯಾತ್ವಾ-ಧ್ಯಾನಮಾಡಿ, ಮುಕ್ತಃ-ಸಂಸಾರ ಕ್ಲೇಶಗಳಿಂದ ಬಿಡಲ್ಪಟ್ಟವನಾಗಿ, ಸರ್ವದೇವತೈಃ-ಸಮಸ್ತ ದೇವತೆಗಳಿಂದ, ಪೂಜ್ಯಃ-ಪೂಜಾರ್ಹನಾಗಿ, ಲೋಕೇಷು-ಲೋಕಗಳಲ್ಲಿ, ಚರಾಮಿ-ಸಂಚರಿಸುತ್ತಲಿದ್ದೇನೆ || ೫೦ || ರಾಮ-ರಾಮಚಂದ್ರನೇ, ತ್ವಯಾ-ನಿನ್ನಿಂದ, ದೇವಹಿತೇಚ್ಛಯಾ-ದೇವ-ದೇವತೆಗಳಿಗೆ, ಹಿತೇಚ್ಛಯಾ-ಕ್ಷೇಮವನ್ನು ಮಾಡಬೇಕೆಂಬ ಅಪೇಕ್ಷೆಯಿಂದ, ಮಹತ್-ಹೆಚ್ಚಾದ, ಕಾರ್ಯಂ-ಕೆಲಸವು, ಕೃತಂ-ಮಾಡಲ್ಪಟ್ಟಿತು, ಪ್ರಭೋ-ಪ್ರಭುವಾದ ರಾಮಚಂದ್ರನೇ, ಅದ್ಯ-ಈಗ, ಕುಂಭಕರ್ಣವಧೇನ-ಕುಂಭಕರ್ಣನ ಸಹ್ಹಾ

ಧರ್ಮಗತಃಪ್ರಭೋ ॥ ೫೧ ॥ ಶ್ವೋಹನಿಷ್ಯತಿಸೌಮಿತ್ರಿರಿಂದ್ರಜೇತಾರಮಾಹವೇ।ಹನಿಷ್ಯಸ್ಯಥರಾಮಸ್ತ್ವಂಪರಶ್ವೋದಶಕಂ
ಧರಂ ॥ ೫೨ ॥ ಪಶ್ಯಾಮಿಸರ್ವಂದೇವೇಶ ಸಿದ್ಧೈಸ್ಸಹನಭೋಗತಃ । ಅನುಗೃಹಿಣೀಷ್ವಮಾಂದೇವಗಮಿಷ್ಯಾಮಿಸುರಾಲ
ಯಂ ॥ ೫೩ ॥ ಇತ್ಯುಕ್ತ್ವಾರಾಮಮಾಮಂತ್ರ್ಯನಾರದೋಭಗವಾನೃಷಿಃ । ಯಯೌದೇವೈಃಪೂಜ್ಯಮಾನೋ ಬ್ರಹ್ಮಲೋ
ಕಮಕಲ್ಮಷಂ ॥ ೫೪ ॥ ಭ್ರಾತರಂನಿಹತಂಶ್ರುತ್ವಾ ಕುಂಭಕರ್ಣಂಮಹಾಬಲಂ । ರಾವಣಶ್ಶೋಕಸಂತಪ್ತೋ ರಾಮೇಣಾಕ್ಲಿ
ಷ್ಟಕರ್ಮಣಾ ॥ ೫೫ ॥ ಮೂರ್ಛಿತಃಪತಿತೋಭೂಮಾವುತ್ಥಾಯವಿಲಲಾಪಹ । ಪಿತೃವ್ಯಂನಿಹತಂಶ್ರುತ್ವಾಪಿತರಂಜಾತಿವಿ
ಹ್ವಲಂ ॥ ೫೬ ॥ ಇಂದ್ರಜಿತ್ಪ್ರಾಹಶೋಕಾರ್ತಂತ್ಯಜಶೋಕಂಮಹಾಮತೇ । ಮಯಿಜೀವತಿರಾಜೇಂದ್ರಮೇಘನಾದೇಮಹಾಬ

ರದಿಂದ, ಭೂಭಾರಾರ್ಧಃ-ಭೂ-ಭೂಮಿಯ, ಭಾರ-ಹೊರೆಯಲ್ಲಿ, ಅರ್ಧಃ-ಅರ್ಧಭಾಗವು, ಗತಃ-ಹೋಯಿತು ॥ ೫೧ ॥ ಸೌಮಿತ್ರಿಃ-ಸುಮಿತ್ರೆಗೆ ಮಗನಾದ ಲಕ್ಷ್ಮಣನು, ಆಹವೇ-ಯುದ್ಧದಲ್ಲಿ, ಇಂದ್ರಜೇತಾರಂ-ಇಂದ್ರಜಿತುವನ್ನು ಶ್ವಃ-ನಾಳೆ, ಹನಿಷ್ಯತಿ-ಕೊಲ್ಲುತ್ತಲಿದ್ದಾನೆ, ಅಥ-ಆ ಮೇಲೆ, ರಾಮ-ರಾಮಚಂದ್ರನೇ, ತ್ವಂ-ನೀನು, ಪರಶ್ವಃ-ನಾಳಿದ್ದು, ದಶಕಂಧರಂ-ರಾವಣನನ್ನು, ಹನಿಷ್ಯಸಿ-ಸಂಹಾರ ಮಾಡುವವನಾಗುತ್ತೀ ॥೫೨॥ ದೇವೇಶ-ದೇವತೆಗಳಿಗೆ ನಿಯಾಮಕನಾದ, ದೇವ-ಸ್ವಾಮಿಯೇ, ಸಿದ್ಧೈಸ್ಸಹ-ಸಿದ್ಧರಿಂದ ಕೂಡಿದವನಾಗಿ, ನಭೋಗತಃ-ಅಂತರಿಕ್ಷದಲ್ಲಿದ್ದು ಕೊಂಡು, ಸರ್ವಂ-ಎಲ್ಲವನ್ನೂ ಪಶ್ಯಾಮಿ-ನೋಡುತ್ತೇನೆ, ಮಾಂ-ನನ್ನನ್ನು ಕುರಿತು, ಅನುಗೃಹ್ಣೀಷ್ವ-ಅನುಗ್ರಹವನ್ನು ಮಾಡು, ಸುರಾಲಯಂ-ಸ್ವರ್ಗವನ್ನು ಕುರಿತು, ಗಮಿಷ್ಯಾಮಿ-ಹೊರಟು ಹೋಗುತ್ತೇನೆ ॥೫೩॥ ಇತ್ಯುಕ್ತ್ವಾ-ಈ ರೀತಿಯಾಗಿ ಹೇಳಿ, ಭಗವಾನ್-ಪೂಜ್ಯನಾದ, ಋಷಿಃ-ದೇವರ್ಷಿಯಾದ, ನಾರದಃ-ನಾರದನು, ರಾಮಂ-ರಾಮಚಂದ್ರನನ್ನು ಕುರಿತು, ಆಮಂತ್ರ್ಯ-ಅಪ್ಪಣೆಯನ್ನು ಕೇಳಿಕೊಂಡು, ದೇವೈಃ-ದೇವತೆಗಳಿಂದ, ಪೂಜ್ಯಮಾನಃ-ಪೂಜಿಸಲ್ಪಟ್ಟವನಾಗಿ, ಅಕಲ್ಮಷಂ-ಪಾಪರಹಿತವಾದ, ಬ್ರಹ್ಮಲೋಕಂ-ಸತ್ಯಲೋಕವನ್ನು ಕುರಿತು, ಯಯೌ-ಹೊರಟು ಹೋದನು॥೫೪॥ ರಾವಣಃ-ರಾವಣನು, ಅಕ್ಲಿಷ್ಟ-ಯೋಗ್ಯವಾದ, ಕರ್ಮಣಾ-ಕೆಲಸವುಳ್ಳವನಾದ, ರಾಮೇಣ-ರಾಮಚಂದ್ರನಿಂದ, ಮಹಾಬಲಂ-ಅಧಿಕಬಲನಾದ, ಭ್ರಾತರಂ-ತಮ್ಮನಾದ, ಕುಂಭಕರ್ಣಂ-ಕುಂಭಕರ್ಣನನ್ನು, ನಿಹತಂ-ಕೊಲ್ಲಲ್ಪಟ್ಟನೆಂಬುವದನ್ನು, ಶ್ರುತ್ವಾ-ಕೇಳಿ, ಶೋಕಸಂತಪ್ತಃ-ಶೋಕ-ದುಃಖದಿಂದ, ಸಂತಪ್ತಃ-ಸಂತಾಪವನ್ನು ಪಡೆದವನಾಗಿ ॥೫೫॥ ಭೂಮೌ-ನೆಲದಲ್ಲಿ, ಮೂರ್ಛಿತಃ-ಪ್ರಜ್ಞೆಯಿಲ್ಲದವನಾಗಿ, ಪತಿತಃ-ಬಿದ್ದನು, ಉತ್ಥಾಯ-ಮೂರ್ಛೆಯನ್ನು ತಿಳಿದುದೆದ್ದು, ವಿಲಲಾಪಹ-ಗೋಳಾಡಿದನು, (೫೬) ಇಂದ್ರಜಿತ್-ಇಂದ್ರಜಿತುವು, ಪಿತೃವ್ಯಂ-ಚಿಕ್ಕಪ್ಪನಾದ ಕುಂಭಕರ್ಣನನ್ನು, ನಿಹತಂ-ಕೊಲ್ಲಲ್ಪಟ್ಟನೆಂಬದಾಗಿ, ಶ್ರುತ್ವಾ-ಕೇಳಿ, ಅತಿವಿಹ್ವಲಂ-ಅತ್ಯಂತವಾಗಿ ದುಃಖದಿಂದ ಕಂಗೆಟ್ಟಿರುವವನಾದ, ಶೋಕಾರ್ತಂ-ದುಃಖಪೀಡಿತನಾದ, ಪಿತರಂ-ತಂದೆಯಾದ ರಾವಣನನ್ನು ಕುರಿತು॥೫೭॥ಪ್ರಾಹ-ಹೇಳಿದನು,ಮಹಾಮತೇ-ಮಹಾಬುದ್ಧಿಶಾಲಿಯಾದ, ರಾಜೇಂದ್ರ-ರಾಜಶ್ರೇಷ್ಠನಾದ ರಾವಣನೇ, ಮಹಾಬಲೇ-ಅಧಿಕಬಲನಾದ, ಮೇಘನಾದೇ-ಮೇಘ ಧ್ವನಿಗೆ ಸರಿಯಾಗಿ ಧ್ವನಿ ಮಾಡುವವನಾದ, ಮಯಿ-ನಾನು,

ತೇ ॥ ೫೭ ॥ ದುಃಖಸ್ಯಾವಸರಃಕುತ್ರ ದೇವಾಂತಕಮಹಾಮತೇ । ವ್ಯೇತುತೇದುಃಖಮಖಿಲಂ ಸ್ವಸ್ಥೋ ಭವಮಹೀಪತೇ ॥೫೮॥
ಸರ್ವಂಸಮೀಕರಿಷ್ಯಾಮಿ ಹನಿಷ್ಯಾಮಿಚವೈರಿಣಃ । ಗತ್ವಾನಿಕುಂಬಿಲಾಂಸದ್ಯ ಸ್ತರ್ಪಯಿತ್ವಾಹುತಾಶನಂ ॥ ೫೯ ॥
ಲಬ್ಧ್ವಾರಥಾದಿಕಂತಸ್ಮಾದಜೇಯೋಹಂಭವಾಮ್ಯರೇಃ । ಇತ್ಯುಕ್ತ್ವಾತ್ವರಿತಂಗತ್ವಾ ನಿರ್ದಿಷ್ಟಂಹವನಸ್ಥಲಂ ॥ ೬೦ ॥
ರಕ್ತಮಾಲ್ಯಾಂಬರಧರೋ ರಕ್ತಗಂಧಾನುಲೇಪನಃ । ನಿಕುಂಬಿಲಾಸ್ಥಲೇಮೌನೀಹವನಾಯೋಪಚಕ್ರಮೇ ॥ ೬೧ ॥ ವಿಭೀಷ
ಣೋಥತಚ್ಛ್ರುತ್ವಾಮೇಘನಾದಸ್ಯಚೇಷ್ಟಿತಂ । ಪ್ರಾಹರಾಮಾಯಸಕಲಂ ಹೋಮಾರಂಭಂದುರಾತ್ಮನಃ ॥ ೬೨ ॥ ಸಮಾ
ಪ್ಯತೇಚೇದ್ಧೋಮೋಯಂಮೇಘನಾದಸ್ಯದುರ್ಮತೇಃ । ತದಾಜೇಯೋಭವೇದ್ರಾಮಮೇಘನಾದಿಃಸುರಾಸುರೈಃ ॥ ೬೩ ॥ ಅತಃಶೀ

ಜೀವತಿಸತಿ-ಬದುಕಿರಲು, ಶೋಕಂ-ದುಃಖವನ್ನು, ತ್ಯಜ-ಬಿಡು ॥೫೭॥ ದೇವಾಂತಕ-ದೇವತೆಗಳಿಗೆ ಯಮನಂತೆ ಇರುವ, ಮಹಾಮತೇ-ಮಹಾಬುದ್ಧಿಯುಳ್ಳ, ಮಹೀಪತೇ-ದೊರೆಯಾದ ರಾವಣನೇ, ದುಃಖಸ್ಯ-ದುಃಖಕ್ಕೆ, ಅವಸರಃ-ಅವಕಾಶವು, ಕುತ್ರ-ಎಲ್ಲಿರುವದು, ಅಖಿಲಂ-ಸಮಸ್ತವಾದ, ದುಃಖಂ-ವ್ಯಸನವು, ವ್ಯೇತು-ಹೋಗಲಿ, ಸ್ವಸ್ಥಃ-ಸ್ಥಿರಚಿತ್ತನು, ಭವ-ಆಗಿರು ॥೫೮॥ ಸರ್ವಂ-ಎಲ್ಲವನ್ನೂ, ಸಮೀಕರಿಷ್ಯಾಮಿ-ಸಮವಾಗಿ ಮಾಡುತ್ತೇನೆ, ತೇ-ನಿನ್ನ, ರಿಪೂನ್-ಶತ್ರುಗಳನ್ನು, ಹನಿಷ್ಯಾಮಿ ಚ-ಕೊಲ್ಲುತ್ತೇನೆ, ನಿಕುಂಬಿಲಾಂ-ನಿಕುಂಬಿಲಾಪ್ರದೇಶವನ್ನು, ಗತ್ವಾ-ಸೇರಿ, ಸದ್ಯಃ-ಪ್ರಕೃತದಲ್ಲಿ, ಹುತಾಶನಂ-ಯಜ್ಞೇಶ್ವರನನ್ನು, ತರ್ಪಯಿತ್ವಾ-ಹೋಮದಿಂದ ತೃಪ್ತಿಪಡಿಸಿ ॥ ೫೯ ॥ ರಥಾದಿಕಂ-ರಥ-ತೇರೆ, ಆದಿ-ಮೊದಲಾದವುಗಳನ್ನು, ಲಬ್ಧ್ವಾ-ಹೊಂದಿ, ತಸ್ಮಾತ್-ಆ ರಥ ಬಾಣಾದಿ ಸಾಮಗ್ರಿಗಳ ದೆಸೆಯಿಂದ, ಅಹಂ-ನಾನು, ಅರೇಃ-ಶತ್ರುವಿಗೆ, ಅಜೇಯಃ-ಯುದ್ಧದಲ್ಲಿ ಜಯಿಸಲಸಾಧ್ಯನಾದವನು, ಭವಾಮಿ-ಆಗುತ್ತಲಿದ್ದೇನೆ, ಇತ್ಯುಕ್ತ್ವಾ-ಈ ರೀತಿಯಾಗಿ ಹೇಳಿ, ತ್ವರಿತಂ-ಬೇಗನೆ, ನಿರ್ದಿಷ್ಟಂ-ಕ್ಲುಪ್ತವಾಗಿರುವ, ಹವನಸ್ಥಲಂ-ಹೋಮಮಾಡಲು ಯೋಗ್ಯವಾದ ಪ್ರದೇಶವನ್ನು ಕುರಿತು, ಗತ್ವಾ-ಹೋಗಿ ॥೬೦॥ ರಕ್ತಮಾಲ್ಯಾಂಬರಧರಃ-ರಕ್ತ-ಕೆಂಪುಬಣ್ಣವಾದ, ಮಾಲ್ಯ-ಪುಷ್ಪಗಳ ಸರವನ್ನೂ, ಅಂಬರ-ವಸ್ತ್ರವನ್ನೂ, ಧರಃ-ಧರಿಸಿರುವವನಾದ, ರಕ್ತಗಂಧಾನುಲೇಪನಃ-ರಕ್ತ-ಕೆಂಪಾದ ಗಂಧದಿಂದ, ಅನುಲೇಪನಃ-ಹಚ್ಚಲ್ಪಟ್ಟವನಾದ, ಮೌನೀ-ಮಾತನಾಡದೇ ಇರುವವನಾದ, (ಇಂದ್ರಜಿತುವು) ನಿಕುಂಬಿಲಾಸ್ಥಲೇ-ನಿಕುಂಬಿಲೆ ಯೆಂಬ ಪ್ರದೇಶದಲ್ಲಿ, ಹವನಾಯ-ಹೋಮವ ಮಾಡುವದಕ್ಕೆ, ಉಪಚಕ್ರಮೇ-ಉಪಕ್ರಮಿಸಿದನು ॥ ೬೧ ॥ ಅಥ-ಆ ಬಳಿಕ, ವಿಭೀಷಣಃ-ವಿಭೀಷಣನು, ಮೇಘನಾದಸ್ಯ-ಇಂದ್ರಜಿತುವಿನಿಂದ, ಚೇಷ್ಟಿತಂ-ನಡಿಸಲ್ಪಟ್ಟಿರುವ, ತತ್-ಆ ಕೆಲಸವನ್ನು, ಶ್ರುತ್ವಾ-ಕೇಳಿ, ದುರಾತ್ಮನಃ-ದುರ್ಬುದ್ಧಿಯುಳ್ಳ ಇಂದ್ರಜಿತುವಿನ, ಸಕಲಂ-ಸಮಸ್ತವಾದ, ಹೋಮಾರಂಭಂ-ಹೋಮಮಾಡುವದರ ಆರಂಭವನ್ನು ರಾಮಾಯ-ರಾಮಚಂದ್ರನಿಗೆ, ಪ್ರಾಹ-ಹೇಳಿದನು ॥೬೨॥ ರಾಮ-ರಾಮಚಂದ್ರನೇ, ದುರ್ಮತೇಃ-ದುರ್ಬುದ್ಧಿಯುಳ್ಳ ಮೇಘನಾದಸ್ಯ-ಇಂದ್ರಜಿತುವಿನ, ಅಯಂ-ಈ, ಹೋಮಃ-ಹೋಮವು, ಸಮಾಪ್ಯತೇಚೇತ್-ಪೂರ್ತಿಯಾದಪಕ್ಷದಲ್ಲಿ, ತದಾ-ಆಗ, ಮೇಘನಾದಃ-ಇಂದ್ರಜಿತುವು, ಸುರಾಸುರೈಃ-ದೇವಾಸುರರಿಂದ, ಯುದ್ಧದಲ್ಲಿ, ಅಜೇಯಃ-ಜಯಿಸಲ್ಕಸದವನು, ಭವೇತ್-

ಘ್ನಂ ಲಕ್ಷ್ಮಣೇನ ಘಾತಯಿಷ್ಯಾಮಿ ರಾವಣಿಂ। ಆಜ್ಞಾಪಯ ಮಯಾ ಸಾರ್ಧಂ ಲಕ್ಷ್ಮಣಂ ಬಲಿನಾಂ ವರಂ॥೬೪॥ ಶ್ರೀರಾಮಚಂದ್ರ ಉವಾಚ ॥ ೬೫ ॥ ಅಹಮೇವಾಗಮಿಷ್ಯಾಮಿ ಹಂತುಮಿಂದ್ರಜಿತಂ ರಿಪುಂ । ಆಗ್ನೇಯೇನ ಮಹಾಸ್ತ್ರೇಣ ಸರ್ವರಾಕ್ಷಸಘಾತಿನಾ ॥ ೬೬॥ ವಿಭೀಷಣೋಪಿ ತಂ ಪ್ರಾಹ ನಾಸೌ ವಧ್ಯೋ ನಿರ್ಹನ್ಯತೇ । ಯಸ್ತು ದ್ವಾದಶ ವರ್ಷಾಣಿ ನಿದ್ರಾಹಾರವಿವರ್ಜಿತಃ॥೬೭॥ ತೇನೈವ ಮೃತ್ಯುರ್ನಿರ್ದಿಷ್ಟೋ ಬ್ರಹ್ಮಣಾಸ್ಯ ದುರಾತ್ಮನಃ। ಲಕ್ಷ್ಮಣಸ್ತು ಅಯೋಧ್ಯಾಯಾ ನಿರ್ಗತ್ಯ ತ್ವಯಾ ಸಹ ॥೬೮॥ ತದಾದಿ ನಿದ್ರಾಹಾರಾದೀನ್ನ ಜಾನಾತಿ ರಘೂತ್ತಮ । ಸೇವಾರ್ಥಂ ತವ ರಾಜೇಂದ್ರ ಜ್ಞಾತಂ ಸರ್ವಮಿದಂ ಮಯಾ॥ ೬೯॥ ತದಾ

ಲಗುತ್ತಾನೆ ॥ ೬೩ ॥ ಅತಃ-ಆದ್ದರಿಂದ, ಲಕ್ಷ್ಮಣೇನ-ಲಕ್ಷ್ಮಣನಿಂದ, ಶೀಘ್ರಂ-ಜಾಗ್ರತೆಯಾಗಿ, ರಾವಣಿಂ-ಇಂದ್ರಜಿತುವನ್ನು, ಘಾತಯಿಷ್ಯಾಮಿ-ಕೊಲ್ಲಿಸುತ್ತೇನೆ, ಮಯಾಸಾರ್ಧಂ-ನನ್ನಸಂಗಡ (ಯುದ್ಧಕ್ಕೆ ಬರುವಂತೆ,) ಬಲಿನಾಂ-ಬಲವಂತರೊಳಗೆ, ವರಂ-ಶ್ರೇಷ್ಠನಾದ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಆಜ್ಞಾಪಯ-ಅಪ್ಪಣೆಯನ್ನು ಮಾಡು ॥೬೪॥ ಶ್ರೀರಾಮಚಂದ್ರ ಉವಾಚ ॥ ರಾಮಚಂದ್ರನು ಹೇಳುತ್ತಿದ್ದಾನೆ ॥ ೬೫ ॥ ರಿಪುಂ-ಶತ್ರುವಾದ, ಇಂದ್ರಜಿತಂ-ಮೇಘನಾದನನ್ನು, ಸರ್ವರಾಕ್ಷಸಘಾತಿನಾ-ಸರ್ವ-ಸಮಸ್ತರಾದ, ರಾಕ್ಷಸ-ರಾಕ್ಷಸರನ್ನು, ಘಾತಿನಾ-ಕೊಲ್ಲತಕ್ಕ, ಆಗ್ನೇಯೇನ-ಅಗ್ನಿದೇವತಾಕವಾದ, ಮಹಾಸ್ತ್ರೇಣ-ದೊಡ್ಡ ಅಸ್ತ್ರದಿಂದ, ಹಂತುಂ-ಕೊಲ್ಲುವದಕ್ಕೆ, ಅಹಮೇವ-ನಾನೇ, ಆಗಮಿಷ್ಯಾಮಿ-ಬರುತ್ತಿದ್ದೇನೆ, ॥ ೬೬ ॥ ವಿಭೀಷಣೋಪಿ-ವಿಭೀಷಣನು, ತಂ-ರಾಮಚಂದ್ರನನ್ನು ಕುರಿತು, ಪ್ರಾಹ-ಹೇಳಿದನು, ಅಸೌ-ಇಂದ್ರಜಿತುವು, ಅನ್ಯೈಃ-ಇತರರಿಂದ, ನಹನ್ಯತೇ-ಕೊಲ್ಲಲ್ಪಡುವದಿಲ್ಲ, ಯಸ್ತು-ಯಾವನು, ದ್ವಾದಶವರ್ಷಾಣಿ-ಹನ್ನೆರಡುವರ್ಷಗಳ, ವರಿಗೂ ನಿದ್ರಾಹಾರವಿವರ್ಜಿತಃ-ನಿದ್ರಾ-ನಿದ್ರೆಯು, ಅಹಾರ-ಭೋಜನವು, ವಿವರ್ಜಿತಃ-ಇಲ್ಲದವನಾಗಿರುತ್ತಾನೋ ॥ ೬೭ ॥ ತೇನೈವ-ಹನ್ನೆರಡು ವರ್ಷಗಳವರಿಗೆ ನಿದ್ರಾಹಾರಗಳಿಲ್ಲದವನಿಂದಲೇ, ದುರಾತ್ಮನಃ-ದುರ್ಬುದ್ಧಿಯುಳ್ಳ, (ಅಸ್ಯ-ಈ ಇಂದ್ರಜಿತುವಿಗೆ,) ಬ್ರಹ್ಮಣಾ-ಬ್ರಹ್ಮದೇವರಿಂದ, ಮೃತ್ಯುಃ-ಮರಣವು, ನಿರ್ದಿಷ್ಟಃ-ಗೊತ್ತುಮಾಡಲ್ಪಟ್ಟಿದೆ, (ಯಾವಾಗ) ಲಕ್ಷ್ಮಣಸ್ತು-ಲಕ್ಷ್ಮಣನು, ಅಯೋಧ್ಯಾಯಾಃ-ಅಯೋಧ್ಯಾಪಟ್ಟಣದಿಂದ, ನಿರ್ಗತ್ಯ-ಹೊರಟು, ತ್ವಯಾಸಹ-ನಿನ್ನಸಂಗಡ, ಆಯಾತಃ-ಬಂದವನಾಗಿದ್ದಾನೋ ॥ ೬೮ ॥ ರಘೂತ್ತಮ-ರಾಮಚಂದ್ರನೇ, ತದಾದಿ-ಅಯೋಧ್ಯೆಯನ್ನು ಬಿಟ್ಟದ್ದು ಮೊದಲಾಗಿ, ನಿದ್ರಾಹಾರಾದೀನ್-ನಿದ್ರೆಯು ಭೋಜನವು ಮೊದಲಾದವುಗಳನ್ನು, ನಜಾನಾತಿ-ಮಾಡಿದವನಾಗಲಿಲ್ಲ, ರಾಜೇಂದ್ರ-ರಾಜಶ್ರೇಷ್ಠನಾದ ರಾಮಚಂದ್ರನೇ, ತವ-ನಿನ್ನ, ಸೇವಾರ್ಥಂ-ಸೇವೆಗೋಸ್ಕರ, ಮಯಾ-ನನ್ನಿಂದ, ಇದಂಸರ್ವಂ-ಇದೆಲ್ಲವೂ, ಜ್ಞಾತಂ-ವಿಚಾರಿಸಿ ತಿಳಿಯಲ್ಪಟ್ಟಿತು ॥ ೬೯ ॥ ದೇವೇಶ-ದೇವತೆಗಳಿಗೆ ನಿಯಾಮಕನಾದ ರಾಮಚಂದ್ರನೇ, ತತಃ-ಆ ಕಾರಣದಿಂದ, ತ್ವರಯಾ-ವೇಗದಿಂದ, ಮಯಾ-ನನ್ನ ಸಂಗಡ, ಗಂತುಂ-ಬರುವದಕ್ಕೆ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಆಜ್ಞಾಪಯ-ಅಪ್ಪಣೆಯನ್ನು ಮಾಡು, ಧರಾಧರ-ಭೂಮಿಯನ್ನು ವಹಿಸುತ್ತಿರುವ, ಶೇಷಃ-ಆದಿಶೇಷನು, ಸಾಕ್ಷಾತ್-ಪ್ರತ್ಯಕ್ಷವಾಗಿ, (ಲಕ್ಷ್ಮಣನಾಗಿ ಹುಟ್ಟಿರುವದರಿಂದ) ಹನಿಷ್ಯತಿ-ಯುದ್ಧದಲ್ಲಿ ಇಂದ್ರಜಿತುವನ್ನು ಕೊಲ್ಲುತ್ತಾನೆ, ಸಂದೇಹಃ-

ಜ್ಞಾಪಯೋದೇವೇಶಲಕ್ಷ್ಮಣಂತ್ವರಯಾಮುಯಾ । ಹನಿಷ್ಯತಿನಸಂದೇಹಃಶೇಷಸ್ಸಾಕ್ಷಾದ್ಧರಾಧರಃ ॥ ೭೦॥ ತ್ವಮೇವಸಾಕ್ಷಾಜ್ಜಗತಾಮಧೀಶೋ ನಾರಾಯಣೋಲಕ್ಷ್ಮಣಯೇವಶೇಷಃ । ಯುವಾಂಧರಾಭಾರನಿವಾರಣಾರ್ಥಂ ಜಾತೌಜಗನ್ನಾಟಕಸೂತ್ರಧಾರೌ ॥ ... ... ... ... ... ॥ ೭೧ ॥

—** ಇತಿಶ್ರೀಮದಧ್ಯಾತ್ಮರಾಮಾಯಣೇ–ಉಮಾಮಹೇಶ್ವರಸಂವಾದೇ ಯುದ್ಧಕಾಂಡೇಅಷ್ಟಮಸ್ಸರ್ಗಃ**—

ಶ್ರೀಮಹಾದೇವಉವಾಚ ॥ ೧ ॥ ವಿಭೀಷಣವಚಶ್ರುತ್ವಾರಾಮೋವಾಕ್ಯಮಥಾಬ್ರವೀತ್ । ಜಾನಾಮಿತಸ್ಯರೌದ್ರಸ್ಯ ಮಾಯಾಂಕೃತ್ಸ್ನಾಂವಿಭೀಷಣ ॥ ೨ ॥ ಸಹಿಬ್ರಹ್ಮಾಸ್ತ್ರವಿಚ್ಛೂರೋಮಾಯಾವೀಚಮಹಾಬಲಃ । ಜಾನಾಮಿಲಕ್ಷ್ಮಣಸ್ಯಾಪಿಸ್ವರೂಪಂಮಮಸೇವನಾತ್ ॥ ೩ ॥ ಜ್ಞಾತ್ವೈವಾಸಮಹಂತೂಷ್ಣೀಂಭವಿಷ್ಯತ್ಕಾರ್ಯಗೌರವಾತ್ । ಇತ್ಯುಕ್ತ್ವಾ

ಸಂಶಯವು, ನ-ಇಲ್ಲ ॥ ೭೦ ॥ ತ್ವಮೇವ-ನೀನೇ, ಸಾಕ್ಷಾತ್-ಪ್ರತ್ಯಕ್ಷವಾಗಿ, ಜಗತಾಂ-ಲೋಕಗಳಿಗೆ, ಅಧೀಶಃ-ನಿಯಾಮಕನಾದ ಮಹಾವಿಷ್ಣುವು, ಲಕ್ಷ್ಮಣಏವ-ಲಕ್ಷ್ಮಣನೇ, ಶೇಷಃ-ಆದಿಶೇಷನು, ಯುವಾಂ-ನೀವಿಬ್ಬರೂ, ಧರಾಭಾರನಿವಾರಣಾರ್ಥಂ-ಧರಾ-ಭೂಮಿಯ, ಭಾರ-ಹೊರೆಯನ್ನು, ನಿವಾರಣಾರ್ಥಂ-ಹೋಗಲಾಡಿಸುವದಕ್ಕೆ, ಜಗನ್ನಾಟಕಸೂತ್ರಧಾರೌ-ಜಗತ್-ಪ್ರಪಂಚದ, ನಾಟಕ-ನಿರ್ಮಾಣ ರೂಪವಾದ ನಾಟಕಕ್ಕೆ, ಸೂತ್ರಧಾರೌ-ಮುಖ್ಯವಾಗಿ ಕಾರಣಭೂತರಾದವರಾಗಿ, ಜಾತೌ-ಹುಟ್ಟಿದವರಾಗಿದ್ದೀರಿ ... ॥ ೭೧ ॥

.....* ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದಲ್ಲಿ ಯುದ್ಧಕಾಂಡದೊಳು ಎಂಟನೆಯ ಸರ್ಗವು. * —

ಶ್ರೀಮಹಾದೇವೋವಾಚ-ಈಶ್ವರನು ಹೇಳುತ್ತಲಿದ್ದಾನೆ ॥ ೧ ॥ ವಿಭೀಷಣವಚಃ-ವಿಭೀಷಣ-ವಿಭೀಷಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಅಥ-ಆ ಬಳಿಕ, ರಾಮಃ-ರಾಮಚಂದ್ರನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ವಿಭೀಷಣ-ವಿಭೀಷಣನೇ, ರೌದ್ರಸ್ಯ-ಕ್ರೂರನಾದ, ತಸ್ಯ-ಆ (ಇಂದ್ರಜಿತುವಿನ,) ಕೃತ್ಸ್ನಾಂ-ಸಮಗ್ರವಾದ, ಮಾಯಾಂ-ಮಾಯೆಯನ್ನು, ಜಾನಾಮಿ-ತಿಳಿಯುತ್ತೇನೆ ॥ ೨ ॥ ಸಹಿ-ಆ ಇಂದ್ರಜಿತುವು, ಬ್ರಹ್ಮಾಸ್ತ್ರವಿತ್-ಬ್ರಹ್ಮಾಸ್ತ್ರವನ್ನು ತಿಳಿದವನು, ಶೂರಃ-ಪರಾಕ್ರಮಶಾಲಿಯು, ಮಾಯಾವೀ-ಮಾಯೆಯನ್ನು ಮಾಡತಕ್ಕವನು, ಮಹಾಬಲಃ-ಅಧಿಕ ಬಲವುಳ್ಳವನು, (ಎಂಬದಾಗಿ) ಜಾನಾಮಿ ತಿಳಿದಿದ್ದೇನೆ, ಮಮ-ನನ್ನ, ಸೇವನಾತ್-ಸೇವೆಯನ್ನು ಮಾಡುವದರಿಂದ, ಲಕ್ಷ್ಮಣಸ್ಯ-ಲಕ್ಷ್ಮಣನ, ಸ್ವರೂಪಂ-ಸ್ವಭಾವವನ್ನು, ಜಾನಾಮಿ-ತಿಳಿದವನಾಗಿದ್ದೇನೆ ॥ ೩ ॥ ಅಹಂ-ನಾನು, ಜ್ಞಾತ್ವೈವ-ಲಕ್ಷ್ಮಣನು ಅಯೋಧ್ಯೆಯನ್ನು ಬಿಟ್ಟು ಬಂದದ್ದು ಮೊದಲಾಗಿ ನಿದ್ರಾಹಾರಾದಿಗಳಿಲ್ಲದೇ ಇರುವದನ್ನು ತಿಳಿದವನಾಗಿದ್ದಾಗ್ಯೂ, ಭವಿಷ್ಯತ್ಕಾರ್ಯಗೌರವಾತ್-ಭವಿಷ್ಯತ್-ಮುಂದೆ ನಡಿಸಬೇಕಾದ ಕಾರ್ಯ-ಕೆಲಸದಲ್ಲಿ, ಗೌರವಾತ್-ಗುರುತ್ವದಿಂದ, ತೂಷ್ಣೀಂ-ಸುಮ್ಮನೆ, ಆಸಂ-ಇದ್ದೆನು, ಇತ್ಯುಕ್ತ್ವಾ-ವಿಭೀಷಣನನ್ನು ಕುರಿತು ಈ ರೀತಿಯಾಗಿ ಹೇಳಿ, ಜ್ವಲನವತಾಂ-ಜ್ವಾಲೆಗಳುಳ್ಳವುಗಳಿಗೆ, ವನ್ಹಿ-ಶ್ರೇಷ್ಠನಾದ,

ಲಕ್ಷ್ಮಣಂ ಪ್ರಾಹ ರಾಘವೋ ಜ್ಞಾನವತಾಂ ವರಃ ॥೪॥ ಗಚ್ಛ ಲಕ್ಷ್ಮಣ ಸೈನ್ಯೇನ ಮಹತಾ ಜಹಿ ರಾವಣಿಂ । ಹನುಮತ್ಪ್ರಮು
ಖೈಸ್ಸೈನ್ಯೈರ್ಯೂಥಪೈಸ್ಸಹ ಲಕ್ಷ್ಮಣಃ ॥೫॥ ಜಾಂಬವಾನೃಕ್ಷರಾಜೋಯಂ ಸಹಸೈನ್ಯೇನ ಸಂವೃತಃ । ವಿಭೀಷಣಶ್ಚ ಸಚಿವೈಃ
ಸಹ ತ್ವಾಮಭಿಯಾಸ್ಯತಿ ॥೬॥ ಅಭಿಜ್ಞಸ್ತಸ್ಯ ದೇಶಸ್ಯ ಜಾನಾತಿ ವಿವರಾಣಿ ಸಃ । ರಾಮಸ್ಯ ವಚನಂ ಶ್ರುತ್ವಾ ಲಕ್ಷ್ಮಣಸ್ಸವಿ
ಭೀಷಣಃ ॥೭॥ ಜಗ್ರಾಹ ಕಾರ್ಮುಕಶ್ರೇಷ್ಠಮನ್ಯದ್ಭೀಮಪರಾಕ್ರಮಃ । ರಾಮಪಾದಾಂಬುಜಂ ಸ್ಪೃಶ್ಯ ಹೃಷ್ಟಃ ಸೌ
ಮಿತ್ರಿರಬ್ರವೀತ್ ॥೮॥ ಅದ್ಯ ಮತ್ಕಾರ್ಮುಕೋನ್ಮುಕ್ತಾಶ್ಶರಾ ನಿರ್ಭಿದ್ಯ ರಾವಣಿಂ । ಗಮಿಷ್ಯಂತಿ ಹಿ ಪಾತಾಳಂ ಸ್ನಾತುಂ
ಭೋಗವತೀಜಲೇ ॥೯॥ ಏವಮುಕ್ತ್ವಾ ಸ ಸೌಮಿತ್ರಿಃ ಪರಿಕ್ರಮ್ಯ ಪ್ರಣಮ್ಯ ತಂ । ಇಂದ್ರಜಿನ್ನಿಧನಾಕಾಂಕ್ಷೀ ಯಯೌ

ರಾಘವಃ-ರಾಮಚಂದ್ರನು, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಪ್ರಾಹ-ಹೇಳಿದನು ॥೪॥ ಲಕ್ಷ್ಮಣ-ಲಕ್ಷ್ಮಣನೇ, ಮಹತಾ-ಹೆಚ್ಚಾದ, ಸೈನ್ಯೇನ-ದಂಡಿನಿಂದ (ಕೂಡಿದವನಾಗಿ,) ರಾವಣಿಂ-ಇಂದ್ರಜಿತುವನ್ನು, ಜಹಿ-ಜಯಿಸು, ಗಚ್ಛ-ಹೋಗು, ಲಕ್ಷ್ಮಣ-ಲಕ್ಷ್ಮಣನೇ, ಹನೂಮತ್ಪ್ರಮುಖೈಃ-ಹನೂಮಂತ-ಆಂಜನೇಯನೇ, ಪ್ರಮುಖೈಃ-ಮೊದಲಾದ, ಯೂಥಪೈಃ-ಸೇನಾನಾಯಕರಿಂದ, ಸಹ-ಕೂಡಿದವನಾಗಿ ॥೫॥ ಋಕ್ಷರಾಜಃ-ಕರಡಿಯಂತೆ ಇರುವ ಕಪಿಗಳಿಗೆ ಧೊರೆಯಾದ, ಜಾಂಬವಾನ್-ಜಾಂಬವಂತನು, ಸೈನ್ಯೇನ-ತನ್ನ ಸೇನೆಯಿಂದ, ಸಂವೃತಃ-ಕೂಡಿದವನಾಗಿ, ವಿಭೀಷಣಶ್ಚ-ವಿಭೀಷಣನು, ಸಚಿವೈಸ್ಸಹ-ಮಂತ್ರಿಗಳಿಂದ ಕೂಡಿದವನಾಗಿ, ತ್ವಾಂ-ನಿನ್ನನ್ನು ಕುರಿತು ಅನುಸರಿಸಿ ಹಿಂದೆ ಬರುತ್ತಲಿದ್ದಾನೆ ॥೬॥ ತಸ್ಯ-ಇಂದ್ರಜಿತುವು ಹೋಮ ಮಾಡುವಂಥಾದ್ದಾದ, ದೇಶಸ್ಯ-ಪ್ರದೇಶದ, ಅಭಿಜ್ಞ-ಮರ್ಮವನ್ನು ತಿಳಿದವನಾದ, ಸಃ-ವಿಭೀಷಣನು, ವಿವರಾಣಿ-ಅಲ್ಲಿ ಇರುವ ರಹಸ್ಯ ಛಿದ್ರಗಳನ್ನು, ಜಾನಾತಿ-ತಿಳಿದವನಾಗಿದ್ದಾನೆ, ರಾಮಸ್ಯ-ರಾಮಚಂದ್ರನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಸವಿಭೀಷಣಃ-ವಿಭೀಷಣನಿಂದ ಕೂಡಿದವನಾದ, ಲಕ್ಷ್ಮಣಃ-ಲಕ್ಷ್ಮಣನು ॥೭॥ ಅನ್ಯತ್-ಮತ್ತೊಂದಾದ, ಕಾರ್ಮುಕಶ್ರೇಷ್ಠಂ-ಶ್ರೇಷ್ಠವಾದ ಬಿಲ್ಲನ್ನು, ಜಗ್ರಾಹ-ತೆಗೆದುಕೊಂಡನು, ಭೀಮಪರಾಕ್ರಮಃ-ಭೀಮ-ಭಯಂಕರವಾದ, ಪರಾಕ್ರಮಃ-ಸಾಮರ್ಥ್ಯವುಳ್ಳವನಾದ, ಸೌಮಿತ್ರಿಃ-ಲಕ್ಷ್ಮಣನು, ರಾಮಪಾದಾಂಬುಜಂ-ರಾಮ-ರಾಮಚಂದ್ರನ, ಪಾದಾಂಬುಜಂ-ಪಾದ ಕಮಲವನ್ನು, ಸ್ಪೃಶ್ಯ-ಮುಟ್ಟಿ ಅಂದರೆ (ನಮಸ್ಕಾರವಂ ಮಾಡಿ,) ಹೃಷ್ಟಃ-ಸಂತುಷ್ಟನಾಗಿ, ಅಬ್ರವೀತ್-ಹೇಳಿದನು ॥೮॥ ಅದ್ಯ-ಈಗ, ಮತ್ಕಾರ್ಮುಕೋನ್ಮುಕ್ತಾಃ-ಮತ್ಕಾರ್ಮುಕ-ನನ್ನ ಬಿಲ್ಲಿನಿಂದ, ಉನ್ಮುಕ್ತಾಃ-ಬಿಡಲ್ಪಟ್ಟವುಗಳಾದ, ಶರಾಃ-ಬಾಣಗಳು, ರಾವಣಿಂ-ಇಂದ್ರಜಿತುವನ್ನು, ನಿರ್ಭಿದ್ಯ-ಛೇದಿಸಿ, ಭೋಗವತೀಜಲೇ-ಭೋಗವತೀ-ಪಾತಾಳ ಲೋಕದಲ್ಲಿರುವ ಗಂಗೆಯ, ಜಲೇ-ನೀರಿನಲ್ಲಿ, ಸ್ನಾತುಂ-ಸ್ನಾನ ಮಾಡುವದಕ್ಕೆ, ಪಾತಾಳಂ-ಪಾತಾಳ ಲೋಕವನ್ನು ಕುರಿತು, ಗಮಿಷ್ಯಂತಿ-ಹೋಗುತ್ತಲಿವೆ ॥೯॥ ಏವಂ-ಈ ರೀತಿಯಾಗಿ, ಉಕ್ತ್ವಾ-ಹೇಳಿ, ಸಃ-ಆ, ಸೌಮಿತ್ರಿಃ-ಲಕ್ಷ್ಮಣನು, ತಂ-ರಾಮಚಂದ್ರನನ್ನು, ಪರಿಕ್ರಮ್ಯ-ಪ್ರದಕ್ಷಿಣ ಮಾಡಿ, ಪ್ರಣಮ್ಯ-ನಮಸ್ಕರಿಸಿ, ಇಂದ್ರಜಿನ್ನಿಧನಾಕಾಂಕ್ಷೀ-ಇಂದ್ರಜಿತ್-ಇಂದ್ರಜಿತುವಿನ, ನಿಧನ-ಸಂಹಾರವನ್ನು, ಆಕಾಂಕ್ಷೀ-ಅಪೇಕ್ಷಿಸುತ್ತಿರುವವನಾಗಿ, ತ್ವರಿತವಿಕ್ರಮಃ-

ತ್ವರಿತವಿಕ್ರಮಃ ॥ ೧೦ ॥ ವಾನರೈರ್ಬಹುಸಾಹಸ್ರೈರ್ಹನೂಮತ್ಪೃಷ್ಠತೋಽನ್ವಗಾತ್ । ವಿಭೀಷಣಶ್ಚ ಸಹಿತೋ ಮಂತ್ರಿಭಿ
ಸ್ತ್ವರಿತಂ ಯಯೌ ॥ ೧೧ ॥ ಜಾಂಬವತ್ಪ್ರಮುಖಾ ರುಕ್ಷಾಃ ಸೌಮಿತ್ರಿಂ ತ್ವರಯಾನ್ವಗುಃ । ಗತ್ವಾ ನಿಕುಂಬಿಲಾದೇಶಂ ಲ
ಕ್ಷ್ಮಣೋ ವಾನರೈಸ್ಸಹ ॥ ೧೨ ॥ ಅಪಶ್ಯದ್ಬಲಸಂಘಾತಂ ದೂರಾದ್ರಾಕ್ಷಸಸಂಕುಲಂ । ಧನುರಾಯಮ್ಯ ಸೌಮಿತ್ರಿರ್ಯ
ತ್ತೋ ಭೂದ್ಭೂರಿವಿಕ್ರಮಃ ॥ ೧೩ ॥ ಅಂಗದೇನ ಚ ವೀರೇಣ ಜಾಂಬವಾನ್ರಾಕ್ಷಸಾಧಿಪಃ । ತದಾ ವಿಭೀಷಣಃ ಪ್ರಾಹ ಸೌಮಿ
ತ್ರಿಂ ಪಶ್ಯ ರಾಕ್ಷಸಾನ್ ॥ ೧೪ ॥ ಯದೇತದ್ರಾಕ್ಷಸಾನೀಕಂ ಮೇಘಶ್ಯಾಮಂ ವಿಲೋಕ್ಯತೇ । ಅಸ್ಯಾನೀಕಸ್ಯ ಮಹತೋ ಭೇದನೇ ಯ
ತ್ನವಾನ್ ಭವ ॥ ೧೫ ॥ ರಾಕ್ಷಸೇಂದ್ರಸುತೋಽಪ್ಯಸ್ಮಿನ್ ಭಿನ್ನೇ ದೃಶ್ಯೋ ಭವಿಷ್ಯತಿ । ಅಭಿದ್ರವಾಶು ಯಾವದ್ವೈ ನೈತತ್ಕರ್ಮ ಸ

ತ್ವರಿತ-ಜಾಗ್ರತೆಯುಳ್ಳ, ವಿಕ್ರಮಃ-ಪರಾಕ್ರಮವುಳ್ಳವನಾಗಿ, ಯಯೌ-ಹೊರಟು ಹೋದನು ॥ ೧೦ ॥ ಬಹುಸಾಹಸ್ರೈಃ-ಅನೇಕ ಸಾವಿರ ಮಂದಿಯಾದ, ವಾನರೈಃ-ಕಪಿಗಳಿಂದ (ಕೂಡಿದವನಾಗಿ,) ಹನೂಮತ್ಪೃಷ್ಠತಃ-ಆಂಜನೇಯನ ಬೆನ್ನಿನ ಮೇಲೆ ಕೂತವನಾಗಿ, ಅನ್ವಗಾತ್-ಹೊರಟು ಹೋದನು, ಮಂತ್ರಿಭಿಃ-ಮಂತ್ರಿಗಳಿಂದ, ಸಹಿತಃ-ಕೂಡಿದವನಾಗಿ, ವಿಭೀಷಣಃ-ವಿಭೀಷಣನು, ತ್ವರಿತಂ-ಜಾಗ್ರತೆಯಾಗಿ, ಯಯೌ-ಹೊರಟು ಹೋದನು ॥೧೧॥ ಜಾಂಬವತ್ಪ್ರಮುಖಾಃ-ಜಾಂಬವಂತನೇ ಮೊದಲಾದ, ಋಕ್ಷಾಃ-ಕರಡಿ ಜಾತಿಯ ಕಪಿಗಳು, ತ್ವರಯಾ-ಜಾಗ್ರತೆಯಿಂದ, ಸೌಮಿತ್ರಿಂ-ಲಕ್ಷ್ಮಣನನ್ನು, ಅನ್ವಗುಃ-ಅನುಸರಿಸಿ ಹೋದರು, ವಾನರೈಸ್ಸಹ-ಕಪಿಗಳಿಂದ ಕೂಡಿದವನಾಗಿ, ಲಕ್ಷ್ಮಣಃ-ಲಕ್ಷ್ಮಣನು, ನಿಕುಂಬಿಲಾದೇಶಂ-ನಿಕುಂಬಿಲಾ ಪ್ರದೇಶವನ್ನು, ಗತ್ವಾ-ಸೇರಿ ॥ ೧೨ ॥ ರಾಕ್ಷಸಸಂಕುಲಂ-ರಾಕ್ಷಸರಿಂದ ವ್ಯಾಪ್ತವಾದ, ಬಲಸಂಘಾತಂ-ಬಲ ಸಮೂಹವನ್ನು, ದೂರಾತ್-ದೂರದಿಂದ ಅಪಶ್ಯತ್-ನೋಡಿದನು, ಭೂರಿವಿಕ್ರಮಃ-ಅಧಿಕಪರಾಕ್ರಮನಾದ, ಸೌಮಿತ್ರಿಃ-ಲಕ್ಷ್ಮಣನು, ಧನುಃ-ಬಿಲ್ಲನ್ನು, ಆಯಮ್ಯ-ತೆಗೆದುಕೊಂಡು, ಯತ್ತಃ-ಯುದ್ಧ ಸನ್ನದ್ಧನು, ಅಭೂತ್-ಆದನು ॥೧೩॥ ವೀರೇಣ-ಶೂರನಾದ, ಅಂಗದೇನ-ಅಂಗದನಿಂದಲೂ, (ಕೂಡಿದವನಾದ,) ಜಾಂಬವಾನ್-ಜಾಂಬವಂತನು, (ಯತ್ತಃ-ಯುದ್ಧಕ್ಕೆ ಸಿದ್ಧನಾದವನು. ಅಭೂತ್-ಆದನು,) ರಾಕ್ಷಸಾಧಿಪಃ-ರಾಕ್ಷಸರಿಗೆ, ಅಧಿಪಃ-ಸ್ವಾಮಿಯಾದ, ವಿಭೀಷಣಃ-ವಿಭೀಷಣನು, ತದಾ-ಆಗ, ಸೌಮಿತ್ರಿಂ-ಲಕ್ಷ್ಮಣನನ್ನು ಕುರಿತು, ಪ್ರಾಹ-ಹೇಳಿದನು, ರಾಕ್ಷಸಾನ್-ರಾಕ್ಷಸರನ್ನು, ಪಶ್ಯ-ನೋಡು ॥ ೧೪॥ ಯತ್-ಯಾವ, ಏತತ್-ಈ, ಮೇಘಶ್ಯಾಮಂ-ಮೇಘದಂತೆ ಶ್ಯಾಮಲ ಬಣ್ಣವಾದ, ರಾಕ್ಷಸಾನೀಕಂ-ರಾಕ್ಷಸ ಸೈನ್ಯವು, ವಿಲೋಕ್ಯತೇ-ನಮ್ಮಗಳಿಂದ ಕಾಣಲ್ಪಡುತ್ತಿಯೋ, ಅಸ್ಯ-ಈ, ಮಹತಃ-ಬೃಹತ್ತಾದ, ಅನೀಕಸ್ಯ-ಸೈನ್ಯದ, ಭೇದನೇ-ಭೇದಿಸುವದರಲ್ಲಿ, ಯತ್ನವಾನ್-ಪ್ರಯತ್ನವುಳ್ಳವನು, ಭವ-ಆಗು ॥ ೧೫ ॥ ಅಸ್ಮಿನ್-ಈ ಸೈನ್ಯವು, ಭಿನ್ನೇ-ಭೇದಿಸಲ್ಪಡಲು, ರಾಕ್ಷಸೇಂದ್ರಸುತಃ-ರಾವಣನ ಮಗನಾದ ಇಂದ್ರಜಿತುವು, ದೃಶ್ಯಃ-ಕಾಣಲ್ಪಡತಕ್ಕವನು, ಭವಿಷ್ಯತಿ-ಆಗುತ್ತಾನೆ, ಯಾವತ್-ಎದುರಿಗೆ, ಏತತ್ಕರ್ಮ-ಇಂದ್ರಜಿತುವಾಗುತ್ತಿರುವ ಹೋ

ಮಾಪ್ಯತೇ ॥ ೧೬ ॥ ಜಹಿವೀರಂದುರಾತ್ಮಾನಂ ಹಿಂಸಾಪರಮಧಾರ್ಮಿಕಂ । ವಿಭೀಷಣವಚಶ್ಶ್ರುತ್ವಾಲಕ್ಷ್ಮಣಶ್ಶುಭಲಕ್ಷ
ಣಃ ॥ ೧೭ ॥ ವವರ್ಷಶರವರ್ಷಾಣಿ ರಾಕ್ಷಸೇಂದ್ರಸುತಂಪ್ರತಿ । ಪಾಷಾಣೈಃಪರ್ವತಾಗ್ರೈಶ್ಚವೃಕ್ಷೈಶ್ಚಹರಿಯೂಥ
ಪಾಃ ॥ ೧೮ ॥ ನಿರ್ಜಘ್ನುಸ್ಸರ್ವತೋದೈತ್ಯಾಂಸ್ತೇಪಿವಾನರಯೂಥಪಾನ್ । ಪರಶ್ವಧೈಃಶಿತೈರ್ಬಾಣೈರಸಿಭಿರ್ಯಷ್ಟಿತೋಮ
ರೈಃ ॥೧೯॥ನಿಜಘ್ನುರ್ವಾನರಾನೀಕಂತದಾಶಬ್ದೋಮಹಾನಭೂತ್।ಸಸಂಪ್ರಹಾರಸ್ತುಮುಲಃಸಂಜಜ್ಞೇಹರಿರಕ್ಷಸಾಂ॥೨೦॥
ಇಂದ್ರಜಿತ್ಸ್ವಬಲಂಸರ್ವಮರ್ದ್ಯಮಾನಂವಿಲೋಕ್ಯಸಃ।ನಿಕುಂಬಿಲಾಂಚಹೋಮಂಚತ್ಯಕ್ತ್ವಾಶೀಘ್ರಂವಿನಿರ್ಗತಃ॥೨೧॥
ರಥಮಾರುಹ್ಯಸಧನುಃಕ್ರೋಧೇನಮಹತಾಗಮತ್ । ಸಮಾಹ್ವಯಿತ್ವಾಸೌಮಿತ್ರಿಂಯುದ್ಧಾಯರಣಮೂರ್ಧನಿ ॥ ೨೨ ॥

ಮದ ಕೆಲಸವು, ನಸಮಾಪ್ಯತೇ-ಪೂರ್ತಿಯಾಗುವದಿಲ್ಲವೋ (ಅಷ್ಟರೊಳಗೆ,) ಆಶು-ಬೇಗನೆ, ಅಭಿದ್ರವ-ಮೇಲೆ ಬಿದ್ದು ಯುದ್ಧಕ್ಕೆ ಹೋಗುವವನಾಗು ॥೧೬॥ ವೀರಂ-ಶೂರನಾದ, ಹಿಂಸಾಪರಂ-ಕೊಲೆಗಾರನಾದ, ಅಧಾರ್ಮಿಕಂ-ಧರ್ಮಹೀನನಾದ, ದುರಾತ್ಮಾನಂ-ದುರ್ಬುದ್ಧಿಯುಳ್ಳವನಾದ, (ಇಂದ್ರಜಿತುವನ್ನು,) ಜಹಿ-ಜಯಿಸು, ವಿಭೀಷಣವಚಃ-ವಿಭೀಷಣನ ಮಾತನ್ನು, ಶ್ರುತ್ವಾ-ಕೇಳಿ, ಶುಭಲಕ್ಷಣಃ-ಮಂಗಳಕರಗಳಾದ ರಾಜ ಲಕ್ಷಣಗಳುಳ್ಳವನಾದ, ಲಕ್ಷ್ಮಣಃ-ಲಕ್ಷ್ಮಣನು ॥ ೧೭ ॥ ರಾಕ್ಷಸೇಂದ್ರಸುತಂಪ್ರತಿ-ರಾವಣನ ಮಗನಾದ ಇಂದ್ರಜಿತುವನ್ನು ಕುರಿತು, ಶರವರ್ಷಾಣಿ-ಬಾಣಮಯವಾದ ಮಳೆಯನ್ನು, ವವರ್ಷ-ಮಳೆಮಾಡಿದನು, ಹರಿಯೂಥಪಾಃ-ಕಪಿನಾಯಕರು, ಪಾಷಾಣೈಃ-ಕಲ್ಲುಗಳಿಂದಲೂ, ಪರ್ವತಾಗ್ರೈಃ-ಪರ್ವತ ಶಿಖರಗಳಿಂದಲೂ, ವೃಕ್ಷೈಶ್ಚ-ಮರಗಳಿಂದಲೂ ॥ ೧೮ ॥ ಸರ್ವತಃ-ಸುತ್ತಲೂ, ದೈತ್ಯಾನ್-ರಾಕ್ಷಸರನ್ನು, ನಿಜಘ್ನುಃ-ಹೊಡೆದವರಾದರು, ತೇಪಿ-ಆ ರಾಕ್ಷಸರು, ವಾನರಯೂಥಪಾನ್-ಕಪಿನಾಯಕರನ್ನು, ಪರಶ್ವಧೈಃ-ಕೊಡಲಿಗಳಿಂದಲೂ, ಶಿತೈಃ-ಹದವಾದ, ಬಾಣೈಃ-ಅಂಬುಗಳಿಂದಲೂ, ಅಸಿಭಿಃ-ಕತ್ತಿಗಳಿಂದಲೂ, ಯಷ್ಟಿತೋಮರೈಃ-ಯಷ್ಟಿ-ಉಕ್ಕಿನ ಕಟ್ಟಿಗೆಗಳಿಂದಲೂ,ತೋಮರೈಃ-ತುಂಡುಕಟ್ಟಿಗೆಗಳಿಂದಲೂ ॥ ೧೯ ॥ ವಾನರಾನೀಕಂ-ಕಪಿಸೇನೆಯನ್ನು, ನಿಜಘ್ನುಃ-ಹೊಡಸಂಹಾರವಾದರು,ತದಾ-ಆಗ, ಶಬ್ದಃ-ಧ್ವನಿಯು, ಮಹಾನ್-ಅಧಿಕವಾಗಿ, ಅಭೂತ್-ಆಯಿತು, ಹರಿರಕ್ಷಸಾಂ-ಕಪಿರಾಕ್ಷಸರಿಗೆ, ತುಮುಲಃ-ವ್ಯಾಕುಲವಾದ, ಸಃಸಂಪ್ರಹಾರಃ-ಆಯುದ್ಧವು,ಸಂಜಜ್ಞೇ-ಉಂಟಾಯಿತು ॥ ೨೦ ॥ ಸಃ-ಪ್ರಸಿದ್ಧನಾದ, ಇಂದ್ರಜಿತ್-ಇಂದ್ರಜಿತುವು, ಸರ್ವಂ-ಸಮಸ್ತವಾದ, ಅರ್ದ್ಯಮಾನಂ-ಹೊಡೆಯಲ್ಪಡುತ್ತಿರುವ, ಸ್ವಬಲಂ-ತನ್ನ ಸೇನೆಯನ್ನು, ವಿಲೋಕ್ಯ-ನೋಡಿ, ನಿಕುಂಬಿಲಾಂ-ಹೋಮವನ್ನು ಮಾಡುತ್ತಿದ್ದ ಸ್ಥಳವನ್ನು, ಹೋಮಂಚ-ಹೋಮವನ್ನು, ತ್ಯಕ್ತ್ವಾ-ಬಿಟ್ಟು, ಶೀಘ್ರಂ-ಬೇಗನೆ, ವಿನಿರ್ಗತಃ-ಹೊರಟು ಬಂದವನಾದನು॥೨೧॥ರಥಂ-ತೇರನ್ನು,ಆರುಹ್ಯ-ಹತ್ತಿ, ಸಧನುಃ-ಬಿಲ್ಲನ್ನು ಧರಿಸಿದವನಾಗಿ, ಮಹತಾ-ಹೆಚ್ಚಾದ, ಕ್ರೋಧೇನ-ಕೋಪದಿಂದ, ಆಗಮತ್-ಯುದ್ಧಕ್ಕೆ ಬಂದನು, ರಣಮೂರ್ಧನಿ-ಯುದ್ಧಭೂಮಿಯ ಮುಂಭಾಗದಲ್ಲಿ, ಯುದ್ಧಾಯ-ಯುದ್ಧಕ್ಕೋಸ್ಕರವಾಗಿ, ಸೌಮಿತ್ರಿಂ-ಲಕ್ಷ್ಮಣನನ್ನು, ಸಮಾಹ್ವಯಿತ್ವಾ-ಕರೆದು ॥ ೨೨ ॥ ಸೌಮಿತ್ರೇ-ಲಕ್ಷ್ಮಣನೇ, ಅಹಂ-ನಾನು, ಮೇಘನಾದಃ-ಮೇಘನಾದನೆಂಬು

ಸೌಮಿತ್ರೆಮೆಘನಾದೊಹಂಮಯಾಜೀವನ್ನಮೊಕ್ಷ್ಯಸೆ। ತತ್ರದೃಷ್ಟ್ವಾಪಿತೃವ್ಯಂಸಃಪ್ರಾಹನಿಷ್ಠುರಭಾಷಣಂ ॥ ೭೩॥
ಇಹೈವಜಾತಃಸಂವೃದ್ಧಃಸಾಕ್ಷಾದ್ಭ್ರಾತಾಪಿತುರ್ಮಮ। ಯಸ್ತ್ವಂಸ್ವಜನಮುತ್ಸೃಜ್ಯಪರಭೃತ್ಯತ್ವಮಾಗತಃ॥೭೪॥
ಕಥಂದ್ರುಹ್ಯಸಿಪುತ್ರಾಯಪಾಪೀಯಾನಸಿದುರ್ಮತಿಃ। ಇತ್ಯುಕ್ತ್ವಾಲಕ್ಷ್ಮಣಂದೃಷ್ಟ್ವಾಹನೂಮತ್ಪೃಷ್ಠತಸ್ಥಿತಂ॥೭೫॥
ಉದ್ಯದಾಯುಧನಿಸ್ತ್ರಿಂಶೆರಥೆಮಹತಿಸಂಸ್ಥಿತಃ। ಮಹಾಪ್ರಮಾಣಮುದ್ಯಮ್ಯಘೊರಂವಿಸ್ಫಾರಯನ್ಧನುಃ॥ ೭೬ ॥ ಅದ್ಯ
ವೊಮಾಮಕಾಬಾಣಾಃಪ್ರಾಣಾನ್ಪಾಸ್ಯಂತಿವಾನರಾಃ।ತತಶ್ಶರಾನ್ದಾಶರಥಿಃ ಸಂಧಾಯಾಮಿತ್ರಕರ್ಶನಃ॥ ಸಸರ್ಜ ರಾಕ್ಷ
ಸೆಂದ್ರಾಯಕ್ರುದ್ಧಸ್ಸರ್ಪಇವಶ್ವಸನ್। ಇಂದ್ರಜಿದ್ರಕ್ತನಯನೊ ಲಕ್ಷ್ಮಣಂಸಮುದೈಕ್ಷತ ॥ ೭೮ ॥ ಶಕ್ರಾಶನಿಸಮ

ವನು, ಮಯಾ-ನನ್ನಿಂದ, ಜೀವನ್-ಬದುಕುತ್ತಿರುವವನಾಗಿ, ನಮೋಕ್ಷ್ಯಸೆ-ಬಿಡಲ್ಪಡುವವನಾಗುವದಿಲ್ಲ, ತತ್ರ-ಯುದ್ಧಭೂಮಿಯಲ್ಲಿ, ಪಿತೃವ್ಯಂ-ಚಿಕ್ಕಪ್ಪನಾದ ವಿಭೀಷಣನನ್ನು, ದೃಷ್ಟ್ವಾ-ನೋಡಿ, ಸಃ-ಇಂದ್ರಜಿತುವು, ನಿಷ್ಠುರ-ಕಠಿಣವಾದ, ಭಾಷಣಂ-ಮಾತನ್ನು, ಪ್ರಾಹ-ಹೇಳಿದನು ॥ ೭೩ ॥ ಇಹೈವ-ಇಲ್ಲಿಯೇ, ಜಾತಃ-ಹುಟ್ಟಿದವನಾಗಿ, ಸಂವೃದ್ಧಃ-ಇಲ್ಲಿಯೇ ಬೆಳೆದು ವೃದ್ಧಿಯನ್ನು ಹೊಂದಿದವನಾಗಿ, ಮಮ-ನನ್ನ, ಪಿತುಃ-ತಂದೆಗೆ, ಸಾಕ್ಷಾತ್-ಸ್ವಂತವಾದ, ಭ್ರಾತಾ-ತಮ್ಮನಾಗಿದ್ದುಕೊಂಡಿರುವ, ಯಃ-ಯಾವ ನೀನು, ಸ್ವಜನಂ-ಸ್ವಂತಬಾಧವ್ಯ ಜನರನ್ನು, ಉತ್ಸೃಜ್ಯ-ಬಿಟ್ಟು, ಪರಭೃತ್ಯಂ-ಅನ್ಯರಿಗೆ ದಾಸಭಾವವನ್ನು, ಆಗತಃ-ಪಡೆದವನಾಗಿದ್ದೀ ॥ ೭೪ ॥ ಪುತ್ರಾಯ-ಮಗನಾದ ನನಗೆ, ಕಥಂದ್ರುಹ್ಯಸಿ-ಹ್ಯಾಗೆ ದ್ರೋಹವನ್ನು ಮಾಡುತ್ತೀ, ಪಾಪೀಯಾನ್-ಪಾಪಿಷ್ಠನು, ದುರ್ಮತಿಃ-ದುರ್ಬುದ್ಧಿಯುಳ್ಳವನು, ಅಸಿ-ಆಗಿದ್ದೀ, ಇತ್ಯುಕ್ತ್ವಾ-ಈ ಮಾತನ್ನು ಹೇಳಿ, ಹನೂಮತ್ಪೃಷ್ಠತಃ-ಆಂಜನೇಯನ ಮೇಲೆ, ಸ್ಥಿತಂ-ಏರಿರುವವನಾದ, ಲಕ್ಷ್ಮಣಂ-ಲಕ್ಷ್ಮಣನನ್ನು, ದೃಷ್ಟ್ವಾ-ನೋಡಿ ॥ ೭೫ ॥ ಉದ್ಯದಾಯುಧನಿಸ್ತ್ರಿಂಶೆ-ಉದ್ಯತ-ಸಿದ್ಧವಾಗಿರುವ ಆಯುಧ ಗದಾದಿಗಳು, ನಿಸ್ತ್ರಿಂಶ-ಕತ್ತಿಯೂ ವುಳ್ಳದ್ದಾದ, ಮಹತಿ-ವಿಸ್ತಾರವಾದ, ರಥೆ-ತೇರಿನಲ್ಲಿ, ಸ್ಥಿತಃ-ಇರುವ ಮೇಘನಾದನು, ಮಹಾಪ್ರಮಾಣಂ-ಅಧಿಕವಾದ ವಿಸ್ತಾರವುಳ್ಳ, ಘೋರಂ-ಕ್ರೂರವಾದ, ಧನುಃ-ಬಿಲ್ಲನ್ನು, ಉದ್ಯಮ್ಯ-ಎತ್ತಿ, ವಿಸ್ಫಾರಯನ್-ಟೇಂಕಾರ ಮಾಡುತ್ತಿರುವವನಾಗಿ ॥ ೭೬ ॥ ವಾನರಾಃ-ಕಪಿಗಳಿರಾ, ಅದ್ಯ-ಈಗ, ಮಾಮಕಾಃ-ನನ್ನ ಸಂಬಂಧವಾದ, ಬಾಣಾಃ-ಬಾಣಗಳು, ವಃ-ನಿಮ್ಮಗಳ, ಪ್ರಾಣಾನ್-ಪ್ರಾಣಗಳನ್ನು, ಪಾಸ್ಯಂತಿ-ಕುಡಿಯುತ್ತಲಿವೆ, ತತಃ-ಆ ಬಳಿಕ, ಅಮಿತ್ರಕರ್ಶನಃ-ಶತ್ರುಗಳನ್ನು ಕೃಶ ಮಾಡುವವನಾದ, ದಾಶರಥಿಃ-ಲಕ್ಷ್ಮಣನು, ಶರಂ-ಬಾಣವನ್ನು, ಸಂಧಾಯ-ಬಿಲ್ಲಿನಲ್ಲಿ ಕೂಡಿಸಿ ॥ ೭೭ ॥ ಕ್ರುದ್ಧಃ-ಕೋಪವುಳ್ಳದ್ದಾದ, ಸರ್ಪಇವ-ಹಾವಿನಂತೆ, ಶ್ವಸನ್-ಉಸುರು ಬಿಡುತ್ತಿರುವ, ರಾಕ್ಷಸೇಂದ್ರಾಯ-ಇಂದ್ರಜಿತುವಿಗೋಸ್ಕರ ಸಸರ್ಜ-ಬಿಟ್ಟನು, ಇಂದ್ರಜಿತ್-ಮೇಘನಾದನು, ರಕ್ತನಯನಃ-ಕೆಂಪಾದ ಕಣ್ಣುಗಳುಳ್ಳವನಾಗಿ, ಲಕ್ಷ್ಮಣಂ-ಲಕ್ಷ್ಮಣನನ್ನು, ಸಮುದೈಕ್ಷತ-ನೋಡಿದನು ॥ ೭೮ ॥ ಲಕ್ಷ್ಮಣೆನ-ಲಕ್ಷ್ಮಣನಿಂದ, ಶಕ್ರಾಶನಿಸಮಸ್ಪರ್ಶೈಃ-ಶಕ್ರ-ಇಂದ್ರನ, ಅಶನಿ-ವಜ್ರದ ಪೆಟ್ಟಿಗೆ, ಸಮ-ಸರಿಯಾದ, ಸ್ಪರ್ಶೈಃ-ಪೆಟ್ಟುಗಳುಳ್ಳ,

ಶ್ಶರೈರ್ಃಲಕ್ಷ್ಮಣೇನಾಹತಶ್ಶರೈಃ । ಮುಹೂರ್ತಮಭವನ್ಮೂಢಃಪುನಃಪ್ರತ್ಯಾಹೃತೇಂದ್ರಿಯಃ ॥ ೨೯ ॥ ದದರ್ಶಾವಸ್ಥಿತಂ ವೀರಂವೀರೋದಶರಥಾತ್ಮಜಂ । ಸೋಭಿಚಕ್ರಾಮಸೌಮಿತ್ರಿಂಕ್ರೋಧಸಂರಕ್ತಲೋಚನಃ ॥ ೩೦ ॥ ಶರಾನ್ಧನುಷಿಸಂಧಾಯಲಕ್ಷ್ಮಣಂಚೇದಮಬ್ರವೀತ್ ।ಯದಿತೇಪ್ರಥಮೇಯುದ್ಧೇನದೃಷ್ಟೋಮೇಪರಾಕ್ರಮಃ ॥ ೩೧ ॥ ಅದ್ಯತ್ವಾಂದರ್ಶಯಿಷ್ಯಾಮಿ ತಿಷ್ಠೇದಾನೀಂವ್ಯವಸ್ಥಿತಃ । ಇತ್ಯುಕ್ತ್ವಾಸಪ್ತಭಿರ್ಬಾಣೈರಭಿವಿವ್ಯಾಧಲಕ್ಷ್ಮಣಂ ॥೩೨ ॥ ದಶಭಿಶ್ಚಹನೂಮಂತಂ ತೀಕ್ಷ್ಣಧಾರೈಶ್ಶರೋತ್ತಮೈಃ । ತತಶ್ಶರಶತೇನೈವಸಂಪ್ರಯುಕ್ತೇನವೀರ್ಯವಾನ್ ॥ ೩೩ ॥ ಕ್ರೋಧಾದ್ದ್ವಿಗುಣಸಂರಬ್ಧೋ ನಿರ್ಬಿಭೇದವಿಭೀಷಣಂ । ಲಕ್ಷ್ಮಣೋಪಿತಥಾಶತ್ರುಂಶರವರ್ಷೈರವಾಕಿರತ್ ॥ ೩೪ ॥ ತಸ್ಯಬಾಣೈಸ್ಸುಸಂವಿದ್ಧಂಕವಚಂ

ಶರೈಃ-ಬಾಣಗಳಿಂದ, ಆಹತಃ-ಹೊಡೆಯಲ್ಪಟ್ಟ (ಇಂದ್ರಜಿತುವು,) ಮುಹೂರ್ತಂ-ಮುಹೂರ್ತ ಕಾಲದವರೆಗೆ, ಮೂಢಃ-ಪ್ರಜ್ಞೆ ಯಿಲ್ಲದವನು, ಅಭವತ್-ಆದನು, ಪುನಃ-ತಿರಿಗಿ, ಪ್ರತ್ಯಾಹೃತೇಂದ್ರಿಯಃ-ಪ್ರತ್ಯಾಹೃತ-ಮೂರ್ಛೆಯು ತಿಳಿದದರಿಂದ ತಿರಿಗಿದ, ಇಂದ್ರಿಯಃ-ಇಂದ್ರಿಯಗಳುಳ್ಳವನಾದವನು, ಅಭವತ್-ಆದನು ॥ ೨೯ ॥ ವೀರಃ-ಶೂರನಾದ (ಇಂದ್ರಜಿತುವು,) ವೀರಂ-ಶೂರನಾದ, ಅವಸ್ಥಿತಂ-ಇರುತ್ತಿರುವ, ದಶರಥಾತ್ಮಜಂ-ದಶರಥ ರಾಯನಿಗೆ ಮಗನಾದ ಲಕ್ಷ್ಮಣನನ್ನು, ದದರ್ಶ-ನೋಡಿದನು, ಸಃ-ಇಂದ್ರಜಿತುವು, ಕ್ರೋಧ-ಕೋಪದಿಂದ, ಸಂರಕ್ತ-ಕೆಂಪಾದ, ಲೋಚನಃ-ಕಣ್ಣುಗಳುಳ್ಳವನಾಗಿ, ಸೌಮಿತ್ರಿಂ-ಲಕ್ಷ್ಮಣನನ್ನು ಕುರಿತು, ಅಭಿಚಕ್ರಾಮ-ಎದುರಾಗಿ ಬಂದನು ॥ ೩೦ ॥ ಶರಾನ್-ಬಾಣಗಳನ್ನು, ಧನುಷಿ-ಬಿಲ್ಲಿನಲ್ಲಿ, ಸಂಧಾಯ-ಜೋಡಿಸಿ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಇದಂ-ಈ ಮಾತನ್ನು ಅಬ್ರವೀತ್-ಹೇಳಿದನು, ಪ್ರಥಮೇ-ಮೊದಲನೇದಾದ, ಯುದ್ಧೇ-ಯುದ್ಧದಲ್ಲಿ, ಮತ್ಪರಾಕ್ರಮಃ-ನನ್ನ ಸಾಮರ್ಥ್ಯವು, ತೇ-ನಿನಗೆ, ನದೃಷ್ಟೋಯದಿ-ತಿಳಿಯದೆ ಇದ್ದರೆ ॥೩೧॥ ಅದ್ಯ-ಈಗ, ತ್ವಾಂ-ನಿನ್ನನ್ನು ಕುರಿತು, ದರ್ಶಯಿಷ್ಯಾಮಿ-ತೋರಿಸುತ್ತೇನೆ, ಇದಾನೀಂ-ಈಗ, ವ್ಯವಸ್ಥಿತಃ-ಸ್ಥಿರನಾಗಿ, ತಿಷ್ಠ-ಇರು, ಇತ್ಯುಕ್ತ್ವಾ-ಹೀಗೆ ಹೇಳಿ, ಸಪ್ತಭಿಃ-ಏಳಾದ, ಬಾಣೈಃ-ಬಾಣಗಳಿಂದ, ಲಕ್ಷ್ಮಣಂ-ಲಕ್ಷ್ಮಣನನ್ನು, ಅಭಿವಿವ್ಯಾಧ-ಹೊಡೆದನು, ದಶಭಿಃ-ಹತ್ತಾದ, ತೀಕ್ಷ್ಣ-ಮೊನೆಯಾದ ಅಲಗುಳ್ಳವುಗಳಾದ, ಶರೋತ್ತಮೈಃ-ಶ್ರೇಷ್ಠ ಬಾಣಗಳಿಂದ, ಹನೂಮಂತಂ-ಆಂಜನೇಯನನ್ನು, ವಿವ್ಯಾಧ-ಹೊಡೆದನು, ತತಃ-ಆ ಬಳಿಕ, ವೀರ್ಯವಾನ್-ಪರಾಕ್ರಮಶಾಲಿಯಾದ (ಇಂದ್ರಜಿತುವು,) ಸಂಪ್ರಯುಕ್ತೇನ-ಬಿಡಲ್ಪಟ್ಟ, ಶತೇನ-ನೂರು ಬಾಣಗಳಿಂದ ॥ ೩೩ ॥ ಕ್ರೋಧಾತ್-ಕೋಪದಿಂದ, ದ್ವಿಗುಣಸಂರಬ್ಧಃ-ಇಮ್ಮಡಿಯಾಗಿ ಸನ್ನದ್ಧನಾದವನಾಗಿ, ವಿಭೀಷಣಂ-ವಿಭೀಷಣನನ್ನು, ನಿರ್ಬಿಭೇದ-ಭೇದಿಸಿದನು, ಲಕ್ಷ್ಮಣೋಪಿ-ಲಕ್ಷ್ಮಣನು, ತಥಾ-ಹಾಗೆ, ಶರವರ್ಷೈಃ-ಬಾಣದ ಮಳೆಗಳಿಂದ, ಅವಾಕಿರತ್-ತುಂಬಿಸಿದವನಾದನು ॥ ೩೪ ॥ ತಸ್ಯ-ಅವನ, ಬಾಣೈಃ-ಬಾಣಗಳಿಂದ, ಸುಸಂವಿದ್ಧಂ-ಹೊಡೆಯಲ್ಪಟ್ಟ, ಕಾಂಚನಪ್ರಭಂ-ಭಂಗಾರಕ್ಕೆ ಸಮವಾದ ಬಣ್ಣವುಳ್ಳ, ಕವಚಂ-ಗ್ರಹಿಸಿತುಸ ಕವಚವು, ರಥೋಪಸ್ಥೇ-ರಥ ಸಮೀಪದಲ್ಲಿ, ವ್ಯಶೀರ್ಯತ-ಶೀರ್ಣ ಹೋಯಿತು, ಭುವಿ-ಭೂಮಿಯಲ್ಲಿ, ತಿಲಶಃ-ಎಳ್ಳಿನಷ್ಟಾಗಿ, ಪತಿತಂ-ಕತ್ತರಿಸಲ್ಪಟ್ಟು ಬಿದ್ದದ್ದಾಯಿತು ॥೩೫॥

ಕಾಂಚನಪ್ರಭಂ । ವ್ಯಶೀರ್ಯತರಥೋಪಸ್ಥೇ ತಿಲಶಃಪತಿತಂಭುವಿ ॥ ೩೫ ॥ ತತಃಶರಸಹಸ್ರೇಣಸಂಕ್ರುದ್ಧೋರಾವಣಾತ್ಮಜಃ। ಬಿಭೇದಸಮರೇವೀರಂಲಕ್ಷ್ಮಣಂಭೀಮವಿಕ್ರಮಂ ॥ ೩೬ ॥ವ್ಯಶೀರ್ಯತಾಪತದ್ದಿವ್ಯಂ ಕವಚಂಲಕ್ಷ್ಮಣಸ್ಯಚ । ಕೃತಪ್ರತಿಕೃತಾನ್ಯೋನ್ಯಂ ಬಭೂವತುರಭಿದ್ರುತೌ ॥ ೩೭ ॥ ಅಭೀಕ್ಷ್ಣಂನಿಶ್ವಸಂತೌತೌ ಯುಧ್ಯೇತಾಂತುಮುಲಂಪುನಃ। ಶರಸಂವೃತ್ತಸರ್ವಾಂಗೌ ಸರ್ವತೋರುಧಿರೋಕ್ಷಿತೌ ॥ ೩೮ ॥ ಸುಧೀರ್ಘಕಾಲಂತೌವೀರಾವನ್ಯೋನ್ಯಂನಿಶಿತೈಶ್ಶರೈಃ । ಅಯುಧ್ಯೇತಾಂಮಹಾಸತ್ವೌ ಜಯಾಜಯವಿವರ್ಜಿತೌ ॥ ೩೯ ॥ ಏತಸ್ಮಿನ್ನಂತರೇವೀರೋಲಕ್ಷ್ಮಣಃಪಂಚಭಿಶ್ಶರೈಃ। ರಾವಣೇಃಸಾರಥಿಂಸಾಶ್ವಂರಥಂಚ ಸಮಚೂರ್ಣಯತ್ ॥ ೪೦ ॥ ಚಿಚ್ಛೇದಕಾರ್ಮುಕಂತಸ್ಯದರ್ಶಯನ್ಹಸ್ತಲಾಘವಂ । ಸೋನ್ಯತ್ತುಕಾರ್ಮುಕಂಭದ್ರಂ ಸಜ್ಜಂಚಕ್ರೇತ್ವರಾನ್ವಿತಃ ॥ ೪೦ ॥ ತಚ್ಚಾಪಿಸಮಪಿಚಿಚ್ಛೇದಲಕ್ಷ್ಮಣಸ್ತ್ರಿಭಿರಾಶುಗೈಃ। ತಮೇವಂಛಿನ್ನಧ

ರಾವಣಾತ್ಮಜಃ-ಇಂದ್ರಜಿತ್ತು, ತತಃ-ಆ ಬಳಿಕ, ಸಮರೇ-ಯುದ್ಧದಲ್ಲಿ, ಸಂಕ್ರುದ್ಧಃ-ಕೋಪಿಷ್ಠನಾಗಿ, ಶರಸಹಸ್ರೇಣ-ಸಾವಿರ ಬಾಣಗಳಿಂದ, ವೀರಂ-ಶೂರನಾದ, ಭೀಮ-ಭಯಂಕರವಾದ, ವಿಕ್ರಮಂ-ಪರಾಕ್ರಮವುಳ್ಳವನಾದ, ಲಕ್ಷ್ಮಣಂ-ಲಕ್ಷ್ಮಣನನ್ನು, ಬಿಭೇದ-ಛೇದಿಸಿದನು ॥ ೩೬ ॥ ಲಕ್ಷ್ಮಣಸ್ಯಚ-ಲಕ್ಷ್ಮಣನ, ದಿವ್ಯಂ-ಯೋಗ್ಯವಾದ, ಕವಚಂ-ಕವಚವು, ವ್ಯಶೀರ್ಯತ-ಬಿಡದು ಹೋಯಿತು, ಅಪತತ-ನೆಲಕ್ಕೆ ಬಿದ್ದ ಹಾಗಾಯಿತು, ಅನ್ಯೋನ್ಯಂ-ಒಬ್ಬರಿಗೊಬ್ಬರು, ಕೃತಪ್ರತಿಕೃತೌ-ಮಾಡಿದ್ದಕ್ಕೆ ಪ್ರತಿಯಾಗಿ ಮಾಡುತ್ತಿರುವವರಾಗಿ, ಅಭಿದ್ರುತೌ-ಒಬ್ಬರಮೇಲೊಬ್ಬರು ಬೀಳುವಂಥಾವರು, ಬಭೂವತುಃ-ಆದರು ॥ ೩೭ ॥ ಅಭೀಕ್ಷ್ಣಂ-ಆಗಾಗ್ಗೆ, ನಿಶ್ವಸಂತೌ-ನಿಟ್ಟುಸುರುಗಳನ್ನು ಬಿಡುತ್ತಿರುವವರಾದ, ಶರ-ಬಾಣಗಳಿಂದ, ಸಂವೃತ-ಕತ್ತರಿಸಲ್ಪಟ್ಟ, ಸರ್ವಾಂಗೌ-ಸಮಸ್ತ ಅಂಗಗಳುಳ್ಳವರಾದ, ಸರ್ವತಃ-ದೇಹದಲ್ಲೆಲ್ಲಿಯೂ, ರುಧಿರೋಕ್ಷಿತೌ-ಸೋರುವ ರಕ್ತವುಳ್ಳವರಾದ, ತೌ-ಲಕ್ಷ್ಮಣ ಇಂದ್ರಜಿತ್ತುಗಳು, ಪುನಃ-ತಿರಿಗಿ, ತುಮುಲಂ-ಸಂಕುಲವಾಗಿ, ಯುಧ್ಯೇತಾಂ-ಯುದ್ಧವನ್ನು ಮಾಡುವವರಾದರು ॥ ೩೮ ॥ ಮಹಾಸತ್ವೌ-ಅಧಿಕ ಬಲರಾದ, ಜಯಾಜಯವಿವರ್ಜಿತೌ-ಸೋಲು ಗೆಲುವುಗಳಿಲ್ಲದೆ ಇರುವವರಾದ, ವೀರೌ-ಶೂರರಾದ, ತೌ-ಲಕ್ಷ್ಮಣೇಂದ್ರಜಿತ್ತುಗಳು, ನಿಶಿತೈಃ-ತೀಕ್ಷ್ಣಗಳಾದ, ಶರೈಃ-ಬಾಣಗಳಿಂದ, ಅನ್ಯೋನ್ಯಂ-ಪರಸ್ಪರವಾಗಿ, ಸುದೀರ್ಘಕಾಲಂ-ಮೂರು ದಿನಗಳ ಅಹೋರಾತ್ರಿಗಳಪರಿಯಂತರವೂ, ಅಯುಧ್ಯೇತಾಂ-ಯುದ್ಧವನ್ನು ಮಾಡಿದವರಾದರು ॥ ೩೯ ॥ ಏತಸ್ಮಿನ್ನಂತರೇ-ಈ ಯುದ್ಧ ಮಾಡುವ ಮಧ್ಯದಲ್ಲಿ, ವೀರಃ-ಶೂರನಾದ, ಲಕ್ಷ್ಮಣಃ-ಲಕ್ಷ್ಮಣನು, ಪಂಚಭಿಃ-ಐದಾದ, ಶರೈಃ-ಬಾಣಗಳಿಂದ, ರಾವಣೇಃ-ಇಂದ್ರಜಿತುವಿನ, ಸಾರಥಿಂ-ಸೂತನನ್ನು, ಸಾಶ್ವಂ-ಅಶ್ವಗಳಿಂದ ಕೂಡಿರುವ, ರಥಂ-ತೇರನ್ನು, ಸಮಚೂರ್ಣಯತ-ಪುಡಿ ಪುಡಿಯಾಗಿ ಮಾಡಿದನು ॥ ೪೦ ॥ ತಸ್ಯ-ಇಂದ್ರಜಿತುವಿನ, ಕಾರ್ಮುಕಂ-ಬಿಲ್ಲನ್ನು ಹಸ್ತಲಾಘವಂ-ತನ್ನ ಹಸ್ತದ ಜಾಗ್ರತೆಯನ್ನು, ದರ್ಶಯನ್-ತೋರಿಸುತ್ತಿರುವವನಾಗಿ, ಚಿಚ್ಛೇದ-ಕತ್ತರಿಸಿದನು, ಸಃ-ಇಂದ್ರಜಿತ್ತು, ಅನ್ಯತ್-ಮತ್ತೊಂದಾದ, ಕಾರ್ಮುಕಂ-ಬಾಣಾಸನವನ್ನು, ಆದಾಯ-ತೆಗೆದುಕೊಂಡು, ತ್ವರಿತಾನ್ವಿತಃ

ನ್ಯಾಸಂವಿವ್ಯಾಧಾನೇಕಸಾಯಕೈಃ ॥ ೪೧ ॥ ಪುನರಸ್ತ್ರಮಾದಾಯ ಕಾರ್ಮುಕಂಭೀಮವಿಕ್ರಮಃ । ಇಂದ್ರಜಿಲ್ಲಕ್ಷ್ಮಣಂ ಬಾಣೈಶ್ಶಿತೈರಾದಿತ್ಯಸನ್ನಿಭೈಃ ॥ ೪೨ ॥ ಬಿಭೇದವಾನರಾನ್ಸರ್ವಾನ್ಬಾಣೈರಾಪೂರಯನ್ದಿಶಃ । ತತಐಂದ್ರಂಸಮಾದಾಯ ಲಕ್ಷ್ಮಣೋರಾವಣಿಂಪ್ರತಿ ॥ ೪೪ ॥ ಸಂಧಾಯಾಕೃಷ್ಯಕರ್ಣಾಂತಂಕಾರ್ಮುಕಂದೃಢಸಿಷ್ಮರಂ । ಉವಾಚಲಕ್ಷ್ಮಣೋ ವೀರಸ್ಮರ್ನ್ರಾಮಪದಾಂಬುಜಂ ॥ ೪೫ ॥ ಧರ್ಮಾತ್ಮಾಸತ್ಯಸಂಧಶ್ಚ ರಾಮೋದಾಶರಥಿರ್ಯದಿ । ತ್ರಿಲೋಕ್ಯಾಮಪ್ರತಿದ್ವಂದ್ವ ಸ್ತದೇನಂಜಹಿರಾವಣಿಂ ॥ ೪೬ ॥ ಇತ್ಯುಕ್ತ್ವಾಬಾಣಮಾಕರ್ಣಾದ್ವಿಕೃಷ್ಯತಮಜಿಹ್ಮಗಂ । ಲಕ್ಷ್ಮಣಸ್ಸಮರೇವೀರ ಸ್ಸಸರ್ಜೇಂದ್ರಜಿತಂಪ್ರತಿ ॥ ೪೭ ॥ ಸಶಿರಃಸಶಿರಸ್ತ್ರಾಣಾಶ್ರೀಮಜ್ಜ್ವಲಿತಕುಂಡಲಂ । ಪ್ರಮಥ್ಯೇಂದ್ರಜಿತಃಕಾಯಾತ್ಪಾ

ಜಾಸ್ತ್ರತೆಯುಳ್ಳವನಾಗಿ, ಸಜ್ಯಂ-ಹೆದೆಯುಳ್ಳದ್ದನ್ನಾಗಿ, ಚಕ್ರೇ-ಮಾಡಿದನು ॥ ೪೧ ॥ ಲಕ್ಷ್ಮಣಃ-ಲಕ್ಷ್ಮಣನು, ತ್ರಿಭಿಃ-ಮೂರಾದ, ಆಶುಗೈಃ-ಬಾಣಗಳಿಂದ, ತಚ್ಚಾಪಂ-ಆ ಬಿಲ್ಲನ್ನು, ಚಿಚ್ಛೇದ-ಕತ್ತರಿಸಿದನು, ಏನಂ-ಈ ರೀತಿಯಾಗಿ, ಛಿನ್ನ-ಕತ್ತರಿಸಲ್ಪಟ್ಟ, ಧನ್ವಾನಂ-ಬಿಲ್ಲುಳ್ಳವನಾದ, (ಇಂದ್ರಜಿತ.ವನ್ನು,) ಅನೇಕ-ಬಹುವಾದ, ಸಾಯಕೈಃ-ಬಾಣಗಳಿಂದ ವಿವ್ಯಾಧ-ಹೊಡೆದವನಾದನು ॥ ೪೨ ॥ ಭೀಮವಿಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ಇಂದ್ರಜಿತ್-ಮೇಘನಾದನು, ಪುನಃ-ಮತ್ತೊಂದು, ಕಾರ್ಮುಕಂ-ಬಿಲ್ಲನ್ನು, ಸಮಾದಾಯ-ತೆಗದುಕೊಂಡು, ಶಿತೈಃ-ಹದವಾಗಿರುವ, ಆದಿತ್ಯಸನ್ನಿಭೈಃ-ಸೂರ್ಯನಿಗೆ ಸಮವಾದ, ಬಾಣೈಃ-ಅಂಬುಗಳಿಂದ, ಲಕ್ಷ್ಮಣಂ-ಲಕ್ಷ್ಮಣನನ್ನು, ಬಿಭೇದ-ಭೇದಿಸಿದನು ॥ ೪೩ ॥ ದಿಶಃ-ದಿಕ್ಕುಗಳನ್ನು, ಬಾಣೈಃ-ಬಾಣಗಳಿಂದ, ಆಪೂರಯನ್-ತುಂಬಿಸುತ್ತಿರುವವನಾಗಿ, ಸರ್ವಾನ್-ಸಮಸ್ತವಾದ, ವಾನರಾನ್-ಕಪಿಗಳನ್ನು ಬಿಭೇದ-ಹೊಡೆದನು, ತತಃ-ಆ ಬಳಿಕ, ಲಕ್ಷ್ಮಣಃ-ಲಕ್ಷ್ಮಣನು, ರಾವಣಿಂಪ್ರತಿ-ಇಂದ್ರಜಿತುವನ್ನು ಕುರಿತು, ಐಂದ್ರಂ-ಇಂದ್ರ ದೇವತಾಕವಾದ ಬಾಣವನ್ನು, ಸಮಾದಾಯ-ತೆಗದುಕೊಂಡು, ದೃಢನಿಷ್ಮರಂ-ಬಲವಾಗಿಯೂ ಕಠಿಣವಾಗಿಯೂ ಇರುವ, ಕಾರ್ಮುಕಂ-ಬಿಲ್ಲಿನಲ್ಲಿ, ಸಂಧಾಯ-ಜೋಡಿಸಿ, ಕರ್ಣಾಂತಂ-ಕಿವಿಯವರೆಗೂ, ಆಕೃಷ್ಯ-ಎಳೆದು, ವೀರಃ-ಶೂರನಾದ, ಲಕ್ಷ್ಮಣಃ-ಲಕ್ಷ್ಮಣನು, ರಾಮಪದಾಂಬುಜಂ-ರಾಮ-ರಾಮಚಂದ್ರನ, ಪದಾಂಬುಜಂ-ಪಾದ ಕಮಲವನ್ನು, ಸ್ಮರನ್-ಧ್ಯಾನಿಸುತ್ತಿರುವವನಾಗಿ ॥ ೪೫ ॥ (ಎಲೈ ಐಂದ್ರಾಸ್ತ್ರಾಭಿಮಂತ್ರಿತವಾದ ಬಾಣವೇ,) ರಾಮಃ-ರಾಮಚಂದ್ರನು, ಧರ್ಮಾತ್ಮಾ-ಧರ್ಮದಲ್ಲಿಯೇ, ಚಿತ್ತವುಳ್ಳವನಾಗಿದ್ದರೆ, ಸತ್ಯಸಂಧಃ-ನಿಜವಾದ ಪ್ರತಿಜ್ಞೆಯುಳ್ಳವನಾಗಿದ್ದರೆ, ದಾಶರಥಿರ್ಯದಿ-ದಶರಥ ರಾಯನಿಗೆ, ಮಗನಾಗಿದ್ದದ್ದೇ ಆದರೆ, ತ್ರಿಲೋಕ್ಯಾಂ-ಮೂರು ಲೋಕಗಳಲ್ಲಿಯೂ, ಅಪ್ರತಿದ್ವಂದ್ವಃ-ರಾಮ ಮೂರ್ತಿಗೆ ಸಮಾನನಾಗಿರುವವನು ಯಾರೂ ಇಲ್ಲದೆ ಇದ್ದರೆ, ತದಾ-ಆಗ, ಏನಂ-ಈ, ರಾವಣಿಂ-ಇಂದ್ರಜಿತುವನ್ನು, ಜಹಿ-ಜಯಿಸುವಂಥಾದ್ದಾಗು, ಅಥವಾ (ಎಲೈ ಐಂದ್ರಾಸ್ತ್ರಯುಕ್ತವಾದ, ಬಾಣವೇ,) ದಾಶರಥಿಃ-ದಶರಥ ರಾಯನಿಗೆ ಮಗನೆಂದು ತೋರುವ ಈತನು, ಧರ್ಮಾತ್ಮಾಯದಿ-ಧರ್ಮ ಸ್ವರೂಪಿಯೂ, ಆತ್ಮಾ-ಅಂಶಾಶೀ ಭಾವದಿಂದ ಜೀವಾತ್ಮ ಪರಮಾತ್ಮ ಶಬ್ದ ವಾಚ್ಯನಾಗಿಯೂ ಇರುವದು, ನಿಜವಾದರೆ, (ಲೋಕಾನಾಂತ್ವಂಪರೋಧರ್ಮ್ಮಇತಿರಾಮಾಯಣೇ,

ತಯಾವಮಾಸಭೂತಲೆ || ೪೭ || ತತಃಪ್ರಮುದಿತಾದೇವಾಃಕೀರ್ತಯಂತೋರಘೂತ್ತಮಂ|ವವರ್ಷುಃಪುಷ್ಪವರ್ಷಾಣಿಸ್ತು
ವಂತಶ್ಚಮುಹುರ್ಮುಹುಃ || ೪೮ || ಜಹರ್ಷ ಶಕ್ರೋಭಗವಾನ್ ಸಹದೇವೈರ್ಮಹರ್ಷಿಭಿಃ | ಆಕಾಶೇಪಿಚದೇವಾನಾಂಶುಶ್ರು
ವೇದುಂದುಭಿಸ್ವನಃ || ೫೦ || ವಿಮಲಂಗಗನಂಚಾಸೀತ್ ಸ್ಥಿರಾಭೂದ್ವಿಶ್ವಧಾರಿಣೀ | ನಿಹತಂರಾವಣಿಂದೃಷ್ಟ್ವಾಜಯಜಲ್ಪ
ಸಮನ್ವಿತಃ || ೫೧ || ಗತಶ್ರಮಸ್ಸಸೌಮಿತ್ರಿಶ್ಶಂಖಮಾಪೂರಯದ್ರಣೇ | ಸಿಂಹನಾದಂತತಃಕೃತ್ವಾಜ್ಯಾಶಬ್ದಮಕರೋದ್ವಿ
ಭುಃ || ೫೨ || ತೇನನಾದೇನಸಂಹೃಷ್ಟಾಃವಾನರಾಶ್ಚಗತಶ್ರಮಾಃ|ವಾನರೇಂದ್ರೈಶ್ಚಸಹಿತಸ್ತುವದ್ಭಿರ್ಹೃಷ್ಟಮಾನಸೈಃ||೫೩||

"ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ" ಇತಿ ಗೀತಾಯಾಮುಕ್ತಂ || ಸತ್ಯಸಂಧಃಯದಿ-ಸತ್ಯ ಸಂಕಲ್ಪನಾಗಿದ್ದರೆ,(ಸತ್ಯಸಂಕಲ್ಪಈಶ್ವರಇತಿಅಸ್ಮಿನ್ ಗ್ರಂಥೇಉಕ್ತಃ) ರಾಮಃಯದಿ-ಪರಬ್ರಹ್ಮನೇ ಆಗಿದ್ದರೆ, ರಮಂತೇಯೋಗಿನೋಽನಂತೇನಿತ್ಯಾನಂದೇಚಿದಾತ್ಮನಿ ಇತಿ ರಾಮಪದೇನಾಸೌಪರಂಬ್ರಹ್ಮಾಭಿಧೀಯತ ಇತಿತಾಪಿನೀಯ್ಯೇಉಕ್ತಂ) ತ್ರಿಲೋಕ್ಯಾಂ-ಮೂರು ಲೋಕಗಳಲ್ಲಿ, ಅಪ್ರತಿದ್ವಂದ್ವಃ-ಅಸದೃಶನಾಗಿ, ತದಾ-ಆಗ, ಏನಂರಾವಣಿಂ-ಈ ಇಂದ್ರಜಿತುವನ್ನು, ಜಹಿ-ಜಯಿಸು || ೪೬ || ಇತ್ಯುಕ್ತ್ವಾ-ಈ ಮಾತನ್ನು ಹೇಳಿ, ಅಜಿಹ್ಮಗಂ-ಋಜುವಾದ, ತಂ-ಆ, ಬಾಣಂ-ಐಂದ್ರಬಾಣವನ್ನು, ಆಕರ್ಣಾತ್-ಕಿವಿವರಿಗೂ, ವಿಕೃಷ್ಯ-ಎಳೆದು, ಸಮರೇ-ಯುದ್ಧದಲ್ಲಿ, ವೀರಃ-ಶೂರನಾದ ಲಕ್ಷ್ಮಣನು, ಇಂದ್ರಜಿತಂ-ಇಂದ್ರಜಿತುವನ್ನು ಕುರಿತು, ಸಸರ್ಜ-ಬಿಟ್ಟನು ||೪೭|| ಸಃ-ಆ, ಶರಃ-ಬಾಣವು, ಸಶಿರಸ್ತ್ರಾಣಂ-ಕಿರೀಟದಿಂದ ಯುಕ್ತವಾದ, ಶ್ರೀಮತ್-ಕಾಂತಿಯುಳ್ಳ, ಜ್ವಲಿತಕುಂಡಲಂ-ಪ್ರಕಾಶಿಸುತ್ತಿರುವಕಡಕುಗಳುಳ್ಳ, (ತಲೆಯನ್ನು)ಇಂದ್ರಜಿತಃ-ಇಂದ್ರಜಿತುವಿನ, ಕಾಯಾತ್-ದೇಹದಿಂದ, ಪ್ರಮಥ್ಯ-ಕತ್ತರಿಸಿ, ಭೂತಲೇ-ನೆಲದಲ್ಲಿ, ಪಾತಯಾಮಾಸ-ಕೆಡವಿತು|| ೪೮ || ತತಃ-ಆ ಬಳಿಕ, ದೇವಾಃ-ದೇವತೆಗಳು, ಪ್ರಮುದಿತಾಃ-ಸಂತೋಷಯುಕ್ತರಾಗಿ, ರಘೂತ್ತಮಂ-ಲಕ್ಷ್ಮಣನನ್ನು, ಕೀರ್ತಯಂತಃ-ಹೇಳುತ್ತಿರುವವರಾಗಿ, ಮುಹುರ್ಮುಹುಃ-ಬಾರಿಬಾರಿಗೂ, ಸ್ತುವಂತಶ್ಚ-ಸ್ತೋತ್ರಮಾಡುತ್ತಿರುವವರಾಗಿ, ಪುಷ್ಪವರ್ಷಾಣಿ-ಹವ್ವಿನಮಳೆಯನ್ನು, ವವರ್ಷುಃ-ಮಳೆಯಾಗಿ ಕರದರು || ೪೯ || ಭಗವಾನ್-ಪೂಜ್ಯನಾದ, ಶಕ್ರಃ-ಇಂದ್ರನು, ದೇವೈಃ-ದೇವತೆಗಳಿಂದಲೂ, ಮಹರ್ಷಿಭಿಃ-ಮಹಾಋಷಿಗಳಿಂದಲೂ, ಕೂಡಿದವನಾಗಿ, ಜಹರ್ಷ-ಸಂತೋಷವನ್ನು ಹೊಂದಿದನು, ಆಕಾಶೇಪಿಚ-ಅಂತರಿಕ್ಷದಲ್ಲಿಯೂ, ದೇವಾನಾಂ-ದೇವತೆಗಳ, ದುಂದುಭಿಸ್ವನಃ-ಭೇರೀ ಧ್ವನಿಯು, ಶುಶ್ರುವೇ-ಕೇಳಲ್ಪಟ್ಟಿತು || ೫೦ || ಗಗನಂ-ಅಂತರಿಕ್ಷವು, ವಿಮಲಂ-ನಿರ್ಮಲವಾದಂಥಾದ್ದು, ಅಭೂತ್-ಆಯಿತು, ವಿಶ್ವಧಾರಿಣೀ-ಭೂಮಿಯು, ಸ್ಥಿರಾ-ರಾಕ್ಷಸ ಭಾರದಿಂದ ಕಂಪವಿಲ್ಲದವಳು, ಆಸೀತ್-ಆದಳು, ನಿಹತಂ-ಸಂಹೃತನಾದ, ರಾವಣಿಂ-ಇಂದ್ರಜಿತುವನ್ನು, ದೃಷ್ಟ್ವಾ-ನೋಡಿ, (ದೇವ ಸಮೂಹವು,) ಜಯಜಲ್ಪಸಮನ್ವಿತಃ-ಜಯಜಲ್ಪ-ಜಯ ಧ್ವನಿಯಿಂದ, ಸಮನ್ವಿತಃ-ಕೂಡಿರುವಂಥಾದ್ದು. (ಅಭೂತ -ಆಯಿತು) || ೫೧ || ವಿಭುಃ-ಶತ್ರುವಧಾರಣ ಸಮರ್ಥನಾದ, ಸಃ-ಆ, ಸೌಮಿತ್ರಿಃ-ಲಕ್ಷ್ಮಣನು, ಗತಶ್ರಮಃ-ಗತ-ಹೋದ, ಶ್ರಮಃ-ಆಯಾಸವುಳ್ಳವನಾಗಿ, ರಣೇ-ಯುದ್ಧ ಭೂಮಿಯಲ್ಲಿ, ಶಂಖಂ-ಶಂಖವನ್ನು, ಆಪೂರಯತ್-ಧ್ವನಿ ಮಾಡಿದನು. ತತಃ-ಆ ಬಳಿಕ

ಲಕ್ಷ್ಮಣಃಪರಿತುಷ್ಟಾತ್ಮಾದದರ್ಶಾಭ್ಯೇತ್ಯರಾಘವಂ । ಹನೂಮದ್ರಾಕ್ಷಸಾಭ್ಯಾಂಚಸಹಿತೋವಿನಯಾನ್ವಿತಃ ॥೫೪॥ ವವಂ
ದೇಭ್ರಾತರಂರಾಮಂಜ್ಯೇಷ್ಠಂನಾರಾಯಣಂವಿಭುಂ । ತ್ವತ್ಪ್ರಸಾದಾದ್ರಘುಶ್ರೇಷ್ಠಹತೋರಾವಣಿರಾಹವೇ॥೫೫॥ಶ್ರುತ್ವಾತಲ್ಲ
ಕ್ಷ್ಮಣಾದ್ವಾಕ್ಯಂತಮಾಲಿಂಗ್ಯರಘೂತ್ತಮಃ । ಮೂರ್ಧ್ನ್ಯಾಘ್ರಾಯಮುದಿತಃಸಸ್ನೇಹಮಿದಮಬ್ರವೀತ್ ॥೫೬॥ ಸಾಧು
ಲಕ್ಷ್ಮಣತುಷ್ಟೋಸ್ಮಿಕರ್ಮತೇದುಷ್ಕರಂಕೃತಂ । ಮೇಘನಾದಸ್ಯನಿಧನೇಜಿತಂಸರ್ವಮರಿಂದಮ॥೫೭॥ ಅಹೋರಾತ್ರೈಸ್ತ್ರಿ
ಭಿರ್ವೀರಃಕಥಂಚಿದ್ವಿನಿಪಾತಿತಃ। ನಿಸ್ಸಪತ್ನಃಕೃತೋಸ್ಮ್ಯದ್ಯನಿರ್ಯಾಸ್ಯತಿಹಿರಾವಣಃ॥೫೮॥ಪುತ್ರಶೋಕಾನ್ಮಯಾಯೋದ್ಧುಂ

ಸಿಂಹನಾದಂ-ಸಿಂಹದಂತೆ ಧ್ವನಿಯನ್ನು, ಜ್ಯಾಶಬ್ದಂ-ಬಿಲ್ಲಿನ ಹೆದೆಯ ಶಬ್ದವನ್ನು, ಅಕರೋತ್-ಮಾಡಿದನು ॥ ೫೧ ॥ ತೇನನಾದೇನ-ಆ ಧ್ವನಿಯಿಂದ, ಸಂಹೃಷ್ಟಾಃ-ಸಂತುಷ್ಟರಾದ, ವಾನರಾಃ-ಕಪಿಗಳು, ಗತಶ್ರಮಾಃ-ಆಯಾಸವಿಲ್ಲದವರಾದರು, ಹೃಷ್ಟಾಃ-ಸಂತುಷ್ಟವಾದ ಮಾನಸೈಃ-ಮನಸ್ಸುಳ್ಳವರಾದ, ಸ್ತುವದ್ಭಿಃ-ಸ್ತೋತ್ರ ಮಾಡುತ್ತಿರುವ, ವಾನರೈಃ-ಕಪಿಶ್ರೇಷ್ಠರಿಂದ, ಸಹಿತಃ-ಕೂಡಿದವನಾ॥೫೩॥ಲಕ್ಷ್ಮಣಃ-ಲಕ್ಷ್ಮಣನು, ಪರಿತುಷ್ಟಾತ್ಮಾ-ಸಂತುಷ್ಟವಾದ ಮನಸ್ಸುಳ್ಳವನಾಗಿ, ಅಭ್ಯೇತ್ಯ-ಆ ಯುದ್ಧ ಭೂಮಿಯಿಂದ ಬಂದು, ರಾಘವಂ-ರಾಮಚಂದ್ರನನ್ನು, ದದರ್ಶ-ನೋಡಿದನು, ಹನೂಮದ್ರಾಕ್ಷಸಾಭ್ಯಾಂಚ-ಆಂಜನೇಯವಿಭೀಷಣರಿಂದ, ಸಹಿತಃ-ಕೂಡಿದವನಾಗಿ, ವಿನಯಾನ್ವಿತಃ-ವಿನಯ-ವಿಧೇಯತೆಯಿಂದ, ಅನ್ವಿತಃ-ಕೂಡಿದವನಾಗಿ ॥ ೫೪ ॥ ಜ್ಯೇಷ್ಠಂ-ದೊಡ್ಡ-ಭ್ರಾತರಂ-ಅಣ್ಣನಾದ, ವಿಭುಂ-ತತ್ತ್ವವಧಾರಣಸಮರ್ಥನಾದ, ನಾರಾಯಣಂ-ನಾರಾಯಣಮೂರ್ತಿಯಾದ, ರಾಮಂ-ರಾಮಚಂದ್ರನನ್ನು ಕುರಿತು, ವವಂದೇ-ನಮಸ್ಕರಿಸಿದನು, ರಘುಶ್ರೇಷ್ಠ-ರಾಮಚಂದ್ರನೇ, ತ್ವತ್ಪ್ರಸಾದಾತ್-ನಿನ್ನನುಗ್ರಹದಿಂದ, ರಾವಣಿಃ-ಇಂದ್ರಜಿತುವು, ಆಹವೇ-ಯುದ್ಧದಲ್ಲಿ, ಹತಃ-ಕೊಲ್ಲಲ್ಪಟ್ಟನು ॥ ೫೫ ॥ ರಘೂತ್ತಮಃ-ರಾಮಚಂದ್ರನು, ಭಕ್ತ್ಯಾ-ಭಕ್ತಿಯಿಂದ, ಲಕ್ಷ್ಮಣಾತ್-ಲಕ್ಷ್ಮಣನ ದೆಸೆಯಿಂದ, ತತ್-ಇಂದ್ರಜಿತುವಿನ ಸಹ್ಹಾರವನ್ನು, ಶ್ರುತ್ವಾ-ಕೇಳಿ, ತಂ-ಲಕ್ಷ್ಮಣನನ್ನು, ಆಲಿಂಗ್ಯ-ಅಪ್ಪಿಕೊಂಡು, ಮೂರ್ಧ್ನಿ-ತಲೆಯಲ್ಲಿ, ಆಘ್ರಾಯ-ಮೂಸಿ ನೋಡಿ. ಮುದಿತಃ-ಸಂತೋಷ ಯುಕ್ತನಾಗಿ, ಸಸ್ನೇಹಂ-ಪ್ರೀತಿಯಿಂದ ಕೂಡಿರುವ, ಇದಂ-ಈ ಮಾತನ್ನು, ಅಬ್ರವೀತ್-ಹೇಳಿದನು ॥ ೫೬ ॥ ಲಕ್ಷ್ಮಣ-ಲಕ್ಷ್ಮಣನೇ, ತೇ-ನಿನ್ನಿಂದ, ದುಷ್ಕರಂ-ಅಸಾಧ್ಯವಾದ, ಸಾಧು-ಯೋಗ್ಯವಾದ, ಕರ್ಮ-ಕೆಲಸವು, ಕೃತಂ-ಮಾಡಲ್ಪಟ್ಟಿತು, ಅರಿಂದಮ-ಶತ್ರುಸಹ್ಹಾರಕನಾದ ಲಕ್ಷ್ಮಣನೇ, ಮೇಘನಾದಸ್ಯ-ಇಂದ್ರಜಿತುವಿನ, ನಿಧನೇ-ಸಹ್ಹಾರದಿಂದ, ಸರ್ವಂ-ಎಲ್ಲ, ಜಿತಂ-ಜಯಿಸಲ್ಪಟ್ಟಿತ ॥ ೫೭ ॥ ತ್ರಿಭಿಃ-ಮೂರು, ಅಹೋರಾತ್ರೈಃ-ರಾತ್ರಿ ಹಗಲುಗಳಿಂದ, ವೀರಃ-ಶೂರನಾದ, (ಇಂದ್ರಜಿತುವು)ಕಥಂಚಿತ್-ಅತ್ಯಂತ ಪ್ರಯಾಸದಿಂದ, ವಿನಿಪಾತಿತಃ-ಸಂಹೃತನಾದನು, ಅದ್ಯ-ಈಗ, ಅಹಂ-ನಾನು, ನಿಸ್ಸಪತ್ನಃ-ಶತ್ರುವಿಲ್ಲದಂತೆ, ಕೃತಃ-ಮಾಡಲ್ಪಟ್ಟವನು, ಅಸ್ಮಿ-ಆಗಿದ್ದೇನೆ, ರಾವಣಃ-ರಾವಣನು, ಪುತ್ರಶೋಕಾತ್-ಮಗನು ಹೋದದುಃಖದಿಂದ, ಮಯಾ-ನನ್ನ ಸಂಗಡ, ಯೋದ್ಧುಂ-ಯುದ್ಧ ಮಾಡುವದಕ್ಕೆ, ನಿರ್ಯಾಸ್ಯತಿಹಿ-ಬರುತ್ತಲಿದ್ದಾನೆ ॥ ೫೮ ॥ ತಂ-ಆ, ರಾವಣಂ-ರಾವಣನನ್ನು, ಹನಿಷ್ಯಾಮಿ-ಕೊಲ್ಲುತ್ತೇನೆ, ಮಹಾಬಲಂ-ಅಧಿಕ ಬ

ತಂಹನಿಷ್ಯ್ಯಾವಿರಾವಣಂ । ಮೇಘನಾದಂಹತಂಶ್ರುತ್ವಾಲಕ್ಷ್ಮಣೇನಮಹಾಬಲಂ॥೫೯॥ ರಾವಣಃಪತಿತೋಭೂಮೌಮೂರ್ಛಿತಃಪುನರುತ್ಥಿತಃ । ವಿಲಲಾಪಾತಿದೀನಾತ್ಮಾ ಪುತ್ರಶೋಕೇನರಾವಣಃ ॥ ೬೦ ॥ ಪುತ್ರಸ್ಯಗುಣಕರ್ಮಾಣಿ ಸಂಸ್ಮರನ್ಪರ್ಯದೇವಯತ್ । ಅದ್ಯದೇವಗಣಾಸ್ಸರ್ವೇಲೋಕಪಾಲಾಮಹರ್ಷಯಃ ॥ ೬೧ ॥ ಹತಮಿಂದ್ರಜಿತಂಜ್ಞಾತ್ವಾ ಸುಖಂಸ್ವಪ್ಸ್ಯಂತಿನಿರ್ಭಯಾಃ । ಇತ್ಯಾದಿಬಹುಶಃಪುತ್ರ ಲಾಲಸೋವಿಲಲಾಪಹ ॥ ೬೨ ॥ ತತಃಪರಮಸಂಕ್ರುದ್ಧೋರಾವಣೋರಾಕ್ಷಸಾಧಿಪಃ । ಉವಾಚರಾಕ್ಷಸಾನ್ಸರ್ವಾನ್ವಿನಾಶಯಿಷುರಾಹವೇ ॥೬೩॥ ಸಪುತ್ರವಧಸಂತಪ್ತಃಶೂರಃಕ್ರೋಧವಶಂಗತಃ।ಸಂವೀಕ್ಷ್ಯರಾವಣೋಬುದ್ಧ್ಯಾಹಂತುಂಸೀತಾಂಪ್ರದುದ್ರುವೇ ॥ ೬೪ ॥ ಖಡ್ಗಪಾಣಿಮಥಾಯಾಂತಂಕ್ರುದ್ಧಂದೃಷ್ಟ್ವಾದಶಾನನಂ । ರಾಕ್ಷಸೀ

ಉಳ್ಳವನಾದ, ಮೇಘನಾದಂ-ಇಂದ್ರಜಿತುವನ್ನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಹತಂ-ಸಂಹರಿಸಲ್ಪಟ್ಟವನನ್ನಾಗಿ, ಶ್ರುತ್ವಾ-ಕೇಳಿ ॥೫೯॥ರಾವಣಃ-ರಾವಣನು, ಭೂಮೌ-ನೆಲದಲ್ಲಿ, ಮೂರ್ಛಿತಃ-ಪ್ರಜ್ಞೆಯಿಲ್ಲದವನಾಗಿ, ಪತಿತಃ-ಬಿದ್ದನು, ಪುನಃ-ತಿರಿಗಿ, ಉತ್ಥಿತಃ-ಮೂರ್ಛೆಯನ್ನು ತಿಳಿದೆದ್ದು, ಅತಿದೀನಾತ್ಮಾ-ದೈನ್ಯವನ್ನು ಹೊಂದಿದ ಮನಸ್ಸುಳ್ಳವನಾದ, ರಾವಣಃ-ರಾವಣನು, ಪುತ್ರಶೋಕೇನ-ಮಗನು ಸತ್ತ ದುಃಖದಿಂದ, ವಿಲಲಾಪ-ಪ್ರಲಾಪವನ್ನು ಮಾಡಿದನು ॥ ೬೦॥ ಪುತ್ರಸ್ಯ-ಮಗನಾದ ಮೇಘನಾದನ, ಗುಣಕರ್ಮಾಣಿ-ಗುಣ ಶೌರ್ಯ ಸಾಹಸಾದಿ ಗುಣಗಳನ್ನು, ಕರ್ಮಾಣಿ-ಇಂದ್ರನೇ ಮೊದಲಾದ ದೇವತೆಗಳನ್ನು ಜಯಿಸಿದಂಥಾ ಕೆಲಸಗಳನ್ನು, ಸಂಸ್ಮರನ್-ನೆನೆಸಿಕೊಳ್ಳುತ್ತಿರುವವನಾಗಿ, ಪರ್ಯದೇವಯತ-ಪೇಚಾಡಿದನು, ಅದ್ಯ-ಈಗ, ದೇವಗಣಾಃ-ದೇವತೆಗಳ ಸಮೂಹಗಳು, ಸರ್ವೇ-ಯೆಲ್ಲಾ, ಲೋಕಪಾಲಾಃ-ಇಂದ್ರಾದಿಗಳು, ಮಹರ್ಷಯಃ-ಮಹಾ ಋಷಿಗಳು ॥೬೧॥ ಇಂದ್ರಜಿತಂ-ಇಂದ್ರಜಿತುವನ್ನು, ಹತಂ-ಕೊಲ್ಲಲ್ಪಟ್ಟವನನ್ನಾಗಿ, ಜ್ಞಾತ್ವಾ-ತಿಳಿದು, ನಿರ್ಭಯಾಃ-ಅಂಜಿಕೆಯಿಲ್ಲದವರಾಗಿ, ಸುಖಂ-ಕ್ಷೇಮವಾಗಿ, ಸ್ವಪ್ಸ್ಯಂತಿ-ನಿದ್ರೆ ಮಾಡುತ್ತಾರೆ, ಇತ್ಯಾದಿ-ಇದೇ ಮೊದಲಾಗಿ, ಬಹುಶಃ-ಅನೇಕ ಬಗೆಯಾಗಿ, ಪುತ್ರಲಾಲಸಃ-ಪುತ್ರ ವಾತ್ಸಲ್ಯವುಳ್ಳವನಾಗಿ, ವಿಲಲಾಪಹ-ಗೋಳಾಡಿದನು ॥ ೬೨ ॥ ತತಃ-ಆ ಬಳಿಕ, ರಾಕ್ಷಸಾಧಿಪಃ-ರಾಕ್ಷಸರಿಗೆ ಘೊರೆಯಾದ, ರಾವಣಃ-ರಾವಣನು, ಪರಮ-ಅತ್ಯಂತವಾಗಿ, ಸಂಕ್ರುದ್ಧಃ-ಕೋಪವುಳ್ಳವನಾಗಿ, ಆಹವೇ-ಯುದ್ಧದಲ್ಲಿ, ಸರ್ವಾನ್-ಸಮಸ್ತರಾದ, ರಾಕ್ಷಸರನ್ನು, ವಿನಾಶಯಿಷುಃ-ನಾಶ ಮಾಡಿಸುವ ಅಪೇಕ್ಷೆಯುಳ್ಳವನಾಗಿ, ಉವಾಚ-ಹೇಳಿದನು ॥ ೬೩ ॥ ಸಃ-ಆ, ಪುತ್ರವಧಸಂತಪ್ತಃ-ಪುತ್ರ-ಮಗನ, ವಧ-ಸಾವಿನಿಂದ, ಸಂತಪ್ತಃ-ವ್ಯಥೆ ಪಡುತ್ತಿರುವ, ಶೂರಃ-ಪರಾಕ್ರಮವುಳ್ಳವನಾದ, ಕ್ರೋಧವಶಂಗತಃ-ಕೋಪ ಪರವಶನಾದ, ರಾವಣಃ-ರಾವಣನು, ಬುದ್ಧ್ಯಾ-ಬುದ್ಧಿಯಿಂದ, ಸಂವೀಕ್ಷ್ಯ-ನೋಡಿ, ಸೀತಾಂ-ಸೀತೆಯನ್ನು, ಹಂತುಂ-ಕೊಲ್ಲುವದಕ್ಕೆ, ಪ್ರದುದ್ರುವೇ-ವೇಗದಿಂದ ಹೊರಟನು ॥ ೬೪ ॥ ಅಥ-ಅನಂತರದಲ್ಲಿ, ಖಡ್ಗಪಾಣಿಂ-ಕತ್ತಿಯನ್ನು ಹಿಡಿದಿರುವವನಾದ, ಆಯಾಂತಂ-ಬರುತ್ತಿರುವ, ಕ್ರುದ್ಧಂ-ಕೋಪಿಷ್ಠನಾದ, ದಶಾನನಂ-ರಾವಣನನ್ನು ದೃಷ್ಟ್ವಾ-ನೋಡಿ, ರಾಕ್ಷಸೀಮಧ್ಯಗಾ-ರಾಕ್ಷಸೀ-ರಾಕ್ಷಸಸ್ತ್ರೀಯರ, ಮಧ್ಯಗಾ-ನಡುವೆ ಇರುತ್ತಿರುವ, ಸೀತಾ-ಸೀತೆಯು, ಭಯ-ಅಂಜಿಕೆಯಿಂದ, ಶೋಕ-ವ್ಯಸನದಿಂದ, ಆಕು

ಮಧ್ಯಗಾಸೀತಾ ಭಯಶೋಕಾಕುಲಾಭವತ್ ॥೬೫॥ ಏತಸ್ಮಿನ್ನಂತರೇತಸ್ಯಸಚಿವೋಬುದ್ಧಿಮಾನ್ಶುಚಿಃ । ಸುಪಾರ್ಶ್ವೋನಾಮ ಮೇಧಾವೀ ರಾವಣಂವಾಕ್ಯಮಬ್ರವೀತ್ ॥ ೬೬ ॥ ನನುನಾಮದಶಗ್ರೀವಸಾಕ್ಷಾದ್ವೈಶ್ರವಣಾನುಜಃ । ವೇದವಿದ್ಯಾವ್ರತಸ್ನಾತಃಸ್ವಕರ್ಮಪರಿನಿಷ್ಠಿತಃ ॥ ೬೭ ॥ ಅನೇಕಗುಣಸಂಪನ್ನಃಕಥಂಸ್ತ್ರೀವಧಮಿಚ್ಛಸಿ । ಅಸ್ಮಾಭಿಸ್ಸಹಿತೋಯುದ್ಧೇಹತ್ವಾರಾಮಂಚಲಕ್ಷ್ಮಣಂ । ಪ್ರಾಪ್ಸ್ಯಸೇಜಾನಕೀಂಶೀಘ್ರಮಿತ್ಯುಕ್ತಸ್ಸನ್ಯವರ್ತತ ॥ ೬೮ ॥ ತತೋದುರಾತ್ಮಾಸುಹೃದಾನಿವೇದಿತಂ ವಚಸುಧರ್ಮ್ಯಂಪ್ರತಿಗೃಹ್ಯರಾವಣಃ । ಗೃಹಂಜಗಾಮಾಶುಶುಚಾವಿಮೂಢಧೀಃಪುನಸ್ಸಭಾಂಚಪ್ರಯಯೌಸುಹೃದ್ವೃತಃ ॥ ... ... ... ... ॥೬೯ ॥

—** ಇತಿಶ್ರೀಮದಧ್ಯಾತ್ಮರಾಮಾಯಣೇ—ಉಮಾಮಹೇಶ್ವರಸಂವಾದೇಯುದ್ಧಕಾಂಡೇನವಮಸ್ಸರ್ಗಃ**—

ಲಾ-ವ್ಯಾಕುಲಳಾದವಳು, ಅಭವತ್-ಆದಳು॥ ೬೫ ॥ ಏತಸ್ಮಿನ್ನಂತರೇ-ಈನಡುವೆ, ತಸ್ಯ-ಆ ರಾವಣನಿಗೆ, ಸಚಿವಃ-ಮಂತ್ರಿಯಾದ, ಬುದ್ಧಿಮಾನ್-ಬುದ್ಧಿಶಾಲಿಯಾದ, ಶುಚಿಃ-ಪರಿಶುದ್ಧನಾದ, ಮೇಧಾವೀ-ಆಲೋಚನೆಯುಳ್ಳವನಾದ, ಸುಪಾರ್ಶ್ವಃ-ಸುಪಾರ್ಶ್ವನೆಂಬ ರಾಕ್ಷಸನು, ರಾವಣಂ-ರಾವಣನನ್ನು ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು ॥ ೬೬ ॥ ನನು-ಎಲೈ, ದಶಗ್ರೀವನಾಮ-ಹತ್ತು ತಲೆಗಳುಳ್ಳ ರಾವಣನೆಂಬ ಹೆಸರುಳ್ಳವನೇ, ಸಾಕ್ಷಾತ್-ಪ್ರತ್ಯಕ್ಷವಾಗಿ, ವೈಶ್ರವಣಾನುಜಃ-ನೀನು ಕುಬೇರನಿಗೆ ತಮ್ಮನಾಗಿ, ವೇದವಿದ್ಯಾವ್ರತಸ್ನಾತಃ-ವೇದವಿದ್ಯಾ ವ್ರತಗಳಿಂದ ಅಭಿಷಿಕ್ತನಾಗಿ, ಸ್ವಕರ್ಮಪರಿನಿಷ್ಠಿತಃ-ಬ್ರಾಹ್ಮಣ ಕರ್ಮದಲ್ಲಿ, ಆಸಕ್ತಿಯುಳ್ಳವನಾಗಿ ॥ ೬೭ ॥ (ಇದಲ್ಲದೆ) ಅನೇಕ ಗುಣ ಸಂಪನ್ನಃ-ಬಹಳವಾದ ಸದ್ಗುಣಗಳುಳ್ಳವನಾಗಿ, ಸ್ತ್ರೀವಧಂ-ಹೆಂಗಸನ್ನು ಕೊಲ್ಲುವದನ್ನು ಕುರಿತು, ಕಥಂ-ಹ್ಯಾಗೆ, ಇಚ್ಛಸಿ-ಅಪೇಕ್ಷಿಸುತ್ತೀ, ಯುದ್ಧೇ-ಜಗಳದಲ್ಲಿ, ಅಸ್ಮಾಭಿಃ-ನಮ್ಮಗಳಿಂದ, ಸಹಿತಃ-ಕೂಡಿದವನಾಗಿ, ಸಲಕ್ಷ್ಮಣಂ-ಲಕ್ಷ್ಮಣ ಸಮೇತನಾದ, ರಾಮಂ-ರಾಮಚಂದ್ರನನ್ನು, ಹತ್ವಾ-ಕೊಂದು, ಜಾನಕೀಂ-ಸೀತೆಯನ್ನು, ಶೀಘ್ರಂ-ಬೇಗನೆ, ಪ್ರಾಪ್ಸ್ಯಸೇ-ಹೊಂದುತ್ತಲಿದ್ದೀ, ಇತ್ಯುಕ್ತಃ-ಹೀಗೆ ಹೇಳಲ್ಪಟ್ಟವನಾಗಿ, (ರಾವಣನು) ಸನ್ಯವರ್ತತ-ಹಿಂದಕ್ಕೆ ತಿರಿಗಿ ಬಂದನು ॥ ೬೮ ॥ ತತಃ-ಆ ಬಳಿಕ, ವಿಮೂಢಧೀಃ-ಮಂದ ಬುದ್ಧಿಯುಳ್ಳವನಾದ, ದುರಾತ್ಮಾ-ದುಷ್ಟ ಚಿತ್ತನಾದ, ರಾವಣಃ-ರಾವಣನು, ಸುಹೃದಾ-ಮಿತ್ರನಾದ ಸುಪಾರ್ಶ್ವನಿಂದ, ನಿವೇದಿತಂ-ತಿಳಿಸಲ್ಪಟ್ಟ, ಸುಧರ್ಮ್ಯಂ-ಧರ್ಮವಾಗಿರುವ, ವಚಃ-ಮಾತನ್ನು, ಪ್ರತಿಗೃಹ್ಯ-ತೆಗೆದುಕೊಂಡು, ಆಶು-ಜಾಗ್ರತೆಯಾಗಿ, ಗೃಹಂ-ಮನೆಯನ್ನು ಕುರಿತು, ಜಗಾಮ-ಹೊರಟು ಹೋದನು, ಪುನಃ-ತಿರಿಗಿ, ಸುಹೃದ್ವೃತಃ-ಮಿತ್ರರಿಂದ ಕೂಡಿದವನಾಗಿ, ಸಭಾಂಚ-ಸಭೆಯನ್ನು ಕುರಿತು, ಪ್ರಯಯೌ-ಹೊರಟು ಹೋದನು ... ... ... ... ... ... ... ॥೬೯॥

—... * ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದಲ್ಲಿ ಯುದ್ಧಕಾಂಡದೊಳು ಒಂಭತ್ತನೆಯ ಸರ್ಗವು. *...—

...॥ ೧ ॥ ಸಭಾಮಧ್ಯೇರಾಕ್ಷಸೈಸ್ಸಹಮಂತ್ರಿಭಿಃ । ನಿರ್ಯಯೌಯೆವಶಿಷ್ಟಾಸ್ತೈ ರಾಕ್ಷ ಸೈಸ್ಸಹರಾಘವಂ ॥ ೨ ॥ ಶಲಭಃಶಲಭೈರ್ಯುಕ್ತಃ ಪ್ರಜ್ವಲಂತಮಿವಾನಲಂ । ತತೋರಾಮೇಣನಿಹತಸ್ತೀಕ್ಷ್ಣಬಾಣೇನ ವ ಕ್ಷಸಿ । ವ್ಯಥಿತಸ್ತ್ವರಿತಂಲಂಕಾ ಪ್ರವಿವೇಶದಶಾನನಃ ॥ ೩ ॥ ದೃಷ್ಟ್ವಾರಾಮಸ್ಯಬಹುಶಃಪೌರುಷಂಚಾಪ್ಯಮಾನುಷಂ । ರಾವಣೋಮಾರುತೇಶ್ಚೈವಶೀಘ್ರಂಶುಕ್ರಾಂತಿಕಂಯಯೌ॥ ೪ ॥ ನಮಸ್ಕೃತ್ಯದಶಗ್ರೀವಃಶುಕ್ರಂಪ್ರಾಂಜಲಿರಬ್ರವೀತ್। ಭಗವನ್ ರಾಘವೇಣೈವಲಂಕಾರಾಕ್ಷಸಯೂಥಪೈಃ ॥ ೫ ॥ ವಿನಾಶಿತಾಮಹಾದೈತ್ಯಾಃನಿಹತಾಃಪುತ್ರಬಾಂಧವಾಃ । ಕಥಂ ಮೇದುಃಖಸಂದೋಹ ಸ್ತ್ವಯಿತಿಷ್ಠತಿಸದ್ಗುರೌ ॥ ೬ ॥ ಇತಿವಿಜ್ಞಾಪಿತೋದೈತ್ಯ ಗುರುಪ್ರಾಹದಶಾನನಂ । ಹೋಮಂಕು

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ ॥ ೧ ॥ ಸಃ-ಆ ರಾವಣನು, ಸಭಾಮಧ್ಯೇ-ಸಭೆಯ ನಡುವೆ, ಮಂತ್ರಿಭಿಃ-ಮಂತ್ರಿಗಳಾದ, ರಾಕ್ಷಸೈಸ್ಸಹ-ರಾಕ್ಷಸರ ಸಂಗಡ, ನಿಶ್ಚಾರ್ಯ-ಆಲೋಚಿಸಿ, ಯೇ-ಯಾವ ರಾಕ್ಷಸರು, ಅವಶಿಷ್ಟಾಃ-ಉಳಿದಿದ್ದರೋ, ತೈಃ-ಆ, ರಾಕ್ಷಸೈಸ್ಸಹ-ರಾಕ್ಷಸರ ಸಂಗಡ, ರಾಘವಂ-ರಾಮಚಂದ್ರನನ್ನು ಕುರಿತು, (ಯುದ್ಧಕ್ಕೋಸ್ಕರವಾಗಿ,) ನಿರ್ಯಯೌ-ಹೊರಟು ಹೋದನು ॥ ೨ ॥ ಶಲಭೈಃ-ಪತಂಗದ ಹುಳುಗಳಿಂದ, ಯುಕ್ತಃ-ಕೂಡಿರುವ, ಶಲಭಃ-ಮುಖ್ಯವಾದ ಪತಂಗದ ಹುಳುವು, ಪ್ರಜ್ವಲಂತಂ-ಉರಿಯುತ್ತಿರುವ, ಅನಲಮಿವ-ಬೆಂಕಿಯನ್ನು ಕುರಿತು, (ಬರುವ ಹಾಗೆ, ರಾವಣನು ಯುದ್ಧಕ್ಕೆ ಬಂದವನಾದನು,) ತತಃ-ಆ ಬಳಿಕ, ರಾಮೇಣ-ರಾಮಚಂದ್ರನಿಂದ, ತೀಕ್ಷ್ಣಬಾಣೇನ-ಹೊನೆಯಾದ ಬಾಣದಿಂದ, ವಕ್ಷಸಿ-ಹೃದಯದಲ್ಲಿ, ನಿಹತಃ-ವಿದ್ಧನಾಗಿ, ವ್ಯಥಿತಃ-ಬಾಧೆಯನ್ನು ಹೊಂದಿದವನಾದ, ದಶಾನನಃ-ರಾವಣನು, ತ್ವರಿತಂ-ಬೇಗನೆ, ಲಂಕಾಂ-ಲಂಕಾ ಪಟ್ಟಣವನ್ನು, ಪ್ರವಿವೇಶ-ಹೊಕ್ಕನು ॥ ೩ ॥ ರಾಮಸ್ಯ-ರಾಮಚಂದ್ರನ, ಅಮಾನುಷಂ-ಮನುಷ್ಯ ರೀತಿಯಲ್ಲದ, ಪೌರುಷಂ-ಶೌರ್ಯವನ್ನು, ಬಹುಶಃ-ಅನೇಕ ವಿಧವಾಗಿ, ದೃಷ್ಟ್ವಾ-ನೋಡಿ, ಮಾರುತೇಃ-ಆಂಜನೇಯನ, ಪೌರುಷಂ-ಸಾಮರ್ಥ್ಯವನ್ನು, ದೃಷ್ಟ್ವಾ-ನೋಡಿ, ರಾವಣಃ-ರಾವಣನು, ಶೀಘ್ರಂ-ಬೇಗನೆ, ಶುಕ್ರಾಂತಿಕಂ-ಶುಕ್ರ-ಶುಕ್ರಾಚಾರ್ಯರ, ಅಂತಿಕಂ-ಸಮೀಪವನ್ನು ಕುರಿತು, ಯಯೌ-ಹೊರಟು ಹೋದನು ॥ ೪ ॥ ದಶಗ್ರೀವಃ-ರಾವಣನು, ಶುಕ್ರಂ-ಶುಕ್ರನನ್ನು ಕುರಿತು, ನಮಸ್ಕೃತ್ಯ-ವಂದಿಸಿ, ಪ್ರಾಂಜಲಿಃ-ಕೈಮುಗಿದುಕೊಂಡವನಾಗಿ, ಅಬ್ರವೀತ್-ಹೇಳಿದನು, ಭಗವನ್-ಪೂಜ್ಯನಾದ ಶುಕ್ರನೇ, ರಾಘವೇಣೈವ-ರಾಮಚಂದ್ರನಿಂದಲೇ, ರಾಕ್ಷಸಯೂಥಪೈಃ-ರಾಕ್ಷಸ ಸೇನಾ ನಾಯಕರಿಂದ, (ಪೂರ್ಣವಾ-ತುಂಬಿದ್ದ,) ಲಂಕಾ-ಲಂಕಾ ಪಟ್ಟಣವು ॥ ೫ ॥ ವಿನಾಶಿತಾ-ನಾಶ ಮಾಡಲ್ಪಟ್ಟಿತು, ಮಹಾದೈತ್ಯಾಃ-ಪ್ರಧಾನರಾದ ದೊಡ್ಡ ರಕ್ಕಸರು, ಪುತ್ರಾಃ-ಮಕ್ಕಳು, ಬಾಂಧವಾಃ-ಬಂಧುಗಳು, ನಿಹತಾಃ-ಕೊಲ್ಲಲ್ಪಟ್ಟರು, ಸದ್ಗುರೌ-ಯೋಗ್ಯವಾದ ನಮ್ಮ ಗುರುವಾದ, ತ್ವಯಿ-ನೀನು, ತಿಷ್ಠತಿ-ಇರುತ್ತಿರಲು, ಮೇ-ನನಗೆ, ಕಥಂ-ಹ್ಯಾಗೆ, ದುಃಖಸಂದೋಹಃ-ದುಃಖ ಸಮೂಹವು, (ಉಂಟಾಗಿದೆ,) ॥ ೬ ॥ ಇತಿ-ಹೀಗೆ, ವಿಜ್ಞಾಪಿತಃ-ಹೇಳಲ್ಪಟ್ಟವನಾದ, ದೈತ್ಯಗುರುಃ-ರಾಕ್ಷಸರಿಗೆ ಗುರುವಾದ (ಶುಕ್ರನು,) ದಶಾನನಂ-ರಾವಣನನ್ನು ಕುರಿತು, ಪ್ರಾಹ-ಹೇಳಿದನು,

ರುಪ)ಯತ್ನೇನ ರಹಸಿತ್ವಂದಶಾನನ ॥ ೭ ॥ ಯದಿವಿಘ್ನೋನಚೇದ್ಧೋಮೋ ತರ್ಹಿಹೋಮಾನಲೋತ್ಥಿತಃ । ಮಹಾನ)ಥಶ್ಚ ವಾಹಾಶ್ಚ ಚಾಪತೂಣೀರಸಾಯಕಾಃ । ಸಂಭವಿಷ್ಯಂತಿತೈರ್ಯುಕ್ತಸ್ತ್ವಮಜೇಯೋಭವಿಷ್ಯಸಿ ॥೮॥ ಗೃಹಾಣಮಂತಾ)ನ್ಮದ್ದತ್ತಾನ್ಗಚ್ಛಹೋಮಂಕುರುದ್ರುತಂ । ಇತ್ಯುಕ್ತಸ್ತ್ವರಿತಂಗತ್ವಾ ರಾವಣೋರಾಕ್ಷಸಾಧಿಪಃ ॥ ೯ ॥ ಗುಹಾಂಪಾತಾಳಸದೃಶೀಂಮಂದಿರೇಸ್ವೇಚಕಾರಹ । ಲಂಕಾದ್ವಾರಕವಾಟಾದಿಬಧ್ವಾಸರ್ವತ)ಯತ್ನತಃ ॥ ೧೦ ॥ ಹೋಮದ)ವ್ಯಾಣಿಸಂಪಾದ್ಯಯಾನ್ಯುಕ್ತಾನ್ಯಾಭಿಚಾರಿಕೇ । ಗುಂಹಾಂಪ)ವಿಶ್ಯಚೈಕಾಂತೇ ಮೌನೀಹೋಮಂಪ)ಚಕ)ಮೇ ॥ ೧೧ ॥ ಉತ್ಥಿತಂಧೂಮಮಾಲೋಕ್ಯ ಮಹಾಂತಂರಾವಣಾನುಜಃ । ರಾಮಾಯದರ್ಶಯಾಮಾಸ ಹೋಮಧೂಮಂಭಯಾಕುಲಃ ॥೧೨॥ ಪಶ್ಯ

ಕುರು-ಮಾಡು ॥ ೭ ॥ ಹೋಮೇ-ಹೋಮದಲ್ಲಿ, ವಿಘ್ನಃ-ಅಡ್ಡಿಯು, ನಚೇತ್ಸ್ಯ ದಶಾನನ-ರಾವಣನೇ, ರಹಸಿ-ಏಕಾಂತದಲ್ಲಿ, ಪ್ರಯತ್ನೇನ-ಪ್ರಯತ್ನದಿಂದ, ಹೋಮಂ-ಹೋಮವನ್ನು, ದಿ-ಆಗದೇ ಇದ್ದರೆ, ತರ್ಹಿ-ಆ ಪ್ರಕಾರವಾದರೆ, ಹೋಮಾನಲೋತ್ಥಿತಃ-ಹೋಮಮಾಡಿದ ಯಜ್ಞೇಶ್ವರನಿಂದ ಎದ್ದು ಬರುವ, ಮಹಾನ್-ದೊಡ್ಡ, ರಥಶ್ಚ-ತೇರೂ, ವಾಹಾಃ-ಅಶ್ವಗಳೂ, ಚಾಪತೂಣೀರಸಾಯಕಾಃ-ಬಿಲ್ಲು ಬಾಣಗಳ ಬತ್ತಳಿಕೆಗಳು, ಸಂಭವಿಷ್ಯಂತಿ-ನಿನಗೆ ಲಭ್ಯವಾಗುವವು, ತೈಃ-ಬೆಂಕಿಯಿಂದ ಬಂದ ರಥ ಚಾಪ ತೂಣೀರ ಸಾಯಕಗಳಿಂದ, ಯುಕ್ತಃ-ಕೂಡಿದವನಾದ, ತ್ವಂ-ನೀನು, ಅಜೇಯಃ-ಪರಾಜಯವಿಲ್ಲದವನು, ಭವಿಷ್ಯಸಿ-ಆಗುತ್ತಲಿದ್ದೀ ॥ ೮ ॥ ಮದ್ದತ್ತಾನ್-ನನ್ನಿಂದ ಕೊಡಲ್ಪಟ್ಟ, ಮಂತ್ರಾನ್-ಮಂತ್ರಗಳನ್ನು, ಗೃಹಾಣ-ತೆಗದುಕೊ, ಗಚ್ಛ-ಹೋಗು, ದ್ರುತಂ-ಶೀಘ್ರವಾಗಿ, ಹೋಮಂ-ಹೋಮವನ್ನು, ಕುರು-ಮಾಡು, ಇತ್ಯುಕ್ತಃ-ಹೀಗೆ ಹೇಳಲ್ಪಟ್ಟವನಾದ, ರಾಕ್ಷಸಾಧಿಪಃ-ರಾಕ್ಷಸರಿಗೆ ಸ್ವಾಮಿಯಾದ, ರಾವಣಃ-ರಾವಣನು, ತ್ವರಿತಂ-ಬೇಗನೆ, ಗತ್ವಾ-ಲಂಕಾಪಟ್ಟಣವನ್ನು ಸೇರಿ ॥ ೯ ॥ ಸ್ವಮಂದಿರೇ-ತನ್ನ ಮನೆಯಲ್ಲಿ, ಪಾತಾಳಸದೃಶೀಂ-ಪಾತಾಳಲೋಕಕ್ಕೆ ಸಮವಾದ, ಗುಹಾಂ-ಗುಹೆಯನ್ನು, ಚಕಾರಹ-ಮಾಡಿಸಿದನು, ಲಂಕಾದ್ವಾರಕವಾಟಾನಿ-ಲಂಕಾ-ಲಂಕಾಪಟ್ಟಣದ, ದ್ವಾರ-ಬಾಗಿಲುಗಳ, ಕವಾಟಾನಿ-ಮುಚ್ಚಳಗಳನ್ನು, ಪ್ರಯತ್ನತಃ-ಯತ್ನದಿಂದ, ಸರ್ವತ್ರ-ಎಲ್ಲಾ ಕಡೆಯಲ್ಲಿಯೂ, ಬಧ್ವಾ-ಮುಚ್ಚಿ ಭದ್ರಪಡಿಸಿ ॥೧೦॥ ಆಭಿಚಾರಿಕೇ-ಮಾರಣಹೋಮಕ್ಕೆ, ಯಾನಿ-ಯಾವವಸ್ತುಗಳು, ಉಕ್ತಾನಿ-ಹೇಳಲ್ಪಟ್ಟವೆಯೋ, (ತಾನಿ-ಅಂಥಾ,) ಹೋಮದ್ರವ್ಯಾಣಿ-ಮಾರಣಹೋಮಕ್ಕೆ ಅರ್ಹವಾದ ವಸ್ತುಗಳನ್ನು, ಸಂಪಾದ್ಯ-ಸಿದ್ಧಮಾಡಿ, ಇಟ್ಟುಕೊಡು, ಏಕಾಂತೇ-ರಹಸ್ಯದಲ್ಲಿ, ಗುಹಾಂ-ಗುಹೆಯನ್ನು, ಪ್ರವಿಶ್ಯ-ಹೊಕ್ಕು, ಮೌನೀ-ಮಾತನಾಡದೆ ಇರುವವನಾಗಿ, ಹೋಮಂ-ಹೋಮವನ್ನು, ಪ್ರಚಕ್ರಮೇ-ಉಪಕ್ರಮಿಸಿದನು ॥ ೧೧ ॥ರಾವಣಾನುಜಃ-ರಾವಣನಿಗೆ ತಮ್ಮನಾದ ವಿಭೀಷಣನು, ಮಹಾಂತಂ-ಅಧಿಕವಾದ, ಉತ್ಥಿತಂ-ಆಕಾಶದವರಿಗೆ ಎದ್ದಿರುವ, ಧೂಮಂ-ಹೊಗೆಯನ್ನು, ಆಲೋಕ್ಯ-ನೋಡಿ, ಭಯಾಕುಲಃ-ಅಂಜಿಕೆಯುಳ್ಳವನಾಗಿ, ರಾಮಾಯ-ರಾಮಚಂದ್ರನಿಗೆ, ಹೋಮಧೂಮಂ-
... ದರ್ಶಯಾಮಾಸ-ತೋರಿಸಿದನು ॥ ೧೨ ॥ ರಾಮ-ರಾಮಚಂದ್ರನೇ, ದಶಗ್ರೀವಃ-ರಾವಣನು, ಹೋಮಂ-ಹೋಮವನ್ನು, ಕರ್ತುಂ-ಮಾಡು

ರಾಮವಶಗ್ರೀವೋ ಹೋಮಂಕರ್ತುಂಸಮಾರಭತ್ । ಯದಿಹೋಮಸ್ಸಮಾಪ್ತಸ್ಸ್ಯಾತ್ತದಾಜೆಯೋಭವಿಷ್ಯತಿ ॥ ೧೩ ॥ ಅ
ತೋವಿಘ್ನಾಯಹೋಮಸ್ಯಪ್ರೇಷಯಾಶುಹರೀಶ್ವರಾನ್ । ತಥೇತಿರಾಮಸ್ಸುಗ್ರೀವ ಸಂಮತೇನಾಂಗದಂಕಪಿಂ ॥ ೧೪ ॥ ಹನೂ
ಮತ್ಪ್ರಮುಖಾನ್ವೀರಾನಾದಿದೇಶಮಹಾಬಲಾನ್ । ಪ್ರಾಕಾರಂಲಂಘಯಿತ್ವಾತೇಗತ್ವಾರಾವಣಮಂದಿರಂ ॥ ೧೫ ॥ ದಶಕೋ
ಟ್ಯಃಪ್ಲವಂಗಾನಾಂ ಗತ್ವಾಮಂದಿರರಕ್ಷಕಾನ್ । ಚೂರ್ಣಯಾಮಾಸುರಶ್ವಾಂಶ್ಚ ಗಜಾಂಶ್ಚ ಸ್ಯಹನನ್ ಕ್ಷಣಾತ್ ॥೧೬॥ ತ
ತಶ್ಚ ಸರಮಾನಾಮಪ್ರಭಾತೇಹಸ್ತಸಂಜ್ಞಯಾ । ವಿಭೀಷಣಸ್ಯಭಾರ್ಯಾಸಾ ಹೋಮಸ್ಥಾನಮಸೂಚಯತ್ ॥ ೧೭ ॥ ಗು
ಹಾಪಿಧಾನಪಾಷಾಣಮಂಗದಃಪಾದಘಟ್ಟನೈಃ । ಚೂರ್ಣಯಿತ್ವಾಮಹಾಸತ್ವಃ ಪ್ರವಿವೇಶಮಹಾಗುಹಾಂ ॥ ೧೮ ॥ ದೃ

ವದಕ್ಕೆ, ಸಮಾರಭತ-ಆರಂಭಿಸಿದಾನೆ, ಪಶ್ಯ-ನೋಡು, ಹೋಮಃ-ಹೋಮವು, ಸಮಾಪ್ತಃ-ಮುಗಿದನು, ಸ್ಯಾತ್-ಆದರೆ, ತದಾ-ಆಗ, ಅಜೇಯಃ-ನಿನ್ನಿಂದ ಜಯಿಸುವದಕ್ಕೆ ಅಸಾಧ್ಯನು, ಭವಿಷ್ಯತಿ-ಆಗುತ್ತಾನೆ ॥ ೧೩ ॥ ಅತಃ-ಆದಕಾರಣದಿಂದ, ಹೋಮಸ್ಯ-ಹೋಮದ, ವಿಘ್ನಾಯ-ಅಡ್ಡಿಯಾಗುವದಕ್ಕೋಸ್ಕರವಾಗಿ, ಹರೀಶ್ವರಾನ್-ಕಪಿಗಳನ್ನು, ಆಶು-ಜಾಗ್ರತೆಯಾಗಿ, ಪ್ರೇಷಯ-ಕಳುಹಿಸುವವನಾಗು, ಅಥೇತಿ-ಹಾಗೆಯೇ ಆಗಲೆಂದು, ರಾಮಃ-ರಾಮಚಂದ್ರನು, ಸುಗ್ರೀವಸಮ್ಮತೇನ-ಸುಗ್ರೀವನ ಅನುಮತಿಯಿಂದ, ಅಂಗದಂ-ಅಂಗದನೆಂಬ ಕಪಿಯನ್ನು ॥ ೧೪ ॥ ಮಹಾಬಲಾನ್-ಅಧಿಕ ಬಲವಾದ, ವೀರಾನ್-ಶೂರರಾದ, ಹನೂಮತ್ಪ್ರಮುಖಾನ್-ಆಂಜನೇಯನೇ ಮೊದಲಾದವರನ್ನು, ಆದಿದೇಶ-ಆಜ್ಞಾಪಿಸಿದನು, ತೇ-ಆ ಕಪಿಗಳು, ಪ್ರಾಕಾರಂ-ಕೋಟೆಯ ಗೋಡೆಯನ್ನು, ಲಂಘಯಿತ್ವಾ-ದಾಟಿ, ರಾವಣಮಂದಿರಂ-ರಾವಣನ ಮನೆಯನ್ನು, ಗತ್ವಾ-ಹೊಕ್ಕು ॥ ೧೫ ॥ ಪ್ಲವಂಗಾನಾಂ-ಕಪಿಗಳ, ದಶಕೋಟ್ಯಃ-ಹತ್ತು ಕೋಟಿ ಮಂದಿಯು, ಗತ್ವಾ-ಒಳಕ್ಕೆ ಹೊಕ್ಕು, ಮಂದಿರರಕ್ಷಕಾನ್-ಮನೆಯ ಕಾವಲಿನವರನ್ನು, ಚೂರ್ಣಯಾಮಾಸುಃ-ಪುಡಿ ಪುಡಿಯಾಗಿ ಮಾಡಿದರು, ಅಶ್ವಾನ್-ಕುದುರೆಗಳನ್ನು, ಗಜಾಂಶ್ಚ-ಆನೆಗಳನ್ನು, ಕ್ಷಣಾತ್-ನಿಮಿಷದಲ್ಲಿ, ನ್ಯಹನನ್-ಕೊಂದರು ॥ ೧೬ ॥ ತತಃ-ಆ ಬಳಿಕ, ಪ್ರಭಾತೇ-ಬೆಳಿಗ್ಗೆ, ಸರಮಾನಾಮ-ಸರಮೆಯೆಂಬ ಹೆಸರುಳ್ಳ, ಸಾ-ಪ್ರಸಿದ್ಧಳಾದ, ವಿಭೀಷಣಸ್ಯ-ವಿಭೀಷಣನ, ಭಾರ್ಯಾ-ಹೆಂಡತಿಯು, ಹಸ್ತಸಂಜ್ಞಯಾ-ಕೈ ಸನ್ನೆಯಿಂದ, ಹೋಮಸ್ಥಾನಂ-ಹೋಮ ಮಾಡುವ ಸ್ಥಳವನ್ನು, ಅಸೂಚಯತ್-ತೋರಿಸಿದಳು ॥ ೧೭ ॥ ಗುಹಾಪಿಧಾನಪಾಷಾಣಂ-ಗುಹಾ-ಗುಹೆಯ ದ್ವಾರಕ್ಕೆ, ಪಿಧಾನ-ಮುಚ್ಚಲ್ಪಟ್ಟದ್ದು, ಪಾಷಾಣಂ-ಬಂಡೆಯನ್ನು, ಅಂಗದಃ-ಅಂಗದನು, ಪಾದಘಟ್ಟನೈಃ-ಕಾಲಿನ ಪೊಡತಗಳಿಂದ, ಚೂರ್ಣಯಿತ್ವಾ-ಪುಡಿಯಾಗಿ ಮಾಡಿ, ಮಹಾಸತ್ವಃ-ಅಧಿಕ ಬಲಶಾಲಿಯಾದ, (ಅಂಗದನು) ಮಹಾಗುಹಾಂ-ದೊಡ್ಡ ಗುಹೆಯನ್ನು, ಪ್ರವಿವೇಶ-ಹೊಕ್ಕನು ॥ ೧೮ ॥ ತತ್ರ-ಆ ಗುಹೆಯೊಳಗೆ, ಮೀಲಿತಾಕ್ಷಂ-ಮೀಲಿತ-ಮುಚ್ಚಲ್ಪಟ್ಟ, ಅಕ್ಷಂ-ಕಣ್ಣುಗಳುಳ್ಳ, ದೃಢಾಸನಂ-ಸ್ಥಿರವಾದ ಆಸನದಲ್ಲಿರುವವನಾದ, ದಶಾನನಂ-ರಾವಣನನ್ನು, ದೃಷ್ಟ್ವಾ-ನೋಡಿ, (ಕಪಿಗಳೆಲ್ಲರೂ ಗುಹೆಯೊಳಕ್ಕೆ ಬರುವಂತೆ ಅಂಗದನು ಅಪ್ಪಣೆಯನ್ನು ಕೊಟ್ಟನು,) ತತಃ-ಆ ಬಳಿಕ, ಅಂಗದಾಜ್ಞಯಾ-ಅಂಗದನ ಅಪ್ಪ

ಷ್ಟ್ವಾದಶಾನನಂತತ್ರ ಮೀಲಿತಾಕ್ಷಂದೃಢಾಸನಂ । ತತೋಂಗದಾಜ್ಞಯಾಸರ್ವೇವಾನರಾವಿವಿಶುದ್ರುತಂ ॥ ೧೯ ॥ತತ್ರಕೋ
ಲಾಹಲಂಚಕ್ರುಃತಾಡಯಂತಶ್ಚಸೇವಕಾನ್ । ಸಂಭಾರಾನ್ನಿಚಿಕ್ಷಿಪುಸ್ತತ್ರಹೋಮಕುಂಡೆಸಮಂತತಃ ॥ ೨೦ ॥ ಸ್ರುವಮಾ
ಚ್ಛಿದ್ಯಹಸ್ತಾಚ್ಚರಾವಣಸ್ಯಬಲಾದ್ರುಷಾ । ತಲೇನಸಂಜಘಾನಾಶು ಹನೂಮಾನ್ಪ್ಲವಗಾಗ್ರಣೀಃ ॥ ೨೧ ॥ ಘ್ನಂತಿದಂ
ತೈಶ್ಚಕಾಷ್ಠೈಶ್ಚವಾನರಾಸ್ತಮಿತಸ್ತತಃ । ನಜಹೌರಾವಣೋಧ್ಯಾನಂ ಹತೋಪಿವಿಜಿಗೀಷಯಾ । ಪ್ರವಿಶ್ಯಾಂತಃಪುರೆ
ವೇಶ್ಮನ್ಯಂಗದೋವೇಗವತ್ತರಃ ॥ ೨೨ ॥ ಸಮಾನಯತ್ಕೇಶಬಂಧೆಧೃತ್ವಾಮಂಡೋದರೀಂಶುಭಾಂ । ರಾವಣಸ್ಯೈವಪುರತೋ
ವಿಲಪಂತೀಮನಾಥವತ್ ॥ ೨೩ ॥ ವಿದದಾರಾಂಗದಸ್ತಸ್ಯಾ ಕ್ಕಂಚುಕಂರತ್ನಭೂಷಿತಂ ॥ ೨೪ ॥ ಮುಕ್ತಾವಿಮುಕ್ತಾಃಪತಿ

ಣೇಂ..ಂದ, ಸರ್ವೇ-ಸಮಸ್ತರಾದ, ವಾನರಾಃ-ಕಪಿಗಳು, ದ್ರುತಂ-ಜಾಗ್ರತೆಯಾಗಿ, ವಿವಿಶುಃ-ಗುಹೆಯೊಳಕ್ಕೆ ಹೊಕ್ಕರು ॥ ೧೯ ॥ ಸೇವಕಾನ್-ರಾವಣನ ಭೃತ್ಯರನ್ನು, ತಾಡಯಂತಃ-ಹೊಡೆಯುತ್ತಿರುವವರಾಗಿ, ತತ್ರ-ರಾವಣನು ಹೋಮ ಮಾಡುವ ಸ್ಥಳದಲ್ಲಿ, ಕೋಲಾಹಲಂ-ಕೋಲಾಹಲ ಧ್ವನಿಯನ್ನು, ಚಕ್ರುಃ-ಮಾಡಿದರು, ತತ್ರ-ಆ ಗುಹೆಯಲ್ಲಿ, ಹೋಮ ಕುಂಡೆ-ಹೋಮ ಮಾಡುವ ಕುಂಡದಲ್ಲಿ, ಸಮಂತತಃ-ಸುತ್ತಲೂ ಇರುವ, ಸಂಭಾರಾನ್-ಸಾಮಗ್ರಿಗಳನ್ನು, ಚಿಕ್ಷಿಪುಃ-ಎತ್ತಿ ಹಾಕಿದರು ॥ ೨೦ ॥ ಪ್ಲವಗ-ಕಪಿಗಳೊಳಗೆ, ಅಗ್ರಣೀಃ-ಶ್ರೇಷ್ಠನಾದ, ಹನೂಮಾನ್-ಆಂಜನೇಯನು, ರುಷಾ-ಕೋಪದಿಂದ, ರಾವಣಸ್ಯ-ರಾವಣನ, ಹಸ್ತಾತ್-ಕೈಯಿಂದ, ಬಲಾತ್-ಬಲಾತ್ಕಾರವಾಗಿ, ಸ್ರುವಂ-ಸ್ರುವವೆಂಬುವ ಹೋಮ ಮಾಡುವ ಪಾತ್ರೆಯನ್ನು, ಆಚ್ಛಿದ್ಯ-ಕಿತ್ತುಕೊಂಡು, ತೇನೈವ-ಆ ಸ್ರುವವೆಂಬ ಪಾತ್ರೆಯಿಂದಲೇ, ಆಶು-ಜಾಗ್ರತೆಯಾಗಿ, ಸಂಜಘಾನ-ಹೊಡೆದನು ॥ ೨೧ ॥ ವಾನರಾಃ-ಕಪಿಗಳು, ತಂ-ರಾವಣನನ್ನು, ಇತಸ್ತತಃ-ಇತ್ತ ಕಡೆಯಲ್ಲಿಯೂ ಅತ್ತ ಕಡೆಯಲ್ಲಿಯೂ, ದಂತೈಃ-ಆನೆಯ ಕೊಂಬುಗಳಿಂದಲೂ, ಕಾಷ್ಠೈಃ-ಕಟ್ಟಿಗೆಗಳಿಂದಲೂ, ಹಂತಿ-ಹೊಡೆಯುತ್ತಿದ್ದರು, ರಾವಣಃ-ರಾವಣನು, ವಿಜಿಗೀಷಯಾ-ಜಯಿಸಬೇಕೆಂಬ ಅಪೇಕ್ಷೆಯಿಂದ, ಹತೋಪಿ-ಹೊಡೆಯಲ್ಪಟ್ಟವನಾದಾಗ್ಯೂ, ಧ್ಯಾನಂ-ಪ್ರತ್ಯಂಗಿರೆಯ ಧ್ಯಾನವನ್ನು, ನಜಹೌ-ಬಿಡಲಿಲ್ಲ, ಅಂಗದಃ-ಅಂಗದನು, ವೇಗವತ್ತರಃ-ಜಾಗ್ರತೆಯುಳ್ಳವನಾಗಿ, ಅಂತಃಪುರೇ-ಅಂತಃಪುರದಲ್ಲಿ. ವೇಶ್ಮನಿ-ರಾಜ ಪತ್ನಿಯಾದ ಮಂಡೋದರಿಯ ಮನೆಯೊಳಗೆ, ಪ್ರವಿಶ್ಯ-ಹೊಕ್ಕು ॥ ೨೨ ॥ ಕೇಶಬಂಧೇ-ಜಡೆಯನ್ನು, ಧೃತ್ವಾ-ಹಿಡಿದುಕೊಂಡು, ಶುಭಾಂ-ಮಂಗಳ ಕರಳಾದ, ಮಂಡೋದರೀಂ-ಮಂಡೋದರಿ ಯೆಂಬ ರಾವಣನ ಪಟ್ಟದ ಹೆಂಡತಿಯನ್ನು, ಸಮಾನಯತ್-ರಾವಣನ ಬಳಿಗೆ ಯೆಳೆದುಕೊಂಡು ಬಂದನು, ರಾವಣಸ್ಯ-ರಾವಣನ, ಪುರತಃ-ಮುಂದೆ, ಅನಾಥವತ್-ದಿಕ್ಕಿಲ್ಲದವಳಂತೆ, ವಿಲಪಂತೀಂ-ಗೋಳಾಡುತ್ತಿರುವ ಮಂಡೋದರಿಯನ್ನು, ಗೃಹೀತ್ವಾ-ಎಳೆದುಕೊಂಡು ॥ ೨೩ ॥ ತಸ್ಯಾಃ-ಆ ಮಂಡೋದರಿಯ, ರತ್ನಭೂಷಿತಂ-ರತ್ನಗಳಿಂದ ಕೆತ್ತಲ್ಪಟ್ಟಿರುವ, ಕಂಚುಕಂ-ಕುಪ್ಪಸವನ್ನು, ವಿದದಾರ-ಉಗುರುಗಳಿಂದ ಹರಿದುಬಿಟ್ಟನು ॥ ೨೪ ॥ ವಿಮುಕ್ತಾಃ-ಕುಪ್ಪಸದಿಂದ ಕೀಳಲ್ಪಟ್ಟವುಗಳಾದ, ಮುಕ್ತಾಃ-ಮುತ್ತುಗಳು, ರತ್ನಸಂಚಯೈಃ-ರತ್ನ-ರತ್ನಗಳ, ಸಂಚಯೈಃ-ಸಮೂಹಗಳಿಂದ, (ಕೂಡಿ) ಸಮಂತಾತ್-

ತಾಃಸಮಂತಾದ್ವ್ರಸ್ತ್ನ ಸಂಚಯ್ಯೈಃ । ಶ್ರೋಣಿಸೂತ್ರಂನಿಪತಿತಂತ್ರ್ಯಟಿತಂರತ್ನ ಚಿತ್ರಿತಂ। ೨೫ ॥ ಕಟಿಪ್ರದೇಶಾದ್ವಿಸ್ರಸ್ತಾ ನೀ ವೀತಸ್ಯೈವಪಶ್ಯತಃ । ಭೂಷಣಾನಿಚಸರ್ವಾಣಿಪಾತಿತಾನಿಸಮಂತತಃ ॥ ೨೬ ॥ ದೇವಗಂಧರ್ವಕನ್ಯಾಶ್ಚ ನೀತಾಹೃಷ್ಟೈ ಪ್ಲವಂಗಮೈಃ । ಮಂಡೋದರೀರುರೋದಾಥರಾವಣಸ್ಯಾಗ್ರತೋಭೃಶಂ ॥ ೨೭ ॥ ಕ್ರೋಶಂತೀಕರುಣಂದೀನಾಜಗಾದದಶಕಂ ಧರಂ । ನಿರ್ಲಜ್ಜೋಸಿಪರೈರೇವಂಕೇಶಪಾಶ್ಯೈರ್ವಿಕೃಷ್ಯತೇ ॥ ೨೮ ॥ ಭಾರ್ಯಾತವೈವಪುರತಃಕಿಂಜುಹೋಷಿನಲಜ್ಜಸೇ ॥ ಹನ್ಯ ತೇಪಶ್ಯತೋಯಸ್ಯಭಾರ್ಯಾಪಾಪೈಶ್ಚ ಶತ್ರುಭಿಃ ॥ ೨೯ ॥ ಮರ್ತವ್ಯಂತೇನತತ್ರೈವಜೀವಿತಾನ್ಮರಣಂವರಂ । ಹಾಮೇಘನಾದತೇ ಮಾತಾಕ್ಲಿಶ್ಯತೇಬತವಾನರೈಃ ॥ ೩೦ ॥ ತ್ವಯಿಜೀವತಿಮೇದುಃಖಮೀದೃಶಂಚಕಥಂಭವೇತ್ ।ಭಾರ್ಯಾಲಜ್ಜಾಚ ಸಂತ್ಯಕ್ತಾ

ಸುತಲೂ, ಪತಿತಾಃ-ಬಿದ್ದವು, ರತ್ನಚಿತ್ರಿತಂ-ರತ್ನಗಳಿಂದ ಚಿತ್ರವಾಗಿ, ಕೆತ್ತಲ್ಪಟ್ಟಿದ್ದ, ಶ್ರೋಣೀಸೂತ್ರಂ-ಡಾಬು, ತ್ರುಟಿತಂ-ಕಪಿಗಳು ಎಳೆಯುವದರಿಂದ ಮುರಿಯಲ್ಪಟ್ಟು, ನಿಪತಿ ತಂ-ನೆಲದಲ್ಲಿ, ಬಿತ್ತು ॥ ೨೫ ॥ ತಸ್ಯ-ಆ ರಾವಣನು, ಪಶ್ಯತಏವ-ನೋಡುತ್ತಿರುವಾಗಲೇ, ಕಟಿಪ್ರದೇಶಾತ್-ಟೊಂಕದಿಂದ, ನೀವೀ-ಉಟ್ಟಿರುವ ಶೀರೆಯ ಗಂಟು, ವಿಸ್ರಸ್ತಾ-ಬಿಚ್ಚಿ ಹೋಯಿತು, ಸರ್ವ-ಎಲ್ಲಾ, ಭೂಷಣಾನಿ-ಆಭರಣಗಳು, ಸಮಂತತಃ-ಸುತ್ತಲೂ, ಪಾತಿತಾನಿ-ಕಪಿಗಳಿಂದ ಕಿತ್ತು ಬಿಸಾಡಲ್ಪಟ್ಟಿತು ॥ ೨೬ ॥ ಹೃಷ್ಟೈಃ-ಸಂತುಷ್ಟರಾದ ಪ್ಲವಂಗಮೈಃ-ಕಪಿಗಳಿಂದ, ದೇವಗಂಧರ್ವಕನ್ಯಾಶ್ಚ-ರಾವಣನಿಗೆಹೆಂಡತಿಯರಾಗಿದ್ದ ದೇವ ಗಂಧರ್ವ ಕನ್ಯೆಯರು, ನೀತಾಃ-ರಾವಣನ ಬಳಿಗೆ ಶೆಳೆದುಕೊಂಡು ತರಲ್ಪಟ್ಟರು,ಅಥ-ಅನಂತರ ದಲ್ಲಿ, ಮಂಡೋದರೀ-ಮಂಡೋದರಿಯು, ಭೃಶಂ-ಅತ್ಯಂತವಾಗಿ, ರಾವಣಸ್ಯ-ರಾವಣನ, ಅಗ್ರತಃ-ಮುಂದೆ, ರುರೋದ-ಅತ್ತಳು ॥ ೨೭ ॥ ಕರುಣಂ-ಕೃಪೆಯು ಹ್ಯಾಗೆ ಉಂಟಾ ಗುವದೋ ಆ ಪ್ರಕಾರವಾಗಿ, ಕ್ರೋಶಂತೀ-ಕೂಗುತ್ತಾ, ದೀನಾ-ದೈನ್ಯವುಳ್ಳವಳಾಗಿ, ದಶಕಂಧರಂ-ರಾವಣನನ್ನು ಕುರಿತು, ಜಗಾದ-ಹೇಳಿದಳು, ಪರೈಃ-ಶತ್ರುಗಳಾದ ಅನ್ಯ ಪುರುಷರಿಂದ ಕೇಶಪಾಶೈಃ-ಮುಡಿಯಿಂದ, ವಿಕೃಷ್ಯತೇ-ಎಳೆಯಲ್ಪಡುತ್ತೆ, (ಆದ್ದರಿಂದ ನೀನು) ನಿರ್ಲಜ್ಜಃ-ನಾಚಿಕೆಯಿಲ್ಲದವನಾಗಿದ್ದೀ ॥ ೨೮ ॥ ಭಾರ್ಯಾ-ಹೆಂಡತಿಯು, ತವೈವ-ನಿನ್ನ, ಪುರ ತಃ-ಮುಂದೆಯೇ ಎಳೆಯುತ್ತಿರುವಾಗ, ಕಿಂಜುಹೋಷಿ-ಏನು ಹೋಮ ಮಾಡುತ್ತೀ, ನಲಜ್ಜಸೇ-ನಾಚಿಕೆಯನ್ನು ಪಡುವವನಾಗುವದಿಲ್ಲ, ಪಶ್ಯತಃ-ನೋಡುತ್ತಿರುವಾಗಲೇ, ಯಸ್ಯ-ಯಾವ, ಭಾರ್ಯಾ-ಹೆಂಡತಿಯು, ಪಾಪೈಃ-ಪಾಪಿಷ್ಠರಾದ, ಶತ್ರುಭಿಃ-ಶತ್ರುಗಳಿಂದ, ಹನ್ಯತೇ-ಹೊಡೆಯಲ್ಪಡುತ್ತಾಳೋ ॥ ೨೯ ॥ ತತ್ರೈವ-ಅಲ್ಲಿಯೇ, ತೇನ-ಅವನಿಂದ, ಮರ್ತವ್ಯಂ-ಸಾಯತಕ್ಕದ್ದು, ಜೀವಿತಾತ್-ಬದುಕುವದಕ್ಕಿಂತ, ಮರಣಂ-ಸಾಯುವದು, ವರಂ-ಶ್ರೇಷ್ಠವು, ಹಾಮೇಘನಾದ-ಅಯ್ಯೋ ಇಂದ್ರಜಿತುವೇ, ತೇಮಾತಾ-ನಿನ್ನ ತಾಯಿಯು, ವಾನರೈಃ-ಕಪಿಗಳಿಂದ, ಕ್ಲಿಶ್ಯತೇಬತ-ಕಷ್ಟವನ್ನು ಪಡುತ್ತಿದ್ದಾಳಲ್ಲವೆ ॥ ೩೦ ॥ ತ್ವಯಿ-ನೀನು, ಜೀವತಿ-ಬದುಕಿದ್ದರೆ, ಮೇ-ನನಗೆ, ಈದೃಶಂ-ಇಂಥಾ, ದುಃಖಂ-ವ್ಯಥೆಯು, ಕಥಂ-ಹ್ಯಾಗೆ, ಉದ್ಭವೇತ್-ಉಂಟಾದೀತು, ಮೆಭರ್ತ್ರಾ-ನನ್ನ ಗಂಡನಿಂದ, ಜೀವಿತಾಶಯಾ-ಬದುಕಬೇಕೆಂಬ ಆಶೆಯಿಂದ, ಭಾರ್ಯಾ-ಹೆಂಡತಿಯು, ಲಜ್ಜಾ-ನಾಚಿಕೆಯು, ಸಂತ್ಯಕ್ತಾ-ಬಿಡಲ್ಪಟ್ಟಿತು ॥೩೧॥

ಭರ್ತಾರ್ಮೆಜೀವಿತಾಶಯಾ ॥ ೩೦ ॥ ಕೃತ್ವಾಥದ್ವೆವಿತಂರಾಜಾ ಮಂಡೋದರ್ಯಾದಶಾನನಃ । ಉತ್ತಸ್ಥೌ ಖಡ್ಗಮಾದಾ

ಯ ತ್ಯಜದೇವೀಮಿತಿಬ್ರುವನ್ ॥ ೩೧ ॥ ಜಘಾನಾಂಗದಮತ್ಯುಗ್ರಂ ಕಟಿದೇಶೇದಶಾನನಃ । ತತೋತ್ಸೃಜ್ಯಯಯುಸ್ಸರ್ವೇವಿ

ಧ್ವಂಸ್ಯಹವನಂಮಹತ್ ॥ ೩೨ ॥ ರಾಮಪಾರ್ಶ್ವಮುಪಾಗಮ್ಯತಸ್ಥುಃಸರ್ವೇಪ್ರಹರ್ಷಿತಾಃ । ರಾವಣಸ್ತುತತೋಭಾರ್ಯಾ

ಮುವಾಚಪರಿಸಾಂತ್ವಯನ್ ॥ ೩೪ ॥ ದೈವಾಧೀನಮಿದಂಭದ್ರೇಜೀವಿನಾಕಿಂನದೃಶ್ಯತೇ । ತ್ಯಜಶೋಕಂವಿಶಾಲಾಕ್ಷಿ ಜ್ಞಾನ

ಮಾಲಂಬ್ಯನಿಶ್ಚಿತಂ॥೩೫॥ಅಜ್ಞಾನಪ್ರಭವಶ್ಶೋಕಶ್ಶೋಕೋಜ್ಞಾನವಿನಾಶಕೃತ್ । ಅಜ್ಞಾನಪ್ರಭವಾಹಂಧೀಃಶರೀರಾದಿಷ್ವ

ನಾತ್ಮಸು ॥ ೩೬ ॥ ತನ್ಮೂಲಪುತ್ರದಾರಾದಿ ಸಂಬಂಧಸ್ಸಂಸೃತಿಸ್ತತಃ । ಹರ್ಷಶೋಕಭಯಕ್ರೋಧ ಲೋಭಮೋಹಸ್ಪೃ

ರಾಜಾ-ಧೊರೆಯಾದ, ದಶಾನನಃ-ರಾವಣನು, ಮಂಡೋದರ್ಯಾಃ-ಹೆಂಡತಿಯಾದ ಮಂಡೋದರಿಯ, ತತ್-ಆ, ದೇವಿತಂ-ಪ್ರಲಾಪ ಮಾತುಗಳನ್ನು, ಶ್ರುತ್ವಾ-ಕೇಳಿ, ಖಡ್ಗಂ-ಕತ್ತಿಯನ್ನು, ಆದಾಯ-ತೆಗೆದುಕೊಂಡು, ದೇವೀಂ-ಮಂಡೋದರಿಯನ್ನು, ತ್ಯಜ-ಬಿಡು, ಇತಿ-ಹೀಗೆ, ಬ್ರುವನ್-ಹೇಳುತ್ತಿರುವವನಾಗಿ, ಉತ್ತಸ್ಥೌ-ಎದ್ದನು ॥ ೩೧ ॥ ದಶಾನನಃ-ರಾವಣನು, ತತಃ-ಆ ಬಳಿಕ, ಕಟಿಪ್ರದೇಶೇ-ಸೊಂಟದ ಮೇಲೆ, ಅತ್ಯುಗ್ರಂ-ಅತ್ಯಂತ ಕಠಿಣವಾಗಿ, ಅಂಗದಂ-ಅಂಗದನನ್ನು, ಜಘಾನ-ಹೊಡದನು, ತತಃ-ಆ ಬಳಿಕ, ಸರ್ವೇ-ಎಲ್ಲಾ ಕಪಿಗಳು, ಮಹತ್-ಹೆಚ್ಚಾದ, ಹವನಂ-ರಾವಣನು ಮಾಡುತ್ತಿದ್ದ ಹೋಮವನ್ನು, ವಿಧ್ವಂಸ್ಯ-ಭಂಗಪಡಿಸಿ, ಉತ್ಸೃಜ್ಯ-ಹಿಡಿದಿದ್ದ ಮಂಡೋದರಿ ಮೊದಲಾದ ರಾವಣನ ಹೆಂಡತಿಯರನ್ನು ಬಿಟ್ಟು, ಯಯುಃ-ಹೊರಟು ಹೋದರು ॥ ೩೩ ॥ ಸರ್ವೇ-ಎಲ್ಲಾ ಕಪಿಗಳೂ, ರಾಮಪಾರ್ಶ್ವಂ-ರಾಮ-ರಾಮಚಂದ್ರನ, ಪಾರ್ಶ್ವಂ-ಸಮೀಪಪ್ರದೇಶವನ್ನು, ಉಪಾಗಮ್ಯ-ಸೇರಿ, ಪ್ರಹರ್ಷಿತಾಃ-ಸಂತೋಷಪಟ್ಟವರಾಗಿ, ತಸ್ಥುಃ-ಇರುತ್ತಿದ್ದರು, ತತಃ-ಆಮೇಲೆ, ರಾವಣಸ್ತು-ರಾವಣನೂ, ಭಾರ್ಯಾಂ-ಹೆಂಡತಿಯಾದ ಮಂಡೋದರಿಯನ್ನೂ, ಪರಿಸಾಂತ್ವಯನ್-ಸಮಾಧಾನ ಪಡಿಸುತ್ತಿರುವವನಾಗಿ, ಉವಾಚ-ಹೇಳಿದನು ॥ ೩೪ ॥ ಭದ್ರೇ-ಶುಭಳಾದ ಮಂಡೋದರಿಯೇ, ಇದಂ-ಇದೆಲ್ಲವೂ, ದೈವಾಧೀನಂ-ದೇವರ ವಶವಾದದ್ದು, ಜೀವಿನಾ-ಪ್ರಾಣಿಯಿಂದ, ಕಿಂನದೃಶ್ಯತೇ-ತನಗೆ ಆಗಬಾರದ್ದು ಸಹ ಅನುಭವಕ್ಕೆ ಬರುವಂತೆ ಕಾಣುವದಿಲ್ಲವೇ, (ಅಂದರೆ ಆಗಬಾರದ ಕಷ್ಟಗಳು ಸಹ ಬಂದೇ ಬರುತ್ತೆ) ವಿಶಾಲಾಕ್ಷಿ-ವಿಸ್ತಾರವಾದ ಕಣ್ಣುಗಳುಳ್ಳ ಮಂಡೋದರಿಯೇ, ಶೋಕಂ-ದುಃಖವನ್ನು, ತ್ಯಜ-ಬಿಡು, ನಿಶ್ಚಿತಂ-ನಿಜವಾದ, ಜ್ಞಾನಂ-ಜ್ಞಾನವನ್ನು, ಆಲಂಬ್ಯ-ಆಶ್ರಯಿಸಿ (ಇರುವವಳಾಗು,) ॥ ೩೫ ॥ ಶೋಕಃ-ದುಃಖವು, ಅಜ್ಞಾನಪ್ರಭವಃ-ಅಜ್ಞಾನದಿಂದ ಹುಟ್ಟುವದಾಗಿದೆ, ಶೋಕಃ-ದುಃಖವು, ಜ್ಞಾನವಿನಾಶಕೃತ್-ಜ್ಞಾನವನ್ನು ಹೋಗಲಾಡಿಸುವಂಥಾದ್ದಾಗಿರುವದು, ಅನಾತ್ಮಸು-ಆತ್ಮನಿಲ್ಲದೆ ಜಡವಾಗಿರುವ, ಶರೀರಾದಿಷು-ದೇಹಾಗಿಗಳಲ್ಲಿ, ಅಹಂ-ನಾನು ದೇಹವೆಂಬ, ಧೀಃ-ಜ್ಞಾನ, ಅಜ್ಞಾನಪ್ರಭವಾ-ಅಜ್ಞಾನದಿಂದ ಹುಟ್ಟುವಂಥಾದ್ದಾಗಿದೆ ॥ ೩೬ ॥ ಪುತ್ರದಾರಾದಿಸಂಬಂಧಃ-ಪುತ್ರ-ಮಕ್ಕಳು, ದಾರಾ-ಹೆಂಡತಿಯೇ, ಆದಿ-ಮೊದಲಾದ, ಸಂಬಂಧಃ-ಸಂಪರ್ಕವುಳ್ಳ, ಸಂಸೃತಿಃ-ಸಂಸಾರವು, ತನ್ಮೂಲಃ-ಅಜ್ಞಾನವೇ ಕಾರಣವಾಗಿರುವದು, ತತಃ-ಆ

ಹರ್ಷಾದಯಃ||೩೭||ಅಜ್ಞಾನಪ್ರಭವಾಹ್ಯೇತೇಜನ್ಮಮೃತ್ಯುಜರಾದಯಃ|ಆತ್ಮಾತುಕೇವಲಃಶುದ್ಧೋವ್ಯತಿರಿಕ್ತೋಹ್ಯಲೇಪಕಃ||೩೮||
ಆನಂದರೂಪೋಜ್ಞಾನಾತ್ಮಾಸರ್ವಭಾವವಿವರ್ಜಿತಃ । ನಸಂಯೋಗೋವಿಯೋಗೋವಾ ವಿದ್ಯತೇಕೇನಚಿತ್ಸತಃ || ೩೯ || ಏವಂ
ಜ್ಞಾತ್ವಾಸ್ವಮಾತ್ಮಾನಂ ತ್ಯಜಶೋಕಮನಿಂದಿತೇ । ಇದಾನೀಮೇವಗಚ್ಛಾಮಿಹತ್ವಾರಾಮಂಸಲಕ್ಷ್ಮಣಂ || ೪೦ || ಆಗಮಿ
ಷ್ಯಾಮಿನೋಚೇನ್ಮಾಂದಾರಯಿಷ್ಯತಿಸಾಯಕೈಃ । ಶ್ರೀರಾಮೋವಜ್ರಕಲ್ಪೈಶ್ಚ ತೇನಗಚ್ಛಾಮಿತತ್ಪದಂ|| ೪೧ || ತದಾತ್ವ
ಯಾಮೇಕರ್ತವ್ಯಾಕ್ರಿಯಾಮುಚ್ಛೃಣುನಾಥ್ರಮೇ ।ಸೀತಾಂಹತ್ವಾಮಯಾಸಾರ್ಧಂತ್ವಂಪ್ರವೇಕ್ಷ್ಯಸಿಪಾವಕಂ||೪೨ ||ಏವಂ

ಸಂಸಾರದಿಂದ, ಹರ್ಷ-ಸಂತೋಷವು, ಶೋಕ-ದುಃಖವು, ಭಯಂ-ಅಂಜಿಕೆಯು, ಕ್ರೋಧ-ಕೋಪವು, ಲೋಭ-ಲುಬ್ಧತೆಯು, ಮೋಹ-ಮೋಹವು, ಸ್ಪೃಹಾ-ಆಸೆಯು, ಆದಿ-ಮೊದಲಾದ ಗುಣಗಳು ಉಂಟಾಗುವವು || ೩೭ || ಏತೇ-ಈ, ಜನ್ಮಮೃತ್ಯುಜರಾದಯಃ-ಜನ್ಮ-ಹುಟ್ಟುವದು, ಮೃತ್ಯು-ಮರಣ, ಜರಾ-ಮುಪ್ಪು, ಆದಯಃ-ಮೊದಲಾದವುಗಳು, ಅಜ್ಞಾನಪ್ರಭವಾಃ-ಅಜ್ಞಾನದಿಂದ ಹುಟ್ಟುವಂಥಾವುಗಳಾಗಿವೆ, ಆತ್ಮಾ-ಆತ್ಮನು, ಕೇವಲಃ-ಜ್ಞಾನ ಸ್ವರೂಪನಾದವನು, ಶುದ್ಧಃ-ನಿರ್ಮಲನು, ವ್ಯತಿರಿಕ್ತಃ-ಶರೀರಾದಿ ಜಡ ವ್ಯತಿರಿಕ್ತನಾದವನು, ಅಲೇಪಕಃ-ಆಕಾಶದಂತೆ ಇತರ ಸಂಬಂಧವಿಲ್ಲದವನು || ೩೮ || ಆನಂದರೂಪಃ-ಆನಂದ ಸ್ವರೂಪನಾದವನು, ಜ್ಞಾನಾತ್ಮಾ-ಜ್ಞಾನ ಸ್ವಭಾವವುಳ್ಳವನು, ಸರ್ವಭಾವವಿವರ್ಜಿತಃ-ಸರ್ವ-ಸಮಸ್ತವಾದ, ಭಾವ-ಸುಖ ದುಃಖಾದಿ ಭಾವಗಳಿಂದ, ವಿವರ್ಜಿತಃ-ರಹಿತನಾದವನು, (ಆಗಿದ್ದಾನೆ,) ಸತಃ-ಸತ್ಸ್ವರೂಪನಾದ ಆತ್ಮನಿಗೆ, ಕೇನಚಿತ್-ಯಾರ ಸಂಗಡಲೂ, ಸಂಯೋಗಃ-ಸೇರುವಿಕೆಯು, ವಿಯೋಗೋವಾ-ಸೇರದೆ ಇರುವದು, ನವಿದ್ಯತೇ-ಇಲ್ಲವು || ೩೯ || ಅನಿಂದಿತೇ-ನಿರ್ದೋಷಿಯಾದ ಮಂಡೋದರಿಯೇ, ಏವಂ-ಈ ರೀತಿಯಾಗಿ, ಸ್ವಂ-ಸ್ವಕೀಯವಾದ, ಆತ್ಮಾನಂ-ಪರಮಾತ್ಮನನ್ನು, ಜ್ಞಾತ್ವಾ-ತಿಳಿದು, ಶೋಕಂ-ವ್ಯಥೆಯನ್ನು, ತ್ಯಜ-ಬಿಡು, ಇದಾನೀಮೇವ-ಈಗಲೇನೇ, ಗಚ್ಛಾಮಿ-ಯುದ್ಧಕ್ಕೆ ಹೋಗುತ್ತೇನೆ, ಸಲಕ್ಷ್ಮಣಂ-ಲಕ್ಷ್ಮಣನಿಂದ ಕೂಡಿದ, ರಾಮಂ-ರಾಮಚಂದ್ರನನ್ನು, ಹತ್ವಾ-ಕೊಂದು || ೪೦ || ಆಗಮಿಷ್ಯಾಮಿ-ಬರುತ್ತಲಿದ್ದೇನೆ, ನೋಚೇತ್-ಹಾಗೆ ಕೊಲ್ಲದೆ ಹೋಗುವ ಪಕ್ಷದಲ್ಲಿ, ಶ್ರೀರಾಮಃ-ರಾಮಚಂದ್ರನು, ವಜ್ರಕಲ್ಪೈಃ-ವಜ್ರಾಯುಧಕ್ಕೆ ಸರಿಯಾದ, ಸಾಯಕೈಃ-ಬಾಣಗಳಿಂದ, ಮಾಂ-ನನ್ನನ್ನು, ದಾರಯಿಷ್ಯತಿ-ಕೊಲ್ಲುತ್ತಲಿದ್ದಾನೆ, ತತಃ-ರಾಮಚಂದ್ರನಿಂದ ಸಂಹಾರವನ್ನು ಪಡೆಯುವದರಿಂದ, ತತ್ಪದಂ-ಸರ್ವೋತ್ತಮವಾದ ವೈಕುಂಠವನ್ನು ಕುರಿತು, ಯಾಸ್ಯಾಮಿ-ಹೋಗುತ್ತಲಿದ್ದೇನೆ || ೪೧ || ಪ್ರಿಯೆ-ಪ್ರೀತಿಪಾತ್ರಳಾದ ಮಂಡೋದರಿಯೇ, ತದಾ-ಆಗ, ಮಚ್ಛಾಸನಾತ್-ನನ್ನ ಅಪ್ಪಣೆಯಿಂದ, ಮೇ-ನನಗೆ, ಕ್ರಿಯಾ-ಕೆಲಸವು, ತ್ವಯಾ-ನಿನ್ನಿಂದ, ಕರ್ತವ್ಯಾ-ಮಾಡಲ್ಪಡತಕ್ಕದ್ದು, ಸೀತಾಂ-ಸೀತೆಯನ್ನು, ಹತ್ವಾ-ಕೊಂದು, ಮಯಾಸಾರ್ಧಂ-ನನ್ನ ಸಂಗಡ, ತ್ವಂ-ನೀನು, ಪಾವಕಂ-ಬೆಂಕಿಯನ್ನು, ಪ್ರವೇಕ್ಷ್ಯಸಿ-ಹೊಗುವವಳಾಗು || ೪೨ || ತಸ್ಯ-ಆ, ರಾವಣಸ್ಯ-ರಾವಣನ, ಏವಂ-ಈ ರೀತಿಯಾದ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಅತಿದುಃಖಿತಾ-ಅತ್ಯಂತ ದುಃಖವುಳ್ಳವಳಾಗಿ, ನಾಥ-ಪತಿಯಾದ ರಾವಣನೇ, ಸತ್ಯಂ-ನಿಜವಾದ, ಮೇ-ನನ್ನ, ವಾಕ್ಯಂ-ಮಾತನ್ನು, ಶೃಣು-ಕೇಳು, ತಥಾ-ಹಾಗೆ, ಕುರು-ಮಾ

ಶ್ರುತ್ವಾವಚಸ್ತಸ್ಯ ರಾವಣಸ್ಯಾತಿದುಃಖಿತಾ । ಉವಾಚಸಾಥಮೈವಾಕ್ಯಂ ಶೃಣುಸತ್ಯಂತಥಾಕುರು || ೪೨ || ಶಕ್ಯೋ ನರಾಘವೋಜೇತುಂತ್ವಯಾಚಾನ್ಯೈಃಕದಾಚನ । ರಾಮೋದೇವವರಸ್ಸಾಕ್ಷಾತ್ಪ್ರಧಾನಪುರುಷೇಶ್ವರಃ ||೪೪||ಮತ್ಸ್ಯೋಭೂತ್ವಾಪುರಾಕಲ್ಪೇಮನುಂವೈವಸ್ವತಂಪ್ರಭುಃ । ರರಕ್ಷಸಕಲಾಪದ್ಭ್ಯೋರಾಘವೋಭಕ್ತವತ್ಸಲಃ||೪೫|| ರಾಮಃಕೂರ್ಮೋಭವತ್ಪೂರ್ವಂಲಕ್ಷಯೋಜನವಿಸ್ತೃತಃ । ಸಮುದ್ರಮಥನೇಪೃಷ್ಠೇದಧಾರಕನಕಾಚಲಂ || ೪೬ || ಹಿರಣ್ಯಾಕ್ಷೋತಿದುರ್ವೃತ್ತೋಹತೋನೇನಮಹಾತ್ಮನಾ।ಕ್ರೋಡರೂಪೇಣವಪುಷಾಕ್ಷೋಣೀಮುದ್ಧರತಾಕ್ವಚಿತ್||೪೭||ತ್ರಿಲೋಕಕಂಟಕಂದೈತ್ಯಂಹಿರಣ್ಯಕಶಿಪುಂಪುರಾ । ಹತವಾನ್ನಾರಸಿಂಹೇನವಪುಷಾರಘುನಂದನಃ|| ೪೮ || ವಿಕ್ರಮ್ಯೈಸ್ತ್ರಿಭಿರೇವಾಸೌಬಲಿಂಬದ್ಧ್ವಾಜಗತ್ರಯಂ ।

ಮ || ೪೩ || ರಾಘವಃ-ರಾಮಚಂದ್ರನು, ತ್ವಯಾ-ನಿನ್ನಿಂದಲೂ, ಅನ್ಯೈಃ-ಇತರರಿಂದಲೂ, ಕದಾಚನ-ಬಂದಾನೊಂದು ಕಾಲದಲ್ಲಿಯೂ, ಜೇತುಂ-ಜಯಿಸುವದಕ್ಕೆ, ನಶಕ್ಯಃ-ಸಾಧ್ಯನಲ್ಲ, ರಾಮಃ-ರಾಮಚಂದ್ರನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಪ್ರಧಾನಪುರುಷೇಶ್ವರಃ-ಪ್ರಧಾನ-ಪ್ರಕೃತಿಗೂ, ಪುರುಷ-ಜೀವಾತ್ಮರಿಗೂ, ಈಶ್ವರಃ-ನಿಯಾಮಕನಾದ, ದೇವವರಃ-ದೇವತೆಗಳೊಳಗೆ ಶ್ರೇಷ್ಠನಾದವನಾಗಿದ್ದಾನೆ || ೪೪ || ಪ್ರಭುಃ-ಸ್ವಾಮಿಯಾದ, ಭಕ್ತವತ್ಸಲಃ-ಭಕ್ತರಲ್ಲಿ ವಿಶ್ವಾಸವುಳ್ಳವನಾದ, ರಾಘವಃ-ರಾಮಚಂದ್ರನು, ಪುರಾಕಲ್ಪೇ-ಪೂರ್ವ ಕಲ್ಪದಲ್ಲಿ, ಮತ್ಸ್ಯಃ-ಮೀನಿನ ಶರೀರವುಳ್ಳವನು, ಭೂತ್ವಾ-ಆಗಿ, ವೈವಸ್ವತಂ-ಸೂರ್ಯನ ಮಗನಾದ, ಮನುಂ-ಮನುವನ್ನು, ಸಕಲಾಪದ್ಭ್ಯಃ-ಸಮಸ್ತ ವಿಪತ್ತುಗಳಿಂದ, ರರಕ್ಷ-ಕಾಪಾಡಿದನು || ೪೫ || ರಾಮಃ-ರಾಮಚಂದ್ರನು, ಪೂರ್ವಂ-ಹಿಂದಕ್ಕೆ, ಲಕ್ಷಯೋಜನವಿಸ್ತೃತಃ-ನೂರು ಸಾವಿರದಷ್ಟು ಅಗಲವುಳ್ಳ, ಕೂರ್ಮಃ-ಕೂರ್ಮ ರೂಪವುಳ್ಳವನು, ಅಭವತ್-ಆದನು, ಸಮುದ್ರಮಥನೇ-ಕ್ಷೀರ ಸಮುದ್ರವನ್ನು ಕಡೆಯುವಾಗ್ಗೆ, ಪೃಷ್ಠೇ-ಆಮೆಯ ರೂಪವನ್ನು ಧರಿಸಿರುವ ತನ್ನ ಬೆನ್ನಿನ ಮೇಲೆ, ಕನಕಾಚಲಂ-ಮಂದರ ಪರ್ವತವನ್ನು, ದಧಾರ-ಧರಿಸಿದವನಾದನು || ೪೬ || ಕ್ವಚಿತ್-ಬಂದಾನೊಂದು ಕಾಲದಲ್ಲಿ, ಅನೇನ-ಈ, ಮಹಾತ್ಮನಾ-ಅಸಾಧ್ಯ ಪ್ರಯತ್ನವುಳ್ಳವನಾದ ರಾಮಚಂದ್ರನಿಂದ, ಕ್ಷೋಣೀಮುದ್ಧರತಾ-ಭೂಮಿಯನ್ನು ಎತ್ತುತ್ತಿರುವವನಾದ, ಕ್ರೋಡರೂಪೇಣ-ವರಾಹಾಕೃತಿಯಾಗಿರುವ, ವಪುಷಾ-ದೇಹದಿಂದ, ಅತಿದುರ್ವೃತ್ತಃ-ಅತ್ಯಂತ ದುಷ್ಟ ನಡತೆಯುಳ್ಳವನಾದ, ಹಿರಣ್ಯಾಕ್ಷಃ-ಹಿರಣ್ಯಾಕ್ಷನೆಂಬ ರಾಕ್ಷಸನು, ಹತಃ-ಸಂಹರಿಸಲ್ಪಟ್ಟನು || ೪೭ || ರಘುನಂದನಃ-ರಾಮಚಂದ್ರನು, ಪುರಾ-ಪೂರ್ವದಲ್ಲಿ, ತ್ರಿಲೋಕ-ಮೂರು ಲೋಕಗಳಿಗೆ, ಕಂಟಕಂ-ಕೇಡನ್ನು ಮಾಡುವವನಾದ, ದೈತ್ಯಂ-ರಾಕ್ಷಸನಾದ, ಹಿರಣ್ಯಕಶಿಪುಂ-ಹಿರಣ್ಯಕಶಿಪುವನ್ನು, ನಾರಸಿಂಹೇನ-ಮನುಷ್ಯ ಸಿಂಹ ರೂಪವಾಗಿಯೂ ಇರುವ, ವಪುಷಾ-ದೇಹದಿಂದ, ಹತವಾನ್-ಕೊಂದನು || ೪೮ || ಅಸೌ-ಈ, ರಘುನಂದನಃ-ರಾಮಚಂದ್ರನು, ತ್ರಿಭಿಃ-ಮೂರಾದ, ವಿಕ್ರಮೈಃ-ಹೆಜ್ಜೆಗಳನ್ನಿಡುವದರಿಂದ, ಜಗತ್ರಯಂ-ಮೂರು ಲೋಕಗಳನ್ನು, ಆಕ್ರಮ್ಯ-ವ್ಯಾಪಿಸಿಕೊಂಡು, ಬಲಿಂ-ಬಲಿಚಕ್ರವರ್ತಿಯನ್ನು, ಬದ್ಧ್ವಾ-ಕಟ್ಟಿ, ಭೃತ್ಯಾಯ-ಸೇವಕನಾದ, ಸುರೇಂದ್ರಾಯ-ಇಂದ್ರನಿಗೆ, ಅದಾತ್-ಮೂರು ಲೋಕಾಧಿಪತ್ಯವನ್ನು ಕೊಟ್ಟನು ||೪೯|| ರಾಕ್ಷಸಾಃ-ರಾಕ್ಷಸರು, ಭೂಮೇಃ-

ಅಕ್ರವ್ಯಾದಾತ್ಸುರೇಂದ್ರಾದ್ಯೈರ್ಜ್ಞ್ಯತ್ವಾಯರಘುನಂದನಃ|| ೪೯ || ರಾಕ್ಷಸಾಃಕ್ಷತ್ರಿಯಾಕಾರಾಜಾತಾಭೂಮೌರ್ಭರಾವಹಾಃ|
ತಾನ್ಹತ್ವಾಬಹುಶೋರಾಮೋಭುವಂಜಿತ್ವಾಹ್ಯದಾತ್ಸ್ಮನೇಃ ||೫೦|| ತಸ್ಯಭಾರ್ಯಾಕಿಮರ್ಥಂವಾಹೃತಾಸೀತಾವನಾದ್ಬಲಾತ್||
ಮಮಪುತ್ರವಿನಾಶಾರ್ಥಂಸ್ವಸ್ಯಾಪಿನಿಧನಾಯಚ || ೫೧ || ಇತಃಪರಂವಾವೈದೇಹೀಂಪ್ರೇಷಯಸ್ವರಘೂತ್ತಮೇ | ವಿಭೀಷ
ಣಾಯರಾಜ್ಯಂತುದತ್ವಾಗಚ್ಛಾಮಹೇವನಂ || ೫೨ || ಮಂದೋದರೀವಚಶ್ಶ್ರುತ್ವಾರಾವಣೋವಾಕ್ಯಮಬ್ರವೀತ್ | ಕಥಂಭ
ದ್ರೇರಣೇಪುತ್ರಾನ್ಭ್ರಾತೄನ್ರಾಕ್ಷಸಮಂಡಲಂ || ೫೩ || ಘಾತಯಿತ್ವಾರಾಘವೇಣಜೀವಾಮಿವನಗೋಚರಃ | ರಾಮೇಣಸಹ
ಯೋತ್ಸ್ಯಾಮಿರಾಮಬಾಣೈಸ್ಸುಶೀಘ್ರಗೈಃ || ೫೪ || ವಿದಾರ್ಯಮಾಣೋಯಾಸ್ಯಾಮಿತದ್ವಿಷ್ಣೋಃಪರಮಂಪದಂ | ಜಾನಾ
ಮಿರಾಘವಂವಿಷ್ಣುಂಲಕ್ಷ್ಮೀಂಜಾನಾಮಿಜಾನಕೀಂ||೫೫|| ಜ್ಞಾತ್ವೈವಜಾನಕೀಸೀತಾಮಯಾನೀತಾವನಾದ್ಬಲಾತ್ ||೫೬||

ಭೂಮಿಗೆ, ಭರಾವಹಾಃ-ಭಾರವನ್ನುಂಟುಮಾಡುತ್ತಿರುವವರಾದ, ಕ್ಷತ್ರಿಯಾಕಾರಾಃ-ಕ್ಷತ್ರಿಯರಾಗಿ, ಜಾತಾಃ-ಹುಟ್ಟಿದ, ತಾನ್-ಆಕ್ಷತ್ರಿಯರನ್ನು, ಬಹುಶಃ-ಅನೇಕವಾಗಿ, ಹತ್ವಾ-ಕೊಂದು, ರಾಮಃ-ಪರಶುರಾಮನಾದ ರಾಮನು, ಭುವಂ-ಭೂಮಿಯನ್ನು, ಜಿತ್ವಾ-ಜಯಿಸಿ, ಮುನೇಃ-ಕಶ್ಯಪ ಋಷಿಗೆ, ಅದಾತ್-ಭೂಮಿಯನ್ನು ದಾನವಾಗಿ ಕೊಟ್ಟನು ||೫೦|| ಮಮ-ನನ್ನ, ಪುತ್ರ-ಮಕ್ಕಳ, ವಿನಾಶಾಯ-ಸಂಹಾರಕ್ಕಾಗಿ, ಸ್ವಸ್ಯಾಪಿ-ನಿನ್ನ, ನಿಧನಾಯಚ-ಸಂಹಾರಕ್ಕಾಗಿ, ತಸ್ಯ-ಆ ರಾಮಚಂದ್ರನ, ಭಾರ್ಯಾ-ಹೆಂಡತಿಯಾದ, ಸೀತಾ-ಸೀತೆಯು ವನಾತ್-ಅರಣ್ಯದಿಂದ, ಬಲಾತ್-ಬಲಾತ್ಕಾರವಾಗಿ, ಕಿಮರ್ಥಂ-ಯಾತಕ್ಕೆ, ಹೃತಾ-ನಿನ್ನಿಂದ ಅಪಹರಿಸಲ್ಪಟ್ಟವಳಾದಳು || ೫೧ || ಇತಃಪರಂವಾ-ಇನ್ನು ಮೇಲಾದರೂ, ರಘೂತ್ತಮೇ-ರಾಮಚಂದ್ರನಲ್ಲಿಗೆ, ವೈದೇಹೀಂ-ಸೀತೆಯನ್ನು, ಪ್ರೇಷಯಸ್ವ-ಕಳುಹಿಸು, ವಿಭೀಷಣಾಯ-ವಿಭೀಷಣನಿಗೆ, ರಾಜ್ಯಂ-ರಾಜ್ಯವನ್ನು, ದತ್ವಾ-ಕೊಟ್ಟು, ವನಂ-ಅರಣ್ಯವನ್ನು ಕುರಿತು, ಗಚ್ಛಾಮಹೇ-ಹೋಗೋಣ || ೫೨ || ಮಂದೋದರೀ-ಮಂದೋದರಿಯ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾವಣಃ-ರಾವಣನು, ವಾಕ್ಯಂ-ಮಾತನ್ನು, ಅಬ್ರವೀತ್-ಹೇಳಿದನು, ಭದ್ರೆ-ಶುಭಕರಳಾದ ಮಂದೋದರಿಯೇ, ರಣೇ-ಯುದ್ಧದಲ್ಲಿ, ಪುತ್ರಾನ್-ಮಕ್ಕಳನ್ನು, ಭ್ರಾತೄನ್-ತಮ್ಮಂದಿರನ್ನು, ರಾಕ್ಷಸ-ರಾಕ್ಷಸರ, ಮಂಡಲಂ-ಸಮೂಹವನ್ನು || ೫೩ || ರಾಘವೇಣ-ರಾಮಚಂದ್ರನಿಂದ, ಘಾತಯಿತ್ವಾ-ಕೊಲ್ಲಿಸಿ, ವನಗೋಚರಃ-ಅರಣ್ಯದಲ್ಲಿ ತಿರುಗುವವನಾಗಿ, ಕಥಂಜೀವಾಮಿ-ಹ್ಯಾಗೆ ಬದುಕಿರಲಿ, ರಾಮೇಣಸಹ-ರಾಮಚಂದ್ರನಕೂಡ, ಯೋತ್ಸ್ಯಾಮಿ-ಯುದ್ಧಮಾಡುತ್ತೇನೆ. ಸುಶೀಘ್ರಗೈಃ-ವೇಗವುಳ್ಳವುಗಳಾದ, ರಾಮಬಾಣೈಃ-ರಾಮಚಂದ್ರನ ಬಾಣಗಳಿಂದ || ೫೪ || ವಿದಾರ್ಯಮಾಣಃ-ಹೊಡೆಯಲ್ಪಟ್ಟವನಾಗಿ, ವಿಷ್ಣೋಃ-ನಾರಾಯಣಮೂರ್ತಿಯ, ತತ್-ಆ ಪರಮಂಪದಂ-ಉತ್ಕೃಷ್ಟವಾದ ವೈಕುಂಠವನ್ನು ಕುರಿತು, ಯಾಸ್ಯಾಮಿ-ಹೋಗುತ್ತಲಿದ್ದೇನೆ, ರಾಘವಂ-ರಾಮಚಂದ್ರನನ್ನು, ವಿಷ್ಣುಂ-ವಿಷ್ಣುವೆಂಬುದಾಗಿ, ಜಾನಕೀಂ-ಸೀತೆಯನ್ನು, ಲಕ್ಷ್ಮೀಂ-ಲಕ್ಷ್ಮಿಯೆಂಬುದಾಗಿ, ಜಾನಾಮಿ-ತಿಳಿದಿದ್ದೇನೆ||೫೫||ಜ್ಞಾತ್ವೈವ-ತಿಳಿದಿದ್ದೇನೆ, ಮಯಾ-ನನ್ನಿಂ

ರಾಮೇಣನಿಧನಂಪ್ರಾಪ್ಯಯಾಸ್ಯಾಮಿತಿಪರಂಪದಂ || ವಿಮುಚ್ಯತ್ವಾಂತುಸಂಸಾರಾದ್ಗಮಿಷ್ಯಾಮಿಸಹಪ್ರಿಯೆ || ೫೭ ||
ಪರಾನಂದಮಯೀಂಶುದ್ಧಾಂಸೇವ್ಯತೇಯಾಮುಮುಕ್ಷುಭಿಃ | ತಾಂಗತಿಂತುಗಮಿಷ್ಯಾಮಿ ಹತೋರಾಮೇಣಸಂಯುಗೇ | ಪ್ರ
ಕ್ಷಾಳ್ಯಕಲ್ಮಷಾಣೀಹಮುಕ್ತಿಂಯಾಸ್ಯಾಮಿದುರ್ಲಭಾಂ || ೫೮ || ಕ್ಲೇಶಾದಿಪಂಚಕತರಂಗಯುತಂಭ್ರಮಾಢ್ಯಂ ದಾರಾತ್ಮ
ಜಾಪ್ತಧನಬಂಧುಝಷಾಭಿಯುಕ್ತಂ | ಔರ್ವಾನಲಾಭನಿಜರೋಷಮನಂಗಜಾಲಂ ಸಂಸಾರಸಾಗರಮತೀತ್ಯಹರಿಂವ್ರ
ಜಾಮಿ || ... ... ... ... || ೫೯ ||

—**ಇತಿಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಯುದ್ಧಕಾಂಡೇ ದಶಮಸ್ಸರ್ಗಃ.**—

ದ್ರ, ವನಾತ್-ಅರಣ್ಯದಿಂದ, ಬಲಾತ್-ಬಲಾತ್ಕಾರವಾಗಿ, ಜಾನಕೀ-ಜನಕರಾಯನ ಮಗಳಾದ, ಸೀತಾ-ಸೀತೆಯು, ನೀತಾ-ತರಲ್ಪಟ್ಟಳು || ೫೬ || ರಾಮೇಣ-ರಾಮಚಂದ್ರನಿಂದ, ನಿಧನಂ-ಸಂ
ಹಾರವನ್ನು, ಪ್ರಾಪ್ಯ-ಹೊಂದಿ, ಪರಂಪದಂ-ವೈಕುಂಠವನ್ನು ಕುರಿತು, ಯಾಸ್ಯಾಮಿ-ಹೋಗುತ್ತೇನೆ, ಪ್ರಿಯೆ-ಪ್ರಿಯಳಾದ ಮಂಡೋದರಿಯೇ, ಇತಿ-ಹೀಗೆ, ಸಂಸಾರಾತ್-ಸಂಸೃತಿ
ಯಿಂದ, ತ್ವಾಂಸಹ-ನಿನ್ನನ್ನುಕೂಡ, ವಿಮುಚ್ಯ-ಬಿಟ್ಟು, ಗಮಿಷ್ಯಾಮಿ-ಹೋಗುತ್ತಲಿದ್ದೇನೆ || ೫೭ || ಮುಮುಕ್ಷುಭಿಃ-ಮುಕ್ತರಾಗಬೇಕೆಂಬುವರಿಂದ, ಪರಾನಂದಮಯೀ-ಉತ್ಕೃ
ಷ್ಟವಾದ ಆನಂದ ವಿಕಾರವಾದ, ಶುದ್ಧಾ-ನಿರ್ಮಲವಾದ, ಯಾ-ಯಾವದು, ಸೇವ್ಯತೇ-ಸೇವಿಸಲ್ಪಡುವದೋ, ಸಂಯುಗೇ-ಯುದ್ಧದಲ್ಲಿ, ರಾಮೇಣ-ರಾಮಚಂದ್ರನಿಂದ, ಹತಃ-ಕೊಲ್ಲ
ಲ್ಪಟ್ಟವನಾಗಿ, ತಾಂ-ಅಂಥಾದ್ದಾದ, ಗತಿಂ-ಗತಿಯನ್ನು, ಗಮಿಷ್ಯಾಮಿ-ಹೊಂದುವವನಾಗುತ್ತೇನೆ, ಇಹ-ಇಲ್ಲಿಯೇ, ಕಲ್ಮಷಾಣಿ-ಪಾಪಗಳನ್ನು, ಪ್ರಕ್ಷಾಳ್ಯ-ತೊಳಕೊಂಡು, ದುರ್ಲಭಾಂ-
ಹೊಂದಲಸಾಧ್ಯವಾದ, ಮುಕ್ತಿಂ-ಮೋಕ್ಷವನ್ನು, ಯಾಸ್ಯಾಮಿ-ಹೊಂದುತ್ತಲಿದ್ದೇನೆ || ೫೮ || ಕ್ಲೇಶಾದಿಪಂಚಕತರಂಗಯುತಂ-ಕ್ಲೇಶ-ಅವಿದ್ಯಾಸ್ಮಿತಾರಾಗದ್ವೇಷಾಭಿನಿವೇಶಗಳೆಂಬ
ಪಂಚಕ-ಐದುಕ್ಲೇಶಗಳೆಂಬ, ತರಂಗ-ತೆರೆಗಳಿಂದ, ಯುತಂ-ಕೂಡಿರುವದಾದ, ಭ್ರಮಾಢ್ಯಂ-ಕ್ಲೇಶ ವೃತ್ತಿಗಳಲ್ಲಿ ಪರಿಭ್ರಮಣದಿಂದ ಕೂಡಿರುವದಾದ, ದಾರಾತ್ಮಜಾಪ್ತಧನಬಂಧುಝಷಾಭಿ
ಯುಕ್ತಂ-ದಾರಾ-ಹೆಂಡತಿ, ಆಪ್ತ-ಮಿತ್ರರು, ಧನ-ದ್ರವ್ಯ, ಬಂಧು-ನೆಂಟರುಗಳೆಂಬ, ಝಷ-ಮತ್ಸ್ಯಗಳಿಂದ, ಅಭಿಯುಕ್ತಂ-ಸೇರಿಕೊಂಡಿರುವ, ಔರ್ವಾನಲಾಭನಿಜರೋಷಂ-ಔ
ರ್ವಾನಲ-ಬಡಬಾಗ್ನಿಯ, ಆಭ-ಕಾಂತಿಯಂತೆ ತೇಜಸ್ಸುಳ್ಳ, ನಿಜ-ಸ್ವಕೀಯವಾದ, ರೋಷಂ-ಕೋಪವುಳ್ಳದ್ದಾದ, ಅನಂಗ-ಕಾಮವೆಂಬ, ಜಾಲಂ-ಜಲಸಮೂಹವುಳ್ಳದ್ದಾದ, ಸಂಸಾರ
ಸಾಗರಂ-ಸಂಸಾರವೆಂಬ ಸಮುದ್ರವನ್ನು, ಅತೀತ್ಯ-ದಾಟಿ, ಹರಿಂ-ವಿಷ್ಣುವನ್ನು ಕುರಿತು, ವ್ರಜಾಮಿ-ಹೋಗುತ್ತಲಿದ್ದೇನೆ ... ... ... || ೫೯ ||

—* ಇಂತು ಅಧ್ಯಾತ್ಮರಾಮಾಯಣದೊಳ್ ಉಮಾಮಹೇಶ್ವರ ಸಂವಾದದಲ್ಲಿ ಯುದ್ಧಕಾಂಡದೊಳ್ ಹತ್ತನೆಯ ಸರ್ಗವು. *—

ಮಹಾದೇವಉವಾಚ || ೧ || ಇತ್ಯುಕ್ತ್ವಾವಚನಂಪ್ರೇಮ್ಣಾರಾಜ್ಞೀಂಮಂಡೋದರೀಂತದಾ|ರಾವಣಃಪ್ರಯಯೌ
ಯೋದ್ಧುಂ ರಾಮೇಣಸಹಸಂಯುಗೇ || ೨ || ದೃಢಂಸ್ಯಂದನಮಾಸ್ಥಾಯ ವೃತೋಘೋರೈರ್ನಿಶಾಚರೈಃ |ಚಕ್ರೈಃಷೋಡಶಭಿ
ರ್ಯುಕ್ತಂ ಸವರೂಥಂಸಕೂಬರಂ || ೩ || ಪಿಶಾಚವದನೈರ್ಘೋರೈಃ ಖರೈರ್ಯುಕ್ತಂಭಯಾವಹಂ | ಸರ್ವಾಸ್ತ್ರಶಸ್ತ್ರಸ
ಹಿತಂಸರ್ವೋಪಸ್ಕರಸಂಯುತಂ || ೪ || ನಿಶ್ಚಕ್ರಾಮಾಥಸಹಸಾರಾವಣೋಭೀಷಣಾಕೃತಿಃ|ಆಯಾಂತಂರಾವಣಂದೃಷ್ಟ್ವಾ
ಭೀಷಣಂರಣಕರ್ಕಶಂ ||೫|| ಸಂತ್ರಸ್ತಾಭೂತ್ತದಾಸೇನಾ ವಾನರೀರಾಮಪಾಲಿತಾ | ಹನೂಮಾನಥಚೋತ್ಪ್ಲುತ್ಯರಾವ
ಣಂಯೋದ್ಧುಮಾಯಯೌ || ೬ || ಆಗತ್ಯಹನುಮಾನ್ರಕ್ಷೋವಕ್ಷಸ್ಯತುಲವಿಕ್ರಮಃ | ಮುಷ್ಟಿಬಂಧಂದೃಢಂಬದ್ಧ್ವಾತಾಡ
ಯಾಮಾಸವೇಗತಃ || ೭ || ತತೋಮುಷ್ಟಿಪ್ರಹಾರೇಣಜಾನುಭ್ಯಾಮಪತದ್ಭುವಿ || ೮ || ಮೂರ್ಛಿತೋಥಮುಹೂರ್ತೇನರಾವ

ಮಹಾದೇವಉವಾಚ || ಈಶ್ವರನು ಹೇಳುತ್ತಲಿದ್ದಾನೆ ||೧|| ರಾಜ್ಞೀಂ-ಪಟ್ಟಮಹಿಷಿಯಾದ, ಮಂಡೋದರೀಂ-ಮಂಡೋದರಿಯನ್ನು ಕುರಿತು, ಇತ್ಯುಕ್ತ್ವಾ-ಈ ರೀತಿಯಾಗಿ ಹೇಳಿ, ತದಾ-ಆಗ, ರಾವಣಃ-ರಾವಣನು, ಸಂಯುಗೇ-ಯುದ್ಧದಲ್ಲಿ, ರಾಮೇಣ-ರಾಮಚಂದ್ರನಿಂದ, ಯೋದ್ಧುಂ-ಯುದ್ಧಮಾಡುವದಕ್ಕೆ, ಪ್ರಯಯೌ-ಹೊರಟು ಹೋದನು||೨|| ದೃಢಂ-ಬಲವಾದ, ಸ್ಯಂದನಂ-ತೇರನ್ನು, ಆಸ್ಥಾಯ-ಏರಿ, ಘೋರೈಃ-ಕ್ರೂರರಾದ, ನಿಶಾಚರೈಃ-ರಾಕ್ಷಸರಿಂದ, ವೃತಃ-ಕೂಡಿದವನಾಗಿ, ಷೋಡಶಭಿಃ-ಹದಿನಾರು, ಚಕ್ರೈಃ-ಚಕ್ರಗಳಿಂದ ಯುಕ್ತಂ-ಕೂಡಿರುವ, ಸವರೂಥಂ-ರಥಕ್ಕೆ ರಕ್ಷಕವಾದ ಹುಲಿ ಚರ್ಮಗಳಿಂದ ಸಕೂಬರಂ-ನೊಗದಿಂದ ಕೂಡಿರುವ ||೩|| ಪಿಶಾಚವದನೈಃ-ಪಿಶಾಚದಂತೆ ಮುಖವುಳ್ಳ, ಘೋರೈಃ-ಕ್ರೂರಗಳಾದ, ಖರೈಃ-ಹೇಸರ ಕತ್ತೆಗಳಿಂದ, ಯುಕ್ತಂ-ಕೂಡಿರುವ, ಭಯಾವಹಂ-ಭಯವನ್ನುಂಟುಮಾಡುವ, ಸರ್ವಾಸ್ತ್ರಶಸ್ತ್ರಸಹಿತಂ-ಸರ್ವ-ಸಮಸ್ತಗಳಾದ, ಅಸ್ತ್ರ-ಅಷ್ಟ ಘಂಟಾಶಕ್ತಿ ಅಷ್ಟ ಘಂಟಾ ಶೂಲ ಮುಂತಾದ ಅಸ್ತ್ರಗಳಿಂದ, ಶಸ್ತ್ರ-ಕತ್ತಿ ಬಾಣ ಮುಂತಾದ ಶಸ್ತ್ರಗಳಿಂದಲೂ, ಸರ್ವೋಪಸ್ಕರಸಂಯುತಂ-ಸಮಸ್ತವಾದ ಸಾಮಗ್ರಿಗಳಿಂದ ಕೂಡಿರುವ, (ರಥ-ತೇರನ್ನು, ಆರುಹ್ಯ-ಹತ್ತಿ,) || ೪ || ಭೀಷಣಃ-ಭಯಂಕರವಾದ, ಆಕೃತಿಃ-ರೂಪವುಳ್ಳವನಾದ, ರಾವಣಃ-ರಾವಣನು, ಸಹಸಾ-ಜಾಗ್ರತೆಯಾಗಿ, ನಿಶ್ಚಕ್ರಾಮ-ಹೊರಟನು, ಭೀಷಣಂ-ಭಯಂಕರನಾದ, ರಣಕರ್ಕಶಂ-ರಣ-ಯುದ್ಧದಲ್ಲಿ, ಕರ್ಕಶಂ-ಅತಿ ನಿರ್ದಯನಾದ, ಆಯಾಂತಂ-ಬರುತ್ತಿರುವ, ರಾವಣಂ-ರಾವಣನನ್ನು, ದೃಷ್ಟ್ವಾ-ಕಪಿಗಳು ನೋಡಿ ||೫|| ತದಾ-ಆಗ, ರಾಮಪಾಲಿತಾ-ರಾಮಚಂದ್ರನಿಂದ ಕಾಪಾಡುತ್ತಿರುವ, ವಾನರೀ-ಕಪಿಗಳ ಸಂಬಂಧವಾದ, ಸೇನಾ-ಸೇನೆಯು, ಸಂತ್ರಸ್ತಾ-ಭಯಪಟ್ಟದ್ದಾಗಿ, ಅಭೂತ್-ಆಯಿತು, ಹನೂಮಾನ್-ಆಂಜನೇಯನು, ಅಥ-ಅನಂತರದಲ್ಲಿ, ಉತ್ಪ್ಲುತ್ಯ-ಹಾರಿ, ರಾವಣಂ-ರಾವಣನನ್ನು ಕುರಿತು, ಯೋದ್ಧುಂ-ಯುದ್ಧವನ್ನು ಮಾಡುವದಕ್ಕೆ, ಆಯಯೌ-ಬಂದನು ||೬|| ಅತುಲವಿಕ್ರಮಃ-ಅತುಲ-ಸಮಾನವಿಲ್ಲದ, ವಿಕ್ರಮಃ-ಪರಾಕ್ರಮವುಳ್ಳ, ಹನುಮಾನ್-ಆಂಜನೇಯನು, ಆಗತ್ಯ-ಬಂದು, ಮುಷ್ಟಿಬಂಧಂ-ಹಿಡಿಯನ್ನು, ದೃಢಂ-

ಣಃಪುನರುತ್ಥಿತಃ । ಉವಾಚಚಹನೂಮಂತಂಶೂರೋಸಿಮಮಸಂಮತಃ ॥ ೯ ॥ ಹನೂಮಾನಾಹತಂಧಿಙ್ಮಾಂಯಸ್ತ್ವಂ
ಜೀವಸಿರಾವಣ ॥ ತ್ವಂತಾವನ್ಮುಷ್ಟಿನಾವಕ್ಷೋಮಮತಾಡಯರಾವಣ ॥ ೧೦ ॥ ಪಶ್ಚಾತ್ತ್ವಂಮಯಾಹತಃಪ್ರಾಣಾನ್ಮೋಕ್ಷ್ಯಸೆ
ನಾತ್ರಸಂಶಯಃ । ತಥೇತಿಮುಷ್ಟಿನಾವಕ್ಷೋರಾವಣೇನಾಪಿತಾಡಿತಃ ॥ ೧೧ ॥ ವಿಘೂರ್ಣಮಾನನಯನಃಕಿಂಚಿತ್ಕಶ್ಮಲಮಾಯಯು
ಯೌ । ಸಂಜ್ಞಾಮವಾಪ್ಯಕಪಿರಾಡ್ರಾವಣಂಹಂತುಮುದ್ಯತಃ ॥ ೧೨ ॥ ತತೋನ್ಯತ್ರಗತೋಭೀತ್ಯಾರಾವಣೋರಾಕ್ಷಸಾಧಿ
ಪಃ । ಹನೂಮಾನಂಗದಶ್ಚೈವನಲೋನೀಲಸ್ತಥೈವಚ ॥ ೧೩ ॥ ಚತ್ವಾರಸ್ಸಮವೇತಾಗ್ರೇದೃಷ್ಟ್ವಾರಾಕ್ಷಸಪುಂಗವಾನ್ ।

ಬಲವಾಗಿ, ಬಧ್ವಾ-ಹಿಡಿದು, ರಕ್ಷೋವಕ್ಷಸಿ-ರಾವಣನ ಯೆದೆಯಲ್ಲಿ, ವೇಗತಃ-ಬಿರುಸಾಗಿ, ತಾಡಯಾಮಾಸ-ಹೊಡದನು ॥ ೮ ॥ ತತಃ-ಆ ಬಳಿಕ, ಮುಷ್ಟಿ-ಮುಷ್ಟಿಯ, ಪ್ರಹಾರೇಣ-ಪೆಟ್ಟಿನಿಂದ, ರಥೇ-ರಥದಲ್ಲಿ, ಜಾನುಭ್ಯಾಂ-ಮೊಣಕಾಲೂರಿಕೊಳ್ಳುವದರಿಂದ, ಆಪತತ್-ರಾವಣನು ಬಿದ್ದವನಾದನು, ಅಥ-ಆ ಮೇಲೆ, ಮುಹೂರ್ತೇನ-ಮುಹೂರ್ತ ಕಾಲದಿಂದ, ಮೂರ್ಛಿತಃ-ಮೂರ್ಛೆಯನ್ನು ಹೊಂದಿದ, ರಾವಣಃ-ರಾವಣನು, ಪುನಃ-ತಿರಿಗಿ, ಉತ್ಥಿತಃ-ಎದ್ದವನಾಗಿ, ಮಮ-ನನಗೆ, ಸಮ್ಮತಃ-ಒಪ್ಪಿದ, ಶೂರಃ-ಪರಾಕ್ರಮವುಳ್ಳವನು, ಅಸಿ-ಆಗಿದ್ದೀ, (ಎಂಬದಾಗಿ) ಹನೂಮಂತಂ-ಆಂಜನೇಯನನ್ನು ಕುರಿತು, ಉವಾಚ-ಹೇಳಿದನು ॥ ೯ ॥ ತಂ-ರಾವಣನನ್ನು ಕುರಿತು, ಹನೂಮಾನ್-ಆಂಜನೇಯನು, ಆಹ-ಹೇಳಿದನು, ರಾವಣ-ರಾವಣನೇ, ಯಃ-ಯಾವ, ತ್ವಂ-ನೀನು, ಜೀವಸಿ-ಬದುಕಿದ್ದೀ ಆದ್ದರಿಂದ ಮಾಂ-ನನ್ನನ್ನು, ಧಿಕ್-ನಿಂದಿಸು, ರಾವಣ-ರಾವಣನೇ, ತ್ವಂತಾವತ್-ನೀನಾದರೆ, ಮಮ-ನನ್ನ, ವಕ್ಷಃ-ಎದೆಯನ್ನು, ಮುಷ್ಟಿನಾ-ಮುಷ್ಟಿಯಿಂದ, ತಾಡಯ-ಹೊಡಿ ॥ ೧೦ ॥ ಪಶ್ಚಾತ್-ಆ ಬಳಿಕ, ಮಯಾ-ನನ್ನಿಂದ, ಹತಃ-ಹೊಡೆಯಲ್ಪಟ್ಟವನಾಗಿ, ಪ್ರಾಣಾನ್-ಪ್ರಾಣಗಳನ್ನು, ಮೋಕ್ಷ್ಯಸೆ-ಬಿಡುತ್ತಲಿದ್ದೀ, ಅತ್ರ-ಈ ವಿಷಯದಲ್ಲಿ, ಸಂಶಯಃ-ಸಂದೇಹವು, ನ-ಇಲ್ಲ, ತಥೇತಿ-ಹಾಗೆಯೇ ಆಗಲೆಂದು, ರಾವಣೇನ-ರಾವಣನಿಂದ, ಮುಷ್ಟಿನಾ-ಮುಷ್ಟಿಯಿಂದ, ವಕ್ಷಃ-ಎದೆಯನ್ನು ಕುರಿತು, ತಾಡಿತಃ-ಆಂಜನೇಯನು ಹೊಡೆಯಲ್ಪಟ್ಟವನಾದನು ॥ ೧೧ ॥ ಕಪಿರಾಟ್-ಆಂಜನೇಯನು, ವಿಘೂರ್ಣಮಾನನಯನಃ-ರಾವಣನ ಮುಷ್ಟಿಪ್ರಹಾರದಿಂದ ಕಣ್ಣುಗುಡ್ಡೆಗಳು ಸಹ ತಿರಿಗಿಸಲ್ಪಟ್ಟವನಾಗಿ, ಕಿಂಚಿತ್-ಕೊಂಚವಾಗಿ, ಕಶ್ಮಲಂ-ಬಾಧೆಯನ್ನು, ಆಯಯೌ-ಹೊಂದಿದನು, ಸಂಜ್ಞಾಂ-ಪ್ರಜ್ಞೆಯನ್ನು, ಅವಾಪ್ಯ-ಹೊಂದಿ, ರಾವಣಂ-ರಾವಣನನ್ನು, ಹಂತುಂ-ಕೊಲ್ಲುವದಕ್ಕೆ, ಉದ್ಯತಃ-ಆಂಜನೇಯನು ಸಿದ್ಧನಾದನು ॥ ೧೨ ॥ ರಾಕ್ಷಸಾಧಿಪಃ-ರಾಕ್ಷಸರ ದೊರೆಯಾದ, ರಾವಣಃ-ರಾವಣನು, ಭೀತ್ಯಾ-ಆಂಜನೇಯನ ಭಯದಿಂದ, ಅನ್ಯತ್ರ-ಮತ್ತೊಂದು ಕಡೆಯಲ್ಲಿ ಯುದ್ಧಕ್ಕೆ, ಗತಃ-ಹೊರಟು ಹೋದನು, ಹನೂಮಾನ್-ಆಂಜನೇಯನು, ಅಂಗದಃ-ಅಂಗದನು, ನಲಃ-ನಲನು, ನೀಲಃ-ನೀಲನು ॥ ೧೩ ॥ ಚತ್ವಾರಃ-ಈ ನಾಲ್ಕು ಮಂದಿಯೂ, ಸಮವೇತಾಃ-ಕೂಡಿದವರಾಗಿ, ಅಗ್ರೇ-ತನ್ನ ಯೆದುರಿಗೆ ಇರುವ, ರಾಕ್ಷಸಪುಂಗವಾನ್-ರಾಕ್ಷಸ ಶ್ರೇಷ್ಠರಾದ ಅಗ್ನಿವರ್ಣ, ಸರ್ಪರೋಮ, ಖಡ್ಗರೋಮ, ವೃಶ್ಚಿಕರೋಮರೆಂಬ ನಾಲ್ಕು ಮಂದಿಯನ್ನು, ದೃಷ್ಟ್ವಾ-ನೋಡಿ, ಕ್ರಮಶಃ-ಪಾಳ್ಯವಾಗಿ, ಅಗ್ನಿವರ್ಣಂ-ಅಗ್ನಿವರ್ಣನನ್ನು

ಅಗ್ನಿವರ್ಣಂತಥಾಸರ್ಪರೋಮಾಣಂಖಡ್ಗರೋಮಕಂ ॥ ೧೪ ॥ ತಥಾವೃಶ್ಚಿಕರೋಮಾಣಂಸುಗ್ರೀವಃ(ಶ್ಚ)ಮಹಾಮುರಾನ್ । ಚತ್ವಾರಶ್ಚತುರೋಹತ್ವಾರಾಕ್ಷಸಾನ್ಭೀಮವಿಕ್ರಮಾನ್ ॥ ೧೫ ॥ ಸಿಂಹನಾದಂಪೃಥಕ್ಕೃತ್ವಾರಾಮಪಾರ್ಶ್ವಮುಪಾಗತಾಃ । ತತಃಕ್ರುದ್ಧೋದಶಗ್ರೀವಃಸಂದಶ್ಯದಶನಚ್ಛದಂ ॥ ೧೬ ॥ ವಿವೃತ್ಯನಯನೇಕ್ರೂರೋರಾಮಮೇವಾನ್ವಧಾವತ । ದಶಗ್ರೀವೋರಥಸ್ಥಸ್ತುರಾಮಂವಜ್ರೋಪಮೈಶ್ಶರೈಃ ॥ ೧೭ ॥ ಆಜಘಾನಮಹಾಘೋರೈರ್ಧಾರಾಭಿರಿವತೋಯದಃ । ರಾಮಸ್ಯಪುರತಸ್ಸರ್ವಾನ್ವಾನರಾನಪಿವಿವ್ಯಥೇ ॥ ೧೮ ॥ ತತಃಪಾವಕಸಂಕಾಶೈಃಘೋರೈಃಕಾಂಚನಭೂಷಣೈಃ । ಅಭ್ಯವರ್ಷದ್ರಣೇರಾಮೋದಶಗ್ರೀವಂಸಮಾಹಿತಃ ॥ ೧೯ ॥ ರಥಸ್ಥಂರಾವಣಂದೃಷ್ಟ್ವಾಭೂಮಿಸ್ಥಂರಘುನಂದನಂ । ಆಹೂಯಮಾತಲಿಂಶ

ಅಂಜನೇಯನು, ಸರ್ಪರೋಮಾಣಂ-ಸರ್ಪರೋಮನನ್ನು ಅಂಗದನು, ಖಡ್ಗರೋಮಕಂ-ಖಡ್ಗರೋಮಕನನ್ನು ನಲನು, ವೃಶ್ಚಿಕರೋಮಾಣಂ-ವೃಶ್ಚಿಕರೋಮನನ್ನು ನೀಲನು, ಈ ರೀತಿಯಾಗಿ, ಅಸುರಾನ್-ನಾಲ್ಕು ಮಂದಿ ರಾಕ್ಷಸರನ್ನು, (ನಾಲ್ಕು ಮಂದಿ ಕಪಿಗಳು,) ನಿಜಘ್ನುಃ-ಕೊಂದರು, ಚತ್ವಾರಃ-ನಾಲ್ಕುಮಂದಿಯಾದ, ಹನುಮ ದಂಗದ ನಲ ನೀಲರು, ಚತುರಃ-ನಾಲ್ಕುಮಂದಿಯಾದ ಭೀಮವಿಕ್ರಮಾನ್-ಭಯಂಕರವಾದ ಪರಾಕ್ರಮವುಳ್ಳವರಾದ, ಅಗ್ನಿವರ್ಣ, ಸರ್ಪರೋಮ, ಖಡ್ಗರೋಮ, ವೃಶ್ಚಿಕರೋಮರೆಂಬ ರಾಕ್ಷಸರನ್ನು, ಹತ್ವಾ-ಕೊಂದು ॥ ೧೫ ॥ (ಆ ಕಪಿಗಳು,) ಪೃಥಕ್-ಬೇರೆ, ಸಿಂಹನಾದಂ-ಸಿಂಹಧ್ವನಿಯನ್ನು, ಕೃತ್ವಾ-ಮಾಡಿ, ರಾಮಪಾರ್ಶ್ವಂ-ರಾಮಚಂದ್ರನ ಬಳಿಯನ್ನು ಕುರಿತು, ಉಪಾಗತಾಃ-ಬಂದವರಾದರು, ತತಃ-ಆ ಬಳಿಕ, ದಶಗ್ರೀವಃ-ರಾವಣನು, ಕ್ರುದ್ಧಃ-ಕೋಪವುಳ್ಳವನಾಗಿ, ದಶನಚ್ಛದಂ-ಓಷ್ಠವನ್ನು, ಸಂದಶ್ಯ-ಸೇರಿಸಿ ಹಲ್ಲು ಕಡಿಯುತ್ತಾ ॥ ೧೬ ॥ ನಯನೇ-ಕಣ್ಣುಗಳನ್ನು, ವಿವೃತ್ಯ-ತೆರೆದುಕೊಂಡು, ಕ್ರೂರಃ-ನಿರ್ದಯನಾದ ರಾವಣನು, ರಾಮಮೇವ-ರಾಮನನ್ನು ಕುರಿತು, ಅನ್ವಧಾವತ-ಅನುಸರಿಸಿ ಮೇಲೆ ಬಿದ್ದು ಬಂದವನಾದನು, ದಶಗ್ರೀವಃ-ರಾವಣನು, ರಥಸ್ಥಃ-ತೇರಿನೊಳಗಿರುವವನಾಗಿ, ವಜ್ರೋಪಮೈಃ-ವಜ್ರಾಯುಧಕ್ಕೆ ಸರಿಯಾದ, ಶರೈಃ-ಬಾಣಗಳಿಂದ ॥ ೧೭ ॥ ಮಹಾಘೋರೈಃ-ಅತ್ಯಂತ ಕ್ರೂರವಾಗಿ ಬೀಳುತ್ತಿರುವ, ಧಾರಾಭಿಃ-ಉದಕ ಧಾರೆಗಳಿಂದ, ತೋಯದಇವ-ಮೇಘದಂತೆ, ರಾಮಂ-ರಾಮಚಂದ್ರನನ್ನು, ಆಜಘಾನ-ಹೊಡೆದನು, ರಾಮಸ್ಯ-ರಾಮಚಂದ್ರನ, ಪುರತಃ-ಮುಂದೆ, ಸರ್ವಾನ್-ಸಮಸ್ತರಾದ, ವಾನರಾನ್-ಕಪಿಗಳನ್ನು, ವಿವ್ಯಥೇ-ಹೊಡೆದಂಥಾವನಾದನು ॥ ೧೮ ॥ ತತಃ-ಆ ಬಳಿಕ, ರಣೇ-ಯುದ್ಧದಲ್ಲಿ, ಸಮಾಹಿತಃ-ಸನ್ನದ್ಧನಾದ, ರಾಮಃ-ರಾಮಚಂದ್ರನು, ಪಾವಕ-ಬೆಂಕಿಗೆ, ಸಂಕಾಶೈಃ-ಸಮವಾದ, ಘೋರೈಃ-ಕ್ರೂರಗಳಾದ, ಕಾಂಚನಭೂಷಣೈಃ-ಭಂಗಾರದಿಂದಲಂಕೃತವಾದ (ಬಾಣಗಳಿಂದ,) ದಶಗ್ರೀವಂ-ರಾವಣನನ್ನು ಕುರಿತು, ಅಭ್ಯವರ್ಷತ-ವರ್ಷಿಸಿದನು ॥ ೧೯ ॥ ರಥಸ್ಥಂ-ತೇರಿನ ಮೇಲಿರುವ, ರಾವಣಂ-ರಾವಣನನ್ನು, ಭೂಮಿಸ್ಥಂ-ಭೂಮಿಯಲ್ಲಿರುವ, ರಘುನಂದನಂ-ರಾಮಚಂದ್ರನನ್ನು, ದೃಷ್ಟ್ವಾ-ನೋಡಿ, ಶಕ್ರಃ-ಇಂದ್ರನು, ಮಾತಲಿಂ-ತನ್ನ ಸಾರಥಿಯಾದ ಮಾತಲಿಯನ್ನು, ಆಹೂಯ-ಕರೆದು, ಇದಂ-ಈ, ವಚನಂ-ಮಾತನ್ನು, ಅಬ್ರವೀತ್-ಹೇಳಿದನು ॥ ೨೦ ॥ ಅನಘ-ನಿರ್ದೋಷಿ

ಕ್ರೋವಚನಂಚೆದಮಬ್ರವೀತ್ ॥ ೨೦ ॥ ರಥೇನಮಮಭೂಮಿಸ್ಥಂಶೀಘ್ರಂಯಾಹಿರಘೂತ್ತಮಂ। ತ್ವರಿತಂಭೂತಲಂಗತ್ವಾ ಕುರುಕಾರ್ಯಂಮಮಾನಘ॥೨೧॥ಏವಮುಕ್ತೋಥತಂನತ್ವಾಮಾತಲಿರ್ದೇವಸಾರಥಿಃ।ತತೋಹಯೈಶ್ಚ ಸಂಯೋಜ್ಯಹರಿತೈಸ್ಸ್ಯಂದನೋತ್ತಮಂ॥೨೨॥ ಸ್ವರ್ಗಾಜ್ಜಯಾರ್ಥಂರಾಮಸ್ಯಹ್ಯುಪಚಕ್ರಾಮಮಾತಲಿಃ । ಅಬ್ರವೀಚ್ಚ ತದಾ ರಾಮಮುಪತರ್ಕ್ಯ ರಥೇಸ್ಥಿತಃ।ಪ್ರಾಂಜಲಿರ್ದೇವರಾಜೇನಪ್ರೇಷಿತೋಸ್ಮಿರಘೂತ್ತಮ॥ ೨೩॥ ರಥೋಯಂದೇವರಾಜಸ್ಯವಿಜಯಾಯತವಪ್ರಭೋ।ಪ್ರೇಷಿತಶ್ಚ ಮಹಾರಾಜಧನುರೈಂದ್ರಂಚಭೂಷಿತಂ॥೨೪॥ಅಭೇದ್ಯಂಕವಚಂಖಡ್ಗಂದಿವ್ಯಂತೂಣೀಯುಗಂತಥಾ । ಆರುಹ್ಯಚರಥಂ ರಾಮರಾವಣಂಜಹಿರಾಕ್ಷಸಂ॥೨೫॥ಮಯಾಸಾರಥಿನಾದೇವವೃತ್ರಂದೇವಪತಿರ್ಯಥಾ।ಇತ್ಯುಕ್ತಸ್ತಂಪರಿಕ್ರಮ್ಯನಮಸ್ಕೃತ್ಯ

ಯಾದ ಮಾತಲಿಯೇ, ಮಮ-ನನ್ನ, ರಥೇನ-ತೇರಿನ ಸಹಿತವಾಗಿ, ಶೀಘ್ರಂ-ವೇಗನೆ, ಭೂಮಿಸ್ಥಂ-ನೆಲದಲ್ಲಿ ನಿಂತು ಯುದ್ಧ ಮಾಡುತ್ತಿರುವ, ರಘೂತ್ತಮಂ-ರಾಮಚಂದ್ರನನ್ನು ಕುರಿತು, ಯಾಹಿ-ಹೋಗು, ತ್ವರಿತಂ-ಜಾಗ್ರತೆಯಾಗಿ, ಭೂತಲಂ-ಭೂಮಿಯನ್ನು, ಗತ್ವಾ-ಸೇರಿ, ಮಮ-ನನ್ನ, ಕಾರ್ಯಂ-ಕೆಲಸವನ್ನು, ಕುರು-ಮಾಡು ॥ ೨೧ ॥ ದೇವಸಾರಥಿಃ-ಇಂದ್ರನಿಗೆ ಸಾರಥಿಯಾದ, ಮಾತಲಿಃ-ಮಾತಲಿಯು, ಏವಮುಕ್ತಃ-ಹೀಗೆ ಹೇಳಲ್ಪಟ್ಟವನಾಗಿ, ಅಥ-ಆ ಬಳಿಕ, ತಂ-ಇಂದ್ರನನ್ನು, ನತ್ವಾ-ವಂದಿಸಿ, ತತಃ-ಆ ಬಳಿಕ, ಹರಿತೈಃ-ಹರಿದ್ವರ್ಣಗಳಾದ, ಹಯೈಃ-ಕುದುರೆಗಳಿಂದ, ಸ್ಯಂದನೋತ್ತಮಂ-ಆ ಶ್ರೇಷ್ಠವಾದ ರಥವನ್ನು, ಸಂಯೋಜ್ಯ-ಸೇರಿಸಿ ॥೨೨॥ ಮಾತಲಿಃ-ಮಾತಲಿಯು, ರಾಮಸ್ಯ-ರಾಮಚಂದ್ರನಿಗೆ, ಜಯಾರ್ಥಂ-ಜಯವಾಗುವದಕ್ಕೆ, ಸ್ವರ್ಗಾತ್-ಸ್ವರ್ಗದಿಂದ, ಉಪಚಕ್ರಾಮ-ಬಂದವನಾದನು, ಅಪ್ರತರ್ಕ್ಯ-ಊಹಿಸಲ್ಕೆವಲ್ಲದ, ರಥೇ-ತೇರಿನಲ್ಲಿ, ಸ್ಥಿತಃ-ಇರುತ್ತಿರುವ ಮಾತಲಿಯು, ತದಾ-ಆಗ, ಪ್ರಾಂಜಲಿಃ-ಅಂಜಲಿ ಬದ್ಧನಾಗಿ, ರಾಮಂ-ರಾಮಚಂದ್ರನನ್ನು ಕುರಿತು, ಅಬ್ರವೀತ್-ಹೇಳಿದನು, ರಘೂತ್ತಮ-ರಾಮಚಂದ್ರನೇ, ದೇವರಾಜೇನ-ಇಂದ್ರನಿಂದ, ಪ್ರೇಷಿತಃ-ಕಳುಹಿಸಲ್ಪಟ್ಟವನು, ಅಸ್ಮಿ-ಆಗಿದ್ದೇನೆ ॥೨೩॥ ಪ್ರಭೋ-ಸ್ವಾಮಿಯೇ, ದೇವರಾಜಸ್ಯ-ಇಂದ್ರನಿಂದ, ಅಯಂ-ಈ, ರಥಃ-ರಥವು, ತವ-ನಿನಗೆ, ವಿಜಯಾಯ-ಜಯಕ್ಕೋಸ್ಕರವಾಗಿ, ಪ್ರೇಷಿತಃ-ಕಳುಹಿಸಲ್ಪಟ್ಟಿತು, ಮಹಾರಾಜ-ಮಹಾರಾಜನಾದ ರಾಮಚಂದ್ರನೇ, ಭೂಷಿತಂ-ಅಲಂಕರಿಸಲ್ಪಟ್ಟ, ಐಂದ್ರಂ-ಇಂದ್ರ ಸಂಬಂಧವಾದ, ಧನುಃ-ಬಿಲ್ಲು (ಕಳುಹಿಸಲ್ಪಟ್ಟಿದೆ ॥ ೨೪ ॥ ಅಭೇದ್ಯಂ-ಭೇದಿಸದೆ ಇರುವ, ಕವಚಂ-ಕವಚವು, ಖಡ್ಗಂ-ಕತ್ತಿಯು, ದಿವ್ಯಂ-ಯೋಗ್ಯವಾದ, ತೂಣೀಯುಗಂ-ಎರಡು ಬಾಣ ಚೀಲಗಳು, ತಥಾ-ಹಾಗೆಯೇ (ಕಳುಹಿಸಲ್ಪಟ್ಟಿದೆ,) ರಾಮ-ರಾಮಚಂದ್ರನೇ, ರಥಂ-ತೇರನ್ನು, ಆರುಹ್ಯ-ಹತ್ತಿ, ರಾಕ್ಷಸಂ-ರಾಕ್ಷಸನಾದ, ರಾವಣಂ-ರಾವಣನನ್ನು, ಜಹಿ-ಜಯಿಸು ॥೨೫॥ ದೇವ-ಸ್ವಾಮಿಯೇ, ಸಾರಥಿನಾ-ಸಾರಥಿಯಾದ, ಮಯಾ-ನನ್ನಿಂದ ಕೂಡಿದವನಾಗಿ, ದೇವಪತಿಃ-ಇಂದ್ರನು, ವೃತ್ರಂ-ವೃತ್ರಾಸುರನನ್ನು, ಯಥಾ-ಹ್ಯಾಗೆ ಜಯಿಸಿದನೋ, ಹಾಗೆ ಜಯಿಸುವವನಾಗಿ, ಇತ್ಯುಕ್ತಃ-ಹೀಗೆ ಹೇಳಲ್ಪಟ್ಟವನಾದ ರಾಮಚಂದ್ರನು, ತಂ-ಆ, ರಥೋತ್ತಮಂ-ಶ್ರೇಷ್ಠವಾದ ತೇರನ್ನು, ಪರಿಕ್ರಮ್ಯ-ಪ್ರದಕ್ಷಿಣ ಮಾಡಿ, ನಮಸ್ಕೃತ್ಯ-ನಮಸ್ಕಾರವನ್ನುಮಾಡಿ ॥೨೬॥ ರಾಮಃ-

ರಥೋತ್ತಮಂ॥ ೨೬॥ ಆರುರೋಹರಥಂರಾಮೋಲೋಕಾನ್ಲಕ್ಷ್ಮ್ಯಾವಿರಾಜಯನ್ । ತತೋಭವನ್ಮಹದ್ಯುದ್ಧಂ ಭೈರವಂರೋಮ
ಹರ್ಷಣಂ॥೨೭॥ಮಹಾತ್ಮನೋರಾಘವಸ್ಯರಾವಣಸ್ಯಚಧೀಮತಃ । ಆಗ್ನೇಯೇನಚಆಗ್ನೇಯಂದೈವಂದೈವೇನರಾಘವಃ॥೨೮॥
ಅಸ್ತ್ರಂರಾಕ್ಷಸರಾಜಸ್ಯಜಘಾನಪರಮಾಸ್ತ್ರವಿತ್।ತತಸ್ತುಸಸೃಜೇಘೋರಂ ರಾಕ್ಷಸಂಚಾಸ್ತ್ರಮಸ್ತ್ರವಿತ್॥೨೯॥ಕ್ರೋ
ಧೇನಮಹತಾವಿಷ್ಟೋರಾಮಸ್ಯೋಪರಿರಾವಣಃ।ರಾವಣಸ್ಯಧನುರ್ಮುಕ್ತಾಃಸರ್ಪಾಭೂತ್ವಾಮಹಾವಿಷಾಃ । ಶರಾಃಕಾಂಚ
ನಪುಂಖಾಭಾರಾಘವಂಪರಿತೋಪತನ್ ॥ ೩೦ ॥ ತೈಶ್ಶರೈಸ್ಸರ್ಪವದನೈರ್ವಮದ್ಭಿರನಲಂಮುಖೈಃ । ದಿಶಶ್ಚ ವಿದಿಶಶ್ಚೈವ
ವ್ಯಾಪ್ತಾಸ್ತತ್ರತದಾಭವನ್॥ ೩೧॥ ರಾಮಸ್ಸರ್ಪಾನ್ಸ್ತತೋದೃಷ್ಟ್ವಾಸಮಂತಾತ್ಪರಿಪೂರಿತಾನ್ । ಸೌಪರ್ಣಮಸ್ತ್ರಂ

ರಾಮಚಂದ್ರನು, ಲೋಕಾನ್-ಲೋಕಗಳನ್ನು, ಲಕ್ಷ್ಮ್ಯಾ-ಕಾಂತಿಯಿಂದ, ವಿರಾಜಯನ್-ಪ್ರಕಾಶಮಾನ ಮಾಡುತ್ತಿರುವವನಾಗಿ, ರಥಂ-ತೇರನ್ನು ಆರುರೋಹ-ಏರಿದನು, ತತಃ-ಆ ಬಳಿಕ, ರೋಮಹರ್ಷಣಂ-ರೋಮಾಂಚಕರವಾದ, ಭೈರವಂ-ಭಯಂಕರವಾದ, ಮಹತ್-ಅಧಿಕವಾದ, ಯುದ್ಧಂ-ಯುದ್ಧವು ॥ ೨೭ ॥ ಮಹಾತ್ಮನಃ-ಧರ್ಮಾತ್ಮನಾದ, ಧೀಮತಃ-ಬುದ್ಧಿಶಾಲಿಯಾದ, ರಾಘವಸ್ಯಚ-ರಾಮಚಂದ್ರನಿಗೂ,ರಾವಣಸ್ಯಚ-ರಾವಣನಿಗೂ, ಅಭವತ್-ಆಯಿತು, ರಾಘವಃ-ರಾಮಚಂದ್ರನು, ಆಗ್ನೇಯೇನ-ಆಗ್ನೇಯಾಸ್ತ್ರದಿಂದ, ಆಗ್ನೇಯಂ-ಆಗ್ನೇಯಾಸ್ತ್ರವನ್ನು, ದೈವೇನ-ದೇವಸಂಬಂಧವಾದ ಅಸ್ತ್ರದಿಂದ, ದೈವಂ-ದೇವ ಸಂಬಂಧವಾದ ಅಸ್ತ್ರವನ್ನು ॥೨೮॥ ಹೀಗೆ ರಾಕ್ಷಸರಾಜಸ್ಯ-ರಾವಣನ,ಅಸ್ತ್ರಂ-ಅಸ್ತ್ರವನ್ನು, ಪರಮಾಸ್ತ್ರವಿತ್-ಉತ್ತಮಾಸ್ತ್ರಗಳನ್ನು ತಿಳಿದಿರುವ ರಾಮಚಂದ್ರನು,ಜಘಾನ-ಹೊಡದನು, ಅಸ್ತ್ರವಿತ್-ಅಸ್ತ್ರಗಳನ್ನು ತಿಳಿದಿರುವ, ರಾವಣಃ-ರಾವಣನು, ತತಃ-ಆಬಳಿಕ, ಘೋರಂ-ಕ್ರೂರವಾದ, ರಾಕ್ಷಸಂ-ಆಸುರವೆಂಬ ಅಸ್ತ್ರವನ್ನು ॥ ೨೯ ॥ ರಾಮಸ್ಯ-ರಾಮಚಂದ್ರನ, ಉಪರಿ-ಮೇಲೆ,ಮಹತಾ-ಹೆಚ್ಚಾದ, ಕ್ರೋಧೇನ-ಕೋಪದಿಂದ, ಆವಿಷ್ಟಃ-ಕೂಡಿದವನಾಗಿ, ಸಸೃಜೇ-ಬಿಟ್ಟವನಾದನು, ರಾವಣಸ್ಯ-ರಾವಣನ,ಧನುರ್ಮುಕ್ತಾಃ-ಬಿಲ್ಲಿನಿಂದ ಬಿಡಲ್ಪಟ್ಟವುಗಳಾದ, ಶರಾಃ-ಬಾಣಗಳು, ಮಹಾವಿಷಾಃ-ಅಧಿಕ ವಿಷವುಳ್ಳವುಗಳಾದ, ಸರ್ಪಾಃ-ಸರ್ಪಗಳು, ಭೂತ್ವಾ-ಆಗಿ, ಕಾಂಚನಪುಂಖಾಭಾಃ-ಕಾಂಚನ-ಭಂಗಾರದಿಂದ ಮಾಡಲ್ಪಟ್ಟ, ಪುಂಖ-ಎದೆಯಮೇಲೆ ಏರಿಸುವ ಅಣೆಯ, ಆಭಾಃ-ಕಾಂತಿಯುಳ್ಳವುಗಳಾಗಿ, ರಾಘವಂ-ರಾಮಚಂದ್ರನನ್ನು, ಪರಿತಃ-ಸುತ್ತಲೂ, ಅಪತನ್-ಬಿದ್ದವು ॥ ೩೦ ॥ ಅನಲಂ-ಬೆಂಕಿಯನ್ನು, ಮುಖೈಃ-ಮುಖಗಳಿಂದ, ವಮದ್ಭಿಃ-ಕಾರುತ್ತಿರುವ, ಸರ್ಪವದನೈಃ-ಹಾವಿನ ಮುಖಗಳುಳ್ಳವುಗಳಾದ, ತೈಃ-ಆ, ಬಾಣೈಃ-ಬಾಣಗಳಿಂದ,ತತ್ರ-ಆ ಯುದ್ಧ ಭೂಮಿಯಲ್ಲಿ, ದಿಶಶ್ಚ ವಿದಿಶಶ್ಚ-ದಿಕ್ಕುಗಳು ವಿದಿಕ್ಕುಗಳೂ ಕೂಡ, ವ್ಯಾಪ್ತಾಃ-ತುಂಬಿದವು, ತದಾ-ಆಗ, ಅಭವನ್-ಆದವು ॥ ೩೧ ॥ ತತಃ-ಆ ಬಳಿಕ, ಸಮಂತಾತ್-ಸುತ್ತಲೂ, ಪರಿಪೂರಿತಾನ್-ತುಂಬಿರುವ, ಸರ್ಪಾನ್-ಸರ್ಪಗಳನ್ನು, ರಾಮಃ-ರಾಮಚಂದ್ರನು, ದೃಷ್ಟ್ವಾ-ನೋಡಿ, ಘೋರಂ-ಕ್ರೂರವಾದ, ಸೌಪರ್ಣಂ-ಗರುಡ ದೇವತಾಕವಾದ, ಅಸ್ತ್ರಂ-ಅಸ್ತ್ರವನ್ನು, ರಣೇ-ಯುದ್ಧದಲ್ಲಿ, ಪುರಃ-ಸರ್ಪ ಬಾಣಗಳ ಮುಂದೆ, ಪ್ರಾವರ್ತಯತ-ಬಿಟ್ಟನು ॥ ೩೨ ॥ ರಾವಣೋ-

ತದ್ಘೋರಂಪುರಃಪ್ರಾವರ್ತಯದ್ರಣೆ ॥ ೩೨ ॥ ರಾಮೇಣಮುಕ್ತಾಸ್ತೆಬಾಣಾಭೂತ್ವಾಗರುಡರೂಪಿಣಃ । ಚಿಚ್ಛಿದುಸ್ಸರ್ಪ
ಬಾಣಾಸ್ತಾನ್ಸಮಂತಾತ್ಸರ್ಪಶತ್ರವಃ ॥ ೩೩ ॥ ಅಸ್ತ್ರೇಪ್ರತಿಹತೆಯುದ್ಧೇರಾಮೇಣದಶಕಂಧರಃ । ಅಭ್ಯವರ್ಷತ್ತತೋರಾ
ಮಂಘೋರಾಭಿಶ್ಶರವೃಷ್ಟಿಭಿಃ ॥ ೩೪ ॥ ತತಃಪುನಶ್ಶರಾನೀಕೈಃ ರಾಮಮಕ್ಲಿಷ್ಟಕಾರಿಣಂ । ಅರ್ದಯಿತ್ವಾತುಘೋರೇಣ
ಮಾತಲಿಂಪ್ರತ್ಯವಿಧ್ಯತ ॥ ೩೫॥ ಪಾತಯಿತ್ವಾರಥೋಪಸ್ಥೇ ರಥಕೇತುಂಚಕಾಂಚನಂ । ಐಂದ್ರಾನಶ್ವಾನಭ್ಯಹನದ್ರಾವಣಃ
ಕ್ರೋಧಮೂರ್ಛಿತಃ ॥ ೩೬ ॥ ವಿಷೇದುರ್ದೇವಗಂಧರ್ವಾಶ್ಚಾರಣಾಃಪಿತರಸ್ತಥಾ ।ಆರ್ತಾಕಾರಂಹರಿಂದೃಷ್ಟ್ವಾವ್ಯಥಿತಾಶ್ಚ
ಮಹರ್ಷಯಃ ॥ ೩೭ ॥ ವ್ಯಥಿತಾವಾನರೇಂದ್ರಾಶ್ಚಬಭೂವುಸ್ಸವಿಭೀಷಣಾಃ । ದಶಾಸ್ಯೋವಿಂಶತಿಭುಜಃ ಪ್ರಗೃಹೀತಶರಾಸ
ನಃ ॥ ೩೮ ॥ ದದೃಶೆರಾವಣಸ್ತತ್ರ ಮೈನಾಕಇವಪರ್ವತಃ । ರಾಮಸ್ತುಭ್ರುಕುಟಿಂಬಧ್ವಾಕ್ರೋಧಸಂರಕ್ತಲೋಚನಃ॥೩೯॥

ರಾಮಚಂದ್ರನಿಂದ, ಮುಕ್ತಾಃ-ಬಿಡಲ್ಪಟ್ಟವುಗಳಾದ, ತೇಬಾಣಾಃ-ಆ ಬಾಣಗಳು, ಸರ್ಪಶತ್ರವಃ-ಹಾವುಗಳಿಗೆ ಶತ್ರುಗಳಾದ, ಗರುಡರೂಪಿಣಃ-ಗರುಡ ರೂಪವುಳ್ಳವುಗಳಾಗಿ, ತಾನ್-ಆ, ಸರ್ಪಬಾಣಾನ್-ಸರ್ಪ ರೂಪಗಳಾದ ಬಾಣಗಳನ್ನು, ಚಿಚ್ಛಿದುಃ-ಕತ್ತರಿಸಿದವು ॥ ೩೩ ॥ ಯುದ್ಧೇ-ಜವರದಲ್ಲಿ, ರಾಮೇಣ-ರಾಮಚಂದ್ರನಿಂದ, ಅಸ್ತ್ರೇ-ಅಸ್ತ್ರವು, ಪ್ರತಿಹತೇ-ಹೊಡೆಯಲ್ಪಡುತ್ತಿರಲು, ದಶಕಂಧರಃ-ರಾವಣನು, ತತಃ-ಅನಂತರದಲ್ಲಿ, ಘೋರಾಭಿಃ-ಕ್ರೂರಗಳಾದ, ಶರವೃಷ್ಟಿಭಿಃ-ಬಾಣ ವರ್ಷಗಳಿಂದ, ರಾಮಂ-ರಾಮಚಂದ್ರನನ್ನು, ಅಭ್ಯರ್ದಯತ-ಹೊಡದನು ॥ ೩೪ ॥ ತತಃ-ಆ ಬಳಿಕ, ಪುನಃ-ತಿರಿಗಿ, ಶರಾನೀಕೈಃ-ಬಾಣ ಸಮೂಹಗಳಿಂದ, ಅಕ್ಲಿಷ್ಟ-ಯೋಗ್ಯವಾದದ್ದನ್ನು, ಕಾರಿಣಂ-ಮಾಡುತ್ತಿರುವ, ರಾಮಂ-ರಾಮಚಂದ್ರನನ್ನು, ಅರ್ದಯಿತ್ವಾ-ಹೊಡೆದು, ಘೋರೇಣ-ಕ್ರೂರವಾದ ಬಾಣದಿಂದ, ಮಾತಲಿಂ-ಇಂದ್ರ ಸಾರಥಿಯನ್ನು, ಪ್ರತ್ಯವಿಧ್ಯತ-ಹೊಡದನು ॥ ೩೫ ॥ ಕಾಂಚನ-ಭಂಗಾರ ಮಯವಾದ, ರಥಕೇತುಂ-ರಥದ ಧ್ವಜವನ್ನು, ರಥೋಪಸ್ಥೇ-ರಥ ಸಮೀಪದಲ್ಲಿ, ಪಾತಯಿತ್ವಾ-ಕೆಡವಿ, ಕ್ರೋಧ-ಕೋಪದಿಂದ, ಮೂರ್ಛಿತಃ-ಪ್ರಜ್ಞೆಯಿಲ್ಲದವನಾದ, ರಾವಣಃ-ರಾವಣನು, ಐಂದ್ರಾನ್-ಇಂದ್ರ ಸಂಬಂಧಗಳಾದ, ಅಶ್ವಾನ್-ಕುದುರೆಗಳನ್ನು, ಅಭ್ಯಹನತ-ಹೊಡೆದನು ॥ ೩೬ ॥ ತಥಾ-ಆ ಪ್ರಕಾರವಾಗಿ, ಹರಿಂ-ರಾಮಚಂದ್ರನನ್ನು, ಆರ್ತಾಕಾರಂ-ಬಾಧೆಪಡುವವನನ್ನಾಗಿ, ದೃಷ್ಟ್ವಾ-ನೋಡಿ, ದೇವಗಂಧರ್ವಾಃ-ದೇವತೆಗಳು ಗಂಧರ್ವರು, ಚಾರಣಾಃ-ಚಾರಣರು, ಪಿತರಶ್ಚ-ಪಿತೃಗಳೂ, ವಿಷೇದುಃ-ವ್ಯಸನವನ್ನು ಪಟ್ಟರು, ಮಹರ್ಷಯಃ-ಮಹರ್ಷಿಗಳು, ವ್ಯಥಿತಾಃ-ವ್ಯಸನವುಳ್ಳವರಾದರು ॥ ೩೭ ॥ ವಾನರೇಂದ್ರಾಶ್ಚ-ಕಪಿ ಸೇನಾನಾಯಕರು, ಸವಿಭೀಷಣಾಃ-ವಿಭೀಷಣನ ಸಹಿತರಾಗಿ, ವ್ಯಥಿತಾಃ-ದುಃಖಿನ್ನರಾದವರು, ಬಭೂವುಃ-ಆದರು, ತತ್ರ-ಯುದ್ಧ ಭೂಮಿಯಲ್ಲಿ, ದಶಾಸ್ಯಃ-ಹತ್ತು ತಲೆಗಳುಳ್ಳವನಾದ, ವಿಂಶತಿ-ಭುಜಃ-ಇಪ್ಪತ್ತು ತೋಳುಗಳುಳ್ಳವನಾದ, ಪ್ರಗೃಹೀತ-ಹಿಡಿದಿರುವ, ಶರಾಸನಃ-ಬಿಲ್ಲುಳ್ಳವನಾದ ॥ ೩೮ ॥ ರಾವಣಃ-ರಾವಣನು, ಮೈನಾಕಃ-ಮೈನಾಕವೆಂಬ, ಪರ್ವತ ಇವ-ಬೆಟ್ಟ ದಂತೆ, ದದೃಶೇ-ಕಾಣಲ್ಪಟ್ಟನು, ರಾಮಸ್ತು-ರಾಮಚಂದ್ರನು, ಭ್ರುಕುಟಿಂ-ಕಣ್ಣು

ಕೋಪಂ ಚಕಾರ ಸದೃಶಂ ನಿರ್ದಹನ್ನಿವ ರಾಕ್ಷಸಂ । ಧನುರಾದಾಯ ದೇವೇಂದ್ರಧನುಃಕಾರಮದ್ಭುತಂ ॥ ೪೦ ॥ ಗೃಹೀತ್ವಾ ಪಾಣಿನಾ ಬಾಣಂ ಕಾಲಾನಲಸಮಪ್ರಭಂ । ನಿರ್ದಹನ್ನಿವ ಚಕ್ಷುರ್ಭ್ಯಾಂ ದದರ್ಶ ರಿಪುಮಂತಿಕೇ ॥ ೪೧ ॥ ಪರಾಕ್ರಮಂ ದರ್ಶಯಿತುಂ ತೇಜಸಾ ಪ್ರಜ್ವಲನ್ನಿವ । ಪ್ರಚಕ್ರಮೇ ಕಾಲರೂಪೀ ಸರ್ವಲೋಕಸ್ಯ ಪಶ್ಯತಃ ॥ ೪೨ ॥ ವಿಕೃಷ್ಯ ಚಾಪಂ ರಾಮಸ್ತು ರಾವಣಂ ಪ್ರತಿವಿಧ್ಯ ಚ । ಹರ್ಷಯನ್ವಾನರಾನೀಕಂ ಕಾಲಾಂತಕ ಇವಾಬಭೌ ॥ ೪೩ ॥ ಕ್ರುದ್ಧಂ ರಾಮಸ್ಯ ವದನಂ ದೃಷ್ಟ್ವಾ ಶತ್ರುಂ ಪ್ರಧಾವತಃ । ತತ್ರಸುಃ ಸರ್ವಭೂತಾನಿ ಚಚಾಲ ಚ ವಸುಂಧರಾ ॥ ೪೪ ॥ ರಾಮಂ ದೃಷ್ಟ್ವಾ ಮಹಾರೌದ್ರಮುತ್ಪಾತಾಂಶ್ಚ ಸುದಾರುಣಾನ್ । ತ್ರಸ್ತಾನಿ ಸರ್ವಭೂತಾನಿ ರಾವಣಂ ಚಾವಿಶದ್ಭಯಂ ॥ ೪೫ ॥ ವಿಮಾನಸ್ಥಾಸ್ಸುರಗಣಾಃ ಸಿದ್ಧಗಂಧರ್ವ

ಬ್ಬನ್ನು, ಬಧ್ವಾ-ಗಂಟು ಹಾಕಿಕೊಂಡು, ಕ್ರೋಧ-ಕೋಪದಿಂದ, ಸಂರಕ್ತ-ಕೆಂಪಾದ, ನೇತ್ರಃ-ಕಣ್ಣುಗಳುಳ್ಳವನಾಗಿ ॥ ೩೯ ॥ ರಾಕ್ಷಸಂ-ರಾಕ್ಷಸರನ್ನು, ನಿರ್ದಹನ್ನಿವ-ಸುಡುವವನಂತೆ, ಸದೃಶಂ-ಸರಿಯಾದ, ಕೋಪಂ-ಕೋಪವನ್ನು, ಚಕಾರ-ಮಾಡಿದನು, ದೇವೇಂದ್ರಧನುಃಕಾರಂ-ದೇವೇಂದ್ರ-ಇಂದ್ರನ, ಧನುರಾಕಾರಂ-ಬಿಲ್ಲಿನ ರೂಪವಾದ, ಅದ್ಭುತಂ-ವಿಸ್ಮಯಕರವಾದ, ಧನುಃ-ಬಿಲ್ಲನ್ನು, ಆದಾಯ-ತೆಗೆದುಕೊಂಡು ॥ ೪೦ ॥ ಪಾಣಿನಾ-ಕೈಯಿಂದ, ಕಾಲಾನಲ-ಪ್ರಳಯ ಕಾಲದ ಬೆಂಕಿಗೆ, ಸಮಪ್ರಭಂ-ಸರಿಯಾದ ಕಾಂತಿಯುಳ್ಳ, ಬಾಣಂ-ಬಾಣವನ್ನು, ಗೃಹೀತ್ವಾ-ತೆಗೆದುಕೊಂಡು, ಚಕ್ಷುರ್ಭ್ಯಾಂ-ಕಣ್ಣುಗಳಿಂದ, ನಿರ್ದಹನ್ನಿವ-ಸುಡುವವನಂತೆ, ಅಂತಿಕೇ-ಸಮೀಪದಲ್ಲಿ, ರಿಪುಂ-ಶತ್ರುವಾದ ರಾವಣನನ್ನು, ದದರ್ಶ-ನೋಡಿದನು ॥ ೪೧ ॥ ಕಾಲರೂಪೀ-ಕಾಲ ಸ್ವರೂಪಿಯಾದ ರಾಮಚಂದ್ರನು, ಪರಾಕ್ರಮಂ-ಸಾಮರ್ಥ್ಯವನ್ನು, ದರ್ಶಯಿತುಂ-ತೋರಿಸುವದಕ್ಕೆ, ತೇಜಸಾ-ತೇಜಸ್ಸಿನಿಂದ, ಪ್ರಜ್ವಲನ್ನಿವ-ಉರಿಯುವವನಂತೆ, ಸರ್ವಲೋಕಸ್ಯ-ಎಲ್ಲಾ ಜನರು, ಪಶ್ಯತಃ-ನೋಡುತ್ತಿರುವಾಗಲೇ, ಪ್ರಚಕ್ರಮೇ-ಉಪಕ್ರಮಿಸಿದನು ॥ ೪೨ ॥ ರಾಮಸ್ತು-ರಾಮಚಂದ್ರನು, ಚಾಪಂ-ಬಿಲ್ಲನ್ನು, ವಿಕೃಷ್ಯ-ಎಳೆದು, ರಾವಣಂ-ರಾವಣನನ್ನು, ಪ್ರತಿವಿಧ್ಯಚ-ಹೊಡೆದು, ವಾನರಾನೀಕಂ-ಕಪಿ ದಳವನ್ನು, ಹರ್ಷಯನ್-ಸಂತೋಷಪಡಿಸುತ್ತಾ, ಕಾಲಾಂತಕಃ-ಪ್ರಳಯ ಕಾಲದ ಯಮನಂತೆ, ಆಬಭೌ-ಪ್ರಕಾಶಿಸಿದನು ॥ ೪೩ ॥ ಶತ್ರುಂ-ಶತ್ರುವಾದ ರಾವಣನನ್ನು ಕುರಿತು, ಪ್ರಧಾವತಃ-ಮೇಲೆ ಬಿದ್ದು ಹೋಗುತ್ತಿರುವ, ರಾಮಸ್ಯ-ರಾಮಚಂದ್ರನ, ಕ್ರುದ್ಧಂ-ಕೋಪಯುಕ್ತವಾದ, ವದನಂ-ಮುಖವನ್ನು, ದೃಷ್ಟ್ವಾ-ನೋಡಿ, ಸರ್ವಭೂತಾನಿ-ಸಮಸ್ತ ಪ್ರಾಣಿಗಳೂ, ತತ್ರಸುಃ-ಭಯಪಟ್ಟರು, ವಸುಂಧರಾ-ಭೂಮಿಯು, ಚಚಾಲ-ಕಂಪಿಸಿತು ॥ ೪೪ ॥ ಸರ್ವಭೂತಾನಿ-ಸಮಸ್ತ ಪ್ರಾಣಿಗಳು, ಮಹಾರೌದ್ರಂ-ಅತ್ಯಂತ ಕ್ರೂರನಾದ, ರಾಮಂ-ರಾಮಚಂದ್ರನನ್ನು, ಸುದಾರುಣಾನ್-ಅತ್ಯಂತ ಕ್ರೂರಗಳಾದ, ಉತ್ಪಾತಾನ್-ಉತ್ಪಾತಗಳನ್ನು, ದೃಷ್ಟ್ವಾ-ನೋಡಿ, ತ್ರಸ್ತಾನಿ-ಭಯಪಟ್ಟವುಗಳಾದವು, ಭಯಂ-ಅಂಜಿಕೆಯು, ರಾವಣಂ-ರಾವಣನನ್ನು, ಆವಿಶತ್-ಪ್ರವೇಶಿಸಿತು ॥ ೪೫ ॥ ವಿಮಾನಸ್ಥಾಃ-ದೇವ ಯಾನಗಳಲ್ಲಿರುವವರಾದ, ಸುರಗಣಾಃ-ದೇವತೆಗಳ ಸಮೂಹಗಳು, ಸಿದ್ಧಗಂಧರ್ವಕಿನ್ನರಾಃ-ಸಿದ್ಧರು ಗಂಧರ್ವರು ಕಿನ್ನರರು, ಲೋಕಸಂವರ್ತಕೋಪಮಂ-ಲೋಕ-ಲೋಕಗಳ, ಸಂವರ್ತಕ-ಪ್ರಳಯ

ಕಿನ್ನರಾಃ । ದದೃಶುಃ ಸುಮಹಾಯುದ್ಧಂ ಲೋಕಸಂವರ್ತಕೋಪಮಂ ॥ ೪೬ ॥ ಐಂದ್ರಮಸ್ತ್ರಂ ಸಮಾದಾಯ ರಾವಣಸ್ಯ ಶಿರೋಚ್ಛಿನತ್ ॥ ಮೂರ್ಧಾನೋ ರಾವಣಸ್ಯಾಥ ಬಹವೋ ರುಧಿರೋಕ್ಷಿತಾಃ ॥ ಗಗನಾತ್ಪ್ರಪತಂತಿಸ್ಮ ತಾಲಾದಿವ ಫಲಾನಿ ಹಿ ॥೪೭॥ ನದಿನಂ ನಚವೈ ರಾತ್ರಿರ್ನಸಂಧ್ಯಾ ನದಿಶೋಪಿವಾ ॥ ಪ್ರಕಾಶಂತೇನ ತದ್ರೂಪಂ ದೃಶ್ಯತೇ ತತ್ರ ಸಂಗರೇ ॥ ೪೮ ॥ ತತೋ ರಾಮೋ ಬಭೂವಾಥ ವಿಸ್ಮಯಾವಿಷ್ಟಮಾನಸಃ । ಶತಮೇಕೋತ್ತರಂ ಛಿನ್ನಂ ಶಿರಸಾಂ ತುಲ್ಯವರ್ಚಸಾಂ ॥೪೯॥ ನಚೈವ ರಾವಣಸ್ಯಾಂತೋ ದೃಶ್ಯತೇ ಜೀವಿತಕ್ಷಯಾತ್ । ತತಸ್ಸರ್ವಾಸ್ತ್ರವಿದ್ವೀರಃ ಕೌಸಲ್ಯಾನಂದವರ್ಧನಃ ॥ ೫೦ ॥ ಅಸ್ತ್ರೈಶ್ಚ ಬಹುಭಿರ್ಯುಕ್ತಶ್ಚಿಂತಯಾಮಾಸ ರಾಘವಃ ॥ ಯೈರ್ಯೈರ್ಬಾಣೈರ್ಹತಾ ದೈತ್ಯಾ ಮಹಾಸತ್ವ ಪರಾಕ್ರಮಾಃ ॥ ೫೧ ॥ ತ ಏತೇ ನಿಷ್ಫಲಂ

ಮಾಡುವ ಕಾಲಕ್ಕೆ, ಉಪಮಂ-ಸಮವಾಗಿರುವ, ಸುಮಹಾಯುದ್ಧಂ-ಅತ್ಯಧಿಕವಾದ ಯುದ್ಧವನ್ನು, ದದೃಶುಃ-ನೋಡಿದರು ॥೪೬॥ (ರಾಮಚಂದ್ರನು) ಐಂದ್ರಂ-ಇಂದ್ರ ಸಂಬಂಧವಾದ, ಅಸ್ತ್ರಂ-ಅಸ್ತ್ರವನ್ನು, ಸಮಾದಾಯ-ತೆಗೆದುಕೊಂಡು, ರಾವಣಸ್ಯ-ರಾವಣನ, ಶಿರಃ-ಶಿರಸ್ಸನ್ನು, ಅಚ್ಛಿನತ್-ಕತ್ತರಿಸಿದನು ॥೪೬॥ ಅಥ-ಅನಂತರದಲ್ಲಿ, ಬಹವಃ-ಅನೇಕಗಳಾದ, ರುಧಿರೋಕ್ಷಿತಾಃ-ರಕ್ತವನ್ನು ಸುರಿಯುತ್ತಿರುವ, ರಾವಣಸ್ಯ-ರಾವಣನ, ಮೂರ್ಧಾನಃ-ಶಿರಸ್ಸುಗಳು, ತಾಲಾತ್-ತಾಳೇ ಮರದಿಂದ, ಫಲಾನೀವಹಿ-ಹಣ್ಣುಗಳು ಭೂಮಿಯಲ್ಲಿ ಬೀಳುವಂತೆ, ಗಗನಾತ್-ಅಂತರಿಕ್ಷದಿಂದ, ಪ್ರಪತಂತಿಸ್ಮ-ಬೀಳುತ್ತಿವೆಯಷ್ಟೆ ॥೪೭॥ ನದಿನಂ-ಹಗಲೆಂಬುದಾಗಿಯೂ ತೋರಲಿಲ್ಲ, ನಚವೈರಾತ್ರಿಃ-ರಾತ್ರಿಯೆಂಬುದಾಗಿ ಪ್ರಕಾಶವಾಗಿ ತೋರಲಿಲ್ಲ, ನಸಂಧ್ಯಾ-ಪ್ರಾತರ್ಮಧ್ಯಾಹ್ನ ಸಾಯಾಹ್ನ ಸಂಧ್ಯಾ ಕಾಲವು ಪ್ರಕಾಶ ತೋರಲಿಲ್ಲ, ದಿಶೋಪಿವಾ-ದಿಕ್ಕುಗಳೂ ಕೂಡ, ನಪ್ರಕಾಶಂ-ಪ್ರಕಾಶಮಾನವಾಗಿ ತೋರಲಿಲ್ಲ, ತತ್ರಸಂಗರೇ-ಆ ಯುದ್ಧದಲ್ಲಿ, ತೇನ-ಅಸ್ತ್ರದಿಂದ ರಾವಣ ಶಿರಸ್ಸನ್ನು ಕತ್ತರಿಸುವದರಿಂದ, ಭಿನ್ನಮಸ್ತಕರಾವಣನ-ಅನೇಕ ಶಿರೋ ರೂಪವೇ, ದೃಶ್ಯತೇ-ಕಾಣಿಸುತ್ತಿತ್ತು ॥೪೮॥ ತತಃ-ಆ ಬಳಿಕ, ರಾಮಃ-ರಾಮಚಂದ್ರನು. ವಿಸ್ಮಯಾವಿಷ್ಟಮಾನಸಃ-ವಿಸ್ಮಯ-ಆಶ್ಚರ್ಯದಿಂದ, ಆವಿಷ್ಟ-ಕೂಡಿದ, ಮಾನಸಃ-ಚಿತ್ತವುಳ್ಳವನಾಗಿ, ತುಲ್ಯವರ್ಚಸಾಂ-ಸಮಾನ ತೇಜಸ್ಸುಳ್ಳ, ಶಿರಸಾಂ-ತಲೆಗಳ, ಏಕೋತ್ತರಂಶತಂ-ನೂರೊಂದು ತಲೆಯು, ಛಿನ್ನಂ-ಕತ್ತರಿಸಲ್ಪಟ್ಟಿತು ॥೪೯॥ ರಾವಣಃ-ರಾವಣನು, ಜೀವಿತಕ್ಷಯಾತ್-ಜೀವಿತ-ಪ್ರಾಣದ, ಕ್ಷಯಾತ್-ನಾಶದ ದೆಸೆಯಿಂದ, ಶಾಂತಃ-ಪ್ರಾಣ ರಹಿತನಾಗಿ, ನದೃಶ್ಯತೇ-ಕಾಣಲ್ಪಡುವದಿಲ್ಲ, ತತಃ-ಆ ಬಳಿಕ, ಸರ್ವಾಸ್ತ್ರವಿತ್-ಸರ್ವ-ಸಮಸ್ತವಾದ, ಅಸ್ತ್ರ-ಅಸ್ತ್ರಗಳನ್ನು, ವಿತ್-ತಿಳಿದವನಾದ, ವೀರಃ-ಶೂರನಾದ, ಕೌಸಲ್ಯಾನಂದವರ್ಧನಃ-ಕೌಸಲ್ಯಾ-ಕೌಸಲ್ಯಾದೇವಿಗೆ, ಆನಂದ-ಸಂತೋಷವನ್ನು, ವರ್ಧನಃ-ವೃದ್ಧಿ ಮಾಡುವವನಾದ ॥೫೦॥ ರಾಘವಃ-ರಾಮಚಂದ್ರನು, ಬಹುಭಿಃ-ಅನೇಕಗಳಾದ, ಅಸ್ತ್ರೈಃ-ಅಸ್ತ್ರಗಳಿಂದ, ಯುಕ್ತಃ-ಕೂಡಿದವನಾಗಿ, ಚಿಂತಯಾಮಾಸ-ಯೋಚನೆ ಮಾಡಿದನು, ಮಹಾಸತ್ವ-ಅಧಿಕ ಬಲವೂ, ಪರಾಕ್ರಮಾಃ-ಶೂರತ್ವವೂ ಉಳ್ಳವರಾದ, ದೈತ್ಯಾಃ-ರಾಕ್ಷಸರು, ಯೈಃಯೈಃ-ಯಾವ ಯಾವ, ಬಾಣೈಃ-ಬಾಣಗಳಿಂದ, ಹತಾಃ-ಕೊಲ್ಲಲ್ಪಟ್ಟರೋ ॥೫೧॥ ತ ಏತೇ-ಆ ಈ ಬಾಣಗಳು, ರಾವ

ಯಾತಾರಾವಣಸ್ಯನಿಪಾತನೆ । ಇತಿಚಿಂತಾಕುಲೇರಾಮೆಸಮೀಪಸ್ಥೋವಿಭೀಷಣಃ ॥ ೫೩ ॥ ಉವಾಚರಾಘವಂವಾಕ್ಯಂ ಬ್ರಹ್ಮದತ್ತವರೋಹ್ಯಸೌ । ವಿಛಿನ್ನಾಬಾಹವೋಪ್ಯಸ್ಯವಿಛಿನ್ನಾನಿಶಿರಾಂಸಿಚ॥ ೫೪ ॥ ಉತ್ಪತ್ಸ್ಯಂತಿಪುನಃಶೀಘ್ರಮಿತ್ಯಾಹ ಭಗವಾನಜಃ । ನಾಭಿದೇಶೇಮೃತಂತಸ್ಯ ಕುಂಡಲಾಕಾರಸಂಸ್ಥಿತಂ ॥ ೫೫ ॥ ತಚ್ಛೋಷಯಾನಲಾಸ್ತ್ರೇಣ ತಸ್ಯಮೃತ್ಯುಸ್ತತೋಭವೇತ್ । ವಿಭೀಷಣವಚಃಶ್ರುತ್ವಾ ರಾಮಶ್ಶೀಘ್ರಪರಾಕ್ರಮಃ ॥ ೫೬ ॥ ಪಾವಕಾಸ್ತ್ರೇಣಸಂಯೋಜ್ಯನಾಭಿಂವಿವ್ಯಾಧರಕ್ಷಸಃ । ಅನಂತರಂಚಚಿಚ್ಛೇದಶಿರಾಂಸಿಚಮಹಾಬಲಃ ॥ ೫೭ ॥ ಬಾಹೂನಪಿಚಸಂರಬ್ಧೋರಾವಣಸ್ಯರಘೂತ್ತಮಃ। ತತೋಘೋರಾಂಮಹಾಶಕ್ತಿಮಾದಾಯದಶಕಂಧರಃ ॥ ೫೮ ॥ ವಿಭೀಷಣವಧಾರ್ಥಾಯ ಚಿಕ್ಷೇಪಕ್ರೋಧವಿಹ್ವಲಃ । ಚಿಚ್ಛೇದರಾ

ಣಸ್ಯ-ರಾವಣನ, ನಿಪಾತನೆ-ಕೊಲ್ಲುವದರಲ್ಲಿ, ಸಿಷ್ಫಲಂ-ನ್ಯರ್ಥವಾಗಿ, ಯಾತಾಃ-ಹೋದವು, ಇತಿ-ಹೀಗೆ,ರಾಮೆ-ರಾಮಚಂದ್ರನು, ಚಿಂತಾಕುಲೆ-ಯೋಚನೆಯುಳ್ಳವನಾಗುತ್ತಿರಲು, ಸಮೀಪಸ್ಥಃ-ಹತ್ತರ ಇರುವವನಾದ, ವಿಭೀಷಣಃ-ವಿಭೀಷಣನು ॥೫೩॥ ರಾಘವಂ-ರಾಮಚಂದ್ರನನ್ನು ಕುರಿತು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು, ಅಸೌ-ಈ ರಾವಣನು, ಬ್ರಹ್ಮದತ್ತವರಃ-ಬ್ರಹ್ಮ-ಬ್ರಹ್ಮನೇನರಿಂದ, ದತ್ತ-ಕೊಡಲ್ಪಟ್ಟ, ವರಃ-ವರವುಳ್ಳವನಾಗಿದ್ದಾನೆ, ಅಸ್ಯ-ಈ ರಾವಣನಿಗೆ, ವಿಚ್ಛಿನ್ನಾಃ-ಕತ್ತರಿಸಲ್ಪಟ್ಟವುಗಳಾದ, ಬಾಹವಃ-ತೋಳುಗಳು, ವಿಚ್ಛಿನ್ನಾನಿ-ಕತ್ತರಿಸಲ್ಪಟ್ಟವುಗಳಾದ, ಶಿರಾಂಸಿ-ತಲೆಗಳು ॥೫೪॥ ಪುನಃ-ತಿರಿಗಿ, ಶೀಘ್ರಂ-ಬೇಗನೆ, ಉತ್ಪತ್ಸ್ಯಂತಿ-ಹುಟ್ಟುತ್ತಲಿವೆ, ಇತಿ-ಈ ಪ್ರಕಾರವಾಗಿ, ಭಗವಾನ್-ಪೂಜ್ಯನಾದ, ಅಜಃ-ಚತುರ್ಮುಖ ಬ್ರಹ್ಮನು, ಆಹ-ಹೇಳಿದನು, ತಸ್ಯ-ಆ ರಾವಣನ, ನಾಭಿದೇಶೆ-ಹೊಕ್ಕಳಿನ ಬಳಿಯಲ್ಲಿ, ಅಮೃತಂ-ಅಮೃತವು, ಕುಂಡಲಾಕಾರ-ಕುಂಡಲಾಕೃತಿಯಾದ ಗುಣಿಯಲ್ಲಿ, ಸಂಸ್ಥಿತಂ-ಇರುತ್ತದೆ ॥೫೫॥ ತತ್-ಆ ಅಮೃತವನ್ನು, ಅನಲಾಸ್ತ್ರೇಣ-ಆಗ್ನೇಯಾಸ್ತ್ರದಿಂದ, ಶೋಷಯ-ಹೀರಿ ಹೋಗುವಂತೆ ಮಾಡು, ತತಃ-ಆ ಬಳಿಕ, ತಸ್ಯ-ಆ ರಾವಣನಿಗೆ, ಮೃತ್ಯುಃ-ಮರಣವು, ಭವೇತ್-ಉಂಟಾದೀತು. ವಿಭೀಷಣ-ವಿಭೀಷಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ರಾಮಚಂದ್ರನು, ಶೀಘ್ರಪರಾಕ್ರಮಃ-ತ್ವರೆಯಾದ ಸಾಮರ್ಥ್ಯವುಳ್ಳವನಾಗಿ ॥೫೬॥ ಪಾವಕಾಸ್ತ್ರೇಣ-ಆಗ್ನೇಯಾಸ್ತ್ರದಿಂದ, (ಬಾಣಂ-ಬಾಣವನ್ನು) ಸಂಯೋಜ್ಯ-ಸೇರಿಸಿ, ರಕ್ಷಸಃ-ರಾವಣನ, ನಾಭಿಂ-ಹೊಕ್ಕಳಿನ ಪ್ರದೇಶವನ್ನು, ವಿವ್ಯಾಧ-ಹೊಡೆದನು, ಅನಂತರಂ-ಆ ಬಳಿಕ, ಮಹಾಬಲಃ-ಅಧಿಕ ಬಲವುಳ್ಳವನಾದ ರಾಮಚಂದ್ರನು, ಶಿರಾಂಸಿಚ-ತಲೆಗಳನ್ನು, ಚಿಚ್ಛೇದ-ಕತ್ತರಿಸಿದನು ॥೫೭॥ ರಘೂತ್ತಮಃ-ರಾಮಚಂದ್ರನು, ಸಂರಬ್ಧಃ-ತ್ವರೆಯುಳ್ಳವನಾಗಿ, ರಾವಣಸ್ಯ-ರಾವಣನ, ಬಾಹೂನಪಿ-ತೋಳುಗಳನ್ನು ಚಿಚ್ಛೇದ-ಕತ್ತರಿಸಿದನು, ತತಃ-ಆ ಬಳಿಕ, ದಶಕಂಧರಃ-ರಾವಣನು, ಘೋರಾಂ-ಕ್ರೂರವಾದ, ಮಹಾಶಕ್ತಿಂ-ದೊಡ್ಡದಾದ ಶಕ್ತ್ಯಾಯುಧವನ್ನು ॥೫೮॥ ವಿಭೀಷಣವಧಾರ್ಥಾಯ-ವಿಭೀಷಣ-ವಿಭೀಷಣನ, ವಧಾರ್ಥಾಯ-ಸಂಹಾರಕ್ಕೋಸ್ಕರವಾಗಿ, ಕ್ರೋಧ-ಕೋಪದಿಂದ, ವಿಹ್ವಲಃ-ಕಂಗೆಟ್ಟವನಾಗಿ, ಚಿಕ್ಷೇಪ-ಬಿಟ್ಟನು, ರಾಘವಃ-ರಾಮಚಂದ್ರನು, ತಾಂ-ಆ ಶಕ್ತ್ಯಾಯುಧವನ್ನು ಹೇಮಪುಂಖೈಃ-ಹೇಮ-ಭಂಗಾರದಿಂದ, ಪುಂಖೈಃ-

ಘಪ್ರೋಬಾಣೈಸ್ತಾಂಶಿತೈಃರ್ಹೇಮಭೂಷಿತೈಃ ॥ ೫೯ ॥ ದಶಗ್ರೀವಶಿರಶ್ಛಿನ್ನಂ ತ್ರದಾತೇಜೋವಿನಿರ್ಗತಂ । ಪ್ಲಾನರೂಪೋ
ಬಭೂವಾಥಛಿನ್ನೈಃಶೀರ್ಷೈರ್ಭಯಂಕರೈಃ ॥ ೬೦ ॥ ಏಕೇನಮುಖ್ಯಶಿರಸಾಬಾಹುಭ್ಯಾಂರಾವಣೋಬಭೌ । ರಾವಣಸ್ತು ಪು
ನಃಕ್ರುದ್ಧೋನಾನಾಶಸ್ತ್ರಾಸ್ತ್ರವೃಷ್ಟಿಭಿಃ ॥ ೬೧ ॥ ವವರ್ಷರಾಮಂತಂರಾಮ ಸ್ತಥಾಶರವೃಷ್ಟಿಭಿಃ । ತತೋಯು
ದ್ಧಮಭೂದ್ಘೋರಂ ತುಮುಲಂರೋಮಹರ್ಷಣಂ ॥ ೬೨ ॥ ಅಥಸಂಸ್ಮಾರಯಾಮಾಸರಾಘವಂಮಾತಲಿಸ್ತದಾ । ವಿಸೃಜಾ
ಸ್ತ್ರಂವಧಾಯಾಸ್ಯ ಬ್ರಾಹ್ಮಂಶೀಘ್ರಂರಘೂತ್ತಮ ॥ ೬೩ ॥ ವಿನಾಶಕಾಲಃಕಥಿತೋ ಯಸ್ಸುರೈಸ್ಸೋದ್ಯವರ್ತತೇ । ಉತ್ತ
ಮಾಂಗಂನಚೇತ್ತವ್ಯಂರಾಘವತ್ವಯಾ ॥ ೬೪ ॥ನೈವಶೀರ್ಷ್ಣಿಪ್ರಭೋವಧ್ಯೋವಧ್ಯಏಷಹಿಮರ್ಮಣಿ । ತತಃಸಂಸ್ಮಾ

ಅಲಂಕೃತವಾದ, ಶರೈಃ-ಬಾಣಗಳಿಂದ, ಚಿಚ್ಛೇದ-ಕತ್ತರಿಸಿದನು ॥೫೯॥ ತದಾ-ಆಗ, ದಶಗ್ರೀವ-ರಾವಣನ, ಶಿರಃ-ತಲೆಗಳ, ಛೇದಾತ್-ಕತ್ತರಿಸುವಿಕೆಯಿಂದ, ತೇಜಃ-ತೇಜಸ್ಸು, ವಿನಿ
ರ್ಗತಂ-ಹೊರಟಿತು, ಭಯಂಕರೈಃ-ಭಯಂಕರವಾದ, ಛಿನ್ನಶೀರ್ಷೈಃ-ಕತ್ತರಿಸಲ್ಪಟ್ಟ ತಲೆಗಳಿಂದ, ಅಥ-ಅನಂತರದಲ್ಲಿ, ಪ್ಲಾನರೂಪಃ-ಬಾಡಿದ ಆಕಾರವುಳ್ಳವನು, ಬಭೂವ-ಆ
ದನು ॥೬೦॥ ರಾವಣಃ-ರಾವಣನು, ಏಕೇನ-ಒಂದಾದ, ಮುಖ್ಯಶಿರಸಾ-ಮಧ್ಯದಲ್ಲಿ ಪ್ರಧಾನವಾಗಿರುವ ತಲೆಯಿಂದ, ಬಾಹುಭ್ಯಾಂ-ಎರಡು ಕೈಗಳಿಂದ, ಬಭೌ-ಪ್ರಕಾಶಿಸಿದನು, ರಾವಣಃ-
ರಾವಣನು, ಪುನಃ-ತಿರಿಗಿ, ನಾನಾ-ಬಗೆಬಗೆಯಾದ, ಶಸ್ತ್ರ-ಕತ್ತಿ ಪರಶು-ಬಾಣ ಮುಂತಾದ ಶಸ್ತ್ರಗಳ, ಅಸ್ತ್ರ-ಆಗ್ನೇಯ ಆಸುರ ಸೌರ ವಾರುಣಾದಿ ಅಸ್ತ್ರಗಳ, ವೃಷ್ಟಿ
ಭಿಃ-ಮಳೆಗಳಿಂದ ॥೬೧॥ ರಾಮಂ-ರಾಮಚಂದ್ರನನ್ನು ಕುರಿತು, ವವರ್ಷ-ಮಳೆಯಂತೆ ಸುರಿಸಿದನು, ತಥಾ-ಹಾಗೆ, ರಾಮಃ-ರಾಮಚಂದ್ರನು, ಶರವೃಷ್ಟಿಃ-ಬಾಣ ಮಯವಾದ
ಮಳೆಯಿಂದ, ವವರ್ಷ-ಮಳೆಯಾಗಿ ಬಾಣಗಳನ್ನು ಸುರಿಸಿದನು, ತತಃ-ಆ ಬಳಿಕ, ರೋಮಹರ್ಷಣಂ-ರೋಮಾಂಚಕರವಾದ, ತುಮುಲಂ-ಸಂಕುಲವಾದ, ಘೋರಂ-ಕ್ರೂರವಾದ,
ಯುದ್ಧಂ-ಜಗಳವು, ಅಭೂತ್-ಆಯಿತು ॥೬೨॥ ಅಥ-ಅನಂತರದಲ್ಲಿ, ಮಾತಲಿಃ-ಮಾತಲಿಯು, ತದಾ-ಆಗ, ರಾಘವಂ-ರಾಮಚಂದ್ರನನ್ನು ಕುರಿತು, ಸಂಸ್ಮಾರಯಾಮಾಸ-ಜ್ಞಾಪ
ಕವಾಗಲು ಎಚ್ಚರಿಸಿದನು, ರಘೂತ್ತಮ-ರಾಮಚಂದ್ರನೇ, ಅಸ್ಯ-ಈ ರಾವಣನ, ವಧಾಯ-ಸಂಹಾರಕ್ಕಾಗಿ, ಬ್ರಾಹ್ಮಂ-ಬ್ರಹ್ಮದೇವತಾಕವಾದ, ಅಸ್ತ್ರಂ-ಅಸ್ತ್ರವನ್ನು, ಶೀಘ್ರಂ-
ಬೇಗನೆ, ವಿಸೃಜ-ಬಿಡು ॥೬೩॥ ಸುರೈಃ-ದೇವತೆಗಳಿಂದ, (ಈ ರಾವಣನ) ಯಃ-ಯಾವ, ವಿನಾಶಕಾಲಃ-ಸಾಯುವ ಹೊತ್ತು, ಕಥಿತಃ-ಹೇಳಲ್ಪಟ್ಟಿತ್ತೋ, ಸಃ-ಆ ರಾವಣನ ಮರಣ
ಕಾಲವು, ಅದ್ಯ-ಈಗ, ವರ್ತತೇ-ಬಂದಿದೆ, ರಾಘವ-ರಾಮಚಂದ್ರನೇ, ತ್ವಯಾ-ನಿನ್ನಿಂದ, ತಸ್ಯ-ರಾವಣನ, ಉತ್ತಮಾಂಗಂ-ತಲೆಯು, ನಛೇತ್ತವ್ಯಂ-ಕತ್ತರಿಸಲ್ಪಡತಕ್ಕದ್ದಲ್ಲವು ॥೬೪॥
ಪ್ರಭೋ-ಸ್ವಾಮಿಯೇ ಶೀರ್ಷ್ಣಿ-ತಲೆಯ ಮೇಲುಭಾಗದಲ್ಲಿ, ನವಧ್ಯಃ-ಸಹ್ಮರಿಸಲ್ಪಡತಕ್ಕವನಲ್ಲ, ಮರ್ಮಣಿ-ಮರ್ಮಸ್ಥಾನವಾದ ಹೃದಯದಲ್ಲಿ, ವಧ್ಯಏವಹಿ-ಸಹ್ಮರಿಸಲ್ಪಡ
ತಕ್ಕವನಾಗಿಯೇ ಇದ್ದಾನೆ, ತತಃ-ಆ ಬಳಿಕ, ಮಾತಲೇಃ-ಮಾತಲಿಯ, ತೇನ-ಆ, ವಾಕ್ಯೇನ-ಮಾತಿನಿಂದ, ಸಂಸ್ಮಾರಿತಃ-ಎಚ್ಚರಿಸಲ್ಪಟ್ಟವನಾಗಿ, ಸಃ-ಆ, ರಾಮಃ-ರಾಮಚಂದ್ರನು,

ರಿತೋರಾಮಸ್ತ್ವನಾಕ್ಯಸಮಾತಲಿಃ । ಜಗ್ರಾಹಸಶರಂದೀಪ್ತಂನಿಶ್ವಸಂತಮಿವೋರಗಂ || ೬೬ || ಯಸ್ಯಪಾರ್ಶ್ವೇತು ಪವನಃಫಾಲೇಭಾಸ್ಕರಪಾವಕೌ । ಶರೀರಮಾಕಾಶಮಯಂಗೌರವೇಮೇರುಮಂದರೌ । ಪರ್ವಸ್ವಪಿಚವಿನ್ಯಸ್ತಾಲೋಕಪಾಲಾಮಹೌಜಸಃ || ಜಾಜ್ವಲ್ಯಮಾನಂವಪುಷಾ ಭಾತಂಭಾಸ್ಕರವರ್ಚಸಾ । ತಮುಗ್ರಮಸ್ತ್ರಂಲೋಕಾನಾಂ ಭಯನಾಶನಮದ್ಭುತಂ || ಅಭಿಮಂತ್ರ್ಯತತೋರಾಮಃತಂಮಹೇಷುಂಮಹಾಭುಜಃ । ವೇದಪ್ರೋಕ್ತೇನವಿಧಿನಾಸಂದಧೇಕಾರ್ಮುಕೇಬಲೀ || ೬೭ || ತಸ್ಮಿನ್ಸಂಧೀಯಮಾನೇತು ರಾಘವೇಣಶರೋತ್ತಮೇ । ಸರ್ವಭೂತಾನಿವಿತ್ರೇಸುಶ್ಚಚಾಲಚವಸುಂಧರಾ||೬೮||
ಸರಾವಣಾಯಸಂಕ್ರುದ್ಧೋಭೃಶಮಾನಮ್ಯಕಾರ್ಮುಕಂ । ಚಿಕ್ಷೇಪಪರಮಾಯತ್ತಸ್ತದಸ್ತ್ರಂಮರ್ಮಘಾತಕಂ ||೨೦ ||

ದೀಪ್ತಂ-ಹೊಳೆಯುತ್ತಿರುವ, ನಿಶ್ವಸಂತಂ-ಉಸಿರನ್ನು ಬಿಡುತ್ತಿರುವ, ಉರಗಮಿವ-ಸರ್ಪದಂತೆ (ಇರುತ್ತಿರುವ,) ಶರಂ-ಬಾಣವನ್ನು, ಜಗ್ರಾಹ-ತೆಗೆದುಕೊಂಡನು ||೬೬|| ಯಸ್ಯ-ಯಾವ ಅಸ್ತ್ರದ ಅಭಿಮಾನ ದೇವತೆಯ, ಪಾರ್ಶ್ವೇ- ಇಕ್ಕೆಲದಲ್ಲಿ ಪವನಃ-ವಾಯು ದೇವರು, ಫಾಲೇ-ನೊಸಲಲ್ಲಿ, ಭಾಸ್ಕರಪಾವಕೌ-ಸೂರ್ಯಾಗ್ನಿಗಳು, ಶರೀರಂ-ದೇಹವು, ಆಕಾಶಮಯಂ-ಆಕಾಶ ವಿಕಾರವಾಗಿರುವದಲ್ಲದೆ, ಅದರಂತೆ ಮಹತ್ವವುಳ್ಳದ್ದು, ಅಥವಾ-ವ್ಯಾಪಕವಾಗಿಯೂ ಪ್ರಪಂಚವೇ ಗರ್ಭವಾಗಿ ಉಳ್ಳದ್ದು, ಗೌರವೇ-ದೇವಾಸುರ ಮನುಷ್ಯ ಪಶುಪಕ್ಷಿ ವೃಕ್ಷ ತೃಣಾದಿಗಳಿಗೆ ಆಧಾರವಾಗಿಯೂ ರಕ್ಷಕವಾಗಿಯೂ ಇರುವ ವಿಷಯದಲ್ಲಿ, ಮೇರುಮಂದರೌ-ಮೇರುಪರ್ವತ ಮಂದರಪರ್ವತಗಳಿಗೆ, ಸಮಾನವಾದದ್ದು (ಆಗಿರುವದೋ.) ಮತ್ತು ಪರ್ವಸ್ವಪಿ-ಕೀಲುಗಳಲ್ಲಿ (ಗೆಣ್ಣುಗಳಲ್ಲಿ,) ಲೋಕಪಾಲಾಃ-ಇಂದ್ರಾದಿಗಳು, ಮಹೌಜಸಃ-ಅಧಿಕವಾದ ಬ್ರಹ್ಮತೇಜೋವಂತರಾದ ದೇವ ಋಷಿಗಳು, ಅಂಗ ದೇವತೆಗಳಾಗಿರುವರೋ (ಅಂಥಾದ್ದಾದ,) ಜಾಜ್ವಲ್ಯಮಾನಂ-ಧಗಧಗಿಸಿ ಉರಿಯುತ್ತಿರುವ, ಭಾಸ್ಕರವರ್ಚಸಾ-ಭಾಸ್ಕರ-ಸೂರ್ಯನ, ವರ್ಚಸಾ-ತೇಜಸ್ಸುಳ್ಳಂಥಾಗಿರುವ, ವಪುಷಾ-ರೂಪದಿಂದ, ಭಾಂತಂ-ಪ್ರಕಾಶಿಸುತ್ತಿರುವ, ಲೋಕಾನಾಂ-ಹದಿನಾಲ್ಕು ಲೋಕಗಳಿಗೆ, ಭಯನಾಶನಂ-ಶತ್ರುಭಯವನ್ನು ಹೋಗಲಾಡಿಸುವ, ಅದ್ಭುತಂ-ಆಶ್ಚರ್ಯಕರವಾದ, ತಂ-ಆ, ಉಗ್ರಂ-ಕ್ರೂರವಾದ, ಅಸ್ತ್ರಂ-ಬ್ರಹ್ಮಾಸ್ತ್ರವನ್ನು, ಅಭಿಮಂತ್ರ್ಯ-ಸಂಸ್ಕರಿಸಿ, ತತಃ-ಆ ಬಳಿಕ, ಬಲೀ-ಬಲಿಷ್ಠನಾದ, ಮಹಾಭುಜಃ-ವಿಸ್ತಾರವಾದ ಭುಜಗಳುಳ್ಳ, ರಾಮಃ-ರಾಮಚಂದ್ರನು, ತಂ-ಆ, ಮಹೇಷುಂ-ಮಹಾ ಬಾಣವನ್ನು, ಕಾರ್ಮುಕೇ-ಬಿಲ್ಲಿನಲ್ಲಿ, ವೇದಪ್ರೋಕ್ತೇನ-ವೇದದಲ್ಲಿ ಹೇಳಲ್ಪಟ್ಟಿರುವ, ವಿಧಿನಾ-ರೀತಿಯಿಂದ, ಸಂದಧೇ-ಸಂಧಾನ ಮಾಡಿದನು || ೬೭ || ರಾಘವೇಣ-ರಾಮಚಂದ್ರನಿಂದ, ತಸ್ಮಿನ್-ಆ, ಶರೋತ್ತಮೇ-ಶ್ರೇಷ್ಠವಾದ ಬಾಣವು, ಸಂಧೀಯಮಾನೇ-ಬಿಲ್ಲಿನಲ್ಲಿ ಜೋಡಿಸುತ್ತಿರಲು, ಸರ್ವಭೂತಾನಿ-ಸಮಸ್ತ ಪ್ರಾಣಿಗಳು, ವಿತ್ರೇಸುಃ-ಭಯಪಟ್ಟವುಗಳಾದವು, ವಸುಂಧರಾ-ಭೂಮಿಯು, ಚಚಾಲಚ-ನಡುಗಿತು || ೬೮ || ಸಃ-ಆ ರಾಮಚಂದ್ರನು, ಸಂಕ್ರುದ್ಧಃ-ಕೋಪಪ್ರಳ್ಳವನಾಗಿ, ಭೃಶಂ-ಅತಿಶಯವಾಗಿ, ಕಾರ್ಮುಕಂ-ಬಿಲ್ಲನ್ನು ಆನಮ್ಯ-ಬೊಗ್ಗಿಸಿ, ಪರಮಾಯತ್ತಃ-ಮಾತಲಿಯು ಹೇಳಿದ ಮಾತಿನಲ್ಲಿ ಎಚ್ಚರವುಳ್ಳವನಾಗಿ, ರಾವಣಾಯ-ರಾವಣನಿಗೋಸ್ಕರ, ಮರ್ಮಘಾತಿನಂ-ಮರ್ಮಸ್ಥಾನವನ್ನು ಭೇ

ಸವಜ್ರಇವದುರ್ಧರ್ಷೋವಜ್ರಪಾಣಿವಿಸರ್ಜಿತಃ । ಕೃತಾಂತಇವಘೋರಾಸ್ಯೋನ್ಯಪತದ್ರಾವಣೋರಸಿ ॥ ೨೦ ॥ ಸನಿಮಗ್ನೋಮಹಾಘೋರಃಶರೀರಾಂತಕರಃಪರಃ । ಬಿಭೇದಹೃದಯಂತೂರ್ಣಂರಾವಣಸ್ಯಮಹಾತ್ಮನಃ ॥ ೨೧ ॥ ರಾವಣಸ್ಯಹರನ್ಪ್ರಾಣಾನ್ವಿವೇಶಧರಣೀತಲೇ । ಸಶರೋರಾವಣಂಹತ್ವಾರಾಮತೂಣೀರಮಾವಿಶತ್ ॥ ೨೨ ॥ತಸ್ಯಹಸ್ತಾತ್ಪಪಾತಾಶುಸಶರಂಕಾರ್ಮುಕಂಮಹತ್ । ಗತಾಸುರ್ಭೀಮವೇಗೇನರಾಕ್ಷಸೇಂದ್ರೋಪತದ್ಭುವಿ॥೨೪ ॥ ತಂದೃಷ್ಟ್ವಾಪತಿತಂಭೂಮೌಹತಶೇಷಾಶ್ಚರಾಕ್ಷಸಾಃ । ಹತನಾಥಾಭಯತ್ರಸ್ತಾಃದುದ್ರುವುಸ್ಸರ್ವತೋದಿಶಂ ॥ ೨೫ ॥ ದಶಗ್ರೀವಸ್ಯನಿಧನಂವಿಜಯಂರಾಘವಸ್ಯಚ । ತತೋವಿನೆದುಸಂಹೃಷ್ಟಾಃವಾನರಾಜಿತಕಾಶಿನಃ॥ ೨೬ ॥ವದಂತೋರಾಮವಿಜಯಂರಾವಣಸ್ಯಚತದ್ವಧಂ ।

ಬಿಸುವಪಾದ, ತತಃ-ಆ, ಅಸ್ತ್ರಂ-ಬ್ರಹ್ಮಾಸ್ತ್ರವನ್ನು, ಚಿಕ್ಷೇಪ-ಬಿಟ್ಟನು ॥ ೧೯ ॥ ಸಃ-ಆ ಬ್ರಹ್ಮಾಸ್ತ್ರಾಭಿಮಂತ್ರಿತವಾದ ಬಾಣವು, ವಜ್ರಪಾಣಿ-ಇಂದ್ರನಿಂದ, ವಿಸರ್ಜಿತಃ-ಬಿಡಲ್ಪಟ್ಟದ್ದಾದ, ವಜ್ರಇವ-ವಜ್ರಾಯುಧದಂತೆ, ದುರ್ಧರ್ಷಃ-ತಡೆಯುವದಕ್ಕೆ ಅಸಾಧ್ಯವಾದ, ಕೃತಾಂತ ಇವ-ಯಮನಂತೆ, ಘೋರಾಸ್ಯಃ-ಘೋರ-ಕ್ರೂರವಾದ, ಆಸ್ಯಃ-ಮುಖವುಳ್ಳದ್ದಾಗಿ, ರಾವಣ-ರಾವಣನ ಉರಸಿ-ಎದೆಯಲ್ಲಿ, ನ್ಯಪತತ್-ಬಿದ್ದಂಥಾದ್ದಾಯಿತು ॥ ೨೦ ॥ ಪರಃ-ಉತ್ಕೃಷ್ಟವಾದ, ಶರೀರಾಂತಕರಃ-ಶರೀರವನ್ನು ನಾಶಮಾಡುವಪಾದ, ಮಹಾಘೋರಃ-ಅತ್ಯಂತಕ್ರೂರವಾದ, ಸಃ-ಆ ಬಾಣವು, ನಿಮಗ್ನಃ-ರಾವಣನ ಹೃದಯದಲ್ಲಿ ಹೊಕ್ಕಂಥಾದ್ದಾಗಿ, ಮಹಾತ್ಮನಃ-ಮಹಾಬುದ್ಧಿಶಾಲಿಯಾದ, ರಾವಣಸ್ಯ-ರಾವಣನ, ಹೃದಯಂ-ವಕ್ಷಸ್ಥಲವನ್ನು, ತೂರ್ಣಂ-ಬೇಗನೇ, ಬಿಭೇದ-ಭೇದಿಸಿತು ॥ ೨೧ ॥ ರಾವಣಸ್ಯ-ರಾವಣನ, ಪ್ರಾಣಾನ್-ಪ್ರಾಣಗಳನ್ನು, ಹರನ್-ಸೆಗೆದಂಥಾದ್ದಾಗಿ, ಧರಣೀತಲೆ-ಭೂಮಿಯೊಳಗೆ, ವಿವೇಶ-ಹೊಕ್ಕಿತು, ಸಃ-ಆ, ಶರಃ-ಬಾಣವು, ರಾವಣಂ-ರಾವಣನನ್ನು, ಹತ್ವಾ-ಕೊಂದು, ರಾಮತೂಣೀರಂ-ರಾಮ-ರಾಮಚಂದ್ರನ, ತೂಣೀರಂ-ಬಾಣಾಲಯವನ್ನು, ಆವಿಶತ್-ಪ್ರವೇಶಿಸಿತು ॥ ೨೩ ॥ ತಸ್ಯ-ರಾವಣನ, ಹಸ್ತಾತ್-ಕೈಯಿಂದ, ಮಹತ್-ದೊಡ್ಡದಾದ, ಸಶರಂ-ಬಾಣದಿಂದ ಕೂಡಿರುವ, ಕಾರ್ಮುಕಂ-ಬಿಲ್ಲು, ಆಶು-ಜಾಗ್ರತೆಯಾಗಿ, ಪಪಾತ-ನೆಲದಮೇಲೆ ಬಿತ್ತು, ರಾಕ್ಷಸೇಂದ್ರಃ-ರಾವಣನು, ಗತಾಸುಃ-ಪ್ರಾಣಗಳು ಹೋದವನಾಗಿ, ಭೀಮ-ಭಯಂಕರವಾದ, ವೇಗೇನ-ರಭಸದಿಂದ, ಭುವಿ-ನೆಲದಲ್ಲಿ, ಅಪತತ್-ಬಿದ್ದನು ॥ ೨೪ ॥ ಹತಶೇಷಾಃ-ಹತ-ಸತ್ತವರು ಹೋಗಲಾಗಿ, ಶೇಷಾಃ-ಬದುಕಿರುವವರಾದ, ರಾಕ್ಷಸಾಃ-ರಾಕ್ಷಸರು, ಭೂಮೌ-ನೆಲದಲ್ಲಿ, ಪತಿತಂ-ಬಿದ್ದಿರುವ, ತಂ-ರಾವಣನನ್ನು, ದೃಷ್ಟ್ವಾ-ನೋಡಿ, ಹತನಾಥಾಃ-ಹತ-ಹೊಡೆಯಲ್ಪಟ್ಟ, ನಾಥಾಃ-ಯಜಮಾನನುಳ್ಳವರಾಗಿ, ಭಯತ್ರಸ್ತಾಃ-ಭಯವುಳ್ಳವರಾಗಿ, ಸರ್ವತೋದಿಶಂ-ಎಕ್ಕ ದಿಕ್ಕುಗಳಿಗೆ, ದುದ್ರುವುಃ-ಓಡಿಹೋದರು ॥ ೨೫ ॥ ದಶಗ್ರೀವಸ್ಯ-ರಾವಣನ, ನಿಧನಂ-ಸಂಹಾರವನ್ನು, ರಾಘವಸ್ಯಚ-ರಾಮಚಂದ್ರನ, ವಿಜಯಂ-ಜಯವನ್ನು, (ದೃಷ್ಟ್ವಾ-ನೋಡಿ,) ತತಃ-ಬಳಿಕ, ಜಿತಕಾಶಿನಃ-ಜಯವಂತರಾದ, ವಾನರಾಃ-ಕಪಿಗಳು, ಸಂಹೃಷ್ಟಾಃ-ಸಂತೋಷವುಳ್ಳವರಾಗಿ, ವಿನೇದುಃ-ಸಂತೋಷ ಸೂಚಕವಾದ ಧ್ವನಿಯನ್ನು ಮಾಡಿದರು ॥ ೨೬ ॥ ರಾವಣಸ್ಯ-

ಅಥಾಂತರಿಕ್ಷೇವ್ಯನದತ್ ಸೌಮ್ಯಸ್ತ್ರಿದಶದುಂದುಭಿಃ॥ ೭೭ ॥ ಪಪಾತಪುಷ್ಪವೃಷ್ಟಿಶ್ಚಸಮಂತಾದ್ರಾಘವೋಪರಿ । ತುಷ್ಟುವುರ್ಮುನಯಸ್ಸಿದ್ಧಾಃಚಾರಣಾಶ್ಚದಿವೌಕಸಃ ॥ ೭೮ ॥ ಅಥಾಂತರಿಕ್ಷೇನನೃತುಃಸರ್ವತೋಪ್ಸರಸೋಮುದಾ । ರಾವಣಸ್ಯಚದೇಹೋತ್ಥಂಜ್ಯೋತಿರಾದಿತ್ಯವತ್ಸ್ಫುರತ್ ॥ ೭೯ ॥ ಪ್ರವಿವೇಶರಘುಶ್ರೇಷ್ಠಂದೇವಾನಾಂಪಶ್ಯತಾಂಸತಾಂ । ದೇವಾಊಚುರಹೋಭಾಗ್ಯಂರಾವಣಸ್ಯಮಹಾತ್ಮನಃ ॥ ೮೦ ॥ ವಯಂತುಸಾತ್ವಿಕಾದೇವಾಃವಿಷ್ಣೋಃಕಾರುಣ್ಯಭಾಜನಾಃ ॥ ಭಯದುಃಖಾದಿಭಿರ್ವ್ಯಾಪ್ತಾಃಸಂಸಾರೇಪರಿವರ್ತಿನಃ ॥ ೮೧ ॥ ಅಯಂತುರಾಕ್ಷಸಃಕ್ರೂರೋಬ್ರಹ್ಮಹಾತೀವತಾಮಸಃ । ಪರದಾರರತೋವಿಷ್ಣುದ್ವೇಷೀತಾಪಸಹಿಂಸಕಃ ॥ ೮೨ ॥ ಪಶ್ಯತ್ಸುಸರ್ವಭೂತೇಷುರಾಮಮೇವಪ್ರವಿಷ್ಟವಾನ್। ಏವಂಬ್ರುವತ್ಸುದೇವೇ

ರಾವಣನ, ತದ್ವಧಂ-ಆ ಸಂಹಾರವನ್ನು, ರಾಮವಿಜಯಂ-ರಾಮ-ರಾಮಚಂದ್ರನ, ವಿಜಯಂ-ಜಯವನ್ನು, ವದಂತಃ-ಕಪಿಗಳು ಹೇಳುತ್ತಿರುವವರಾದರು, ಅಥ-ಆ ಬಳಿಕ, ಅಂತರಿಕ್ಷೇ-ಆಕಾಶದಲ್ಲಿ, ಸೌಮ್ಯಃ-ಶಾಂತವಾದ, ತ್ರಿದಶ-ದೇವತೆಗಳ, ದುಂದುಭಿಃ-ದುಂದುಭಿವಾದ್ಯವು, ವ್ಯನದತ್-ಧ್ವನಿ ಮಾಡಿತು || ೭೭ || ಸಮಂತಾತ್-ಸುತ್ತಲೂ, ರಾಘವೋಪರಿ-ರಾಮಚಂದ್ರನಮೇಲೆ, ಪುಷ್ಪವೃಷ್ಟಿಃ-ಹುವ್ವಿನ ಮಳೆಯು, ಪಪಾತ-ಬಿತ್ತು, ಮುನಯಃ-ದೇವಋಷಿಗಳು, ಸಿದ್ಧಾಃ-ಸಿದ್ಧರು, ಚಾರಣಾಃ-ಚಾರಣರು, ದಿವೌಕಸಃ-ಇಂದ್ರಾದಿದೇವತೆಗಳು, ತುಷ್ಟುವುಃ-ಸ್ತೋತ್ರಮಾಡಿದರು ||೭೮|| ಅಥ-ಅನಂತರದಲ್ಲಿ, ಅಂತರಿಕ್ಷೇ-ಅಂತರಿಕ್ಷದಲ್ಲಿ, ಅಪ್ಸರಸಃ-ಅಪ್ಸರಸ್ತ್ರೀಯರಾದ ರಂಭೆ ಮೊದಲಾದವರು, ಸರ್ವತಃ-ಸುತ್ತಲೂ, ಮುದಾ-ಸಂತೋಷದಿಂದ, ನನೃತುಃ-ಕುಣಿದರು, ರಾವಣಸ್ಯಚ-ರಾವಣನ, ದೇಹೋತ್ಥಂ-ಶರೀರದಿಂದ ಹೊರಟಿಂಥಾದ್ದಾದ, (ಜ್ಯೋತಿಃ-ತೇಜಸ್ಸು,) ಆದಿತ್ಯವತ್-ಸೂರ್ಯನಂತೆ, ಸ್ಫುರತ್-ಪ್ರಕಾಶಿಸುತ್ತಿರುವದಾಗಿ || ೭೯ || ದೇವಾನಾಂ-ದೇವತೆಗಳು, ಪಶ್ಯತಾಂಸತಾಂ-ನೋಡುತ್ತಿರುವಾಗ, ರಘುಶ್ರೇಷ್ಠಂ-ರಾಮಚಂದ್ರನನ್ನು, ಪ್ರವಿವೇಶ-ಹೊಕ್ಕಿತು, ದೇವಾಃ-ದೇವತೆಗಳು, ಊಚುಃ-ಹೇಳಿದರು, ಮಹಾತ್ಮನಃ-ಮಹಾತ್ಮನಾದ, ರಾವಣಸ್ಯ-ರಾವಣನ, ಭಾಗ್ಯಂ-ಭಾಗ್ಯವು, ಅಹೋ-ಆಶ್ಚರ್ಯಕರವಾದದ್ದು ||೮೦|| ವಯಂತು-ನಾವಾದರೇನೋ, ಸಾತ್ವಿಕಾಃ-ಸತ್ವಗುಣವುಳ್ಳವರಾಗಿ, ವಿಷ್ಣೋಃ-ವಿಷ್ಣುವಿನ, ಕಾರುಣ್ಯ-ಕೃಪೆಗೆ, ಭಾಜನಾಃ-ಪಾತ್ರರಾದ, ದೇವಾಃ-ದೇವತೆಗಳು (ಆಗಿದ್ದಾಗ್ಯೂ) ಭಯದುಃಖಾದಿಭಿರ್ವ್ಯಾಪ್ತಾಃ-ಭಯ-ದುಃಖ-ಅಂಜಿಕೆ, ದುಃಖ-ವ್ಯಥೆ, ಆದಿಭಿಃ-ಮೊದಲಾದವುಗಳಿಂದ, ವ್ಯಾಪ್ತಾಃ-ಕೂಡಿದವರಾಗಿರುವದಲ್ಲದೆ, ಸಂಸಾರೇ-ಸಂಸೃತಿಯಲ್ಲಿ, ಪರಿವರ್ತಿನಃ-ತಿರುಗುತ್ತಲಿದ್ದೇವೆ ||೮೧|| ಅಯಂತು-ಈ ರಾವಣನಾದರೇನೋ, ರಾಕ್ಷಸಃ-ನೈರ್‍ಋತ್ಯನು, ಕ್ರೂರಃ-ದಯಾಹೀನನು, ಬ್ರಹ್ಮಹಾ-ಬ್ರಾಹ್ಮಣರನ್ನು ಕೊಂದವನು, ಅತೀವ-ಅತ್ಯಂತವಾಗಿ, ತಾಮಸಃ-ತಮೋಗುಣ ಸ್ವಭಾವವುಳ್ಳವನು, ಪರದಾರರತಃ-ಪರ-ಅನ್ಯರ, ದಾರ-ಹೆಂಡತಿಯರಲ್ಲಿ, ರತಃ-ಆಸಕ್ತನು, ವಿಷ್ಣುದ್ವೇಷೀ-ವಿಷ್ಣುವನ್ನು ದ್ವೇಷಮಾಡುತ್ತಿದ್ದವನು, ತಾಪಸಹಿಂಸಕಃ-ತಪಸ್ವಿಗಳನ್ನು ಕೊಲ್ಲುವನು ಆಗಿದ್ದಾಗ್ಯೂ || ೮೨ || ಸರ್ವಭೂತೇಷು-ಸಮಸ್ತಪ್ರಾಣಿಗಳು, ಪಶ್ಯತ್ಸು-ನೋಡುತ್ತಿರುವಾಗಲೇ, ರಾಮಮೇವ-ರಾಮಚಂದ್ರನನ್ನೇ, ಪ್ರವಿಷ್ಟವಾನ್-ಹೊಕ್ಕ

ಷುನಾರದಃಪ್ರಹಸುಸ್ಮಿತಃ ॥ ೮೩ ॥ ಶೃಣುತಾತ್ರ ಸುರಾಯೂಯಂ ಧರ್ಮತತ್ವವಿಚಕ್ಷಣಾಃ । ರಾವಣೋರಾಘವಂದ್ವೇ
ಷಾದನಿಶಂಹೃದಿಭಾವಯನ್ ॥ ೮೪ ॥ ಭೃತ್ಯೈಸ್ಸಹಸದಾರಾಮಚರಿತ್ರಂದ್ವೇಷಸಂಯುತಃ । ಶ್ರುತ್ವಾರಾಮಾತ್ಸ್ವನಿಧನಂ
ಭಯಾತ್ಸರ್ವತ್ರರಾಘವಂ ॥ ೮೫ ॥ ಪಶ್ಯನ್ನನುದಿನಂಸ್ವಪ್ನೇರಾಮಮೇವಾನುಪಶ್ಯತಿ । ಕ್ರೋಧೋಪಿರಾವಣಸ್ಯಾಶುಗುರು
ಬೋಧಾಧಿಕೋಭವೇತ್ ॥ ೮೬ ॥ ರಾಮೇಣನಿಹತಶ್ಚಾಂತೇನಿರ್ಧೂತಾಶೇಷಕಲ್ಮಷಃ । ರಾಮಸಾಯುಜ್ಯಮೇವಾಪರಾವಣೋ
ಮುಕ್ತಬಂಧನಃ ॥ ೮೭ ॥ ಪಾಪಿಷ್ಠೋವಾದುರಾತ್ಮಾಪರಧನಪರದಾರೇಷುಸಕ್ತೋಯದಿಸ್ಯಾನ್ನಿತ್ಯಂಸ್ನೇಹಾದ್ಭಯಾದ್ವಾ
ರಘುಕುಲತಿಲಕಂಭಾವಯನ್ಸಂಪರೇತಃ । ಭೂತ್ವಾಶುದ್ಧಾಂತರಂಗೋಭವಶತಜನಿತಾನೇಕದೋಷೈರ್ವಿಮುಕ್ತಃ ಸದ್ಯೋ

ವನಾದನು, ಏವಂ-ಈ ರೀತಿಯಾಗಿ, ದೇವೇಷು-ದೇವತೆಗಳಿಗೆ, ಬ್ರುವತ್ಸು-ಹೇಳುತ್ತಿರಲು, ನಾರದಃ-ನಾರದ ಮುನಿಯು, ಸುಸ್ಮಿತಃ-ಮುಗುಳು ನಗೆಯುಳ್ಳವನಾಗಿ, ಪ್ರಾಹ-ಹೇಳಿದನು ॥ ೮೩ ॥ ಧರ್ಮತತ್ವವಿಚಕ್ಷಣಾಃ-ಧರ್ಮ-ಧರ್ಮದ, ತತ್ವ-ನಿಜವನ್ನು ತಿಳಿಯುವದರಲ್ಲಿ, ವಿಚಕ್ಷಣಾಃ-ವಿವೇಕಿಗಳಾದ, ಸುರಾಃ-ದೇವತೆಗಳಿರಾ, ಅತ್ರ-ರಾವಣತೇಜಸ್ಸು ರಾಮನಲ್ಲಿ ಪ್ರವೇಶಿಸಿದ ಸಂದರ್ಭದಲ್ಲಿ, ಶೃಣುತ-ಕೇಳಿರಿ, ರಾವಣಃ-ರಾವಣನು, ದ್ವೇಷಾತ್-ವಿರೋಧದಿಂದ, ರಾಘವಂ-ರಾಮಚಂದ್ರನನ್ನು, ಹೃದಿ-ಮನಸ್ಸಿನಲ್ಲಿ, ಅನಿಶಂ-ಪ್ರತಿದಿನದಲ್ಲಿಯೂ, ಭಾವಯನ್-ಧ್ಯಾನಿಸುತ್ತಿರುವವನಾಗಿ ॥ ೮೪ ॥ ಭೃತ್ಯೈಃ-ಸೇವಕರಿಂದ, ರಾಮಚರಿತ್ರಂ-ರಾಮಚಂದ್ರನ ಕಥೆಯನ್ನು, ದ್ವೇಷಸಂಯುತಃ-ದ್ವೇಷದಿಂದೊಡಗೂಡಿದವನಾಗಿ, ಶ್ರುತ್ವಾ-ಕೇಳಿ, ರಾಮಾತ್-ರಾಮಚಂದ್ರನಿಂದ, ಸ್ವನಿಧನಂ-ತನ್ನ ಮರಣವನ್ನು, ಶ್ರುತ್ವಾ-ಚರಿತ್ರೆಯಲ್ಲಿ ಕೇಳಿ, ಭಯಾತ್-ಅಂಜಿಕೆಯಿಂದ, ಸರ್ವತ್ರ-ಎಲ್ಲಿಯೂ, ರಾಘವಂ-ರಾಮಚಂದ್ರನನ್ನು ॥ ೮೫ ॥ ಪಶ್ಯನ್-ನೋಡುತ್ತಿರುವವನಾಗಿ, ಸ್ವಪ್ನೇ-ಸ್ವಪ್ನಾವಸ್ಥೆಯಲ್ಲಿಯೂ, ಅನುದಿನಂ-ಪ್ರತಿದಿನವೂ, ರಾಮಮೇವ-ರಾಮಚಂದ್ರನನ್ನೇ, ಅನುಪಶ್ಯತಿ-ನೋಡುತ್ತಿದ್ದನು, ರಾವಣಸ್ಯ-ರಾವಣನಿಗೆ, ಕ್ರೋಧೋಪಿ-ಕೋಪವು, ಆಶು-ಬೇಗನೆ, ಗುರುಬೋಧಾಧಿಕಃ-ಗುರು-ಗುರುವಿನ, ಬೋಧ-ಉಪದೇಶಕ್ಕಿಂತ, ಅಧಿಕಃ-ಹೆಚ್ಚಾದದ್ದು, ಅಭವತ್-ಆಯಿತು ॥ ೮೬ ॥ ಅಂತೇ-ಕೊನೆಯಲ್ಲಿ, ರಾಮೇಣ-ರಾಮಚಂದ್ರನಿಂದ, ನಿಹತಃ-ಕೊಲ್ಲಲ್ಪಟ್ಟವನಾಗಿ, ನಿರ್ಧೂತ-ಹೋಗಲಾಡಿಸಲ್ಪಟ್ಟ, ಅಶೇಷ-ಎಲ್ಲಾ, ಕಲ್ಮಷಃ-ಪಾಪಗಳುಳ್ಳವನಾಗಿ, ಮುಕ್ತಬಂಧನಃ-ಮುಕ್ತ-ಬಿಡುಗಡೆಯಾದ, ಬಂಧನಃ-ಸಂಸಾರ ಬಂಧವುಳ್ಳವನಾಗಿ, ರಾವಣಃ-ರಾವಣನು, ರಾಮಸಾಯುಜ್ಯಂ-ರಾಮಸ್ವರೂಪ ಪರಿಣಾಮವನ್ನೇ, ಆಪ-ಹೊಂದಿದನು ॥ ೮೭ ॥ ಪಾಪಿಷ್ಠಃ-ಅಧಿಕ ಪಾಪವುಳ್ಳವನು, ದುರಾತ್ಮಾ-ಪರರಿಗೆ ಅನಿಷ್ಟವನ್ನು ಯೋಚಿಸುವವನು, ಪರ-ಅನ್ಯರ, ಧನ-ಹಣದಲ್ಲಿ, ಪರದಾರೇಷು-ಅನ್ಯರ ಹೆಂಡತಿಯರಲ್ಲಿ, ಸಕ್ತಃ-ಆಸಕ್ತನಾದವನು ನಿತ್ಯಂ-ಪ್ರತಿದಿನವೂ, ಯದಿಸ್ಯಾತ್-ಆಗಿದ್ದಾಗ್ಯೂ, ಸ್ನೇಹಾತ್-ಗೋಪಿಕಾಸ್ತ್ರೀಯರಂತೆ ಸ್ನೇಹದಿಂದಲಾಗಲೀ, ಭಯಾತ್-ರಾವಣಾದಿಗಳಂತೆ ಭಯದಿಂದಲಾಗಲೀ, ರಘುಕುಲತಿಲಕಂ-ರಘು ವಂಶಕ್ಕೆ ಅಲಂಕಾರಭೂತನಾದ ರಾಮಚಂದ್ರನನ್ನು, ಭಾವಯನ್-ಧ್ಯಾನ ಮಾಡುತ್ತಿರುವವನಾಗಿ, ಪರೇತಃ-ಮರಣವನ್ನು ಹೊಂದಿ

ರಾಮಸ್ಯವಿಷ್ಣೋಃ ಸುರವರವಿನುತಂಯಾತಿವೈಕುಂಠಮಾದ್ಯಂ || ೭೭ || ಹತ್ವಾಯುದ್ಧೇದಶಾಸ್ಯಂತ್ರಿಭುವನವಿಷಮಂ
ವಾಮಹಸ್ತೇನಚಾಪಂಭೂಮೌವಿಷ್ಟಭ್ಯತಿಷ್ಠನ್ನಿತರಕರಧೃತಂಭ್ರಾಮಯನ್ಬಾಣಮೇಕಂ | ಆರಕ್ತೋಪಾಂತನೇತ್ರಃಶ
ರದಳಿತವಪುಃಸೂರ್ಯಕೋಟಿಪ್ರಕಾಶೋವೀರಶ್ರೀಬಂಧುರಾಂಗಸ್ತ್ರಿದಶಪತಿನುತಃಪಾತುಮಾಂವೀರರಾಮಃ || ||೭೮||

——*** ಇತಿ ಶ್ರೀಮದಧ್ಯಾತ್ಮರಾಮಾಯಣೇ-ಉಮಾಮಹೇಶ್ವರಸಂವಾದೇ-ಯುದ್ಧಕಾಂಡೇ ಏಕಾದಶಸ್ಸರ್ಗಃ ***——

ಶ್ರೀಮಹಾದೇವಉವಾಚ || ೧ || ರಾಮೋವಿಭೀಷಣಂದೃಷ್ಟ್ವಾಹನೂಮಂತಂತಥಾಂಗದಂ | ಲಕ್ಷ್ಮಣಂಕಪಿರಾ
ಜಂಚಜಾಂಬವಂತಂತಥಾಪರಾನ್ || ೨ || ಪರಿತುಷ್ಟೇನಮನಸಾಸರ್ವಾನೇವಾಬ್ರವೀದ್ವಚಃ | ಭವತಾಂಬಾಹುವೀರ್ಯೇಣ

ವವನು, ಶುದ್ಧಾಂತರಂಗಃ-ನಿರ್ಮಲಾಂತಃಕರಣನು, ಭೂತ್ವಾ-ಆಗಿ, ಭವಶತಜನಿತಾಶೇಷದೋಷೈಃ-ಭವಶತ-ನೂರು ಜನ್ಮಗಳಿಂದ, ಜನಿತ-ತನ್ನಿಂದುಪಾರ್ಜಿತವಾದ, ಅಶೇಷ-ಸಮಸ್ತ
ವಾದ, ದೋಷೈಃ-ದೋಷಗಳಿಂದ, ವಿಮುಕ್ತ-ರಹಿತನಾಗಿ, ಸದ್ಯಃ-ಈಗಲೇ, ವಿಷ್ಣೋಃ-ವ್ಯಾಪಕನಾದ, ರಾಮಸ್ಯ-ತಾರಕ ಬ್ರಹ್ಮನ, ಸುರವರ-ಬ್ರಹ್ಮೇಂದ್ರಾದಿಗಳಿಂದ, ವಿನುತಂ-ಸ್ತೋತ್ರ
ವ್ಯವಾದ, ಆದ್ಯಂ-ಮುಖ್ಯವಾದ, ವೈಕುಂಠಂ-ಪರಮ ಪದವನ್ನು, ಯಾತಿ-ಸೇರುತ್ತಲಿದ್ದಾನೆ || ೭೭ || ಯುದ್ಧೇ-ಕಾಳಗದಲ್ಲಿ, ತ್ರಿಭುವನ, ಮೂರು ಲೋಕಗಳಿಗೆ, ವಿಷ
ಮಂ-ಕಂಟಕನಾದ, ದಶಾಸ್ಯಂ-ರಾವಣನನ್ನು, ಹತ್ವಾ-ಕೊಂದು, ವಾಮಹಸ್ತೇನ-ಎಡಕೈಯಿಂದ, ಚಾಪಂ-ಬಿಲ್ಲನ್ನು, ಭೂಮೌ-ಭೂಮಿಯಲ್ಲಿ, ವಿಷ್ಟಭ್ಯ-ಊರಿಕೊಂಡು, ತಿಷ್ಠನ್-
ಇರುತ್ತಿರುವವನಾದ, ಇತರಕರ-ಬಲಕೈಯಲ್ಲಿ, ಧೃತಂ-ಹಿಡಿದಿರುವ, ಏಕಂ-ಒಂದಾದ, ಬಾಣಂ-ಅಂಬನ್ನು, ಭ್ರಾಮಯನ್-ತಿರಿಗಿಸುತ್ತಿರುವವನಾದ, ಆರಕ್ತೋಪಾಂತನೇತ್ರಃ-ಆರಕ್ತ-ಕೆಂ
ಪಾಗಿರುವ, ಉಪಾಂತನೇತ್ರಃ-ಕೊನೆಗಣ್ಣುಗಳುಳ್ಳವನಾದ, ಶರದಳಿತವಪುಃ-ಶರ-ಬಾಣಗಳಿಂದ, ದಳಿತ-ಘಾಯವಾಗಿರುವ, ವಪುಃ-ಶರೀರವುಳ್ಳವನಾದ, ಸೂರ್ಯಕೋಟಿಪ್ರಕಾಶಃ-ಕೋಟಿ
ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವನಾದ, ವೀರಶ್ರೀಬಂಧುರಾಂಗಃ-ವೀರಶ್ರೀ-ವೀರ ಲಕ್ಷ್ಮಿಯಿಂದ, ಬಂಧುರ-ಕೂಡಿರುವ, ಅಂಗಃ-ದೇಹವುಳ್ಳವನಾದ, ತ್ರಿದಶಪತಿನುತಃ-ತ್ರಿದಶ-ದೇವ
ತೆಗಳಿಗೆ, ಪತಿ-ಸ್ವಾಮಿಯಾದ ಇಂದ್ರನಿಂದ, ನುತಃ-ಸೇವಿತನಾದ, ವೀರರಾಮಃ-ವೀರ ರಸವುಳ್ಳವನಾದ ರಾಮಚಂದ್ರನು, ಮಾಂ-ನನ್ನನ್ನು, ಪಾತು-ಕಾಪಾಡಲಿ || ೭೮ ||

—·*ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರ ಸಂವಾದದಲ್ಲಿ ಯುದ್ಧಕಾಂಡದೊಳು ಹನ್ನೊಂದನೆಯ ಸರ್ಗವು.*·—

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ || ೧ || ರಾಮಃ-ರಾಮಚಂದ್ರನು, ವಿಭೀಷಣಂ-ವಿಭೀಷಣನನ್ನು, ಹನೂಮಂತಂ-ಆಂಜನೇಯನನ್ನು, ತಥಾ-ಹಾ
ಗೆ, ಅಂಗದಂ-ಅಂಗದನನ್ನು, ಲಕ್ಷ್ಮಣಂ-ಲಕ್ಷ್ಮಣನನ್ನು, ಕಪಿರಾಜಂಚ-ಸುಗ್ರೀವನನ್ನು, ಜಾಂಬವಂತಂ-ಜಾಂಬವಂತನನ್ನು, ತಥಾ-ಹಾಗೆ, ಅಪರಾನ್-ಇತರ ಕಪಿಗಳನ್ನು, ದೃ
ಷ್ಟ್ವಾ-ನೋಡಿ || ೨ || ಪರಿತುಷ್ಟೇನ-ಸಂತುಷ್ಟವಾದ, ಮನಸಾ-ಮನಸ್ಸಿನಿಂದ, ಸರ್ವಾನೇವ-ಎಲ್ಲರನ್ನು ಕುರಿತು, ವಚಃ-ಮಾತನ್ನು ಅಬ್ರವೀತ್-ಹೇಳಿದನು, ಭವತಾಂ-ನಿಮ್ಮಗಳ,

ನಿಹತೋರಾವಣೋಮಯಾ ॥ ೩ ॥ ಕೀರ್ತಿಸ್ಸ್ಥಾಸ್ಯತಿವಃಪುಣ್ಯಾಯಾವಚ್ಚಂದ್ರದಿವಾಕರೌ । ಕೀರ್ತಯಿಷ್ಯಂತಿಭವತಾಂ
ತಥಾಂತ್ರೈಲೋಕ್ಯಪಾವನೀಂ॥೪॥ ಯುಯೋಪೇತಾಂಕಲಿಹರಾಂಯಾಸ್ಯಂತಿಪರಮಾಂಗತಿಂ।ಏತಸ್ಮಿನ್ನಂತರೇದೃಷ್ಟ್ವಾ
ರಾವಣಂಪತಿತಂಭುವಿ ॥ ೫ ॥ ಮಂದೋದರೀಮುಖಾಸ್ಸರ್ವಾಸ್ಸ್ತ್ರಿಯೋರಾವಣಪಾಲಿತಾಃ।ಪತಿತಾರಾವಣಸ್ಯಾಗ್ರೇಶೋಚಂ
ತ್ಯಃಸರ್ವ್ಯದೇವಯರ್ನ್ ॥ ೬ ॥ ವಿಭೀಷಣಶ್ಚಶೋಚಾರ್ತಃಶೋಕೇನಮಹತಾವೃತಃ । ಪತಿತೋರಾವಣಸ್ಯಾಗ್ರೇಬಹುಧಾಪ
ರ್ಯದೇವಯತ್ ॥ ೭ ॥ ರಾಮಸ್ತುಲಕ್ಷ್ಮಣಂಪ್ರಾಹಬೋಧಯಸ್ವವಿಭೀಷಣಂ । ಕರೋತುಭ್ರಾತೃಸಂಸ್ಕಾರಂಕಿಂವಿಲಂಬೇ
ನಮಾನದ ॥ ೮ ॥ ಸ್ತ್ರಿಯೋಮಂದೋದರೀಮುಖ್ಯಾಃಪತಿತಾವಿಲಪಂತಿಚ । ನಿವಾರಯತುತಾಸ್ಸರ್ವಾರಾಕ್ಷಸೀರಾವಣ

ಬಾಹುವೀರ್ಯೇಣ-ತೋಳ್ಗಳ ಬಲದಿಂದ, ಮಯಾ-ನನ್ನಿಂದ, ರಾವಣಃ-ರಾವಣನು, ನಿಹತಃ-ಕೊಲ್ಲಲ್ಪಟ್ಟನು ॥ ೩ ॥ ಯಾವತ್-ಎಲ್ಲಿವರೆಗೆ ಚಂದ್ರದಿವಾಕರೌ-ಚಂದ್ರ ಸೂರ್ಯರು (ಇರುತ್ತಾರೋ, ಅದುವರೆಗೆ,) ವಃ-ನಿಮ್ಮಗಳ, ಪುಣ್ಯಾ-ಪುಣ್ಯ ಸಂಪಾದಕವಾದ, ಕೀರ್ತಿಃ-ಯಶಸ್ಸು, ಸ್ಥಾಸ್ಯತಿ-ಇರುತ್ತೆ, ಭವತಾಂ-ನಿಮ್ಮಗಳ, ತ್ರೈಲೋಕ್ಯಪಾವನೀಂ-ಮೂರು ಲೋಕಗಳನ್ನು ಪರಿಶುದ್ಧ ಮಾಡುವ, ಕಥಾಂ-ಚರಿತ್ರೆಯನ್ನು, ಕೀರ್ತಯಿಷ್ಯಂತಿ-ಜನರು ಹೇಳುತ್ತಿರುತ್ತಾರೆ ॥ ೪ ॥ ಯಯಾ-ಯಾವ ನಿಮ್ಮ ಕೀರ್ತಿಯಿಂದ, ಉಪೇತಾಂ-ಕೂಡಿರುವದಾದ, ಕಲಿಹರಾಂ-ಕಲಿಯುಗದ ದುರ್ದೋಷಗಳನ್ನು ಹೋಗಲಾಡಿಸುವ (ಕಥೆಯನ್ನು ಯಾರು ಕೇಳುತ್ತಾರೋ,) ಅವರು ಪರಮಾಂ-ಉತ್ಕೃಷ್ಟವಾದ, ಗತಿಂ-ಗತಿಯನ್ನು, ಯಾಸ್ಯಂತಿ-ಹೊಂದುವರು, ಏತಸ್ಮಿನ್ ಅಂತರೇ-ಈ ನಡುವೆ, ಭುವಿ-ನೆಲದಲ್ಲಿ, ಪತಿತಂ-ಸತ್ತು ಬಿದ್ದಿರುವ, ರಾವಣಂ-ರಾವಣನನ್ನು, ದೃಷ್ಟ್ವಾ-ನೋಡಿ ॥ ೫ ॥ ರಾವಣಪಾಲಿತಾಃ-ರಾವಣನಿಂದ ಕಾಪಾಡಲ್ಪಟ್ಟವರಾದ, ಮಂದೋದರೀಮುಖಾಃ-ಮಂದೋದರಿಯೇ ಮೊದಲಾದ, ಸ್ತ್ರಿಯಃ-ಹೆಂಗಸರು, ರಾವಣಸ್ಯ-ರಾವಣನ, ಅಗ್ರೇ-ಮುಂದೆ, ಪತಿತಾಃ-ಬಿದ್ದವರಾಗಿ, ಶೋಚಂತ್ಯಃ-ದುಃಖವನ್ನು ಮಾಡುತ್ತಿರುವವರಾಗಿ, ಪರ್ಯದೇವಯನ್-ಪ್ರಲಾಪವನ್ನು ಮಾಡಿದರು ॥ ೬ ॥ ಮಹತಾ-ಹೆಚ್ಚಾದ, ಶೋಕೇನ-ದುಃಖದಿಂದ, ವೃತಃ-ಕೂಡಿದವನಾದ, ಆರ್ತಃ-ಸಂಕಟಪಡುತ್ತಿದ್ದವನಾದ, ವಿಭೀಷಣಃ-ವಿಭೀಷಣನು, ಶೋಚ-ದುಃಖ ಮಾಡಿದನು, ರಾವಣಸ್ಯ-ರಾವಣನ, ಅಗ್ರೇ-ಮುಂದೆ, ಪತಿತಃ-ಬಿದ್ದವನಾಗಿ, ಬಹುಧಾ-ಅನೇಕ ಪ್ರಕಾರವಾಗಿ, ಪರ್ಯದೇವಯತ-ಪ್ರಲಾಪವನ್ನು ಮಾಡಿದನು ॥ ೭ ॥ ರಾಮಸ್ತು-ರಾಮಚಂದ್ರನು, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಪ್ರಾಹ-ಹೇಳಿದನು, ವಿಭೀಷಣಂ-ವಿಭೀಷಣನನ್ನು ಕುರಿತು, ಬೋಧಯಸ್ವ-ಬೋಧನೆಯನ್ನು ಮಾಡುವವನಾಗು, ಮಾನದ-ಮಾನವನ್ನು ಕೊಡುವವನಾದ ಲಕ್ಷ್ಮಣನೇ, ಭ್ರಾತೃಸಂಸ್ಕಾರಂ-ಭ್ರಾತೃ-ಅಣ್ಣನಾದ ರಾವಣನಿಗೆ, ಸಂಸ್ಕಾರಂ-ಮರಣ ಸಂಸ್ಕಾರವನ್ನು, ಕರೋತು-ಮಾಡಲಿ, ವಿಲಂಬೇನ-ಸಾವಕಾಶವನ್ನು ಮಾಡಿದ್ದರಿಂದ, ಕಿಂ-ಏನು ॥ ೮ ॥ ಮಂದೋದರೀಮುಖ್ಯಾಃ-ಮಂದೋದರೀ-ರಾವಣನ ಪಟ್ಟದ ಹೆಂಡತಿಯಾದ ಮಂದೋದರಿಯೇ ಮುಖ್ಯಾಃ-ಮೊದಲಾದ, ಸ್ತ್ರಿಯಃ-ರಾವಣನ ಹೆಂಗಸರು, ಪತಿತಾಃ-ಬಿದ್ದವರಾಗಿ, ವಿಲಪಂತಿ-ಪ್ರಲಾಪ ಮಾಡುತ್ತಿದ್ದಾರೆ, ರಾವಣಪ್ರಿಯಾಃ-

ಪ್ರಿಯಾಃ ॥ ೯ ॥ ಏವಮುಕ್ತ್ವಾ ತು ರಾಮೇಣ ಲಕ್ಷ್ಮಣೋಗಾದ್ವಿಭೀಷಣಂ । ಉಪಾಂಶುಮೃತಕೋಪಾಂತೇ ಪತಿತಂ ಮೃತಕೋಪಮಂ ॥ ೧೦ ॥ ಶೋಕೇನ ಮಹತಾವಿಷ್ಟಂ ಸೌಮಿತ್ರಿರಿದಮಬ್ರವೀತ್ । ಯಂ ಶೋಚಸಿ ತ್ವಂ ದುಃಖೇನ ಕೋಯಂ ತವ ವಿಭೀಷಣ ॥ ೧೧ ॥ ತ್ವಂ ವಾಸ್ಯ ಕತಮಃ ಸೃಷ್ಟೇಃ ಪುರಾ ದಾಸೀದಿತಃ ಪರಂ । ಯದ್ವತ್ತೋಯೌಘಪತಿತಾಃ ಸಿಕತಾ ಯಾಂತಿ ತಾದೃಶಾಃ ॥ ೧೨ ॥ ಸಂಯುಜ್ಯಂತೇ ವಿಯುಜ್ಯಂತೇ ತಥಾ ಕಾಲೇನ ದೇಹಿನಃ । ಯಥಾ ಧಾನಾಸು ವೈ ಧಾನಾ ಭವಂತಿ ನ ಭವಂತಿ ಚ ॥ ೧೩ ॥ ಏವಂ ಭೂತೇಷು ಭೂತಾನಿ ಪ್ರೇರಿತಾನೀಶಮಾಯಯಾ । ತ್ವಂ ಚೈವಮೇವ ಯಮನ್ಯೇ ಚ ತುಲ್ಯಾಃ ಕಾಲವಶೋದ್ಭವಾಃ ॥ ೧೪ ॥ ಜನ್ಮಮೃ

ರಾವಣ-ರಾವಣನಿಗೆ, ಪ್ರಿಯಾಃ-ಹೆಂಡತಿಯರಾದ, ಸರ್ವಾಃ-ಸಮಸ್ತರಾದ, ತಾಃ-ಆ, ರಾಕ್ಷಸೀಃ-ರಾಕ್ಷಸ ಸ್ತ್ರೀಯರನ್ನು, ನಿವಾರಯ-ದುಃಖ ಸಮಾಧಾನ ಮಾಡಿ ಕಳುಹಿಸ ಲಿ ॥ ೯ ॥ ಅಥ-ಅನಂತರದಲ್ಲಿ, ರಾಮೇಣ-ರಾಮಚಂದ್ರನಿಂದ, ಏವಂ-ಈ ರೀತಿಯಾಗಿ, ಉಕ್ತಃ-ಹೇಳಲ್ಪಟ್ಟವನಾದ, ಲಕ್ಷ್ಮಣಃ-ಲಕ್ಷ್ಮಣನು, ವಿಭೀಷಣಂ-ವಿಭೀಷಣನನ್ನು ಕುರಿತು, ಅಗಾತ್-ಹೋದನು, ಮೃತಕೋಪಾಂತೇ-ಮೃತಕ-ಸತ್ತು ಬಿದ್ದಿರುವ ರಾವಣನ, ಉಪಾಂತೇ-ಸಮೀಪದಲ್ಲಿ, ಪತಿತಂ-ಬಿದ್ದಿರುವವನಾದ, ಮೃತಕೋಪಮಂ-ಮೃತಕ-ಸತ್ತವನಿಗೆ, ಉಪಮಂ-ಸಮಾನನಾಗಿರುವ ॥ ೧೦ ॥ ಮಹತಾ-ಹೆಚ್ಚಾದ, ಶೋಕೇನ-ದುಃಖದಿಂದ, ಆವಿಷ್ಟಂ-ಕೂಡಿದವನಾದ ವಿಭೀಷಣನನ್ನು ಕುರಿತು, ಸೌಮಿತ್ರಿಃ-ಲಕ್ಷ್ಮಣನು, ಇದಂ-ಈ ಮಾತನ್ನು, ಅಬ್ರವೀತ್-ಹೇಳಿದನು, ವಿಭೀಷಣ-ವಿಭೀಷಣನೇ, ಯಂ-ಯಾರನ್ನು ಕುರಿತು, ದುಃಖೇನ-ವ್ಯಥೆಯಿಂದ, ತ್ವಂ-ನೀನು, ಶೋಚಸಿ-ದುಃಖಪಡುತ್ತೀಯೋ, ತವ-ನಿನಗೆ, ಕೋಯಂ-ಇವನು ಯೇನಾಗಬೇಕು, ಆತ್ಮನು ಶುದ್ಧಬುದ್ಧ ಸ್ವರೂಪನಾದ್ದರಿಂದ ಯಾರಿಂದಲೂ ಆತ್ಮನಿಗೆ ಸಂಬಂಧವಿಲ್ಲವೆಂಬ ಭಾವವು) ॥ ೧೧ ॥ ಸೃಷ್ಟೇಃ-ಸೃಷ್ಟಿಯ, ಪುರಾ-ಪೂರ್ವದಲ್ಲಿಯೂ, ಇತಃಪರಂ-ಇನ್ನು ಮೇಲೆಯೂ, ಅಸ್ಯ-ಈ ರಾವಣನಿಗೆ, ತ್ವಂ-ನೀನು, ಕತಮಃ-ಯಾವ ಸಂಬಂಧಪಟ್ಟವನಾಗಿದ್ದವನು, ಇದಾನೀಂ-ಈಗ, ಏನು ಸಂಬಂಧಪಟ್ಟವನಾಗಿದ್ದೀ, ಸೃಷ್ಟಿಗೆ ಮುಂಚೆ ಇನ್ನು ಮೇಲೆ ಸಹಾ ರಾವಣನಿಗೂ ನಿನಗೂ ಏನೂ ಸಂಬಂಧ ಉಂಟಾಗಿರುವದಿಲ್ಲವಾಗಿ, ಈಗಲೂ ಯಾವ ಸಂಬಂಧವೂ ನಿನಗಿಲ್ಲವು, ತೋಯೌಘಪತಿತಾಃ-ತೋಯೌಘ-ನೀರಿನ ಸಮೂಹದಲ್ಲಿ, ಪತಿತಾಃ-ಬಿದ್ದಿರುವ, ಸಿಕತಾಃ-ಮರಳುಗಳು, ಯದ್ವತ್-ಹ್ಯಾಗೆ, ಯಾಂತಿ-ಹೋಗುತ್ತಲಿವೆಯೋ, ತಾದೃಶಾಃ-ಅಂಥಾವರುಗಳಾಗಿ ॥ ೧೨ ॥ ದೇಹಿನಃ-ದೇಹಧಾರಿಗಳು, ಸಂಯುಜ್ಯಂತೇ-ಕೂಡುತ್ತಾರೆ, ತಥಾ-ಹಾಗೆ, ಕಾಲೇನ-ಕಾಲದಿಂದ, ವಿಯುಜ್ಯಂತೇ-ಅಗಲಿ ಹೋಗುತ್ತಾರೆ, ಧಾನಾಸು-ಕಾಳುಗಳ ಮೇಲೆ, ಧಾನಾಃ-ಕಾಳುಗಳು, ಯಥಾ-ಹ್ಯಾಗೆ, ಭವಂತಿ-ಇರುವವೋ, ನಭವಂತಿ-ಇರುವದಿಲ್ಲವೋ ಹಾಗೆ ॥ ೧೩ ॥ ಈಶಮಾಯಯಾ-ಈಶ್ವರ ಮಾಯೆಯಿಂದ, ಪ್ರೇರಿತಾನಿ-ಚೋದಿತಗಳಾದ, ಭೂತಾನಿ-ಪ್ರಾಣಿಗಳು, ಭೂತೇಷು-ಪ್ರಾಣಿಗಳಲ್ಲಿ, ಏವಂ-ಈ ರೀತಿಯಾಗಿ, ಸಂಯುಜ್ಯಂತೇ-ವಿಯುಜ್ಯಂತೇ-ಕೂಡುವಿಕೆ ಅಗಲುವಿಕೆಗಳುಳ್ಳದಾದಿಗಿರುವವು, ತ್ವಂ-ನೀನು, ಏಯಂ-ನಾವು, ಅನ್ಯೇಚ-ಇತರರು, ಕಾಲವಶೋದ್ಭವಾಃ-ಕಾಲವಶ-ಕಾಲಾಧೀನರಾಗಿ, ಉದ್ಭವಾಃ-ಹುಟ್ಟಿದವರಾಗಿ, ತುಲ್ಯಾಃ-ಸಂಯೋಗ ವಿಯೋಗಗಳಿಂ

ತ್ಯೋಯದಾಯಸ್ಮಾತ್ತದಾತಸ್ಮಾದ ವಿಷ್ಯತಃ । ಈಶ್ವರಸ್ಸರ್ವಭೂತಾನಿಭೂತ್ವೈಸ್ಸೃಜತಿಹಂತ್ಯಜಃ ॥ ೧೫ ॥ ಆತ್ಮಾಸ್ಸೃಷ್ಟಂ ರಸ್ವತಂತ್ರೈ ರನಪೇಕ್ಷೋಪಿಬಾಲವತ್ । ದೇಹೇನದೇಹಿನೋಜೀವಾದೇಹಾದ್ದೇಹೋಭಿಜಾಯತೇ ॥ ೧೬ ॥ ಬೀಜಾದೇವಯಥಾ ಬೀಜಂದೇಹೋಸ್ಯಇವಶಾಶ್ವತಃ । ದೇಹಿದೇಹವಿಭಾಗೋಯಮವಿವೇಕಕೃತಃಪುರಾ ॥೧೭॥ ನಾನಾತ್ವಂಜನ್ಮನಾಶಕ್ಷಯವೃದ್ಧಿಃಕ್ರಿಯಾಫಲಂ । ದ್ರಷ್ಟುರಾಭಾಂತ್ಯತದ್ಧರ್ಮಾಯಥಾಗ್ನೇರ್ದಾರುವಿಕ್ರಿಯಾಃ ॥ ೧೮ ॥ ತಇಮೇದೇಹಸಂಯೋಗಾದಾತ್ಮ

ಟಾಗುವ ವಿಷಯದಲ್ಲಿ ಸಮಾಸರಾಗಿಯೇ ಇದ್ದೇವೆ ॥ ೧೪ ॥ ಯಸ್ಮಾತ್-ಯಾವ ಕಾರಣದಿಂದ, ಯದಾ-ಯಾವ ಕಾಲದಲ್ಲಿ (ಭಗವಂತನಿಂದ,) ಜನ್ಮಮೃತ್ಯೋ-ಅವನವನ ಕರ್ಮಾನುಸಾರವಾಗಿ ಹುಟ್ಟುವದೂ ಸಾಯುವದೂ, (ಕಲ್ಪಿತೌ-ಉಂಟು ಮಾಡಲ್ಪಟ್ಟವೋ, ತಸ್ಮಾತ್-ಆದಕಾರಣದಿಂದ, ತದಾ-ಆ ಕಾಲದಲ್ಲಿ,) ತೌ-ಕರ್ಮ ಸಹಕೃತಗಳಾದ ಜನಮೃತ್ಯುಗಳು,) ಭವಿಷ್ಯತಃ-ಆಗುತ್ತಲಿವೆ, ಅಜಃ-ಉತ್ಪತ್ತಿಯಿಲ್ಲದವನಾದ, ಈಶ್ವರಃ-ನಿಯಾಮಕನು, ಭೂತ್ವೈಃ-ಪೃಥಿವೀ ಜಲತೇಜೋ ವಾಯ್ವಾಕಾಶಾದಿಗಳಿಂದ, ಭೂತಾನಿ-ಪ್ರಾಣಿಗಳನ್ನು, ಸೃಜತಿ-ಸೃಷ್ಟಿ ಮಾಡುತ್ತಾನೆ, ಹಂತಿ-ಲಯ ಮಾಡುತ್ತಾನೆ ॥ ೧೫ ॥ ಆತ್ಮಾ-ಆತ್ಮನು, ಬಾಲವತ್-ಬಾಲ ಬುದ್ಧಿಯಿಂದ ತಾನು ಮಣ್ಣಿನಿಂದ ಚಿತ್ರಗಳನ್ನು ಮಾಡಿ ಅದರಿಂದ ತನಗೆ ಉಂಟು ಮಾಡಿದ ವಸ್ತು ಜನಿತವಾದ ಪ್ರಯೋಜನಾಪೇಕ್ಷೆ ಇಲ್ಲದೇ ಇದ್ದಾಗ್ಯೂ ಬಾಲಕನು ಹ್ಯಾಗೆ ಮಣ್ಣಿನ ಸೃಷ್ಟಿಯನ್ನು ಮಾಡುತ್ತಾನೋ, ಆ ಬಾಲಕನಂತೆ, ಸೃಷ್ಟೈಃ-ಸೃಜಿಸಲ್ಪಟ್ಟ, ಅಸ್ವತಂತ್ರೈಃ-ತಾವು ಅಲ್ಲಾಡಿಸುವದಕ್ಕೂ ಸಾಮರ್ಥ್ಯವಿಲ್ಲದವುಗಳಾದ ಪ್ರಾಣಿಗಳಿಂದ, ಅನಪೇಕ್ಷೋಪಿ-ಸೃಷ್ಟಿಯಿಂದುಂಟಾಗುವ ಫಲಾಪೇಕ್ಷೆಯಿಲ್ಲದವನಾದಾಗ್ಯೂ, ಜೀವಾಃ-ಆತ್ಮಗಳು, ದೇಹೇನ-ದೇಹದಿಂದ, ದೇಹಿನಃ-ದೇಹವುಳ್ಳವರೆಂಬ ಪಾಮರ ವ್ಯವಹಾರ ಪಾತ್ರರಾಗುವರು, ವಸ್ತುತಃ-ದೇಹವು ಆತ್ಮನಲ್ಲವು, ದೇಹಾತ್-ಶರೀರದಿಂದ, ದೇಹಃ-ಶರೀರವು, ಅಭಿಜಾಯತೇ-ಕರ್ಮಾನುಸಾರವಾಗಿ, ಹುಟ್ಟುತ್ತಲಿದೆ ॥ ೧೬ ॥ ಬೀಜಾದೇವ-ಬೀಜದಿಂದ, ಬೀಜಂ-ಬೀಜವು, ಯಥಾ-ಹ್ಯಾಗೆ ಹುಟ್ಟುವದೋ ಹಾಗೆ, ದೇಹಃ-ಶರೀರದಿಂದ ಹುಟ್ಟಿದ ದೇಹವು, ಅಸ್ಯೇವ-ಬೇರೆಯಾಗಿರುವದು, (ದೇಹವು ಅಶಾಶ್ವತವಾದ್ದರಿಂದಲೂ,) ದೇಹಿಯು, ಶಾಶ್ವತಃ-ನಿತ್ಯನಾದ್ದರಿಂದಲೂ, ಅಯಂ-ಈ ಆತ್ಮನು, ದೇಹಿ-ದೇಹವುಳ್ಳವನು, ದೇಹಃ-ಇದು ದೇಹವು ಎಂಬ, ವಿಭಾಗಃ-ವ್ಯವಹಾರವು, ಪುರಾ-ಪೂರ್ವದಲ್ಲಿ, ಅವಿವೇಕಕೃತಃ-ಅಂತಃಕರಣದಿಂದ ಆತ್ಮಾಜ್ಞಾನದಿಂದ ಕಲ್ಪಿತವಾದದ್ದು ॥ ೧೭ ॥ ಅಗ್ನೇಃ-ಬೆಂಕಿಗೆ, ದಾರುವಿಕ್ರಿಯಾಃ-ದಾರು-ಕಟ್ಟಿಗೆಯಲ್ಲಿ ಉಂಟಾಗಿರುವ ವಕ್ರತ್ವಾದಿಗಳು, ಯಥಾ-ಹ್ಯಾಗೆ ತೋರುವವೋ ಹಾಗೆ, ನಾನಾತ್ವಂ-ಭ್ರಾತ್ರಾದಿ ಭೇದವು, ಜನ್ಮ-ಹುಟ್ಟುವಿಕೆ, ನಾಶಃ-ಸಾಯುವಿಕೆ, ಕ್ಷಯಃ-ಕಡಿಮೆಯಾಗುವದು, ವೃದ್ಧಿಃ-ಹೆಚ್ಚುವದು, ಕ್ರಿಯಾಫಲಂ-ಕ್ರಿಯಾ-ಪುಣ್ಯ ಪಾಪ ಕರ್ಮಗಳ, ಫಲಂ-ಫಲರೂಪಗಳಾದ ಸುಖದುಃಖಗಳು, ಅತದ್ಧರ್ಮಾಃ-ಅನಾತ್ಮ ಧರ್ಮಗಳು, ದ್ರಷ್ಟುಃ-ಸಾಕ್ಷಿಯಾದ ಆತ್ಮನಿಗೆ, ಭಾಂತಿ-ಅಂತಃಕರಣ ತದ್ಧರ್ಮಗಳೆಂದು ತಿಳಿಯದೆ ಅಜ್ಞಾನದಿಂದ ಆತ್ಮನವೆಂತ್ತಿಗಳೆಂಬದಾಗಿ ತೋರುತ್ತಲಿವೆ ॥ ೧೮ ॥ ತೇ ಇಮೇ-ಈ ನಾನಾತ್ವಾದಿಗಳು, ದೇಹಸಂಯೋಗಾತ್-ದೇಹ ಶರೀರಾಂತಃಕರಣಾದಿಗಳ, ಸಂಯೋಗಾತ್-ಸಂಬಂಧದ ದೆಸೆಯಿಂದ, ಆತ್ಮನಿ-ಆತ್ಮನ

ನ್ಯಾಭಾಂತ್ಯಸದ್ಗ್ರಹಾತ್ । ಪ್ರಥಾಂಯಥಾಸಥಾಚಾನ್ಯಧ್ಯಾಯತೋಸತ್ಸದಾಗ್ರಹಾತ್ ॥೧೯॥ ಪ್ರಸುಪ್ತಸ್ಯಾನಹಂಭಾವಾತ್ತದಾಭಾತಿನಸಂಸೃತಿಃ। ಜೀವತೋಽಪಿಯಥಾತದ್ವದ್ವಿಮುಕ್ತಸ್ಯಾನಹಂಕೃತೇಃ ॥೨೦॥ ತಸ್ಮಾನ್ಮಾಯಾಮನೋಧರ್ಮಂ ಜಹ್ಯಹಂಮಮತಾಭ್ರಮಂ । ರಾಮಭದ್ರೇಭಗವತಿಮನೋದೇಹ್ಯಾತ್ಮನೀಶ್ವರೇ ॥೨೧॥ ಸರ್ವಭೂತಾತ್ಮನಿಪರೇಮಾಯಾಮಾನುಷರೂಪಿಣಿ । ಬಾಹ್ಯೇಂದ್ರಿಯಾರ್ಥಸಂಬಾಧಾರ್ತ್ಯಾಜಯಿತ್ವಾಮನಶ್ಶನೈಃ ॥೨೨॥ ತತ್ರದೋಷಾನ್ಪ್ರದರ್ಶಯಿತ್ವಾರಾಮಾನಂದೇನಿಯೋಜಯ। ದೇಹಬುಧ್ಯಾಭವೇದ್ಭ್ರಾತಾಪಿತಾಮಾತಾಸುಹೃತ್ಪ್ರಿಯಃ ॥ ೨೩ ॥ ವಿಲಕ್ಷಣಂಯದಾದೇಹಾಜ್ಜಾನಾನಾತ್ಯಾತ್ಮಾನಮಾತ್ಮನಾ। ತದಾಕಃಕಸ್ಯವಾಬಂಧುರ್ಭ್ರಾತಾಮಾತಾಪಿತಾಸುಹೃತ್ ॥೨೪॥ ಮಿಥ್ಯಾಜ್ಞಾನವಶಾಜ್ಜಾತಾದಾ

ಲ್ಲಿ, ಅಸದ್ಗ್ರಹಾತ್-ಅಹಂ ಮಮ ಯೆಂಬ ಮಮತಾ ಬುದ್ಧಿಯಿಂದ, ಯಥಾ-ಹ್ಯಾಗೆ, ಸದಾ-ಯಾವಾಗಲೂ, ಸತಃ ಅನ್ಯತಃ-ಸದ್ವಸ್ತು ಅಸದ್ವಸ್ತುವನ್ನು, ಆಗ್ರಹಾತ್-ಧ್ಯಾನಿಸುತ್ತಿರುವದರಿಂದ, ಪ್ರಥಾಭ್ರಂಗ ಕೀಟಕನ್ಯಾಯದಂತೆ, ಪ್ರಥಾ-ಪ್ರಸಿದ್ಧಿಯುಂಟಾಗುತ್ತೋ, ತಥಾ-ಹಾಗೆ, ಆಭಾಂತಿ-ತೋರುತ್ತಲಿವೆ ॥ ೧೯ ॥ ಪ್ರಸುಪ್ತಸ್ಯ-ಮಲಗಿ ನಿದ್ರೆಯಲ್ಲಿ ರುವವನಿಗೆ, ಅನಹಂಭಾವಾತ್-ಅಹಂಭಾವವಿಲ್ಲದೆ ಇರುವದರಿಂದ, ತದಾ-ಆಗ, ಸಂಸೃತಿಃ-ಸಂಸಾರವು, ಯಥಾ-ಹ್ಯಾಗೆ, ನಭಾತಿ-ತೋರುವದಿಲ್ಲವೋ, ತದ್ವತ್-ಹಾಗೆ, ವಿಮುಕ್ತಸ್ಯ-ತತ್ವಜ್ಞಾನದಿಂದ ಜೀವನ್ಮುಕ್ತನಾದವನಿಗೆ, ಜೀವತೋಽಪಿ-ಬದುಕಿ ಇದ್ದಾಗ್ಯೂ, ಅನಹಂಕೃತೇಃ-ಅಹಂಭಾವವಿಲ್ಲದೆ ಇರೋಣದರಿಂದ (ಸಂಸಾರವಿಲ್ಲದೇ ಇರುವದರಿಂದ, ತಜ್ಜನ್ಯ ದುಃಖಗಳು ಮುಂತಾದವುಗಳು ಉಂಟಾಗುವದಿಲ್ಲವು) ॥ ೨೦ ॥ ತಸ್ಮಾತ್-ಆದ್ದರಿಂದ, ಮಾಯಾಮನೋಧರ್ಮಂ-ಮಾಯಾ ಪರಿಣಾಮವಾದ ಮನೋಧರ್ಮವುಳ್ಳ, ಅಹಂ-ಅಹಂ ಯೆಂಬ, ಮಮತಾಭ್ರಾಮಂ-ಭ್ರಾಂತಿಯನ್ನು, ಜಹಿ-ಜಯಿಸು, ಭಗವತಿ-ಪೂಜ್ಯನಾದ, ಆತ್ಮನಿ-ಆತ್ಮನಾದ, ಈಶ್ವರೇ-ನಿಯಂತೃವಾದ ॥ ೨೧ ॥ ಪರೇ-ಉತ್ಕೃಷ್ಟನಾದ, ಮಾಯಾಮಾನುಷರೂಪಿಣೀ-ಮಾಯಾ ಮನುಷ್ಯಾಕಾರ ವುಳ್ಳವನಾದ, ಸರ್ವ-ಸಮಸ್ತವಾದ, ಭೂತ-ಪ್ರಾಣಿಗಳಿಗೆ, ಆತ್ಮನಿ-ಅಂತರಾತ್ಮನಾಗಿರುವ, ರಾಮಭದ್ರೇ-ರಾಮಚಂದ್ರನಲ್ಲಿ, ಬಾಹ್ಯೇಂದ್ರಿಯಾರ್ಥಸಂಬಂಧಾತ್-ಬಾಹ್ಯ-ಹೊರಗಿನ, ಇಂದ್ರಿಯ-ಇಂದ್ರಿಯಗಳಿಗೂ, ಅರ್ಥ-ವಿಷಯಗಳಿಗೂ ಇರುವ, ಸಂಬಂಧ-ಸಂಯೋಗಗಳನ್ನು, ಶನೈಃ-ಮೆಲ್ಲಗೆ, ಮನಃ-ಮನಸ್ಸಿಗೆ, ತ್ಯಾಜಯಿತ್ವಾ-ತಪ್ಪಿಸಿ, ಮನಃ-ಚಿತ್ತವನ್ನು, ದೇಹಿ-ಇಡು ॥ ೨೨ ॥ ತತ್ರ-ವಿಷಯಾದಿಗಳಲ್ಲಿ, ದೋಷಾನ್-ದೋಷಗಳನ್ನು, ದರ್ಶಯಿತ್ವಾ-ತೋರಿಸಿ, ಮನಃ-ಮನಸ್ಸನ್ನು, ರಾಮಾನಂದೇ-ಆನಂದ ಸ್ವರೂಪನಾದ ರಾಮಚಂದ್ರನಲ್ಲಿ, ನಿಯೋಜಯ-ಸೇರಿಸು, ದೇಹಬುಧ್ಯಾ-ದೇಹವೇ ಆತ್ಮವೆಂಬ ಬುದ್ಧಿಯಿಂದ, ಭ್ರಾತಾ-ಸೋದರನು, ಪಿತಾ-ತಂದೆಯು, ಮಾತಾ-ತಾಯಿಯು, ಸುಹೃತ್-ಮಿತ್ರನು, ಪ್ರಿಯಃ-ಇಷ್ಟನು, ಎಂಬ ಹೆಸರು ಭವೇತ್-ಉಂಟಾಗುತ್ತಿದೆ ॥ ೨೩ ॥ ಆತ್ಮನಾ-ಬುದ್ಧಿಯಿಂದ, ಆತ್ಮಾನಂ-ಆತ್ಮನನ್ನು, ದೇಹಾತ್-ಶರೀರಕ್ಕಿಂತ, ವಿಲಕ್ಷಣಂ-ಅತಿರಿಕ್ತನೆಂಬದಾಗಿ, ಯದಾ-ಯಾವಾಗ, ಜಾನಾತಿ-ತಿಳಿಯುತ್ತಾನೋ, ತದಾ-ಆಗ, ಕಸ್ಯ-ಯಾರಿಗೆ, ಕಃ-ಯಾರು, ಭ್ರಾತಾ-ಒಡಹುಟ್ಟಿದವನು, ಬಂಧುಃ-ನೆಂಟನು, ಮಾತಾ-ತಾ

ರಾಗಾರಸುತಾದಯಃ । ಶಬ್ದಾದಯಶ್ಚ ವಿಷಯಾ ವಿವಿಧಾಶ್ಚ ಸಂಪದಃ ॥ ೧೫ ॥ ಬಲಂ ಕೋಶೋ ಭೃತ್ಯವರ್ಗೋ ರಾಜ್ಯಂ ಭೂಮಿಸ್ಸುತಾದಯಃ । ಅಜ್ಞಾನಜತ್ವಾತ್ಸರ್ವೇ ತೇ ಕ್ಷಣಸಂಗಮಭಂಗುರಾಃ ॥ ೧೬ ॥ ಅಥೋತ್ತಿಷ್ಠ ಹೃದಾ ರಾಮಂ ಭಾವಯನ್ಭಕ್ತಿಭಾವಿತಂ । ಅನುವರ್ತಸ್ವ ರಾಜ್ಯಾದಿ ಭುಂಜನ್ಪ್ರಾರಬ್ಧಮನ್ವಹಂ ॥ ೧೭ ॥ ಭೂತಂ ಭವಿಷ್ಯದಭಜನ್ವರ್ತಮಾನಮಥಾಚರನ್ । ವಿಹರಸ್ವ ಯಥಾನ್ಯಾಯಂ ಭವದೋಷೈರ್ನ ಲಿಪ್ಯಸೇ ॥ ೧೮ ॥ ಆಜ್ಞಾಪಯತಿ ರಾಮಸ್ತ್ವಾಂ ಯತ್ಸಾಂಪರಾಯಿಕಂ । ತತ್ಕುರುಷ್ವ ಯಥಾಶಾಸ್ತ್ರಂ ರುದತೀಶ್ಚಾಪಿ ಯೋಷಿತಃ ॥ ೧೯ ॥ ನಿವಾರಯ ಮಹಾಬುದ್ಧೇ ಲಂಕಾಂ ಗಚ್ಛತು ಮಾಚಿರಂ । ಶ್ರುತ್ವಾ ಯಥಾವದ್ವಚನಂ ಲಕ್ಷ್ಮಣಸ್ಯ ವಿಭೀಷಣಃ ॥ ೨೦ ॥ ತ್ಯಕ್ತ್ವಾ ಶೋಕಂ ಚ ಮೋಹಂ ಚ ರಾ

ಯಿಯೂ, ಪಿತಾ-ತಂದೆಯೂ, ಸುಹೃತ್-ಮಿತ್ರನು ಆದಾನ ॥ ೧೪ ॥ ಮಿಥ್ಯಾಜ್ಞಾನವಶಾತ್-ಕಲ್ಪಿತವಾದ ಜ್ಞಾನದ ಅಧೀನದಿಂದ, ದಾರಾಗಾರಸುತಾದಯಃ-ದಾರ-ಹೆಂಡತಿಯೂ, ಆಗಾರ-ಮನೆಯೂ, ಸುತಾದಯಃ-ಮಕ್ಕಳು ಮೊದಲಾದವುಗಳೂ ಶಬ್ದಾದಯಃ-ಶಬ್ದ ರೂಪ ರಸ ಗಂಧ ಸ್ಪರ್ಶಗಳೆಂಬ, ವಿಷಯಾಃ-ವಿಷಯಗಳು, ವಿವಿಧಾಃ-ಬಗೆಬಗೆಗಳಾದ, ಸಂಪದಃ-ಸಂಪತ್ತುಗಳು ॥ ೧೫ ॥ ಬಲಂ-ಸೈನ್ಯವು, ಕೋಶಃ-ಹಣವು, ಭೃತ್ಯವರ್ಗಃ-ಸೇವಕ ಸಮೂಹವು, ರಾಜ್ಯಂ-ರಾಜ್ಯವು, ಭೂಮಿಃ-ನೆಲವು, ಸುತಾದಯಃ-ಮಕ್ಕಳು ಮೊದಲಾದವುಗಳು, ಏತೇ-ಈ, ಸರ್ವೇ-ಎಲ್ಲವೂ, ಅಜ್ಞಾನಜತ್ವಾತ್-ಅಜ್ಞಾನದಿಂದ ಕಲ್ಪಿತಗಳಾಗಿ ಹುಟ್ಟಿರುವದರಿಂದ, ಕ್ಷಣಸಂಗಮಭಂಗುರಾಃ-ಕ್ಷಣ-ಕ್ಷಣ ಮಾತ್ರದಲ್ಲಿ, ಸಂಗಮ-ಕೂಡುವದು, ಭಂಗುರಾಃ-ನಾಶವುಳ್ಳದ್ದು (ಆಗಿವೆ,) ॥ ೧೬ ॥ ಭಕ್ತಿಭಾವಿತಂ-ಭಕ್ತಿಯಿಂದ ಭಾವಿಸಲು ಅರ್ಹನಾದ, ರಾಮಂ-ರಾಮಚಂದ್ರನನ್ನು, ಹೃದಾ-ಚಿತ್ತದಿಂದ, ಭಾವಯ-ಧ್ಯಾನಿಸು, ಉತ್ತಿಷ್ಠ-ಏಳು, ಅಥ-ಆ ಮೇಲೆ, ಅನ್ವಹಂ-ಪ್ರತಿ ದಿನದಲ್ಲಿಯೂ, ಪ್ರಾರಬ್ಧಂ-ಪ್ರಾರಬ್ಧ ಕರ್ಮ ಫಲವನ್ನು, ಭುಂಜನ್-ಅನುಭವಿಸುತ್ತಾ, ರಾಜ್ಯಾದಿ-ರಾಜ್ಯದ ಕೆಲಸವೇ ಮೊದಲಾದದ್ದನ್ನು, ಅನುವರ್ತಸ್ವ-ಅನುಸರಿಸುತ್ತಿರುವವನಾಗಿ ॥ ೧೭ ॥ ಭೂತಂ-ಕಳೆದ ಕಾಲದಲ್ಲಿ ಏನಾಯಿತೆಂಬುವದನ್ನು, ಭವಿಷ್ಯತ್-ಮುಂದೆ ಏನಾಗುತ್ತೆಂಬುವದನ್ನು, ಅಭಜನ್-ವಿಚಾರಿಸದೇ ಇರುವವನಾಗಿ, ವರ್ತಮಾನಂ-ನಡೆಯುತ್ತಿರುವದರನ್ನು, ಆಚರನ್-ನಡಿಸುತ್ತಿರುವವನಾಗಿ, ಯಥಾನ್ಯಾಯಂ-ನೀತಿಯನ್ನು ಬಿಡದೆ, ವಿಹರಸ್ವ-ವಿಹಾರ ಮಾಡಿಕೊಂಡಿರು, (ಹೀಗೆ ಇದ್ದವನಾದರೆ,) ಭವದೋಷೈಃ-ಸಂಸಾರ ದೋಷದಿಂದ, ನಲಿಪ್ಯಸೇ-ಲೇಪವುಳ್ಳವನಾಗುವದಿಲ್ಲ ॥ ೧೮ ॥ ಭ್ರಾತುಃ-ನಿನಗೆ ಅಣ್ಣನಾದ ರಾವಣನಿಗೆ, ಸಾಂಪರಾಯಿಕಂ-ಪರಲೋಕ ಸಂಬಂಧವಾದ, ಯತ್-ಯಾವ ಕರ್ಮವುಂಟೋ, ತತ್-ಅದನ್ನು, ಯಥಾಶಾಸ್ತ್ರಂ-ಪಿತೃಮೇಧ ಕ್ರಮವಾಗಿ, ಕುರುಷ್ವ-ಮಾಡು ಎಂಬದಾಗಿ, ರಾಮ-ರಾಮಚಂದ್ರನು, ತ್ವಾಂ-ನಿನ್ನನ್ನು ಕುರಿತು, ಆಜ್ಞಾಪಯತಿ-ಅಪ್ಪಣೆ ಮಾಡಿರುತ್ತಾನೆ, ರುದತೀಃ-ಅಳುತ್ತಿರುವ, ಯೋಷಿತಃ-ಹೆಂಗಸರನ್ನು ॥ ೧೯ ॥ ಮಹಾಬುದ್ಧೇ-ಅಧಿಕ ಬುದ್ಧಿಶಾಲಿಯಾದ ವಿಭೀಷಣನೇ, ನಿವಾರಯ-ಅಳದಂತೆ ಸಮಾಧಾನ ಮಾಡು, ಮಾಚಿರಂ-ಬೇಗನೆ, ಲಂಕಾಂ-ಲಂಕಾ ಪಟ್ಟಣವನ್ನು, ಗಚ್ಛತು-ಸ್ತ್ರೀ ಸಮೂಹವು ಲಂಕಾ ಪಟ್ಟಣವನ್ನು ಕುರಿತು ಹೋಗಲಿ, ವಿಭೀಷಣಃ-

ಮುಪಾಶ್ವರ್ಮುಪಾಗಮತ್ । ವಿಮೃಶ್ಯಬುಧ್ಯಾಧರ್ಮಜ್ಞೋ ಧರ್ಮಾರ್ಥಸಹಿತಂವಚಃ ॥ ೩೧ ॥ ರಾಮಸ್ಯೈವಾನುವೃತ್ತ್ಯರ್ಥ ಮುತ್ತರಂಪರ್ಯಭಾಷತ । ನೃಶಂಸಮನೃತಂಕ್ರೂರಂ ತ್ಯಕ್ತಧರ್ಮವ್ರತಂಪ್ರಭೋ ॥ ೩೨ ॥ ನಾಹರ್ಹೋಸ್ಮಿದೇವಸಂಸ್ಕರ್ತುಂಪರದಾರಾಭಿಮರ್ಶಿನಂ । ಶ್ರುತ್ವಾತದ್ವಚನಂಪ್ರೀತೋ ರಾಮೋವಚನಮಬ್ರವೀತ್ ॥ ೩೩ ॥ ಮರಣಾಂತಾನಿವೈರಾಣಿ ನಿವೃತ್ತಂನಃಪ್ರಯೋಜನಂ । ಕ್ರಿಯತಾಮಸ್ಯಸಂಸ್ಕಾರೋಮಮಾಪ್ಯೇಷಯಥಾತವ ॥೩೪॥ ರಾಮಾಜ್ಞಾಂಶಿರಸಾಧೃತ್ವಾ ಶೀಘ್ರಮೇವವಿಭೀಷಣಃ। ಸಾಂತ್ವವಾಕ್ಯೈರ್ಮಹಾಬುದ್ಧಿಂರಾಜ್ಞೀಂಮಂಡೋದರೀಂತದಾ॥೩೫॥ಸಾಂತ್ವಯಾಮಾಸಧರ್ಮಾ

ವಿಭೀಷಣನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಯಥಾವತ್-ಯಥೋಕ್ತವಾದ, ವಚನಂ-ಮಾತನ್ನು, ಶ್ರುತ್ವಾ-ಕೇಳಿ ॥ ೩೦ ॥ ಶೋಕಂಚ-ಶೋಕವನ್ನು, ಮೋಹಂ-ಮೋಹವನ್ನು, ತ್ಯಕ್ತ್ವಾ-ಬಿಟ್ಟು, ರಾಮಪಾರ್ಶ್ವಂ-ರಾಮಚಂದ್ರನ ಬಳಿಯನ್ನು ಉಪಾಗಮತ್-ಹೊಂದಿದನು, ಧರ್ಮಜ್ಞಃ-ಧರ್ಮವನ್ನು ತಿಳಿದಿರುವ ವಿಭೀಷಣನು, ಧರ್ಮಾರ್ಥಸಹಿತಂ-ಧರ್ಮ-ಧರ್ಮದಿಂದಲೂ, ಅರ್ಥ-ಪ್ರಯೋಜನದಿಂದಲೂ ಕೂಡಿರುವ, ವಚಃ-ಮಾತನ್ನು, ವಿಮೃಶ್ಯ-ಪರಿಶೀಲಿಸಿ ॥೩೧॥ ರಾಮಸ್ಯೈವ-ರಾಮಚಂದ್ರನಿಗೆ, ಅನುವೃತ್ತ್ಯರ್ಥಂ-ಅನುಸರಿಸುವಿಕೆಗಾಗಿ, ಉತ್ತರಂ-ಪ್ರತ್ಯುತ್ತರವನ್ನು, ಅಭಾಷತ-ಹೇಳಿದನು, ಪ್ರಭೋ-ಸ್ವಾಮಿಯೇ, ನೃಶಂಸಂ-ನೀಚನಾದ, ಅನೃತಂ-ಸುಳ್ಳು ಹೇಳುವವನಾದ, ಕ್ರೂರಂ-ಕಠಿಣನಾದ, ತ್ಯಕ್ತಧರ್ಮವ್ರತಂ-ತ್ಯಕ್ತ-ಬಿಡಲ್ಪಟ್ಟ, ಧರ್ಮ-ಧರ್ಮವೂ, ವ್ರತಂ-ನಿಯಮವೂ ಉಳ್ಳವನಾದ ॥ ೩೨ ॥ ಪರದಾರಾಭಿಮರ್ಶಿನಂ-ಪರರ ಹೆಂಡತಿಯರಲ್ಲಿ ಆಸಕ್ತನಾದ ರಾವಣನನ್ನು, ಸಂಸ್ಕರ್ತುಂ-ಪ್ರೇತ ಸಂಸ್ಕಾರ ಮಾಡುವದಕ್ಕೆ, ಅಹಂ-ನಾನು, ನಾರ್ಹಃ-ಸಮರ್ಥನಾಗುವದಿಲ್ಲ, ತದ್ವಚನಂ-ಆ ವಿಭೀಷಣನ ಮಾತನ್ನು, ಶ್ರುತ್ವಾ-ಕೇಳಿ, ಪ್ರೀತಃ-ಸಂತುಷ್ಟನಾದ, ರಾಮಃ-ರಾಮಚಂದ್ರನು, ವಚನಂ-ಮಾತನ್ನು, ಅಬ್ರವೀತ್-ಹೇಳಿದನು ॥ ೩೩ ॥ ವೈರಾಣಿ-ವಿರೋಧಗಳು, ಮರಣಾಂತಾನಿ-ಮರಣವೇ ಕೊನೆಯಾಗುಳ್ಳವುಗಳಾಗಿವೆ, ನಃ-ನಮ್ಮಗಳ, ಪ್ರಯೋಜನಂ-ಫಲವು, ನಿವೃತ್ತಂ-ಆಯಿತು, ಅಸ್ಯ-ಈ ರಾವಣನಿಗೆ, ಸಂಸ್ಕಾರಃ-ಸಂಸ್ಕಾರವು, ಕ್ರಿಯತಾಂ-ಮಾಡಲ್ಪಡಲಿ, ಮಮ-ನನಗೆ, ಏಷಃ-ಈ ರಾವಣನು, ಯಥಾ-ಹ್ಯಾಗೆ ಅವನು ಸತ್ತಮೇಲೆ ವಿರೋಧವು ಹೋಯಿತು, ತವಾಪಿ-ನಿನಗೂ, ತಥಾ-ಹಾಗೆಯೇ ರಾವಣನು ಸಂಪ್ರಾಪ್ತನಾದ ರಿಂದ ದೋಷಗಳಿಗೆಲ್ಲಾ ಶಿಕ್ಷೆಯಾಗಿ ವಿರೋಧವು ಹೋಯಿತು ॥ ೩೪ ॥ ಶೀಘ್ರಮೇವ-ಬೇಗನೆ, ವಿಭೀಷಣಃ-ವಿಭೀಷಣನು, ರಾಮಾಜ್ಞಾಂ-ರಾಮಚಂದ್ರನ ಅಪ್ಪಣೆಯನ್ನು, ಶಿರಸಾ-ತಲೆಯಲ್ಲಿ, ಧೃತ್ವಾ-ಧರಿಸಿ, ವಿಭೀಷಣಃ-ವಿಭೀಷಣನು, ತದಾ-ಆಗ, ಸಾಂತ್ವವಾಕ್ಯೈಃ-ಸಮಾಧಾನವಾದ ಮಾತುಗಳಿಂದ, ಮಹಾಬುದ್ಧಿಂ-ವಿವೇಕವುಳ್ಳವಳಾದ, ರಾಜ್ಞೀಂ-ರಾಜ ಪತ್ನಿಯಾದ, ಮಂಡೋದರೀಂ-ಮಂಡೋದರಿಯನ್ನು (ಬೋಧಿಸಿ,) ॥ ೩೫ ॥ ಧರ್ಮಾತ್ಮಾ-ಧರ್ಮಿಷ್ಠನಾದ, ಧರ್ಮಬುದ್ಧಿಃ-ಧರ್ಮದಲ್ಲಿ ಜ್ಞಾನವುಳ್ಳವನಾದ, ವಿಭೀಷಣಃ-ವಿಭೀಷಣನು, ಸಾಂತ್ವಯಾಮಾಸ-ಸಮಾಧಾನ ಪಡಿಸಿದನು, ಧರ್ಮಜ್ಞಃ-ಧರ್ಮಸ್ವರೂಪವನ್ನು ತಿಳಿದವನಾದ ವಿಭೀಷಣನು, ಸಂಸ್ಕಾರಾರ್ಥಂ-ರಾವಣನಿಗೆ ಉತ್ತರ ಕ್ರಿಯಾ ರೂಪವಾದ ಸಂಸ್ಕಾರವನ್ನು ಮಾಡಲು, ಸ್ವಬಾಂಧವಾನ್-ತ

ತ್ಸ್ಮ ಧರ್ಮಬುದ್ಧಿರ್ವಿಭೀಷಣಃ । ತ್ವರಯಾಮಾಸಧರ್ಮಜ್ಞಃ ಸಂಸ್ಕಾರಾರ್ಥಂಸ್ವಬಾಂಧವಾನ್ ॥೩೬॥ ಚಿತ್ಯಾಂನಿವೇಶ್ಯವಿಧಿವ
ತ್ಪಿತೃಮೇಧವಿಧಾನತಃ । ಆಹಿತಾಗ್ನೇರ್ಯಥಾಕಾರ್ಯಂರಾವಣಸ್ಯವಿಭೀಷಣಃ ॥ ೩೭ ॥ ತಥೈವಸರ್ವಮಕರೋದ್ಬಂಧುಭಿಸ್ಸ
ಹಮಂತ್ರಿಭಿಃ । ದದೌಚಪಾವಕಂತಸ್ಯವಿಧಿಯುಕ್ತಂವಿಭೀಷಣಃ ॥೩೮॥ ಸ್ನಾತ್ವಾಚೈವಾರ್ದ್ರವಸ್ತ್ರೇಣತಿಲಾನ್‌ದರ್ಭಾ
ಭಿಮಿಶ್ರಿತಾನ್ । ಉದಕೇನಚಸಮ್ಮಿಶ್ರಾನ್ಪ್ರದಾಯವಿಧಿಪೂರ್ವಕಂ ॥ ೩೯ ॥ ಪ್ರದಾಯಚೋದಕಂತಸ್ಮೈಮೂರ್ಧ್ನಾ
ಚೈನಂಪ್ರಣಮ್ಯಚ । ತಾಸ್ಸ್ತ್ರಿಯೋನುನಯಾಮಾಸಸಾಂತ್ವಮುಕ್ತ್ವಾಪುನಃಪುನಃ ॥೪೦॥ ಗಮ್ಯತಾಮಿತಿತಾಸ್ಸರ್ವಾ
ವಿವಿಶುರ್ನಗರಂತದಾ । ಪ್ರವಿಷ್ಟಾಸುಚಸರ್ವಾಸುರಾಕ್ಷಸೀಷುವಿಭೀಷಣಃ ॥೪೧॥ ರಾಮಪಾರ್ಶ್ವಮುಪಾಗತ್ಯತದಾತಿಷ್ಠ

ನ್ನು ನೆಂಟರನ್ನೂ, ತ್ವರಯಾಮಾಸ-ಅವಸರ ಪಡಿಸಿದನು ॥ ೩೬ ॥ ವಿಧಿವತ್-ಯಥಾಶಾಸ್ತ್ರವಾಗಿ, ಪಿತೃಮೇಧವಿಧಾನತಃ-ಪಿತೃಮೇಧ-ಪಿತೃಮೇಧದಲ್ಲಿ, ವಿಧಾನತಃ-ಹೀಗೆ ಮಾಡ ಬೇಕೆಂಬದಾಗಿ ಹೇಳಿರುವ ರೀತಿಯಿಂದ, ಚಿತ್ಯಾಂ-ಚಿತಿಯಮೇಲೆ, ನಿವೇಶ್ಯ-ರಾವಣನನ್ನು ಇರಿಸಿ, ವಿಭೀಷಣಃ-ವಿಭೀಷಣನು, ಆಹಿತಾಗ್ನೇಃ-ಅಗ್ನಿಹೋತ್ರಿಯಾದವನಿಗೆ, ಯಥಾ-ಯಾವ ಹ್ಯಾಗೆ, ಕಾರ್ಯಂ-ಮಾಡಬೇಕೊ, ತಥೈವ-ಹಾಗೆ, ರಾವಣಸ್ಯ-ರಾವಣನಿಗೆ ॥ ೩೭ ॥ ಸರ್ವಂ-ಸಮಸ್ತಕ್ರಿಯೆಗಳನ್ನು, ಅಕರೋತ್-ಮಾಡಿದನು, ಬಂಧುಭಿಃ-ನೆಂಟರಿಂದಲೂ, ಮಂತ್ರಿಭಿಸ್ಸಹ-ಮಂತ್ರಿಗಳಿಂದಲೂ ಕೂಡಿದವನಾಗಿ, ವಿಭೀಷಣಃ-ವಿಭೀಷಣನು, ವಿಧಿಯುಕ್ತಂ-ವಿಧಿಯುಂಟಾಗಿರುವಂತೆ, ಪಾವಕಂ-ಬೆಂಕಿಯನ್ನು, ದದೌ-ಕೊಟ್ಟನು ॥ ೩೮ ॥ ಸ್ನಾತ್ವಾ-ಸ್ನಾನಮಾಡಿ, ಆರ್ದ್ರವಸ್ತ್ರೇಣ-ಒದ್ದೆಬಟ್ಟೆಯಿಂದ, ಅಂದರೆ ವಾಸೋದಕದಿಂದಲೂ, ದರ್ಭಾಭಿಮಿಶ್ರಿತಾನ್-ದರ್ಭೆಗಳಿಂದ ಕೂಡಿರುವ, ತಿಲಾನ್-ಎಳ್ಳುಕಾಳುಗಳನ್ನು, ಉದಕೇನ-ನೀರಿನಿಂದ, ಸಮ್ಮಿಶ್ರಾನ್-ಕೂಡಿದಂಥಾದ್ದರನ್ನಾಗಿ, (ಕೃತ್ವಾ-ಮಾಡಿ,) ವಿಧಿಪೂರ್ವಕಂ-ವಿಧ್ಯುಕ್ತವಾಗಿ, ಪ್ರದಾಯ-ಕೊಟ್ಟು ॥೩೯॥ ತಸ್ಮೈ-ಆ ರಾವಣನಿಗೆ, ಉದಕಂ-ತರ್ಪಣೋದಕವನ್ನು, ಪ್ರದಾಯ-ಈ ರೀತಿಯಾಗಿಕೊಟ್ಟು, ಮೂರ್ಧ್ನಾ-ಶಿರಸ್ಸಿನಿಂದ, ಏನಂ-ಈ ರಾವಣನನ್ನು, ಪ್ರಣಮ್ಯ-ನಮಸ್ಕರಿಸಿ, ತಾಃ-ಆ, ಸ್ತ್ರಿಯಃ-ಹೆಂಗಸರನ್ನುಕುರಿತು, ಪುನಃ ಪುನಃ-ಬಾರಿಬಾರಿಗೂ, ಸಾಂತ್ವಂ-ಸಮಾಧಾನಕರವಾದ ಮಾತನ್ನು, ಉಕ್ತ್ವಾ-ಹೇಳಿ, ಅನುನಯಾಮಾಸ-ಒಪ್ಪಿಸಿದನು ॥ ೪೦ ॥ ಗಮ್ಯತಾಮಿತಿ-ಅಂತಃಪುರಕ್ಕೆಹೋಗಿ ಎಂಬದಾಗಿ, ಉಕ್ತಾಃ-ಹೇಳಲ್ಪಟ್ಟವರಾದ, ತಾಃ-ಆ, ಸರ್ವಾಃ-ಸಮಸ್ತರಾದ ಹೆಂಗಸರು, ತದಾ-ಆಗ, ನಗರಂ-ಪಟ್ಟಣವನ್ನು, ವಿವಿಶುಃ-ಹೊಕ್ಕರು, ವಿಭೀಷಣಃ-ವಿಭೀಷಣನು, ಸರ್ವಾಸು-ಸಮಸ್ತರಾದ, ರಾಕ್ಷಸೀಷು-ರಾಕ್ಷಸಸ್ತ್ರೀಯರು, ಪ್ರವಿಷ್ಟಾಸು-ಊರನ್ನು ಹೊಗಲು ॥೪೧॥ ತದಾ-ಆಗ, ರಾಮಪಾರ್ಶ್ವಂ-ರಾಮಚಂದ್ರನ ಬಳಿಯನ್ನು ಕುರಿತು, ಉಪಾಗಮ್ಯ-ಸೇರಿ, ವಿನೀತವತ್-ವಿನೀತಿಯುಳ್ಳವನಾಗಿ, ಅತಿಷ್ಠತ್-ಇದ್ದನು, ರಾಮೋಪಿ-ರಾಮಚಂದ್ರನು, ಸಹಸೈನ್ಯೇನ-ಸೈನ್ಯದಿಂದ ಕೂಡಿದವನಾಗಿ, ಸಸುಗ್ರೀವಃ-ಸುಗ್ರೀವಸಮೇತನಾಗಿ, ಸಲಕ್ಷ್ಮಣಃ-ಲಕ್ಷ್ಮಣ ಸಹಿತನಾಗಿ, ಶತಕ್ರತು ಇಂದ್ರನು ॥ ೪೨ ॥ ವೃತ್ರಂ-ವೃತ್ರನೆಂಬರಾಕ್ಷಸನನ್ನು, ಹತ್ವಾ-ಕೊಂದು, ಯಥಾ-ಹ್ಯಾಗೆಸಂತೋಷಿಸಿದನೋ, ತಥಾ-ಹಾಗೆ, ರಿಪುಂ-ಶತ್ರುವಾದರಾವಣನನ್ನು,

ಕಾನ್ನಃ । ಬಲಾದತ್ತಿಹತ್ವಾಗೃಹೀತ್ವಾಸಮುಸ್ತಾನಿದಾನೀಂಪುನರ್ಲಬ್ಧಸತ್ವಾಭವಾಮಃ ॥ ೧೯ ॥ ಯಕ್ಷಾಊಚುಃ ॥ ಸದಾವಿಷ್ಟಕರ್ಮಾಣ್ಯನೇನಾಭಿಯುಕ್ತಾಃವಹಾಮೋದಶಾಸ್ಯಂಬಲಾದುಃಖಯುಕ್ತಾಃ । ದುರಾತ್ಮಾಹತೋರಾವಣೋರಾಘವೇಶತ್ವಯಾತೇವಯಂದುಃಖಜಾತಾದ್ವಿಮುಕ್ತಾಃ ॥ ೨೦ ॥ ಗಂಧರ್ವಾಊಚುಃ ॥ ವಯಂಸಂಗೀತನಿಪುಣಾಃಗಾಯಂತಸ್ತೇಕಥಾಮೃತಂ । ಆನಂದಾಮೃತಸಂದೋಹಯುಕ್ತಾಃಪೂರ್ಣಾಃಸ್ಥಿತಾಃಪುರಾ ॥ ೨೧ ॥ ಪಶ್ಚಾದ್ದುರಾತ್ಮನಾರಾಮ ರಾವಣೇನಾಭಿವಿದ್ಧಾಃ । ತಮೇವಗಾಯಮಾನಾಶ್ಚ ತದಾರಾಧನತತ್ಪರಾಃ ॥೨೨॥ ಸ್ಥಿತಾಸ್ತ್ವಯಾಪರಿತ್ರಾತಾಃಹತೋಯಂದುಷ್ಟರಾಕ್ಷಸಃ । ಏವಂಮಹೋರಗಾಸ್ಸಿದ್ಧಾಃಕಿನ್ನರಾಮರುತಸ್ತಥಾ ॥೨೩॥ ವಸವೋಮುನಯೋಗಾವೋಗುಹ್ಯಕಾಶ್ಚ

ತ್ತಿದ್ದೆನು, ಇದಾನೀಂ-ಈಗ, ಲಬ್ಧಸತ್ವಾಃ-ಲಬ್ಧ-ಆ ಪಿಂಡಗಳನ್ನು ನಾವೇ ಪಡೆಯುವದರಿಂದುಂಟಾದ, ಸತ್ವಾಃ-ಬಲವುಳ್ಳವರು, ಭವಾಮಃ-ಆಗುತ್ತಲಿದ್ದೇವೆ ॥೧೯॥ ಯಕ್ಷಾಊಚುಃ-ಯಕ್ಷರು ಹೇಳುತ್ತಾರೆ,—ಸದಾ-ಯಾವಾಗಲೂ, ವಿಷ್ಟಿಕರ್ಮಾಣಿ-ಬಿಟ್ಟಿಯಾಗಿ ಪಾಲಕಿಯನ್ನು ಕೆಲಸದಲ್ಲಿ, ಅನೇನ-ಈ ರಾವಣನಿಂದ, ಅಭಿಯುಕ್ತಾಃ-ನಿಯಮಿಸಲ್ಪಟ್ಟವರಾಗಿ, ಬಲಾತ್-ಬಲಾತ್ಕಾರದಿಂದ, ದುಃಖಯುಕ್ತಾಃ-ದುಃಖ-ವ್ಯಥೆಯಿಂದ, ಯುಕ್ತಾಃ-ಕೂಡಿದವರಾಗಿ, ದಶಾಸ್ಯಂ-ರಾವಣನನ್ನು, ವಹಾಮಃ-ಹೊರುತ್ತಿದ್ದೆವು, ರಾಘವೇಶ-ರಘುವಂಶದವರಿಗೆ ಸ್ವಾಮಿಯಾದ ರಾಮಚಂದ್ರನೇ, ತ್ವಯಾ-ನಿನ್ನಿಂದ, ದುರಾತ್ಮಾ-ಕೆಟ್ಟಬುದ್ಧಿಯುಳ್ಳವನಾದ, ರಾವಣಃ-ರಾವಣನು, ಹತಃ-ಸಂಹರಿಸಲ್ಪಟ್ಟನು, ತೇವಯಂ-ಆನಾವು, ದುಃಖಜಾತಾತ್-ದುಃಖಪರಂಪರೆಯಿಂದ, ವಿಮುಕ್ತಾಃ-ಬಿಡಿಸಲ್ಪಟ್ಟವರಾದೆವು ॥ ೨೦ ॥ ಗಂಧರ್ವಾಊಚುಃ-ಗಂಧರ್ವರು ಹೇಳುತ್ತಲಿದ್ದಾರೆ, ಸಂಗೀತನಿಪುಣಾಃ-ಸಂಗೀತ-ಗಾನವಿದ್ಯೆಯಲ್ಲಿ, ನಿಪುಣಾಃ-ಸಮರ್ಥರಾದ, ವಯಂ-ನಾವು, ತೇ-ನಿನ್ನ, ಕಥಾಮೃತಂ-ಅಮೃತಕ್ಕೆ ಸಮವಾದ ನಿನ್ನ ಚರಿತವನ್ನು, ಗಾಯಂತಃ-ಹಾಡುತ್ತಿರುವವರಾಗಿ, ಪೂರ್ಣಾಃ-ತೃಪ್ತರಾಗಿ, ಆನಂದಾಮೃತಸಂದೋಹಯುಕ್ತಾಃ-ಆನಂದ-ಸಂತೋಷವೆಂಬ, ಅಮೃತ-ಅಮೃತದ, ಸಂದೋಹ-ಸಮೂಹದಿಂದ, ಯುಕ್ತಾಃ-ಕೂಡಿದವರಾಗಿ, ಪೂರ್ಣಾಃ-ತೃಪ್ತರಾಗಿ, ಪುರಾ-ರಾವಣನು ರಾಜ್ಯಭಾರವನ್ನು ಮಾಡುವದಕ್ಕೆ ಪೂರ್ವದಲ್ಲಿ, ಸ್ಥಿತಾಃ-ಇದ್ದೆವು ॥ ೨೧ ॥ ರಾಮ-ರಾಮಚಂದ್ರನೇ, ಪಶ್ಚಾತ್-ಅನಂತರದಲ್ಲಿ, ದುರಾತ್ಮನಾ-ದುರ್ಬುದ್ಧಿಯುಳ್ಳವನಾದ ರಾವಣೇನ-ರಾವಣನಿಂದ, ಅಭಿವಿದ್ಧಾಃ-ಬಾಧಿಸಲ್ಪಟ್ಟವರಾಗಿ, ತಮೇವ-ರಾವಣನನ್ನೇ, ಗಾಯಮಾನಾಶ್ಚ-ಹಾಡುತ್ತಿರುವವರಾಗಿ, ತದಾರಾಧನತತ್ಪರಾಃ-ತತ್-ಆರಾವಣನನ್ನು, ಆರಾಧನೆ-ಸೇವಿಸುವದರಲ್ಲಿ, ತತ್ಪರಾಃ-ಆಸಕ್ತಿಯುಳ್ಳವರಾಗಿ ॥ ೨೨ ॥ ಸ್ಥಿತಾಃ-ಇದ್ದೆವು, ಅಯಂ-ಈದುಷ್ಟ-ಕಟ್ಟವನಾದ, ರಾಕ್ಷಸಃ-ರಕ್ಕಸನಾದ ರಾವಣನು, ಹತಃ-ಸಂಹೃತನಾದನು, (ಆದ್ದರಿಂದ) ತ್ವಯಾ-ನಿನ್ನಿಂದ, ಪರಿತ್ರಾತಾಃ-ಕಾಪಾಡಲ್ಪಟ್ಟೆವು, ಏವಂ-ಈ ರೀತಿಯಾಗಿ, ಮಹೋರಗಾಃ-ವಾಸುಕಿ ಮೊದಲಾದ ಸರ್ಪಗಳು ಸಿದ್ಧಾಃ-ಸಿದ್ಧರು, ಕಿನ್ನರಾಃ-ಕಿನ್ನರರು, ಮರುತಃ-ಸಪ್ತ ಮರುತ್ತುಗಳು, ತಥಾ-ಹಾಗೆ ॥೨೩॥ ವಸವಃ-ಎಂಟುಮಂದಿ ವಸುದೇವತೆಗಳು, ಮುನಯಃ-ಋಷಿಗಳು, ಗಾವಃ-ಕಾಮಧೇನುವೇ ಮೊದಲಾದ ಹಸುಗಳು, ಗುಹ್ಯ

ಪತತ್ರಿಣಃ । ಸಪ್ರಜಾಪತಯಶ್ಚೈತೇತಥಾಚಾಪ್ಸರಸಾಂಗಣಾಃ ॥ ೨೪ ॥ ಸರ್ವೇರಾಮಂಸಮಾಸಾದ್ಯದೃಷ್ಟ್ವಾನೇತ್ರಮಹೋತ್ಸವಂ । ಸ್ತುತ್ವಾಪೃಥಕ್ಪೃಥಕ್ಸರ್ವೇರಾಘವೇಣಾಭಿವಂದಿತಾಃ ॥೨೫॥ ಯಯುಸ್ಸ್ವಂಸ್ವಂಪದಂಸರ್ವೇಬ್ರಹ್ಮರುದ್ರಾದಯಸ್ತಥಾ।ಪ್ರಶಂಸಂತೋಮುದಾರಾಮಂಗಾಯಂತಸ್ತಸ್ಯಚೇಷ್ಟಿತಂ ॥೨೬॥ ಧ್ಯಾಯಂತಸ್ತ್ವಭಿಷೇಕಾರ್ದ್ರಂಸೀತಾಲಕ್ಷ್ಮಣಸಂಯುತಂ । ಸಿಂಹಾಸನಸ್ಥಂರಾಜೇಂದ್ರಂಯಯುಸ್ಸರ್ವೇಹೃದಿಸ್ಥಿತಂ ॥೨೭॥ ಖೇವಾದ್ಯೇಷುಧ್ವನತ್ಸುಪ್ರಮುದಿತಹೃದಯೈರ್ದೈವಬೃಂದೈಸ್ಸ್ತುವದ್ಭಿರ್ವರ್ಷದ್ಭಿಃಪುಷ್ಪವೃಷ್ಟಿಂದಿವಿಮುನಿನಿಕರೈರೀಡ್ಯಮಾನಸ್ಸಮಂತಾತ್ । ರಾಮಸ್ಸ್ವಯಮ್ಪ್ರಸ

ಕಾಃ-ಗುಹ್ಯಕರು, ಪತತ್ರಿಣಃ-ಗರುಡಾದಿ ಪಕ್ಷಿಗಳು, ತಥಾ-ಹಾಗೆ, ಅಪ್ಸರಸಾಂ-ಊರ್ವಶ್ಯಾದಿ ಅಪ್ಸರಸ್ತ್ರೀಯರುಗಳ, ಗಣಾಃ-ಸಮೂಹಗಳು, ಸಪ್ರಜಾಪತಯಃ-ಬ್ರಹ್ಮ ಸಮೇತರಾದ, ಏತೇ-ಈ ದೇವತೆಗಳು ॥೨೪॥ ಸರ್ವೇ-ಎಲ್ಲರೂ, ರಾಮಂ-ರಾಮಚಂದ್ರನನ್ನು, ಸಮಾಸಾದ್ಯ-ಸೇರಿ, ನೇತ್ರ-ಕಣ್ಣುಗಳಿಗೆ, ಮಹೋತ್ಸವಂ-ಅಧಿಕ ಉತ್ಸವವಾಗಿರುವ ಪಟ್ಟಾಭಿಷೇಕವನ್ನು, ದೃಷ್ಟ್ವಾ-ನೋಡಿ, ಪೃಥಕ್ಪೃಥಕ್-ಬೇರೆ ಬೇರೆ, ಸ್ತುತ್ವಾ-ಸ್ತೋತ್ರವನ್ನು ಮಾಡಿ, ರಾಘವೇಣ-ರಾಮಚಂದ್ರನಿಂದ, ಅಭಿವಂದಿತಾಃ-ನಮಸ್ಕರಿಸಲ್ಪಟ್ಟವರಾಗಿ ॥೨೫॥ ಸರ್ವೇ-ಎಲ್ಲರೂ, ಸ್ವಂಸ್ವಂ-ತಮ್ಮ ತಮ್ಮದಾದ, ಪದಂ-ಸ್ಥಳವನ್ನು ಕುರಿತು, ಯಯುಃ-ಹೊರಟು ಹೋದರು, ತಥಾ-ಹಾಗೆಯೇ, ಬ್ರಹ್ಮರುದ್ರಾದಯಃ-ಬ್ರಹ್ಮ-ಬ್ರಹ್ಮನು, ರುದ್ರ-ಈಶ್ವರನೇ, ಆದಯಃ-ಮೊದಲಾಗುಳ್ಳವರಾದ ದೇವತೆಗಳು, ಮುದಾ-ಸಂತೋಷದಿಂದ, ರಾಮಂ-ರಾಮಚಂದ್ರನನ್ನು, ಪ್ರಶಂಸಂತಃ-ಸ್ತೋತ್ರ ಮಾಡುತ್ತಾ, ತಸ್ಯ-ಆ ರಾಮಚಂದ್ರನ, ಚೇಷ್ಟಿತಂ-ಚರಿತ್ರೆಯನ್ನು, ಗಾಯಂತಃ-ಗಾನ ಮಾಡುತ್ತಿರುವವರಾಗಿ ॥೨೬॥ ಅಭಿಷೇಕಾರ್ದ್ರಂ-ಅಭಿಷೇಕ-ಪಟ್ಟಾಭಿಷೇಕದಿಂದ, ಆರ್ದ್ರಂ-ನೆನೆದಿರುವ, ಸೀತಾಲಕ್ಷ್ಮಣಸಂಯುತಂ-ಸೀತಾಲಕ್ಷ್ಮಣ ಸಹಿತನಾದ, ಸಿಂಹಾಸನಸ್ಥಂ-ಸಿಂಹಾಸನದಲ್ಲಿ ಕುಳಿತಿರುವ, ಹೃದಿಸ್ಥಿತಂ-ಸರ್ವರ ಹೃದಯದಲ್ಲಿರುವವನಾದ, ರಾಜೇಂದ್ರಂ-ಚಕ್ರವರ್ತಿಯಾದ, ರಾಮ-ರಾಮಚಂದ್ರನನ್ನು, ಧ್ಯಾಯಂತಃ-ಧ್ಯಾನವನ್ನು ಮಾಡುತ್ತಿರುವವರಾಗಿ, ಸರ್ವೇ-ಯಲ್ಲಾ ದೇವತೆಗಳೂ, ಯಯುಃ-ಹೊರಟುಹೋದರು ॥ ೨೭ ॥ ಖೇ-ಅಂತರಿಕ್ಷದಲ್ಲಿ, ವಾದ್ಯೇಷು-ವಾದ್ಯಗಳು, ಧ್ವನತ್ಸು-ಶಬ್ದವನ್ನು ಮಾಡುತ್ತಿರಲೂ, ಪ್ರಮುದಿತ-ಸಂತುಷ್ಟವಾದ, ಹೃದಯೈಃ-ಮನಸ್ಸುಳ್ಳವರಾದ, ಸ್ತುವದ್ಭಿಃ-ಸ್ತೋತ್ರಮಾಡುತ್ತಿರುವವರಾದ, ದಿವಿ-ಅಂತರಿಕ್ಷದಲ್ಲಿ, ಪುಷ್ಪವೃಷ್ಟಿಂ-ಹುವ್ವಿನ ಮಳೆಯನ್ನು, ವರ್ಷದ್ಭಿಃ-ಮಳೆಮಾಡುತ್ತಿರುವವರಾದ ದೇವಬೃಂದೈಃ-ದೇವತಾ ಸಮೂಹಗಳಿಂದಲೂ, ಮುನಿ-ಋಷಿಗಳ, ನಿಕರೈಃ-ಸಮೂಹಗಳಿಂದಲೂ, ಸಮಂತಾತ್-ಸುತ್ತಲೂ, ಈಡ್ಯಮಾನಃ-ಸ್ತೋತ್ರಮಾಡಲ್ಪಟ್ಟವನಾದ, ಸ್ವಾಮಃ-ಸ್ವಾಮಲಬ್ಣ್ಣವುಳ್ಳವನಾದ, ಪ್ರಸನ್ನ-ಅನುಗ್ರಹಕರವಾಗಿಯೂ, ಸ್ಮಿತ-ಮಂದಹಾಸದಿಂದ, ರುಚಿರ-ಮನೋಹರವಾಗಿಯೂ ಇರುವ, ಮುಖಃ-ಮುಖವುಳ್ಳವನಾದ, ಸೂರ್ಯಕೋಟಿ-ಕೋಟಿಸೂರ್ಯರಿಗೆ ಸಮವಾದ, ಪ್ರಕಾಶಃ-ಕಾಂತಿಯುಳ್ಳವನಾದ, ಸೀತಾಸೌಮಿತ್ರಿವಾತಾತ್ಮಜಮುನಿಹರಿ

ಸ್ವಸ್ಮಿತೇರುಚಿರಮುಖಃಸೂರ್ಯಕೋಟಿಪ್ರಕಾಶಃ ಸೀತಾಸೌಮಿತ್ರಿವಾತಾತ್ಮಜಮುನಿಹರಿಭಿಸ್ಸೇವ್ಯಮಾನೋವಿಭಾತಿ ॥೭೮॥

—* ಇತಿಶ್ರೀಮದಧ್ಯಾತ್ಮರಾಮಾಯಣೇ-ಉಮಾಮಹೇಶ್ವರಸಂವಾದೇ-ಯುದ್ಧಕಾಂಡೇ-ಪಂಚದಶಸ್ಸರ್ಗಃ. *—

ಶ್ರೀಮಹಾದೇವಉವಾಚ ॥ ೧ ॥ ರಾಮೇಭಿಷಿಕ್ತೇರಾಜೇಂದ್ರೇಸರ್ವಲೋಕಸುಖಾವಹೇ । ವಸುಧಾಸಸ್ಯಸಂಪನ್ನಾ ಫಲವಂತೋಮಹೀರುಹಾಃ ॥ ೨ ॥ ಗಂಧಹೀನಾನಿಪುಷ್ಪಾಣಿಗಂಧವಂತಿಚಕಾಶಿರೇ । ಸಹಸ್ರಶತಮಶ್ವಾನಾಂಧೇನೂನಾಂಚಗವಾಂತಥಾ ॥ ೩ ॥ ದದೌಶತಂವೃಷಾನ್ಪೂರ್ವಂದ್ವಿಜೇಭ್ಯೋರಘುನಂದನಃ । ತ್ರಿಂಶತ್ಕೋಟೀಃಸುವರ್ಣಸ್ಯಬ್ರಾಹ್ಮಣೇಭ್ಯೋದದೌಪುನಃ ॥ ೪ ॥ ವಸ್ತ್ರಾಭರಣರತ್ನಾನಿಬ್ರಾಹ್ಮಣೇಭ್ಯೋಮುದಾತಥಾ । ಸೂರ್ಯಕಾಂತಿಸಮಪ್ರಖ್ಯಾಂಸರ್ವರತ್ನಮಯೀಂಸ್ರಜಂ ॥ ೫ ॥ ಸುಗ್ರೀವಾಯದದೌಪ್ರೀತ್ಯಾರಾಘವೋಭಕ್ತವತ್ಸಲಃ । ಅಂಗದಾಯದದೌದಿವ್ಯೇಹ್ಯಂಗದೇರಘುನಂ

ಭಿಃ-ಸೀತೆ-ಜಾನಕಿಯಿಂದ, ಸೌಮಿತ್ರಿ-ಲಕ್ಷ್ಮಣನಿಂದಲೂ, ವಾತಾತ್ಮಜ-ವಾಯುಪುತ್ರನಾದ ಆಂಜನೇಯನಿಂದಲೂ, ಹರಿಭಿಃ-ಸುಗ್ರೀವಾದಿ ಕಪಿಗಳಿಂದಲೂ, ಸೇವ್ಯಮಾನಃ-ಸೇವಿಸಲ್ಪಟ್ಟವನಾದ, ರಾಮಃ-ರಾಮಚಂದ್ರನು, ವಿಭಾತಿ-ಪ್ರಕಾಶಿಸುತ್ತಲಿದ್ದಾನೆ ... ... ... ... ... ... ॥೭೮॥

—* ಇಂತು ಅಧ್ಯಾತ್ಮರಾಮಾಯಣದೊಳ್ಗು ಉಮಾಮಹೇಶ್ವರ ಸಂವಾದದಲ್ಲಿ ಯುದ್ಧಕಾಂಡದೊಳ್ ಹದಿನೈದನೆಯ ಸರ್ಗವು. *—

ಶ್ರೀಮಹಾದೇವಉವಾಚ-ಈಶ್ವರನು ಹೇಳುತ್ತಲಿದ್ದಾನೆ ॥೧॥ ಸರ್ವಲೋಕಸುಖಾವಹೇ-ಸರ್ವ-ಸಮಸ್ತಗಳಾದ, ಲೋಕ-ಜನರಿಗೆ, ಸುಖಾವಹೇ-ಸುಖವನ್ನುಂಟುಮಾಡುವವನಾದ, ರಾಜೇಂದ್ರೇ-ಸಾರ್ವಭೌಮನಾದ, ರಾಮೇ-ರಾಮಚಂದ್ರನು, ಅಭಿಷಿಕ್ತೇ-ಪಟ್ಟಾಭಿಷಿಕ್ತನಾಗುತ್ತಿರಲು, ವಸುಧಾ-ಭೂಮಿಯು, ಸಸ್ಯ-ಬೆಳೆಯಿಂದ, ಸಂಪನ್ನಾ-ತುಂಬಿರುವದಾಯಿತು, ಮಹೀರುಹಾ-ಮರಗಳು, ಫಲವಂತಃ-ಫಲಗಳುಳ್ಳವುಗಳಾಗಿದ್ದವು ॥೨॥ ಗಂಧಹೀನಾನಿ-ವಾಸನೆ ಇಲ್ಲದಿರುವವುಗಳಾದ, ಪುಷ್ಪಾಣಿ-ಹುವ್ವುಗಳು, ಗಂಧವಂತಿ-ಗಂಧವುಳ್ಳವುಗಳಾಗಿ, ಚಕಾಶಿರೇ-ಪ್ರಕಾಶಿಸಿದವು, ಅಶ್ವಾನಾಂ-ಕುದುರೆಗಳ, ಸಹಸ್ರಶತಂ-ಒಂದು ಲಕ್ಷವನ್ನು, ಧೇನೂನಾಂ-ಕರೆಯುವ, ಗವಾಂ-ಹಸುಗಳನ್ನು, ಸಹಸ್ರಶತಂ-ಒಂದು ಲಕ್ಷವನ್ನು ॥೩॥ ಪೂರ್ವಂ-ಮೊದಲು, ಶತಂ-ನೂರಾದ, ವೃಷಾನ್-ಹೋರಿಗಳನ್ನು, ರಘುನಂದನಃ-ರಾಮಚಂದ್ರನು, ದ್ವಿಜೇಭ್ಯಃ-ಬ್ರಾಹ್ಮಣರಿಗೆ, ದದೌ-ಕೊಟ್ಟನು, ಪುನಃ-ತಿರಿಗಿ, ಹಿರಣ್ಯಸ್ಯ-ಭಂಗಾರದ, ತ್ರಿಂಶತ್ಕೋಟೀಃ-ಮೂವತ್ತು ಕೋಟಿಯನ್ನು, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೆ, ದದೌ-ಕೊಟ್ಟನು ॥೪॥ ವಸ್ತ್ರಾಭರಣರತ್ನಾನಿ-ವಸ್ತ್ರ-ಬಟ್ಟೆಗಳನ್ನು, ಆಭರಣ-ಒಡವೆಗಳನ್ನು, ರತ್ನಾನಿ-ರತ್ನಗಳನ್ನು, ತಥಾ-ಹಾಗೆ, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೆ, ಮುದಾ-ಸಂತೋಷದಿಂದ, ದದೌ-ಕೊಟ್ಟನು, ಸೂರ್ಯಕಾಂತಿಸಮಪ್ರಖ್ಯಾಂ-ಸೂರ್ಯಕಾಂತಿ-ಸೂರ್ಯನ ಪ್ರಭೆಗೆ, ಸಮ-ಸರಿಯಾದ, ಪ್ರಖ್ಯಾಂ-ಪ್ರಸಿದ್ಧವಾದ, ಸರ್ವರತ್ನಮಯೀಂ-ಸಮಸ್ತರತ್ನಮಯವಾದ, ಸ್ರಜಂ-ಮಾಲಿಕೆಯನ್ನು ॥೫॥ ಭಕ್ತ-ಸೇವಕರಲ್ಲಿ, ವತ್ಸಲಃ-ಪ್ರೀತಿಯುಳ್ಳವನಾದ, ರಾ

ಮನಃ ॥ ೬ ॥ ಚಂದ್ರಕೋಟಿಪ್ರತೀಕಾಶಂ ಮಣಿರತ್ನವಿಭೂಷಿತಂ । ಸೀತಾಯೈ ಪ್ರದದೌ ಹಾರಂ ಪ್ರೀತ್ಯಾ ರಘುಕುಲೋತ್ತ
ಮಃ ॥ ೭ ॥ ಅವಮುಚ್ಯಾತ್ಮನಃ ಕಂಠಾದ್ಧಾರಂ ಜನಕನಂದಿನೀ । ಅವೈಕ್ಷತ ಹರೀನ್ಸರ್ವಾನ್ ಭರ್ತಾರಂ ಚ ಮುಹುರ್ಮು
ಹುಃ ॥ ೮ ॥ ರಾಮಸ್ತಾಮಾಹ ವೈದೇಹೀಮಿಂಗಿತಜ್ಞೋ ವಿಲೋಕಯನ್ । ವೈದೇಹಿ ಯಸ್ಯ ತುಷ್ಟಾಸಿ ದೇಹಿ ತಸ್ಮೈ ವರಾನ
ನೇ ॥ ೯ ॥ ಹನೂಮತೇ ದದೌ ಹಾರಂ ಪಶ್ಯತೋ ರಾಘವಸ್ಯ ಚ । ತೇನ ಹಾರೇಣ ಶುಶುಭೇ ಮಾರುತಿರ್ಗೌರವೇಣ ಚ ॥ ೧೦ ॥ ರಾಮೋಽಪಿ
ಮಾರುತಿಂ ದೃಷ್ಟ್ವಾ ಕೃತಾಂಜಲಿಮುಪಸ್ಥಿತಂ । ಭಕ್ತ್ಯಾ ಪರಮಯಾ ತುಷ್ಟ ಇದಂ ವಚನಮಬ್ರವೀತ್ ॥ ೧೧ ॥ ಹನೂ
ಮನ್ ಪ್ರಸನ್ನೋಽಸ್ಮಿ ವರಂ ವರಯ ಕಾಂಕ್ಷಿತಂ । ದಾಸ್ಯಾಮಿ ದೇವೈರಪಿ ಯದ್ದುರ್ಲಭಂ ಭುವನತ್ರಯೇ ॥ ೧೨ ॥ ಹನೂಮಾ

ಘವಃ-ರಾಮಚಂದ್ರನು, ಸುಗ್ರೀವಾಯ-ಸುಗ್ರೀವನಿಗೆ, ಪ್ರೀತ್ಯಾ-ಪ್ರೀತಿಯಿಂದ, ದದೌ-ಕೊಟ್ಟನು, ರಘುನಂದನಃ-ರಾಮಚಂದ್ರನು, ಅಂಗದಾಯ-ಅಂಗದನಿಗೆ, ದಿವ್ಯೇ-ಯೋಗ್ಯಗಳಾದ, ಅಂಗದೇ-ಬಾಹುಭೂಷಣಗಳನ್ನು ದದೌ-ಕೊಟ್ಟನು ॥೬॥ ಚಂದ್ರಕೋಟಿ-ಕೋಟಿ ಚಂದ್ರರಿಗೆ, ಪ್ರತೀಕಾಶಂ-ಸರಿಯಾದ ಕಾಂತಿಯುಳ್ಳದ್ದಾದ, ಮಣಿರತ್ನವಿಭೂಷಿತಂ-ಮಣಿ-ಮುತ್ತು, ರತ್ನ-ರತ್ನಗಳಿಂದಲೂ, ವಿಭೂಷಿತಂ-ಅಲಂಕೃತವಾದ, ಹಾರಂ-ಸರವನ್ನು, ರಘುಕುಲೋತ್ತಮಃ-ರಘುಕುಲ-ರಘುಮಹಾರಾಯನ ಕುಲದಲ್ಲಿ ಹುಟ್ಟಿದವರೊಳಗೆ, ಉತ್ತಮಃ-ಶ್ರೇಷ್ಠನಾದ, ರಾಮಚಂದ್ರನು, ಪ್ರೀತ್ಯಾ-ವಿಶ್ವಾಸದಿಂದ, ಸೀತಾಯೈ-ಸೀತಾದೇವಿಗೆ, ಪ್ರದದೌ-ಕೊಟ್ಟನು ॥೭॥ ಜನಕನಂದಿನೀ-ಜನಕರಾಜನ ಮಗಳಾದ ಸೀತೆಯು, ಆತ್ಮನಃ-ತನ್ನ, ಕಂಠಾತ್-ಕುತ್ತಿಗೆಯಿಂದ, ಹಾರಂ-ಸರವನ್ನು, ಅವಮುಚ್ಯ-ತೆಗೆದು, ಸರ್ವಾನ್-ಸಮಸ್ತರಾದ, ಹರೀನ್-ಕಪಿಗಳನ್ನೂ, ಭರ್ತಾರಂ-ಗಂಡನಾದ ರಾಮಚಂದ್ರನನ್ನೂ, ಮುಹುರ್ಮುಹುಃ-ಪುನಃಪುನಃ, ಅವೈಕ್ಷತ-ನೋಡಿದಳು ॥೮॥ ಇಂಗಿತಜ್ಞಃ-ಭಾವವನ್ನು ತಿಳಿದವನಾದ, ರಾಮಃ-ರಾಮಚಂದ್ರನು, ವಿಲೋಕಯನ್-ಸೀತೆಯನ್ನು ನೋಡುತ್ತಿರುವವನಾಗಿ, ತಾಂ-ಆ, ವೈದೇಹೀಂ-ಸೀತೆಯನ್ನು ಕುರಿತು, ಆಹ-ಹೇಳಿದನು, ವರಾನನೇ-ಶ್ರೇಷ್ಠವಾದ ಮುಖವುಳ್ಳವಳಾದ, ವೈದೇಹಿ-ಸೀತೆಯೇ, ಯಸ್ಯ-ಯಾವನಿಗೆ, ತುಷ್ಟಾ-ಸಂತೋಷವುಳ್ಳವಳು, ಅಸಿ-ಆಗಿರುತ್ತೀಯೋ, ತಸ್ಮೈ-ಅವನಿಗೆ, ದೇಹಿ-ಹಾರವನ್ನು ಕೊಡು ॥೯॥ ಪಶ್ಯತಃ-ನೋಡುತ್ತಿರುವವನಾದ, ರಾಘವಸ್ಯ-ರಾಮಚಂದ್ರನ, (ಅಗ್ರೇ-ಎದುರಿಗೆ) ಹನೂಮತೇ-ಆಂಜನೇಯನಿಗೆ, ಹಾರಂ-ಸರವನ್ನು, ದದೌ-ಕೊಟ್ಟಳು, ಮಾರುತಿಃ-ಆಂಜನೇಯನು, ಗೌರವೇಣ-ಸೀತಾದೇವಿಯಿಂದ ಮಾಡಲ್ಪಟ್ಟ ಆದರದಿಂದ, ತೇನ-ಆ, ಹಾರೇಣ-ಹಾರದಿಂದಲೂ, ಶುಶುಭೇ-ಪ್ರಕಾಶಿಸಿದನು ॥೧೦॥ ರಾಮೋಽಪಿ-ರಾಮಚಂದ್ರನು, ಕೃತಾಂಜಲಿಂ-ಅಂಜಲಿ ಬದ್ಧನಾಗಿರುವವನಾದ, ಉಪಸ್ಥಿತಂ-ಸಮೀಪದಲ್ಲಿ ಇರುತ್ತಿರುವವನಾದ, ಮಾರುತಿಂ-ಆಂಜನೇಯನನ್ನು, ದೃಷ್ಟ್ವಾ-ನೋಡಿ, ಪರಮಯಾ-ಉತ್ತಮವಾದ, ಭಕ್ತ್ಯಾ-ಭಕ್ತಿಯಿಂದ, ತುಷ್ಟಃ-ಸಂತುಷ್ಟನಾಗಿ, ಇದಂ-ಈ, ವಚನಂ-ಮಾತನ್ನು, ಅಬ್ರವೀತ್-ಹೇಳಿದನು ॥೧೧॥ ಹನೂಮನ್-ಆಂಜನೇಯನೇ, ತೇ-ನಿನಗೆ, ಪ್ರಸನ್ನಃ-ಅನುಗ್ರಹಿಸಿದವನು, ಅಸ್ಮಿ-ಆಗಿದ್ದೇನೆ, ಕಾಂಕ್ಷಿತಂ-ಬೇಕಾದ, ವರಂ-ವರವನ್ನು ವರಯ-ಅಪೇಕ್ಷಿಸು, ಭುವನತ್ರಯೇ-ಮೂರು ಲೋಕದಲ್ಲಿ, ದೇವೈರಪಿ-

ದೇವತೆಗಳಿಂದ ಹೊಂದಲು, ಯಃ-ಯಾವದು, ದುರ್ಲಭಂ-ಅಸಾಧ್ಯವೋ, ತಂ-ಆ ವರವನ್ನು, ದಾಸ್ಯಾಮಿ-ಕೊಡುತ್ತೇನೆ ||೧೨|| ಈ ರೀತಿಯಾಗಿ ವರವನ್ನು ಕೊಡಲು, ಮುಖ್ಯವಾದ ಕಾರಣವು ಪುರಾಣಾಂತರದಲ್ಲಿ ಹೇಳಲ್ಪಟ್ಟಿದೆ. ಅದನ್ನೇ ಇಲ್ಲಿ ಉದಾಹರಿಸುವದಾಗುತ್ತೆ —ಶ್ಲೋ || ರಾಜ್ಯೋತ್ಸವಾಗತಜನಾಯ ರಘುಪ್ರವೀರಃ ಪ್ರೀತ್ಯಾತ್ವನೇಕಮಣಿರತ್ನವಿಭೂಷಣಾನಿ | ದತ್ವಾನಿಲಾತ್ಮಜಮಪಾಸ್ಯವಿದೇಹಜಾಯೈಮಾಲಾಂದದೌರಘುಪತಿಃಪರಮಾದರೇಣ ||೧|| ತಯಾಹನುಮತೇದತ್ತಾಸ್ವೈವಮಾಲಾಹ್ಯಮೂಲಿಕಾ | ದಶನೈಃ-ಶಕಲೀಕೃತ್ಯತ್ಯಕ್ತಾತೇನಜಲಾಶಯೇ ||೨|| ಹಾಹೇತಿಜಲ್ಪಿತಂಸರ್ವೈಸ್ತದಾಸಸುರಮಾನುಷೈಃ | ಸ್ವಜಾತೀಯಮರೇಕರ್ಮತ್ವಯಾಕೃತಮರಿಂದಮ ||೩|| ರಾಮಸ್ತ್ರೋಪಮಾರುತಿಮತ್ಯುದಾರಮಾಹೂಯಚಾರಾದಭಿವರ್ತಮಾನಂ | ಪಪ್ರಚ್ಛಕಸ್ಮಾತ್ಸ್ಮಹತೀಸುಮಾಲಾತ್ಯಕ್ತಾತ್ವಯಾಬ್ರೂಹಿವಿದೇಹಜಾರ್ಪಿತಾ ||೪|| ಬ್ರಹ್ಮೇತಿಯದ್ಬ್ರಹ್ಮವಿದೋವದಂತಿಹ್ಯಾತ್ಮೇಶ್ವರಾಖ್ಯಂ ಶಿವಮಂತಿಸಂತಃ | ಸೀತಾಪತೇತ್ವಂತದಸೀತಿಬುದ್ಧ್ವಾತ್ವತ್ತಾಮಯೇಯಂಸಕಲಾರ್ಕ್ಷಿತರೂಪಾ ||೫|| ಹನೂಮನ್ಯದಿಮತ್ತಸ್ತ್ವಂವರಂಕಿಮಪಿನೇಚ್ಛಸಿ | ತವೇಚ್ಛಾಂತರ್ಹಿನಿರ್ದಿಶ್ಯಕರಿಷ್ಯಾಮಿಚನಿಷ್ಫಲಾಂ ||೬|| ಶ್ರೀರಾಮಶ್ರವಣೇವಾಸ್ಯೈಮಮಾಸ್ತುಸಘೃಶಸ್ಪೃಹಾ | ತಸ್ಯಾಪಿರೋಧಿನೀಯಾತುನಿರ್ಮೂಲಾಂಕುರತಾಂಪ್ರಭೋ ||೭|| ಮಮಸ್ವಾಂತೇಸದೈವತ್ವಂಸೀತಯಾಸಹಿತಃ ವಸ | ಅದ್ಯೈವಸರ್ವೇಪಶ್ಯಂತುಸ್ಥಿತಂತ್ವಾಂಜಾನಕೀಪತೇ ||೮|| ವಿದೀರ್ಯವಕ್ಷಸ್ಥಲಮಂಜನೀಸುತಃಪ್ರದರ್ಶಯಾಮಾಸಚರಾಮಮದ್ವಯಂ | ಹೃದಂಬುಜೇಸಂಸ್ಥಿತಮಬ್ಜಲೋಚನಂಮಹೀಸುತಾರಾಧಿತಪಾದಪಂಕಜಂ ||೯|| ಮಾರುತೇರ್ವೈಭವಂದೃಷ್ಟ್ವಾಸರ್ವೇಸಂತೋಷಮಾಗತಾಃ | ರಾಮೇಣಾಲಿಂಗಿತಃಶ್ರೀಮಾನ್ಸೂನುಮಾನಂಜನೀಸುತಃ ||೧೦|| ಜಯಶಬ್ದೋಮಹಾನಾಸೀತ್ತದಾರಾಘವಮಂಗಳೇ | ಸೀತಾಪ್ರಮುದಿತಾತಸ್ಮೈವರಾನಭಯಮಾನ್ಪ್ರದೌ ||೧೧|| ರಾಮಲೀಲಾಮೃತಂಚೈತತ್ಪರಮಾನಂದದಾಯಕಂ | ಶ್ರೋತೄಣಾಂಚಪಠಿತೄಣಾಂಪಾಪಸಂಘವಿನಾಶಕಂ ||೧೨||

ರಘುವೀರಃ-ರಾಮಚಂದ್ರನು, ಅನಿಲಾತ್ಮಜಂ-ವಾಯುಪುತ್ರನಾದ ಆಂಜನೇಯನನ್ನು, ಅಪಾಸ್ಯ-ಬಿಟ್ಟು, ರಾಜ್ಯೋತ್ಸವಾಗತಜನಾಯ-ರಾಜ್ಯೋತ್ಸವ-ರಾಜ್ಯ ಪಟ್ಟಾಭಿಷೇಕೋತ್ಸವಕ್ಕೆ, ಆಗತ-ಬಂದಿರುವ, ಜನಾಯ-ಸುಗ್ರೀವ ವಿಭೀಷಣಾದಿ ಜನಕ್ಕೆ, ಪ್ರೀತ್ಯಾ-ವಿಶ್ವಾಸದಿಂದ, ಅನೇಕಮಣಿರತ್ನವಿಭೂಷಣಾನಿತು-ಅನೇಕ-ಬಹಳವಾದ, ಮಣಿ-ಶ್ರೇಷ್ಠಗಳಾದ, ರತ್ನವಿಭೂಷಣಾನಿತು-ರತ್ನ ಖಚಿತವಾದ ಆಭರಣಗಳನ್ನು, ದತ್ವಾ-ಕೊಟ್ಟು, ರಘುಪತಿಃ-ರಾಮಚಂದ್ರನು, ವಿದೇಹಜಾಯೈ-ಸೀತಾದೇವಿಗೆ, ಪರಂ-ಅತ್ಯಂತವಾಗಿ, ಆದರೇಣ-ಅತಿಶಯದಿಂದ, ಮಾಲಾಂ-ಮಾಲಿಕೆಯನ್ನು, ದದೌ-ಕೊಟ್ಟನು ||೧|| ತಯಾ-ಆ ಸೀತಾದೇವಿಯಿಂದ, ಅಮೂಲಿಕಾ-ಬೆಲೆಯಿಲ್ಲದಿರುವ, ಸ್ವೈವ-[illegible], ಮಾಲಾ-ಮಾಲೆಯು ಹನುಮತೇ-ಆಂಜನೇಯನಿಗೆ ದತ್ತಾ-ಕೊಡಲ್ಪಟ್ಟಿತು, ತೇನ-ಆಂಜನೇಯನಿಂದ, ದಶನೈಃ-ಹಲ್ಲುಗಳಿಂದ, ಶಕಲೀಕೃತ್ಯ-ತುಂಡುತುಂಡಾಗಿ ಮಾಡಿ, ಜಲಾಶಯೇ-ನೀರಿರುವ ಭಾವಿಯಲ್ಲಿ, ಸಾ-ಆ ಮಾಲಿಕೆಯು, ತ್ಯಕ್ತಾ-ಬಿಸಾಡಲ್ಪಟ್ಟಿತು ||೨|| ತದಾ-ಆಗ, ಸಸುರಮಾನುಷೈಃ-ದೇವತೆಗಳಿಂದಲೂ ಮನುಷ್ಯರಿಂದಲೂ ಕೂಡಿರುವವರಾದ, ಸರ್ವೈಃ-ಎಲ್ಲರಿಂದಲೂ, ಹಾಹಾ ಇತಿ-ಹಾಹಾ ಎಂಬದಾಗಿ ಜಲ್ಪಿತಂ-ಹೇಳಲ್ಪಟ್ಟಿತು, ಅರೇ-ಎಲೈ, ಅರಿಂದಮ-ಶತ್ರುಸಂಹಾರಕನಾದ ಆಂಜನೇಯನೇ ತ್ವಯಾ-ನಿನ್ನಿಂದ, ಸ್ವಜಾತೀಯಂ-ಕಪಿತ್ವ ಸಂಬಂಧವಾದ, ಕರ್ಮ-ಕೆಲಸವು, ಕೃತಂ-ಮಾಡಲ್ಪಟ್ಟಿತು ||೩|| ರಾಮಃ-ರಾಮಚಂದ್ರನು, ಆರಾತ್-ಸಮೀಪದಲ್ಲಿ, ಅಭಿವರ್ತಮಾನಂ-ಇರುವವನಾದ, ಅತ್ಯುದಾರಂ-ಅತ್ಯಂತ ಉದಾರಗುಣವುಳ್ಳವನಾದ, ಮಾರುತಿಂ-ಆಂಜನೇಯನನ್ನು, ಆಹೂಯ-ಕರೆದು, ಕಸ್ಮಾತ್-ಯಾವ ನಿಮಿತ್ತದಿಂದ, ಮಹತೀ-ದೊಡ್ಡದಾದ, ವಿದೇಹಜಾ-ಸೀತೆಯಿಂದ, ಅರ್ಪಿತಾ-ಕೊಡಲ್ಪಟ್ಟ, ಮಾಲಾ-ಸರವು, ತ್ವಯಾ-ನಿನ್ನಿಂದ, ತ್ಯಕ್ತಾ-

ಬಿಸಾಡಲ್ಪಟ್ಟಿತು, ಬ್ರೂಹಿ-ಹೇಳು, (ಇತಿ-ಹೀಗೆ,) ಪಪ್ರಚ್ಛ-ಕೇಳಿದನು. ||೪|| ಬ್ರಹ್ಮೇತಿ-ಬ್ರಹ್ಮವೆಂಬದಾಗಿ, ಯತ್-ಯಾವದನ್ನು, ಬ್ರಹ್ಮವಿದಃ-ಬ್ರಹ್ಮವೇತ್ತೃಗಳು, ವದಂತಿ-ಹೇಳುತ್ತಾರೋ, ಸಂತಃ-ಸತ್ಪುರುಷರು, ಆತ್ಮಾ-ಆತ್ಮನೆಂಬದಾಗಿಯೂ, ಈಶ್ವರಶ್ಚ-ಈಶ್ವರನೆಂಬದಾಗಿಯೂ, ವದಂತಿ-ಹೇಳುತ್ತಾರೋ, ಸೀತಾಪತೇ-ರಾಮಚಂದ್ರನೇ, ತ್ವಂ-ನೀನು, ತತ್-ಆ ಬ್ರಹ್ಮನು, ಅಸಿ-ಆಗಿದ್ದೀ, ಇತಿ-ಹೀಗೆಂಬುವ, ಬುದ್ಧ್ಯಾ-ಜ್ಞಾನದಿಂದ, ಮಯಾ-ನನ್ನಿಂದ, ಸಕಲಾರ್ತಿರೂಪಾ-ಸಕಲ-ಸಮಸ್ತವಾದ, ಆರ್ತಿರೂಪಾ-ದುಃಖರೂಪವಾಗಿರುವ, ಇಯಂ-ಈ ಮಾಲಿಕೆಯು, ತ್ಯಕ್ತಾ-ಬಿಸಾಡಲ್ಪಟ್ಟಿತು ||೫|| ಹನುಮಾನ್-ಆಂಜನೇಯನೇ, ಮತ್ತಃ-ನನ್ನಿಂದ, ತ್ವಂ-ನೀನು, ವರಂ-ವರವನ್ನು, ಕಿಮಪಿ-ಯಾವದನ್ನಾದರೂ, ನೇಚ್ಛಸಿ-ಅಪೇಕ್ಷಿಸುವದಿಲ್ಲ, ತರ್ಹಿ-ಹಾಗಾದರೆ, ತವ-ನಿನ್ನ, ನಿರ್ಮುಕ್ತಿಃ-ಕೊಟ್ಟ ಮುಕ್ತ್ಯರ್ಥವಾದ ಸವವನ್ನು ಬಿಟ್ಟಂಥಾ, ಇಚ್ಛಾಂ-ಇಚ್ಛೆಯನ್ನು, ನಿಷ್ಫಲಾಂ-ಪ್ರಯೋಜನವಿಲ್ಲದದ್ದನ್ನಾಗಿ, ಕರಿಷ್ಯಾಮಿ-ಮಾಡುತ್ತೇನೆ ||೬|| ಶ್ರೀರಾಮ-ರಾಮಚಂದ್ರನೇ, ಶ್ರವಣೇ-ಕೇಳುವದರಲ್ಲಿ, ದಾಸ್ಯೇ-ಸ್ಪೃಹೆಯನ್ನು ಇಡುತ್ತೇನೆ, (ಆದ್ದರಿಂದ) ಮಮ-ನನ್ನ, ಸ್ಪೃಹಾ-ಇಚ್ಛೆಯು, ಸಫಲಾ-ಫಲಪ್ರದವುಳ್ಳದ್ದು, ಅಸ್ತು-ಆಗಲಿ, ಪ್ರಭೋ-ಸಮರ್ಥನಾದ ರಾಮಚಂದ್ರನೇ, ತಸ್ಯ-ಆ ಶ್ರವಣಕ್ಕೆ, ವಿರೋಧಿನೀ-ವಿರೋಧಿಯಾದ, ಯಾ-ಯಾವ ಸ್ಪೃಹೆಯುಂಟೋ, ತಾಂ-ಆ ಸ್ಪೃಹೆಯನ್ನು, ನಿರ್ಮೂಲಾ-ಬುಡವಿಲ್ಲದ್ದನ್ನಾಗಿ, ಕುರು-ಮಾಡು, ||೭|| ಮಮ-ನನ್ನ, ಸ್ವಾಂತೇ-ಮನಸ್ಸಿನಲ್ಲಿ, ಸದೈವ-ಯಾವಾಗಲೂ, ತ್ವಂ-ನೀನು, ಸೀತಾಯಾ ಸಹ-ಸೀತೆಯಿಂದ ಕೂಡಿದವನಾಗಿ, ತಿಷ್ಠಸಿ-ಇದ್ದೀ, ಜಾನಕೀಪತೇ-ಸೀತಾಪತಿಯಾದ ರಾಮಚಂದ್ರನೇ, ಅದ್ಯೈವ-ಈಗಲೇ, ಸರ್ವೇ-ಎಲ್ಲರೂ, ಸ್ಥಿತಂ-ಇರುತ್ತಿರುವ, ತ್ವಾಂ-ನಿನ್ನನ್ನು, ಪಶ್ಯಂತು-ನೋಡಲಿ ||೮|| ಅಂಜನೀಸುತಃ-ಅಂಜನಗೆ ಮಗನಾದ ಆಂಜನೇಯನು, ವಕ್ಷಸ್ಥಲಂ-ಹೃದಯವನ್ನು, ವಿದೀರ್ಯ-ಶೀಳಿ, ಅದ್ವಯಂ-ಎರಡನೇ ಪದಾರ್ಥವೇ ಇಲ್ಲದವನಾದ, ಹೃದಂಬುಜೇ-ಹೃದಯ ಕಮಲದಲ್ಲಿ, ಸಂಸ್ಥಿತಂ-ಇರುತ್ತಿರುವ, ಅಬ್ಜಲೋಚನಂ-ಕಮಲಾಕ್ಷನಾದ, ಮಹೀಸುತಾರಾಧಿತಪಾದಪಂಕಜಂ-ಮಹೀ-ಭೂಮಿಗೆ, ಸುತಾ-ಮಗಳಾದ ಸೀತೆಯಿಂದ, ಆರಾಧಿತ-ಸೇವಿಸಲ್ಪಟ್ಟ, ಪಾದಪಂಕಜಂ-ಪಾದ ಕಮಲಗಳುಳ್ಳವನಾದ, ರಾಮಂ-ರಾಮಚಂದ್ರನನ್ನು, ಪ್ರದರ್ಶಯಾಮಾಸ-ತೋರಿಸಿದನು ||೯|| ಮಾರುತೇಃ-ಆಂಜನೇಯನ, ವೈಭವಂ-ಮಹಿಮೆಯನ್ನು, ದೃಷ್ಟ್ವಾ-ನೋಡಿ, ಸರ್ವೇ-ಎಲ್ಲರೂ, ಸಂತೋಷಂ-ಸಂತೋಷವನ್ನು, ಆಗತಾಃ-ಹೊಂದಿದರು, ಶ್ರೀಮಾನ್-ಸಮುದ್ಯುಕ್ತನಾದ, ಅಂಜನೀಸುತಃ-ಅಂಜನಾಪುತ್ರನಾದ, ಹನುಮಾನ್-ಹನುಮಂತನು, ರಾಮೇಣ-ರಾಮಚಂದ್ರನಿಂದ, ಆಲಿಂಗಿತಃ-ಆಲಿಂಗನೆ ಮಾಡಲ್ಪಟ್ಟನು, ||೧೦|| ತದಾ-ಆಗ, ರಾಘವಃ-ರಾಮಚಂದ್ರನ, ಮಂಟಪೇ-ಮಂಟಪದಲ್ಲಿ, ಮಹಾನ್-ದೊಡ್ಡದಾದ, ಜಯಶಬ್ದಃ-ಜಯ ಜಯ ಧ್ವನಿಯು, ಆಸೀತ್-ಆಯಿತು, ಸೀತಾ-ಸೀತಾದೇವಿಯು, ಪ್ರಮುದಿತಾ-ಸಂತುಷ್ಟಳಾಗಿ, ಅಭಯೇದಾ-ಭಯಗಳನ್ನು ಹೋಗಲಾಡಿಸುವಂಥಾ, ವರಾನ್-ವರಗಳನ್ನು, ದದೌ-ಕೊಟ್ಟಳು ||೧೧|| ಏತತ್-ಈ, ಪರಮಾನಂದದಾಯಕಂ-ಪರಮ-ಉತ್ಕೃಷ್ಟವಾದ, ಆನಂದದಾಯಕಂ-ಸಂತೋಷಪ್ರದವಾದ, ರಾಮಲೀಲಾಮೃತಂ-ರಾಮ-ರಾಮಚಂದ್ರನ, ಲೀಲಾ-ವಿಲಾಸಾರ್ಥವಾಗಿ ನಡಿಸಿದ ಚರಿತ್ರೆಯೆಂಬ, ಅಮೃತಂ-ಸುಧೆಯು, ಶ್ರೋತ್ರೂಣಾಂ-ಕೇಳುವವರಿಗೆ, ಶೃಣ್ವತಾಂ-ಪಠಿಸುವವರಿಗೆ, ಪಾಪ-ದುರಿತಗಳ, ಸಂಘ-ಸಮೂಹಗಳನ್ನು, ವಿನಾಶಕಂ-ಹೋಗಲಾಡಿಸುವಂಥಾದ್ದಾಗಿರುವದು ||೧೨|| ಹನೂಮಾನಪಿ-ಆಂಜನೇಯನೂ, ಪ್ರಹೃಷ್ಟ-ಸಂತಷ್ಟನಾದ, ಧೀಃ-ಬುದ್ಧಿಯುಳ್ಳವನಾಗಿ, ತಂ-ಆ, ರಾಮಂ-ರಾಮಚಂದ್ರನನ್ನು, ನತ್ವಾ-ವಂದಿಸಿ, ಪ್ರಾಹ-ಹೇಳಿದನು, ರಾಮ-ರಾಮಚಂದ್ರನೇ, ತ್ವನ್ನಾಮ-ನಿನ್ನ ಹೆಸರನ್ನು, ಸ್ಮರತಃ-ಸ್ಮರ

ಸಪಿತಂಪ್ರಾಹಸತ್ವಾರಾಮಂಪ್ರಹೃಷ್ಟಧೀಃ । ತ್ವನ್ನಾಮಸ್ಮರತೋರಾಮನತೃಪ್ಯತಿಮನೋಮಮ ॥ ೧೩ ॥ ಅತಸ್ತ್ವನ್ನಾಮಸತತಂಸ್ಮರನ್ಸ್ಥಾಸ್ಯಾಮಿಭೂತಲೇ । ಯಾವತ್ಸ್ಥಾಸ್ಯತಿತೇನಾಮಲೋಕೇತಾವತ್ಕಲೇಬರಂ॥೧೪॥ ಮಮತಿಷ್ಠತು ರಾಜೇಂದ್ರವರೋಯಂಮೇಭಿಕಾಂಕ್ಷಿತಃ । ರಾಮಸ್ತಥೇತಿತಂಪ್ರಾಹಮುಕ್ತಸ್ತಿಷ್ಠಯಥಾಸುಖಂ ॥ ೧೫ ॥ ಕಲ್ಪಾಂತೇಮಮ ಸಾಯುಜ್ಯಂಪ್ರಾಪ್ಸ್ಯಸೇನಾತ್ರಸಂಶಯಃ । ತಮಾಹಜಾನಕೀಪ್ರೀತಾಯತ್ರಕುತ್ರಾಪಿಮಾರುತೇ ॥ ೧೬ ॥ ಸ್ಥಿತಂತ್ವಾಮನುಯಾಸ್ಯಂತಿಭೋಗಾಸ್ಸರ್ವೇಮಮಾಜ್ಞಯಾ। ಇತ್ಯುಕ್ತೋಮಾರುತಿಸ್ತಾಭ್ಯಾಮೀಶ್ವರಾಭ್ಯಾಂಪ್ರಹೃಷ್ಟಧೀಃ॥೧೭॥ ಆನಂದಾಶ್ರುಪರೀತಾಕ್ಷೋ ಭೂಯೋಭೂಯಃಪ್ರಣಮ್ಯತೌ । ಕೃಛ್ರಾದ್ಯಯೌತಪಸ್ತಪ್ತುಂ ಹಿಮವಂತಂ ಮಹಾಮತಿಃ ॥ ೧೮ ॥ ತತೋಗುಹಂಸಮಾಸಾದ್ಯರಾಮಃಪ್ರಾಂಜಲಿಮಬ್ರವೀತ್ । ಸಖೇಗಚ್ಛಪುರಂರಮ್ಯಂಶೃಂಗಿಬೇರಮನುತ್ತ

ಣೇ ಮಾಡುತ್ತಿರುವವನಾದ, ಮಮ-ನನ್ನ ಮನಃ-ಮನಸ್ಸು, ನತೃಪ್ಯತಿ-ತೃಪ್ತಿಯನ್ನು ಹೊಂದಲಿಲ್ಲ ॥ ೧೩ ॥ ಅತಃ-ಆದಕಾರಣದಿಂದ, ಸತತಂ-ಯಾವಾಗಲೂ, ತ್ವನ್ನಾಮ-ನಿನ್ನ ಹೆಸರನ್ನು, ಸ್ಮರನ್-ಧ್ಯಾನಮಾಡುತ್ತಾ, ಭೂತಲೇ-ಭೂಲೋಕದಲ್ಲಿ, ಸ್ಥಾಸ್ಯಾಮಿ-ಇರುತ್ತೇನೆ, ಲೋಕೇ-ಭೂಲೋಕದಲ್ಲಿ, ತೇ-ನಿನ್ನ, ನಾಮ-ಹೆಸರು, ಯಾವತ್-ಎದುವರೆಗೆ, ಸ್ಥಾಸ್ಯತಿ-ಇರುತ್ತದೆಯೋ, ತಾವತ್-ಅದುವರೆಗೆ, ಕಳೇಬರಂ-ದೇಹವು ॥ ೧೪ ॥ ಮಮ-ನನಗೆ, ತಿಷ್ಠತು-ಇರಲಿ, ರಾಜೇಂದ್ರ-ರಾಜಶ್ರೇಷ್ಠನಾದ ರಾಮಚಂದ್ರನೇ, ಅಯಂ-ಈ, ವರಃ-ವರವು, ಮೇ-ನನಗೆ, ಅಭಿಕಾಂಕ್ಷಿತಃ-ಬೇಕಾದ್ದಾಗಿರುವದು, ರಾಮಃ-ರಾಮಚಂದ್ರನು, ತಥೇತಿ-ಹಾಗೆಯೇ ಆಗಲೆಂದು, ತಂ-ಆಂಜನೇಯನನ್ನು ಕುರಿತು, ಪ್ರಾಹ-ಹೇಳಿದನು, ಮುಕ್ತಃ-ನನ್ನ ನಾಮಸ್ಮರಣೆಯಿಂದ ಜೀವನ್ಮುಕ್ತನಾಗಿ, ಯಥಾಸುಖಂ-ಸುಖವಾಗುವಂತೆ, ತಿಷ್ಠ-ಇರು ॥ ೧೫ ॥ ಕಲ್ಪಾಂತೇ-ಬ್ರಹ್ಮಕಲ್ಪವಾಗುವಾಗ್ಯೆ, ಮಮ-ನನ್ನ, ಸಾಯುಜ್ಯಂ-ಸಾಯುಜ್ಯ ಮುಕ್ತಿಯನ್ನು, ಪ್ರಾಪ್ಸ್ಯಸೇ-ಪಡೆಯುತ್ತೀ, ಸಂಶಯಃ-ಸಂದೇಹವು, ನ-ಇಲ್ಲ, ಜಾನಕೀ-ಸೀತೆಯು, ತಂ-ಆಂಜನೇಯನನ್ನು ಕುರಿತು, ಪ್ರೀತಾ-ಸಂತುಷ್ಟಳಾಗಿ, ಪ್ರಾಹ-ಹೇಳಿದಳು, ಮಾರುತೇ-ಆಂಜನೇಯನೇ, ಯತ್ರಕುತ್ರಾಪಿ-ಯಾವಸ್ಥಳದಲ್ಲಿ ಯಾದರೂ ॥ ೧೬ ॥ ಸ್ಥಿತಂ-ಇರುತ್ತಿರುವವನಾದ, ತ್ವಾಂ-ನಿನ್ನನ್ನು ಕುರಿತು, ಮಮ-ನನ್ನ, ಆಜ್ಞಯಾ-ಅಪ್ಪಣೆಯಿಂದ, ಸರ್ವೇ-ಸಮಸ್ತಗಳಾದ, ಭೋಗಾಃ-ಸುಖಗಳು, ಅನುಯಾಸ್ಯಂತಿ-ಅನುಸರಿಸಿ ಬರುವವು, ಮಾರುತಿಃ-ಆಂಜನೇಯನು, ತಾಭ್ಯಾಂ-ಆ, ಈಶ್ವರಾಭ್ಯಾಂ-ನಿಯಾಮಕರಾದ ಸೀತಾ ರಾಮಚಂದ್ರರಿಂದ, ಉಕ್ತಃ-ಹೇಳಲ್ಪಟ್ಟವನಾಗಿ, ಪ್ರಹೃಷ್ಟ-ಸಂತುಷ್ಟವಾದ, ಧೀಃ-ಬುದ್ಧಿಯುಳ್ಳವನಾಗಿ ॥ ೧೭ ॥ ಆನಂದಾಶ್ರು-ಆನಂದಬಾಷ್ಪಗಳಿಂದ, ಪರೀತ-ಕೂಡಿದ, ಅಕ್ಷಃ-ಕಣ್ಣುಗಳುಳ್ಳವನಾಗಿ, ಭೂಯೋಭೂಯಃ-ಬಾರಿಬಾರಿಗೂ, ತೌ-ಸೀತಾ ರಾಮಚಂದ್ರರನ್ನು ಕುರಿತು, ಪ್ರಣಮ್ಯ-ನಮಸ್ಕರಿಸಿ, ಮಹಾಮತಿಃ-ಬುದ್ಧಿಶಾಲಿಯಾದ ಹನುಮಂತನು, ತಪಃ-ತಪಸ್ಸನ್ನು, ತಪ್ತುಂ-ಮಾಡುವದಕ್ಕೆ, ಕೃಛ್ರಾತ್-ಅತ್ಯಂತ ಪ್ರಯಾಸದಿಂದ, ಹಿಮವಂತಂ-ಹಿಮವತ್ಪರ್ವತವನ್ನು ಕುರಿತು, ಯಯೌ-ಹೋಟು ಹೋಬಿಟು ॥ ೧೮ ॥ ರಾಮಃ-ರಾಮ

ಮಂ ||೧೯|| ಮಾಸೇವಚಿಂತಯನ್ನಿತ್ಯಂಭುಂಕ್ಷ್ವಭೋಗಾನ್ನಿಜಾರ್ಜಿತಾನ್ | ಅಂತೇಮಮೈವಸಾರೂಪ್ಯಂಪ್ರಾಪ್ಸ್ಯಸೇತ್ವಂನಸಂಶಯಃ || ೨೦ || ಇತ್ಯುಕ್ತ್ವಾಪ್ರದದೌತಸ್ಮೈದಿವ್ಯಾನ್ಯಾಭರಣಾನಿಚ | ರಾಜ್ಯಂಚವಿಪುಲಂದತ್ವಾವಿಜ್ಞಾನಂಚದದೌವಿಭುಃ || ೨೧ || ರಾಮೇಣಾಲಿಂಗಿತೋಹೃಷ್ಟೋಯಯೌಸ್ವಭವನಂಗುಹಃ | ಯೇಚಾನ್ಯೇವಾನರಶ್ರೇಷ್ಠಾಃಅಯೋಧ್ಯಾಂಸಮುಪಾಗತಾಃ || ೨೨ || ಅಮೂಲ್ಯಾಭರಣೈರ್ವಸ್ತ್ರೈಃಪೂಜಯಾಮಾಸರಾಘವಃ | ಸುಗ್ರೀವಪ್ರಮುಖಾಸ್ಸರ್ವೇವಾನರಾಸ್ಸವಿಭೀಷಣಾಃ ||೨೩|| ಯಥಾರ್ಹಂಪೂಜಿತಾಸ್ತೇನರಾಮೇಣಪರಮಾತ್ಮನಾ | ಪ್ರಹೃಷ್ಟಮನಸಸ್ಸರ್ವೇಜಗ್ಮುರೇವಯಥಾಗತಂ ||೨೪|| ಸುಗ್ರೀವಪ್ರಮುಖಾಸ್ಸರ್ವೇಕಿಷ್ಕಿಂಧಾಂಪ್ರಯಯುರ್ಮುದಾ | ವಿಭೀಷಣಸ್ತುಸಂಪ್ರಾಪ್ಯರಾಜ್ಯಂಸಿಹ

ಚಂದ್ರನು, ತತಃ-ಆಂಜನೇಯನು ಹೊರಟು ಹೋದ ಬಳಿಕ, ಪ್ರಾಂಜಲಿಂ-ಅಂಜಲಿಬದ್ಧನಾಗಿರುವ, ಗುಹಂ-ಗುಹನನ್ನು ಕುರಿತು, ಆಸಾದ್ಯ-ಬಂದು, ಅಬ್ರವೀತ್-ಹೇಳಿದನು, ಸಖೇ-ಮಿತ್ರನಾದ ಗುಹನೇ, ರಮ್ಯಂ-ಮನೋಹರವಾದ, ಅನುತ್ತಮಂ-ಶ್ರೇಷ್ಠವಾದ, ಶೃಂಗಿಬೇರಂ-ಶೃಂಗಿಬೇರವೆಂಬ ಹೆಸರುಳ್ಳ, ಪುರಂ-ಪಟ್ಟಣವನ್ನು ಕುರಿತು, ಗಚ್ಛ-ಹೋಗು ||೧೯|| ನಿತ್ಯಂ-ಪ್ರತಿದಿನದಲ್ಲಿಯೂ, ಮಾಮೇವ-ನನ್ನನ್ನೇ, ಚಿಂತಯನ್-ಧ್ಯಾನಿಸುತ್ತಿರುವವನಾಗಿ, ನಿಜಾರ್ಜಿತಾನ್-ಸ್ವಂತವಾಗಿ ಸಂಪಾದಿಸಲ್ಪಟ್ಟವುಗಳಾದ, ಭೋಗಾನ್-ಸುಖಗಳನ್ನು, ಭುಂಕ್ಷ್ವ-ಅನುಭವಿಸು, ಅಂತೇ-ದೇಹಾವಸಾನದಲ್ಲಿ, ಮಮೈವ-ನನ್ನ, ಸಾರೂಪ್ಯಂ-ಸಮಾನರೂಪತೆಯಾಗುವ ಮುಕ್ತಿಯನ್ನು, ತ್ವಂ-ನೀನು, ಪ್ರಾಪ್ಸ್ಯಸೇ-ಪಡೆಯುತ್ತೀ, ನಸಂಶಯಃ-ಸಂದೇಹವಿಲ್ಲ || ೨೦ || ಇತಿ-ಹೀಗೆ, ಉಕ್ತ್ವಾ-ಹೇಳಿ, ದಿವ್ಯಾನಿ-ದೇವತಾಯೋಗ್ಯಗಳಾದ, ಆಭರಣಾನಿಚ-ಒಡವೆಗಳನ್ನೂ, ತಸ್ಮೈ-ಆ ಗುಹನಿಗೆ, ಪ್ರದದೌ-ಕೊಟ್ಟನು, ವಿಭುಃ-ಸರ್ವಧಾರಣ ಸಮರ್ಥನಾದ ರಾಮಚಂದ್ರನು, ವಿಪುಲಂ-ವಿಸ್ತಾರವಾದ, ರಾಜ್ಯಂ-ರಾಜ್ಯವನ್ನು, ದತ್ವಾ-ಕೊಟ್ಟು, ವಿಜ್ಞಾನಂ-ಆತ್ಮ ವಿಷಯಕ ಜ್ಞಾನವನ್ನು, ದದೌ-ಕೊಟ್ಟನು || ೨೧ || ರಾಮೇಣ-ರಾಮಚಂದ್ರನಿಂದ, ಆಲಿಂಗಿತಃ-ಅಪ್ಪಿಕೊಳ್ಳಲ್ಪಟ್ಟವನಾದ, ಹೃಷ್ಟಃ-ಸಂತುಷ್ಟನಾದ, ಗುಹಃ-ಗುಹನು, ಸ್ವಭವನಂ-ತನ್ನ ಮನೆಯನ್ನು ಕುರಿತು, ಯಯೌ-ಹೊರಟು ಹೋದನು, ಅನ್ಯೇ-ಇತರರಾದ, ಯೇ-ಯಾರು, ಕಪಿಶ್ರೇಷ್ಠಾಃ-ಶ್ರೇಷ್ಠರಾದ ಕಪಿಗಳು, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು ಕುರಿತು, ಸಮುಪಾಗತಾಃ-ಬಂದಿದ್ದರೋ ||೨೨|| ತಾನ್-ಅವರನ್ನು, ಅಮೂಲ್ಯಾಭರಣೈಃ-ಅಮೂಲ್ಯ-ಬೆಲೆಯಿಲ್ಲದ, ಆಭರಣೈಃ-ಒಡವೆಗಳಿಂದ, ವಸ್ತ್ರೈಃ-ಬಟ್ಟೆಗಳಿಂದ, ರಾಘವಃ-ರಾಮಚಂದ್ರನು, ಪೂಜಯಾಮಾಸ-ಮರ್ಯಾದೆಯನ್ನು ಮಾಡಿದನು, ಸುಗ್ರೀವಪ್ರಮುಖಾಃ-ಸುಗ್ರೀವ-ಸುಗ್ರೀವನೇ, ಪ್ರಮುಖಾಃ-ಮೊದಲಾದ, ಸರ್ವೇ-ಸಮಸ್ತರಾದ, ಸವಿಭೀಷಣಾಃ-ವಿಭೀಷಣ ಸಹಿತರಾದ, ವಾನರಾಃ-ಕಪಿಗಳು, ತೇನ-ಆ, ಪರಮಾತ್ಮನಾ-ಪರಮಾತ್ಮನಾದ, ರಾಮೇಣ-ರಾಮಚಂದ್ರನಿಂದ || ೨೩ || ಯಥಾರ್ಹಂ-ಅವರವರ ಯೋಗ್ಯತಾನುಸಾರವಾಗಿ, ಪೂಜಿತಾಃ-ಮರ್ಯಾದೆ ಮಾಡಲ್ಪಟ್ಟವರಾಗಿ, ಸರ್ವೇ-ಎಲ್ಲರೂ, ಪ್ರಹೃಷ್ಟ-ಸಂತುಷ್ಟವಾದ, ಮನಸಃ-ಚಿತ್ತವುಳ್ಳವರಾಗಿ, ಯಥಾಗತಂ-ಬಂದಂತೆ, ಜಗ್ಮುಃ-ಹೊರಟು ಹೋದರು || ೨೪ || ಸುಗ್ರೀವಪ್ರಮುಖಾಃ-ಸುಗ್ರೀವ-ಸುಗ್ರೀ

ತಕಂಟಕಂ ॥ ೧೪ ॥ ರಾಮೇಣಪೂಜಿತಃಪ್ರೀತ್ಯಾಯಯೌಲಂಕಾಮನಿಂದಿತಃ। ರಾಘವೋರಾಜ್ಯಮಖಿಲಂಶಶಾಸಾಖಿಲವತ್ಸಲಃ ॥ ೧೬ ॥ ಅನಿಚ್ಛನ್ನಪಿರಾಮೇಣಯೌವ್ವರಾಜ್ಯೇಭಿಷೇಚಿತಃ । ಲಕ್ಷ್ಮಣಃಪರಯಾಭಕ್ತ್ಯಾ ರಾಮಸೇವಾಪರೋಭವತ್ ॥೧೭॥ ರಾಮಸ್ತು ಪರಮಾತ್ಮಾಪಿಕರ್ಮಾಧ್ಯಕ್ಷೋಪಿನಿರ್ಮಲಃ । ಕರ್ತೃತ್ವಾದಿವಿಹೀನೋಪಿನಿರ್ವಿಕಾರೋಪಿಸರ್ವದಾ ॥೧೮॥ ಸ್ವಾನಂದೇನಾಪಿತುಷ್ಟಸ್ಸನ್ಲೋಕಾನಾಮುಪದೇಶಕೃತ್ । ಅಶ್ವಮೇಧಾದಿಯಜ್ಞೈಶ್ಚ ಸರ್ವೈರ್ವಿಪುಲದಕ್ಷಿಣೈಃ ॥ ೧೯ ॥ ಅಯಜತ್ಪರಮಾನಂದೋಮಾನುಷಂವಪುರಾಸ್ಥಿತಃ । ನಪರ್ಯದೇವನ್ವಿಧವಾನಚವ್ಯಾಳಕೃತಂಭಯಂ ॥೨೦॥ ನವ್ಯಾಧಿಜಂಭಯಂಚಾಸೀದ್ರಾಮೇರಾಜ್ಯಂಪ್ರಶಾಸತಿ । ಲೋಕೇದಸ್ಯುಭಯಂನಾಸೀದನರ್ಥೋನಾಸ್ತಿಕಶ್ಚನ॥೨೧॥ ವೃದ್ಧೇಷುಸತ್ಸುಬಾಲಾ

ವನೇ, ಪ್ರಮುಖಾಃ-ಮೊದಲಾದ, ಸರ್ವೇ-ಎಲ್ಲರೂ, ಮುದಾ-ಸಂತೋಷದಿಂದ, ಕಿಷ್ಕಿಂಧಾಂ-ಕಿಷ್ಕಿಂಧಾ ಪುರವನ್ನು ಕುರಿತು, ಪ್ರಯಯುಃ-ಹೊರಟು ಹೋದರು, ವಿಭೀಷಣಸ್ತು-ವಿಭೀಷಣನಾದರೋ, ನಿಹತ-ಸಂಹರಿಸಲ್ಪಟ್ಟ, ಕಂಟಕಂ-ಶತ್ರುವಾದ ರಾವಣನುಳ್ಳ, ರಾಜ್ಯಂ-ರಾಜ್ಯವನ್ನು, ಸಂಪ್ರಾಪ್ಯ-ಹೊಂದಿ ॥ ೧೪ ॥ ರಾಮೇಣ-ರಾಮಚಂದ್ರನಿಂದ, ಪ್ರೀತ್ಯಾ-ಪ್ರೀತಿಯಿಂದ, ಪೂಜಿತಃ-ಮರ್ಯಾದೆಯನ್ನು ಪಡೆದವನಾಗಿ, ಅನಿಂದಿತಃ-ನಿರ್ದೋಷಿಯಾದ ವಿಭೀಷಣನು, ಲಂಕಾಂ-ಲಂಕಾ ಪುರವನ್ನು ಕುರಿತು, ಯಯೌ-ಹೊರಟು ಹೋದನು, ಅಖಿಲ-ಸಮಸ್ತರಲ್ಲಿಯೂ, ವತ್ಸಲಃ-ಪ್ರೀತಿಯುಳ್ಳವನಾದ, ರಾಘವಃ-ರಾಮಚಂದ್ರನು, ಅಖಿಲಂ-ಸಮಸ್ತವಾದ, ರಾಜ್ಯಂ-ರಾಜ್ಯವನ್ನು, ಶಶಾಸ-ಕಾಪಾಡಿದನು ॥ ೧೬ ॥ ಅನಿಚ್ಛನ್ನಪಿ-ಅಪೇಕ್ಷೆ ಇಲ್ಲದವನಾಗಿದ್ದಾಗ್ಯೂ, (ಭರತಃ-ಭರತನು,) ರಾಮೇಣ-ರಾಮಚಂದ್ರನಿಂದ, ಯೌವರಾಜ್ಯೇ-ಯುವರಾಜ್ಯ ಪದವಿಯಲ್ಲಿ, ಅಭಿಷೇಚಿತಃ-ಪಟ್ಟಾಭಿಷೇಕ ಮಾಡಲ್ಪಟ್ಟವನಾದನು, ಲಕ್ಷ್ಮಣಃ-ಲಕ್ಷ್ಮಣನು, ಪರಯಾ-ಉತ್ತಮವಾದ, ಭಕ್ತ್ಯಾ-ಭಕ್ತಿಯಿಂದ, ರಾಮಸೇವಾಪರಃ-ರಾಮ-ರಾಮಚಂದ್ರನ, ಸೇವ-ದಾಸ್ಯದಲ್ಲಿ, ಪರಃ-ಆಸಕ್ತನು, ಅಭವತ್-ಆದನು॥೧೭॥ ರಾಮಸ್ತು-ರಾಮಚಂದ್ರನು, ಪರಮಾತ್ಮಾಪಿ-ಪರಮಾತ್ಮನಾಗಿಯೂ, ಕರ್ಮಾಧ್ಯಕ್ಷಃ-ಕರ್ಮಸಾಕ್ಷಿಯಾಗಿಯೂ, ನಿರ್ಮಲಃ-ಅಲಿಪ್ತನಾಗಿಯೂ, ಕರ್ತೃತ್ವಾದಿ ವಿಹೀನೋಪಿ-ನಿರಭಿಮಾನಿಯಾದ್ದರಿಂದ ಕರ್ತೃತ್ವಾದಿಗಳಿಲ್ಲದೆ ಇದ್ದವನಾಗಿಯೂ, ನಿರ್ವಿಕಾರೋಪಿ-ವಿಕಾರ ರಹಿತನಾಗಿಯೂ, ಸರ್ವದಾ-ಯಾವಾಗಲೂ ॥ ೧೮ ॥ ಸ್ವಾನಂದೇನ-ಆತ್ಮಾನಂದದಿಂದ, ತುಷ್ಟಸ್ಸನ್-ಸಂತುಷ್ಟನಾಗಿಯೂ ಇದ್ದಾಗ್ಯೂ, ಲೋಕಾನಾಂ-ಜನರಿಗೆ, ಉಪದೇಶಕೃತ್-ಬೋಧಿಸುವವನಾಗಿ, ಸರ್ವೈಃ-ಸಮಸ್ತಗಳಾದ, ವಿಪುಲದಕ್ಷಿಣೈಃ-ವಿಪುಲ-ವಿಸ್ತಾರವಾದ, ದಕ್ಷಿಣೈಃ-ದಕ್ಷಿಣೆಯುಳ್ಳ, ಅಶ್ವಮೇಧಾದಿಯಜ್ಞೈಃ-ಅಶ್ವಮೇಧ-ವಾಜಿ ಮೇಧವೇ, ಆದಿ-ಮೊದಲಾದ, ಯಜ್ಞೈಃ-ಯಜ್ಞಗಳಿಂದ ॥ ೧೯ ॥ ಅಯಜತ್-ಯಜ್ಞಗಳನ್ನು ಮಾಡಿದನು, ಪರಮಾನಂದಃ-ಪರಮ-ಉತ್ಕೃಷ್ಟವಾದ, ಆನಂದಃ-ಸುಖೋದಯವುಳ್ಳವನಾದ, ಮಾನುಷಂ-ಮನುಷ್ಯ ಸಂಬಂಧವಾದ, ವಪುಃ-ದೇಹವನ್ನು, ಆಸ್ಥಿತಃ-ಧರಿಸಿರುವವನಾದ ರಾಮಚಂದ್ರನು, (ರಾಜ್ಯಂಶಾಸತಿ-ರಾಜ್ಯವನ್ನು ಪರಿಪಾಲಿಸುತ್ತಿರುವಾಗ್ಯೆ, ವಿಧವಾಃ-ಮುಂಡೆಯರಾಗಿ, ನಪರ್ಯದೇವನ್-ಗೋಳಾಡಲಿಲ್ಲ, ವ್ಯಾಳಕೃತಂ-ಸರ್ಪಗಳಿಂದಲೂ ಹುಲಿಗಳಿಂದಲೂ ೮೦

ನಾಂನಾಸೀನ್ಮೃತ್ಯುಭಯಂತಥಾ । ರಾಮಪೂಜಾಪರಾಸ್ಸರ್ವೇಸರ್ವೇರಾಘವಚಿಂತಕಾಃ ॥೩೨॥ ವವರ್ಷುರ್ಜಲದಾಸ್ತೋಯಂಯಥಾಕಾಲಂಯಥಾರುಚಿ । ಪ್ರಜಾಸ್ಸ್ವಧರ್ಮನಿರತಾವರ್ಣಾಶ್ರಮಗುಣಾನ್ವಿತಾಃ ॥ ೩೩ ॥ ಔರಸಾನಿವರಾಮೋಪಿಜುಗೋಪಪಿತೃವತ್ಪ್ರಜಾಃ । ಸರ್ವಲಕ್ಷಣಸಂಯುಕ್ತಾಸ್ಸರ್ವಧರ್ಮಪರಾಯಣಾಃ ॥ ೩೪ ॥ ದಶವರ್ಷಸಹಸ್ರಾಣಿದಶವರ್ಷಶತಾನಿಚ । ಸೀತಯಾಸಹಧರ್ಮಾತ್ಮಾರಾಮೋರಾಜ್ಯಮುಪಾಸ್ತಸಃ ॥ ೩೫ ॥ ಇದಂರಹಸ್ಯಂಧನಧಾನ್ಯಋದ್ಧಿಮದ್ದೀರ್ಘಾಯುರಾರೋಗ್ಯಕರಂಸುಪುಣ್ಯದಂ । ಪವಿತ್ರಮಾಧ್ಯಾತ್ಮಿಕಸಂಜ್ಞಿತಂ ಪುರಾದಾಮಾಯಣಂಭಾಷಿತಮಾದಿಶಂಭುನಾ॥೩೬॥ ಶೃಣೋತಿಭಕ್ತ್ಯಾಮನುಜಸ್ಸಮಾಹಿತೋಭಕ್ತ್ಯಾಪಠೇದ್ವಾಪರಿತುಷ್ಟಮಾನಸಃ। ಸರ್ವಾನ್ಸಮಾಪ್ನೋತಿಮನೋ

ಟಾದ, ಭಯಂ-ಅಂಜಿಕೆಯು, ನ-ಇಲ್ಲ ॥೩೦॥ ರಾಮೇ-ರಾಮಚಂದ್ರನು, ರಾಜ್ಯಂ-ರಾಜ್ಯವನ್ನು, ಪ್ರಶಾಸತಿ-ಕಾಪಾಡುತ್ತಿರುವಾಗ, ವ್ಯಾಧಿಜಂ-ರೋಗದಿಂದುಂಟಾದ, ಭಯಂ-ಅಂಜಿಕೆಯು, ನಾಸೀತ್-ಆಗಲಿಲ್ಲ, ಲೋಕೇ-ಭೂಮಿಯಲ್ಲಿ, ದಸ್ಯುಭಯಂ-ಕಳ್ಳರ ಭಯವು, ನಾಸೀತ್-ಉಂಟಾಗಲಿಲ್ಲ ॥ ೩೧ ॥ ವೃದ್ಧೇಷು-ಮುದುಕರು, ಸತ್ಸು-ಇರುತ್ತಿರಲು, ಬಾಲಾನಾಂ-ಹುಡುಗರಿಗೆ, ಮೃತ್ಯುಭಯಂ-ಮರಣ ಭಯವು, ನಾಸೀತ್-ಉಂಟಾಗಲಿಲ್ಲ, ಸರ್ವೇ-ಎಲ್ಲರೂ, ರಾಮಪೂಜಾಪರಾಃ-ಶ್ರೀರಾಮದೇವರ ಪೂಜೆಯಲ್ಲಿ ನಿರತರಾಗಿಯೂ, ಸರ್ವೇ-ಸಮಸ್ತರೂ ರಾಘವಚಿಂತಕಾಃ-ರಾಮಚಂದ್ರನನ್ನು ಧ್ಯಾನ ಮಾಡುವವರಾಗಿಯೂ ಇದ್ದರು ॥ ೩೨ ॥ ಜಲದಾಃ-ಮೇಘಗಳು, ಯಥಾಕಾಲಂ-ಕಾಲಾನುಸಾರವಾಗಿ, ಯಥಾರುಚಿ-ಜನರು ಅಪೇಕ್ಷಿಸಿದಂತೆಯೂ, ವವರ್ಷುಃ-ವರ್ಷಗಳನ್ನು ಸುರಿಸಿದವು, ಪ್ರಜಾಃ-ಪ್ರಜೆಗಳು, ಸ್ವಧರ್ಮ-ತಮ್ಮ ಧರ್ಮಗಳಲ್ಲಿ, ನಿರತಾಃ-ಆಸಕ್ತರಾಗಿಯೂ, ವರ್ಣ-ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ವರ್ಣಗಳ, ಆಶ್ರಮ-ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಸನ್ಯಾಸಿಗಳೆಂಬ ಆಶ್ರಮಗಳ, ಗುಣ-ಧರ್ಮಗಳಿಂದ, ಅನ್ವಿತಾಃ-ಕೂಡಿದವರಾಗಿಯೂ ಇದ್ದರು ರಾಮೋಪಿ-ರಾಮಚಂದ್ರನು, ಔರಸಾನ್-ತನ್ನ ಹೆಂಗತಿಯಲ್ಲಿ ಹುಟ್ಟಿದ ಗಂಡು ಮಕ್ಕಳನ್ನು, ಪಿತೃವತ್-ತಂದೆಯು ಕಾಪಾಡುವಂತೆ, ಪ್ರಜಾಃ-ಪ್ರಜೆಗಳನ್ನು, ಜುಗೋಪ-ಕಾಪಾಡಿದನು, ಪ್ರಜಾಃ-ಪ್ರಜೆಗಳು, ಸರ್ವ-ಸಮಸ್ತಗಳಾದ, ಲಕ್ಷ-ಸುಲಕ್ಷಣಗಳಿಂದ, ಸಂಯುಕ್ತಾಃ-ಕೂಡಿದವರಾಗಿಯೂ, ಸರ್ವಧರ್ಮಪರಾಯಣಾಃ-ಸರ್ವ-ಸಮಸ್ತಗಳಾದ, ಧರ್ಮ-ಧರ್ಮಗಳಲ್ಲಿ, ಪರಾಯಣಾಃ-ಆಸಕ್ತರಾಗಿಯೂ ಇದ್ದರು ॥ ೩೪ ॥ ದಶವರ್ಷಸಹಸ್ರಾಣಿ-ದಶವರ್ಷಶತಾನಿಚ-ಹನ್ನೊಂದು ಸಾವಿರ ವರ್ಷಗಳ ವರೆಗೂ, ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ, ರಾಮಃ-ರಾಮಚಂದ್ರನು, ಸೀತಯಾಸಹ-ಸೀತಾ ಸಮೇತನಾಗಿ, ರಾಜ್ಯಂ-ರಾಜ್ಯ ಪರಿಪಾಲನೆಯನ್ನು ಉಪಾಸ್ತ-ನಡಿಸಿದನು ॥ ೩೫ ॥ ಪುರಾ-ಪೂರ್ವದಲ್ಲಿ, ಆದಿಶಂಭುನಾ-ಆದಿ ಶಿವನಿಂದ, ರಹಸ್ಯಂ-ಗೋಪ್ಯವಾದ, ಧನಧಾನ್ಯಋದ್ಧಿಮತ್-ಧನ-ದ್ರವ್ಯದ, ಧಾನ್ಯ-ದವಸದ, ಋದ್ಧಿ-ಅಭಿವೃದ್ಧಿಯು, ಮತ್-ಉಳ್ಳದ್ದಾದ, ದೀರ್ಘಾಯುಃ-ದೀರ್ಘವಾದ ಆಯಸ್ಸನ್ನು, ಆರೋಗ್ಯ-ನಿರೋಗತೆಯನ್ನು, ಕರಂ-ಉಂಟುಮಾಡುವ, ಸುಪುಣ್ಯದಂ-ಪುಣ್ಯಪ್ರದವಾದ, ಪವಿತ್ರಂ-ಪರಿಶುದ್ಧವಾದ, ಆಧ್ಯಾತ್ಮಿಕಸಂಜ್ಞಿತಂ-ಆತ್ಮನನ್ನು ದೇಶಿಸಿ ಹೇಳುವ

ಗತಾಶೇಷೋವಿಮುಚ್ಯೇತಪಾತಕಕೋಟಿಭಿಃಕ್ಷಣಾತ್ ॥ ೩೭ ॥ ರಾಮಾಭಿಷೇಕಂಪ್ರಯತಶ್ಶೃಣೋತಿಯೋಧನಾಭಿಲಾಷೀ ಲಭತೇಮಹದ್ಧನಂ । ಪುತ್ರಾಭಿಲಾಷೀಸುತಮಾರ್ಯಸಮ್ಮತಂಪ್ರಾಪ್ನೋತಿರಾಮಾಯಣಮಾದಿತಃಪಠನ್ ॥ ೩೮ ॥ ಶೃಣೋತಿಯೋಧ್ಯಾತ್ಮಕರಾಮಸಂಹಿತಾಂಪ್ರಾಪ್ನೋತಿರಾಜಾಭುವಮೃದ್ಧಸಂಪದಂ । ಶತ್ರೂನ್ವಿಜಿತ್ಯಾರಿಭಿರಪ್ರಧರ್ಷಿತೋವ್ಯಪೇತದುಃಖೋವಿಜಯೀಭವೇನ್ನೃಪಃ ॥ ೩೯ ॥ ಸ್ತ್ರಿಯೋಪಿಶೃಣ್ವಂತ್ಯಧಿರಾಮಸಂಹಿತಾಂಭವಂತಿತಾಜೀವಸುತಾಶ್ಚಪೂಜಿತಾಃ । ವಂಧ್ಯಾಪಿಪುತ್ರಂಲಭತೇಸುರೂಪಿಣಂಕಥಾಮಿಮಾಂಭಕ್ತಿಯುತಾಶ್ಶೃಣೋತಿಯಾ ॥ ೪೦ ॥ ಶ್ರದ್ಧಾನ್ವಿತೋಯಶ್ಶೃಣುಯಾತ್ಪಠೇನ್ನರೋವಿಜಿತ್ಯಕೋಪಂಚತಥಾವಿಮತ್ಸರಃ । ದುರ್ಗಾಣಿಸರ್ವಾಣಿವಿಜಿತ್ಯನಿರ್ಭಯೋಭವೇತ್ಸುಖೀರಾಘವ

ದೆಂಬ ಸೂಚನೆಯುಳ್ಳದ್ದಾದ, ರಾಮಾಯಣಂ-ಈ ಅಧ್ಯಾತ್ಮ ರಾಮಾಯಣವು, ಭಾಷಿತಂ-ಹೇಳಲ್ಪಟ್ಟಿತು ॥ ೩೬ ॥ ಮನುಜಃ-ಮನುಷ್ಯನು, ಸಮಾಹಿತಃ-ಸ್ಥಿರ ಮನಸ್ಕನಾಗಿ, ಭಕ್ತ್ಯಾ-ಭಕ್ತಿಯಿಂದ, ಶೃಣೋತಿ-ಕೇಳುತ್ತಾನೋ, ಪರಿತುಷ್ಟಮಾನಸಃ-ಪರಿತುಷ್ಟ-ತೃಪ್ತವಾದ,ಮಾನಸಃ-ಮನಸ್ಸುಳ್ಳವನಾಗಿ, ಭಕ್ತ್ಯಾ-ಭಕ್ತಿಯಿಂದ, ಪಠೇದ್ವಾ-ಪಾರಾಯಣವನ್ನು ಮಾಡಿದ್ದಾಗ್ಯೂ, ಸರ್ವ-ಸಮಸ್ತಗಳಾದ, ಮನೋಗತಾಶಿಷಃ-ಮನೋಗತ-ಮನಸ್ಸಿನಲ್ಲಿ ನೆನಿಸಿದ, ಆಶಿಷಃ-ಶ್ರೇಯಸ್ಸುಗಳನ್ನು, ಸಮಾಪ್ನೋತಿ-ಪಡೆಯುವವನಾಗುತ್ತಾನೆ, ಕ್ಷಣಾತ್-ಕ್ಷಣಕಾಲದಲ್ಲಿಯೇ, ಪಾತಕಕೋಟಿಭಿಃ-ಕೋಟಿ ಸಂಖ್ಯೆಯಾದ ಪಾಪಗಳಿಂದ, ವಿಮುಚ್ಯೇತ-ವಿಮುಕ್ತನಾಗುತ್ತಾನೆ ॥ ೩೭ ॥ ಪ್ರಯತಃ-ಸಾಧನ ಸಂಪನ್ನನಾಗಿ, ಯಃ-ಯಾವ ಮನುಷ್ಯನು, ರಾಮಾಭಿಷೇಕಂ-ರಾಮಚಂದ್ರನ ಪಟ್ಟಾಭಿಷೇಕವನ್ನು, ಶೃಣೋತಿ-ಕೇಳುತ್ತಾನೋ, ಧನಾಭಿಲಾಷೀ-ಧನಾಪೇಕ್ಷೆಯುಳ್ಳವನು, ಮಹದ್ಧನಂ-ಬಹಳವಾದ ದ್ರವ್ಯವನ್ನು,ಲಭತೇ-ಹೊಂದುತ್ತಾನೆ ಪುತ್ರಾಭಿಲಾಷೀ-ಪುತ್ರನಾಗಬೇಕೆಂಬ ಅಪೇಕ್ಷೆಯುಳ್ಳವನು, ರಾಮಾಯಣಂ-ಅಧ್ಯಾತ್ಮರಾಮಾಯಣವನ್ನು, ಆದಿತಃ-ಮೊದಲಿನಿಂದ, ಪಠನ್-ಪಾರಾಯಣಮಾಡಿದವನಾದರೆ, ಆರ್ಯಸಮ್ಮತಂ-ಆರ್ಯ-ಪೂಜ್ಯರಿಗೆ, ಸಮ್ಮತಂ-ಒಪ್ಪಾಗಿರುವವನಾದ, ಸುತಂ-ಮಗನನ್ನು, ಪ್ರಾಪ್ನೋತಿ-ಪಡೆಯುವನು ॥ ೩೮ ॥ ಯಃ-ಯಾವ,ರಾಜಾ-ದೊರೆಯು, ಅಧ್ಯಾತ್ಮಕರಾಮಸಂಹಿತಾಂ-ಅಧ್ಯಾತ್ಮರಾಮಾಯಣವನ್ನು, ಶೃಣೋತಿ-ಕೇಳುತ್ತಾನೋ, ಋದ್ಧ-ಅಭಿವೃದ್ಧಿಯಾಗಿರುವ, ಸಂಪದಂ ಸಂಪತ್ತುಳ್ಳದ್ದಾದ,ಭುವಂ-ಭೂಮಿಯನ್ನು ಪ್ರಾಪ್ನೋತಿ-ಪಡೆಯುತ್ತಾನೆ, ಶತ್ರೂನ್-ಅರಿಗಳನ್ನು, ವಿಜಿತ್ಯ-ಜಯಿಸಿ, ಅರಿಭಿಃ-ಶತ್ರುಗಳಿಂದ, ಅಪ್ರಧರ್ಷಿತಃ-ಜಯಿಸಲ್ಪಡದೆ ಇರುವವನಾಗಿ, ನೃಪಃ ದೊರೆಯು, ವ್ಯಪೇತದುಃಖಃ ವ್ಯಪೇತ-ಹೋದಂಥಾ, ದುಃಖಃ-ದುಃಖವುಳ್ಳವನಾಗಿ, ವಿಜಯೀ ಯಾವಾಗಲೂ ಜಯವುಳ್ಳವನೇ,ಭವೇತ್ ಆದಾನು ॥ ೩೯ ॥ ಸ್ತ್ರಿಯೋಪಿ ಹೆಂಗಸರು, ಅಧಿರಾಮಸಂಹಿತಾಂ ಅಧ್ಯಾತ್ಮರಾಮಾಯಣವನ್ನು, ಶೃಣ್ವಂತಿಯದಿ-ಕೇಳಿದವರಾದರೆ, ತಾಃ-ಅವರುಗಳು, ಪೂಜಿತಾಃ-ಪೂಜ್ಯರಾಗಿಯೂ, ಜೀವಸುತಾಃ-ಜೀವಮಾನ ಪುತ್ರರುಳ್ಳವರಾಗಿಯೂ, ಭವಂತಿ-ಆಗುತ್ತಲಿದ್ದಾರೆ, ಯಾ-ಯಾವ ಹೆಂಗಸು, ಭಕ್ತಿಯುತಾ-ಭಕ್ತಿವುಳ್ಳವಳಾಗಿ, ಇಮಾಂ ಈ, ಕಥಾಂ ಕಥೆಯನ್ನು, ಶೃಣೋತಿ ಕೇಳುತ್ತಾಳೋ, (ಸಾ ಆ ಹೆಂಗಸು) ವಂಧ್ಯಾಪಿ ಬಂಜೆಯಾಗಿದ್ದಾಗ

ಭಕ್ತಿಸಂಯುತಃ ॥ ೪೧ ॥ ಸುರಾಸ್ಸಮಸ್ತಾ ಅಪಿಯಾಂತಿ ತುಷ್ಟಿಂ ತಾಂವಿಘ್ನಾಸ್ಸಮಸ್ತಾ ಅಪಯಾಂತಿ ಶೃಣ್ವತಾಂ । ಅ
ಧ್ಯಾತ್ಮರಾಮಾಯಣಮಾದಿತೋನೃಣಾಂಭವಂತಿಸರ್ವಾ ಅಪಿಸಂಪದಃಪರಾಃ ॥ ೪೨ ॥ ರಜಸ್ವಲಾವಾಯದಿರಾಮತತ್ಪರಾ
ಶೃಣೋತಿರಾಮಾಯಣಮೇತದಾದಿತಃ । ಪುತ್ರಂಪ್ರಸೂತೇರುಷಭಂಚಿರಾಯುಷಂಪತಿವ್ರತಾಲೋಕಸುಪೂಜಿತಾಭವೇತ್ ॥ ೪೩ ॥
ಪ್ರಪೂಜಯಿತ್ವಾತುಯೇಭಕ್ತ್ಯಾನಮಸ್ಕುರ್ವಂತಿನಿತ್ಯಶಃ । ಸರ್ವೈಃಪಾಪೈರ್ವಿನಿರ್ಮುಕ್ತಾಃವಿಷ್ಣೋರ್ಯಾಂತಿಪರಂಪದಂ ॥ ೪೪ ॥
ಅಧ್ಯಾತ್ಮರಾಮಚರಿತಂಕೃತ್ಸ್ನಂಶೃಣ್ವಂತಿಭಕ್ತಿತಃ । ಪಠಂತಿವಾಸ್ವಯಂವಕ್ತ್ರಾತ್ತೇಷಾಂರಾಮಃಪ್ರಸೀದತಿ ॥ ೪೫ ॥

ಕನ್ಯಾ, ಸುರೂಪಿಣಂ-ಸುಂದರನಾದ, ಪುತ್ರಂ-ಮಗನನ್ನು, ಲಭತೇ-ಪಡೆಯುತ್ತಾಳೆ ॥ ೪೦ ॥ ಯಃ-ಯಾವ, ನರಃ-ಮನುಷ್ಯನು, ಶ್ರದ್ಧಾನ್ವಿತಃ-ಆಸ್ತಿಕ್ಯಬುದ್ಧಿಯುಳ್ಳವನಾಗಿ, ವಿಮತ್ಸರಃ-ಮಾತ್ಸರ್ಯವಿಲ್ಲದವನಾಗಿಯೂ ಇರುವವನಾಗಿ, ಕ್ರೋಧಂ-ಕೋಪವನ್ನು, ವಿಹತ್ಯ-ಬಿಟ್ಟು, ಶೃಣುಯಾದ್ಯದಿ-ಕೇಳಿದ್ದೇ ಆದರೆ, ಪಠೇದ್ಯದಿ-ಪಾರಾಯಣವನ್ನು ಮಾಡಿದ್ದಾದರೆ, ಸರ್ವಾಣಿ-ಸಮಸ್ತಗಳಾದ, ದುರ್ಗಾಣಿ-ಕಷ್ಟಗಳನ್ನು, ವಿಜಿತ್ಯ-ಜಯಿಸಿ, ನಿರ್ಭಯಃ-ಅಂಜಿಕೆ ಇಲ್ಲದವನಾಗಿ, ರಾಘವಭಕ್ತಿಸಂಯುತಃ-ರಾಘವ-ರಾಮಚಂದ್ರನಲ್ಲಿ, ಭಕ್ತಿಯಿಂದ, ಸಂಯುತಃ-ಕೂಡಿದವನಾಗಿ, ಸುಖೀ-ಸುಖವುಳ್ಳವನು, ಭವೇತ್-ಆದಾನು ॥ ೪೧ ॥ ಸಮಸ್ತಾಃ-ಎಲ್ಲಾ, ಸುರಾಃ-ದೇವತೆಗಳು, ತುಷ್ಟಿಂ-ಸಂತುಷ್ಟಿಯನ್ನು, ಯಾಂತಿ-ಹೊಂದುತ್ತಾರೆ, ಶೃಣ್ವತಾಂ-ಕೇಳುವವರಿಗೆ, ಸಮಸ್ತಾಃ-ಎಲ್ಲಾ, ವಿಘ್ನಾಃ-ವಿಘ್ನಗಳು, (ಅಂದರೆ ಪ್ರತಿಬಂಧಕ ಸಾಮಗ್ರಿಗಳು,) ಯಾಂತಿ-ಹೋಗುವವು, ಅಧ್ಯಾತ್ಮರಾಮಾಯಣಂ-ಅಧ್ಯಾತ್ಮರಾಮಾಯಣವನ್ನು, ಆದಿತಃ-ಮೊದಲಿನಿಂದ, ಶೃಣ್ವತಾಂ-ಕೇಳುತ್ತಿರುವವರಾದ, ನೃಣಾಂ-ಮನುಷ್ಯರಿಗೆ, ಪರಾಃ-ಉತ್ಕೃಷ್ಟಗಳಾದ, ಸರ್ವಾಃ-ಸಮಸ್ತಗಳಾದ, ಸಂಪದಃ-ಸಂಪತ್ತುಗಳು, ಭವಂತಿ-ಆಗುತ್ತಲಿವೆ ॥ ೪೨ ॥ ರಜಸ್ವಲಾವಾ-ರಜೋದರ್ಶನ ದಿನ ಮೊದಲಾಗಿ ಮೂರು ದಿನಗಳನ್ನು ಬಿಟ್ಟು, ನಾಲ್ಕನೇದಿನದಲ್ಲಿ ಸ್ನಾನಮಾಡಿದ ನಂತರ, ನಾಲ್ಕನೇ ದಿನ ಮೊದಲಾಗಿ ಹನ್ನೆರಡು ದಿನಗಳ ವರಿಗೆ ಉಂಟಾಗಿರುವ ಋತುಕಾಲವುಳ್ಳವಳಾದ ಹೆಂಗಸು, ರಾಮತತ್ಪರಾ-ರಾಮಚಂದ್ರನಲ್ಲಿ ಸ್ಥಿರವಾದ ಮನಸ್ಸುಳ್ಳವಳಾಗಿ, ಏತತ್-ಈ, ರಾಮಾಯಣಂ-ರಾಮಾಯಣವನ್ನು, ಆದಿತಃ-ಮೊದಲಿನಿಂದ, ಶೃಣೋತಿಯದಿ-ಕೇಳುವವಳಾದರೆ, ಋಷಭಂ-ಶ್ರೇಷ್ಠನಾದ, ಚಿರಾಯುಷಂ-ದೀರ್ಘಾಯುಸ್ಸುಳ್ಳವನಾದ, ಪುತ್ರಂ-ಮಗನನ್ನು, ಪ್ರಸೂತೇ-ಹೆರುತ್ತಾಳೆ, ಲೋಕ-ಜನರಿಂದ, ಸುಪೂಜಿತಾ-ಪೂಜಿಸಲ್ಪಟ್ಟವಳಾದ, ಪತಿವ್ರತಾ-ಪತಿಭಕ್ತಿಯುಳ್ಳವಳು, ಭವೇತ್-ಆದಾಳು ॥ ೪೩ ॥ ಯೇ-ಯಾರು, ನಿತ್ಯಶಃ-ಪ್ರತಿದಿನದಲ್ಲಿಯೂ, ಪ್ರಪೂಜಯಿತ್ವಾ-ಪೂಜೆಯನ್ನು ಮಾಡಿ, ಭಕ್ತ್ಯಾ-ಭಕ್ತಿಯಿಂದ, ನಮಸ್ಕುರ್ವಂತಿ-ನಮಸ್ಕಾರವನ್ನು ಮಾಡುತ್ತಾರೋ, ಸರ್ವೈಃ-ಸಮಸ್ತಗಳಾದ, ಪಾಪೈಃ-ಪಾಪಗಳಿಂದ, ವಿನಿರ್ಮುಕ್ತಾಃ-ರಹಿತರಾಗಿ, ವಿಷ್ಣೋಃ-ನಾರಾಯಣಮೂರ್ತಿಯ, ಪರಂಪದಂ-ವೈಕುಂಠವನ್ನು ಕುರಿತು, ಯಾಂತಿ-ಹೋಗುತ್ತಲಿದ್ದಾರೆ ॥ ೪೪ ॥ ಅಧ್ಯಾತ್ಮರಾಮಚರಿತಂ-ಅಧ್ಯಾತ್ಮರಾಮಾಯಣ ಚರಿತ್ರೆಯನ್ನು, ಕೃತ್ಸ್ನಂ-ಸಮಗ್ರವಾಗಿ, ಭಕ್ತಿತಃ-ಭಕ್ತಿಯಿಂದ, ಶೃಣ್ವಂತಿ-ಯಾರು ಕೇಳುತ್ತಾರೋ, ಸ್ವಯಂ-ತಾನು, ವಕ್ತ್ರಾತ್-ಮುಖದಿಂದ, ಪಠಂ

ರಾಮಯೆವಪರಂಬ್ರಹ್ಮತಸ್ಮಿನ್ಸ್ತುಷ್ಟೆಖಿಲಾತ್ಮನಿ । ಧರ್ಮಾರ್ಥಕಾಮಮೋಕ್ಷಾಣಾಂಯದ್ಯದಿಚ್ಛತಿತದ್ಭವೇತ್ ॥ ೪೬ ॥
ಶ್ರೋತವ್ಯಂನಿಯಮೆನೈತದ್ರಾಮಾಯಣಮಖಂಡಿತಂ । ಆಯುಷ್ಯಮಾರೋಗ್ಯಕರಂಕಲ್ಪಕೋಟ್ಯಘನಾಶನಂ ॥೪೭॥ ದೇವಾ
ಶ್ಚಸರ್ವೆತುಷ್ಯಂತಿಗ್ರಹಾಸ್ಸರ್ವೆ ಮಹರ್ಷಯಃ । ರಾಮಾಯಣಸ್ಯಶ್ರವಣೆತುಷ್ಯಂತಿಪಿತರಸ್ತಥಾ ॥ ೪೮ ॥ ಅಧ್ಯಾತ್ಮ
ರಾಮಾಯಣಮೆತದದ್ಭುತಂವೈರಾಗ್ಯವಿಜ್ಞಾನಯುತಂಪುರಾತನಂ । ಪಠಂತಿಶೃಣ್ವಂತಿಲಿಖಂತಿಯೆನರಾಸ್ತೆಷಾಂಭವೆಸ್ಮಿ
ನ್ನಪುನರ್ಭವೋಭವೆತ್ ॥ ೪೯ ॥ ಆಲೋಡ್ಯಾಖಿಲವೇದರಾಶಿಮಸಕೃದ್ಯತ್ತಾರಕಂಬ್ರಹ್ಮತದ್ರಾಮೋವಿಷ್ಣುರಹಸ್ಯಮೂರ್ತಿರಿ

ತಿವಾ-ಪಾರಾಯಣವನ್ನು ಮಾಡುವವರಾದರೆ, ತೇಷಾಂ-ಅವರುಗಳಿಗೆ, ರಾಮಃ-ರಾಮಚಂದ್ರನು, ಪ್ರಸೀದತಿ-ಪ್ರಸನ್ನನಾಗುತ್ತಾನೆ ॥ ೪೫ ॥ ರಾಮಯೆವ-ರಾಮಚಂದ್ರನೇ, ಪರಂ-ಉತ್ಕೃಷ್ಟವಾದ, ಬ್ರಹ್ಮ-ಬ್ರಹ್ಮದೇವನು, ತಸ್ಮಿನ್-ಆ, ಅಖಿಲ-ಸಮಸ್ತ ಪ್ರಾಣಿಗಳಿಗೆ, ಆತ್ಮನಿ-ಅಂತರ್ಯಾಮಿಯಾಗಿರುವನು, ತುಷ್ಟೆ-ತೃಪ್ತನಾಗಲು, ಧರ್ಮಾರ್ಥಕಾಮಮೋಕ್ಷಾಣಾಂ-ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೊಳಗೆ, ಯದ್ಯತ್-ಯಾವ ಯಾವದನ್ನು, ಇಚ್ಛತಿ-ಬಯಸುತ್ತಾನೋ, ತತ್-ಅದು, ಭವೇತ್-ಆದೀತು ॥೪೬॥ ಅಖಂಡಿತಂ-ಸಮಗ್ರವಾದ, ಆಯುಷ್ಯಂ-ಆಯುರ್ವೃದ್ಧಿಕರವಾದ, ಆರೋಗ್ಯಕರಂ-ರೋಗಬಾಧೆಯನ್ನು ಹೋಗಲಾಡಿಸುವ, ಕಲ್ಪಕೋಟ್ಯಘನಾಶನಂ-ಕಲ್ಪಕೋಟಿ-ಕೋಟಿಕಲ್ಪಗಳಿಂದ ಉಂಟಾಗಿರುವ, ಅಘ-ಪಾಪವನ್ನು ಹೋಗಲಾಡಿಸುವದಾದ, ಏತತ್-ಈ, ರಾಮಾಯಣಂ-ಅಧ್ಯಾತ್ಮರಾಮಾಯಣವನ್ನು, ನಿಯಮೆನ-ನಿಯಮಪೂರ್ವಕದಿಂದ, ಶ್ರೋತವ್ಯಂ-ಕೇಳತಕ್ಕದ್ದು ॥೪೭॥ ಸರ್ವೆ-ಸಮಸ್ತರಾದ, ದೇವಾಶ್ಚ-ದೇವತೆಗಳು, ಗ್ರಹಾಃ-ಆದಿತ್ಯಾದಿ ಗ್ರಹಗಳು, ಸರ್ವೆ-ಸಮಸ್ತರಾದ, ಮಹರ್ಷಯಃ-ಮಹರ್ಷಿಗಳು, ತುಷ್ಯಂತಿ-ತೃಪ್ತರಾಗುತ್ತಾರೆ, ರಾಮಾಯಣಸ್ಯ-ರಾಮಾಯಣದ, ಶ್ರವಣೆ-ಕೇಳುವದರಿಂದ, ಪಿತರಃ-ಪಿತೃದೇವತೆಗಳು, ತಥಾ-ಹಾಗೆ, ತುಷ್ಯಂತಿ-ತೃಪ್ತರಾಗುತ್ತಾರೆ ॥ ೪೮ ॥ ಏತತ್-ಈ ಅದ್ಭುತಂ-ಆಶ್ಚರ್ಯಕರವಾದ, ವೈರಾಗ್ಯ-ವೈರಾಗ್ಯದಿಂದ, ಜ್ಞಾನ-ಜ್ಞಾನದಿಂದ, ಯುತಂ-ಕೂಡಿರುವದಾದ, ಪುರಾತನಂ-ಅನಾದಿಯಾಗಿರುವದಾದ, ಅಧ್ಯಾತ್ಮರಾಮಾಯಣಂ-ಅಧ್ಯಾತ್ಮರಾಮಾಯಣವನ್ನು, ಯೆನರಾಃ-ಯಾವ ಮನುಷ್ಯರು, ಶೃಣ್ವಂತಿ-ಕೇಳುತ್ತಾರೊ, ಪಠಂತಿ-ಪಾರಾಯಣವನ್ನು ಮಾಡುತ್ತಾರೊ, ಲಿಖಂತಿ-ಬರೆಯುತ್ತಾರೋ, ತೇಷಾಂ-ಅವರುಗಳಿಗೆ, ಅಸ್ಮಿನ್-ಈ, ಭವೆ-ಸಂಸಾರದಲ್ಲಿ, ಪುನಃ-ತಿರಿಗಿ, ಭವಃ-ಉತ್ಪತ್ತಿಯು, ನಭವೇತ್-ಉಂಟಾಗಲಾರದು ॥೪೯॥ ಭೂತೇಶ್ವರಃ-ಭೂತನಾಥನಾದ, ಶ್ರೀಶಿವನು, ಅಸಕೃತ್-ಬಾರಿಬಾರಿಗೂ, ಅಖಿಲ-ಸಮಸ್ತಗಳಾದ, ವೇದರಾಶಿಂ-ವೇದಗಳ ಸಮೂಹಗಳನ್ನು, ಆಲೋಡ್ಯ-ಪರಿಶೀಲನೆ ಮಾಡಿ, ತಾರಕಂ-ಜನನ ಮರಣ ಪ್ರವಾಹರೂಪವಾದ ಸಂಸಾರದಿಂದ ಬಿಡಿಸುವಂಥಾದ್ದಾದ, ಯತ್-ಯಾವ, ಬ್ರಹ್ಮ-ಬ್ರಹ್ಮಸ್ವರೂಪವುಂಟೋ, ತತ್-ಅದು, ವಿಷ್ಣುರಹಸ್ಯಮೂರ್ತಿಃ-ವಿಷ್ಣು-ನಾರಾಯಣನ, ರಹಸ್ಯ-ಗುಪ್ತವಾದ, ಮೂರ್ತಿಃ-ಸ್ವರೂಪವು, (ಅಥವಾ)ವಿಷ್ಣೋಃ-ವ್ಯಾಪಕನಾದ ಬ್ರಹ್ಮನ, ರಹಸ್ಯ-ಉಪಾಸಕರ ಕಾರ್ಯಾರ್ಥವಾಗಿ ಕಲ್ಪಿತಗಳಾದದ್ದರಿಂದ ರಹಸ್ಯವಾಗಿರುವ ಮೂರ್ತಿಗಳಾದ ಶಿವ, ವಿಷ್ಣು, ಶಂಕರ, ಮತ್ಸ್ಯ, ಕೂರ್ಮ, ಸೂರ್ಯ, ಗಣಪತಿ, ಶಕ್ತಿ, ಮೂರ್ತಿ

ಯೋವಿಜ್ಞಾಯಭೂತೇಶ್ವರಃ । ಉದ್ಧೃತ್ಯಾಖಿಲಸಾರಸಂಗ್ರಹಪದಂಸಂಕ್ಷೇಪತಃಪ್ರಸ್ಫುಟಂ ಶ್ರೀರಾಮಸ್ಯನಿಗೂಢತತ್ವಮಖಿ
ಲಂಪ್ರಾಹಪ್ರಿಯಾಯೈಭವಃ ... ... ... ... ... ॥ ೫೦ ॥

—* ಇತಿಶ್ರೀಮದಧ್ಯಾತ್ಮರಾಮಾಯಣೇ-ಉಮಾಮಹೇಶ್ವರಸಂವಾದೇ-ಯುದ್ಧಕಾಂಡೇ-ಷೋಡಶಸ್ಸರ್ಗಃ. *—

---

ಗಳೆಂದು ಪ್ರಸಿದ್ಧಗಳಾದ ಅವತಾರಗಳೊಳಗೆ,ರಹಸ್ಯಮೂರ್ತಿ ಸಕಲದೇವತಾಸ್ವರೂಪನಾದ್ದರಿಂದ, ಉಪಾಸನಾವಿಷಯದಲ್ಲಿ ತಿಳಿಯತಕ್ಕ ಮೂರ್ತಿ-ಯಾದವನು, ರಾಮಃ-ರಾಮಚಂದ್ರನು, ಇತಿ-ಹೀಗೆ, ವಿಜ್ಞಾಯ-ತಿಳಿದು, ಸಂಕ್ಷೇಪತಃ-ಸಂಗ್ರಹವಾಗಿ, ಅಖಿಲ-ಸಮಸ್ತಗಳಾದ, ಸಾರ-ಸ್ಥಿರವಾದ ಮುಖ್ಯ ಸಾರಭೂತವಾದ, ಪದಂ-ಪದಗಳುಳ್ಳ, ಶ್ರೀರಾಮಸ್ಯ-ರಾಮಚಂದ್ರನ, ನಿಗೂಢ-ಗುಪ್ತವಾದ, ತತ್ವಂ-ನಿಜಸ್ಥಿತಿಯನ್ನು, ಪ್ರಿಯಾಯೈ-ಪ್ರೀತಿಪಾತ್ರಳಾದ ಪಾರ್ವತಿಗೆ, ಸ್ಫುಟಂ-ಸ್ಪಷ್ಟವಾಗಿ, ಪ್ರಾಹ-ಹೇಳಿದನು ... ... ॥ ೫೦ ॥

—** ಇಂತು ಅಧ್ಯಾತ್ಮರಾಮಾಯಣದೊಳು ಉಮಾಮಹೇಶ್ವರಸಂವಾದದಲ್ಲಿ ಯುದ್ಧಕಾಂಡದೊಳು ಹದಿನಾರನೆಯ ಸರ್ಗವು. **—

ಶ್ರೀಮದಧ್ಯಾತ್ಮರಾಮಾಯಣ ಸಮಾಪ್ತವು.

---

ಶ್ರೀ ಸದಾಶಿವಾಯನಮಃ.

# ಶ್ರೀಮದಧ್ಯಾತ್ಮರಾಮಾಯಣ ಮಾಹಾತ್ಮ್ಯವು.

ಜೀವಕ್ಕೆ ಚೈತನ್ಯ ರೂಪಾತ್ಮನಾದ ಜಗದೀಶ್ವರನು ಮತಿಯೆಂಬ ತನ್ನ ಅರ್ಧಾಂಗಿಯಾದ ಪಾರ್ವತೀಗೆ (ಅಧ್ಯಾತ್ಮವೆಂಬ ಸದ್ಯುಕ್ತಿರೊಡಲಾದ ಸಾರದ ರಾಮ ಕಥೆಯನ್ನು ಹೇಳಿದನು. ಅದರ ಮಾಹಾತ್ಮ್ಯವೇನೆಂದರೆ :—ಶ್ಲೋ ॥ ರಾಮೋನಗಚ್ಛತಿನತಿಷ್ಠತಿನಾನುಶೋಚತ್ಯಾಕಾಂಕ್ಷತೆತ್ಯಜತಿನೋನಕರೋತಿಕಿಂಚಿತ್ । ಆನಂದಮೂರ್ತಿರಚಲಃಪರಿಣಾಮಹೀನೋಮಾಯಾಗುಣಾನನುಗತೋಹಿತಥಾವಿಭಾತಿ ॥

ಈ ತಾತ್ಪರ್ಯದಿಂದ ಕರ್ಮೇಂದ್ರಿಯಗಳಾದ ಕರ್ಮಾದಿಗಳಿಗೇ ಸುಜ್ಞಾನೇಂದ್ರಿಯಗಳಾದ ಜ್ಞಾನಾದಿಗಳಿಗೂ ಅಧಿಪತಿಗಳಾದ ದೇವತೆಗಳಿಗೆ ವಿಘ್ನ ವಿಕಾರಿಗಳಾದ ಅಹಂಕಾರವೇ ಮೊದಲಾದ ರಾವಣಾದಿ ರಾಕ್ಷಸರ ಉಪೇಕ್ಷೆಯೆಂಬ ಬಾಧೆಗೋಸ್ಕರವಾಗಿ ಹೃದಯವೆಂಬ ಕ್ಷೀರಾಬ್ಧಿಯಲ್ಲಿ ಅಪೂರ್ಣಾತ್ಮನಾದ ಪರಮಾತ್ಮನನ್ನು ಕುರಿತು ನಿರ್ಮಲವೆಂಬ ಭಕ್ತಿಯಿಂದ ದೇವತೆಗಳು ಸ್ತುತಿಸಲಾಗಿ ಆ ಪರಮಾತ್ಮನು ಭಕ್ತಿಗಾಶ್ರಯವಾದ ವಿರತಿಯೆಂಬ ಅಭಯವನ್ನು ಕೊಟ್ಟು, ಚಿದಾಕಾಶದಲ್ಲಿದ್ದ ಪರಮಾತ್ಮನು ಹೃದಾಕಾಶವೆಂಬ ಅಯೋಧ್ಯಾಪಟ್ಟಣದಲ್ಲಿ ದಶೇಂದ್ರಿಯಗಳಾದ ದಶರಥನಿಂದ ವೇದಗರ್ಭವೆಂಬಾಕೌಸಲ್ಯಾದೇವಿಯ ಗರ್ಭದಲ್ಲಿ ಸ್ಥಾವರ ಜಂಗಮ ಮೊದಲಾದ ಪ್ರಾಣಿಗಳಿಗೂ ಚೈತನ್ಯಾತ್ಮಕವಾದ ಪರಮಾತ್ಮನೆನಿಸುವ ಶ್ರೀರಾಮನೂ, ಜ್ಞಾನ ರೂಪನಾದ ಲಕ್ಷ್ಮಣನೂ, ವಿಚಾರ ರೂಪನಾದ ಭರತನೂ, ತತ್ವಸಿಷ್ಠನಾದ ಶತ್ರುಘ್ನನೂ ಜನಿಸಿ ಶ್ರೀರಾಮಚಂದ್ರನು ವಿಶ್ವಕ್ಕೆ ಮಿತ್ರನಾದ ಜ್ಞಾನಯೋಗವೆಂಬ ವಿ

ಶ್ವಾಮಿತ್ರ ಮುನೀಶ್ವರನ ಬ್ರಹ್ಮಜ್ಞಾನವೆಂಬ ಯಜ್ಞವನ್ನು ಕಾಯ್ದು, ತೃಷ್ಣೆಯೆಂಬ ತಾಟಕಿಯನ್ನು ಸಂಹರಿಸಿ, ಸುಷುಮ್ನೆ
ಯೆಂಬ ಮಿಥಿಲಾ ಪಟ್ಟಣದಲ್ಲಿ ಶ್ರೀರಾಮನು ಪಾಶವೆಂಬ ಧನುವನ್ನು ಮುರಿದು ಶಾಂತ್ಯರೂಪಳಾದ ಸತ್ಯಪಾದ ಸೀತೆಯ ಸಹಿತ
೨೦೫ ವಾಗಿ ರಾಮಚಂದ್ರನು ವ್ಯಸನವೆಂಬ ರಾಜ್ಯವನ್ನು ಬಿಟ್ಟು ಸತ್ಯರೂಪಳಾದ ಸೀತಾದೇವಿಯನ್ನು ಜ್ಞಾನವೆಂಬ ಅಗ್ನಿಯಲ್ಲಿಟ್ಟು,
ಚಿತ್ತವೆಂಬ ಮಾಯಾ ಸೀತೆಯಿಂದ ಜ್ಞಾನ ರೂಪನಾದ ಲಕ್ಷ್ಮಣ ಸಹಿತವಾಗಿ ಪ್ರಾಜ್ಞನೆಂಬ ವಸನವನ್ನು ಧರಿಸಿಕೊಂಡು ವ್ಯಾ
ವಹಾರಿಕ ಪ್ರಾತಿಭಾಸಿಕವೆಂಬ ಕಾನನದಲ್ಲಿ ವಿಸೂಚಕೆಯೆಂಬ ಶೂರ್ಪನಖಿಯನ್ನು ಭಂಗಿಸಿ ಮದೋನ್ಮತ್ತವೆಂಬ ಖರಯೆಂಬ ರಾ
ಕ್ಷಸನೂ, ವಿದ್ಯೋನ್ಮತ್ತ ದೂಷಣನೆಂಬ ರಾಕ್ಷಸನೂ, ವಾಚೋನ್ಮತ್ತ ತ್ರಿಶರ ದೃಷ್ಟ ಶಂಭುಕಾಸುರರೇ ಮೊದಲಾದ ರಾಕ್ಷಸರ
ನ್ನು ಸಂಹರಿಸಲಾಗಿ, ಆಗ ಅಹಂಕಾರನೆಂಬ ರಾಕ್ಷಸನಾದ ರಾವಣನು ಮಾಯೆಯೆಂಬ ಮಾಯಾ ಸೀತೆಯನ್ನು ತೆಗದುಕೊಂಡು ಅ
ಭಿಮಾನವೆಂಬ ಜಟಾಯುವನ್ನು ಸಂಹರಿಸಿ, ಆಕಾಶವೆಂಬ ಲಂಕಾ ಪಟ್ಟಣದಲ್ಲಿ ಸುಕರ್ಮವೆಂಬ ಅಶೋಕ ವನದಲ್ಲಿ ಇರಿಸಲಾಗಿ ಆ ಬ್ರ
ಹ್ಮಣದಿಂದ ರಾಮಚಂದ್ರನು ಕಾಮ ಸಂಕಲ್ಪವೆಂಬ ಕಿಷ್ಕಿಂಧೆಯಲ್ಲಿ ಮಹಾ ಸಂಕಲ್ಪವೆಂಬ ತಾಳಿ ವೃಕ್ಷವನ್ನು ಸಹ್ಮಾರ ಮಾಡಿ ಕ್ಲೇ
ಶವೆಂಬ ವಾಲಿಯನ್ನು ಸಂಹರಿಸಿ, ಸುವಾಣಿಯೆಂಬ ತಾರಾ ದೇವಿಯನ್ನು ಸಂತವಿಸಿ, ಪ್ರಾಣನೆಂಬ ಮುಖ್ಯ ಪ್ರಾಣದಿಂದ ಚಿತ್ತವೆಂ
ಬ ಮಾಯಾ ಸೀತೆಗೆ ಬ್ರಹ್ಮಜ್ಞಾನವೆಂಬ ಯೋಗ ಮುದ್ರಿಕೆಯನ್ನು ಕೊಟ್ಟು, ನಾನಾ ಸಂಕಲ್ಪವೆಂಬ ಅಕ್ಷಯ ಕುಮಾರರ ಮರ್ದಿ
ಸಿ, ಆ ಮೇಲೆ ಸುಗ್ರೀವನು ಬುದ್ಧಿಯೆಂಬ ಜಾಂಬವನ ಪ್ರಾಣನೆಂಬ ಮುಖ್ಯ ಪ್ರಾಣನ, ವ್ಯಾನನೆಂಬ ಅಂಗದನ, ಸಮಾನನೆಂಬ ಗ
ವಯನ, ಉದಾನನೆಂಬ ಗವಾಕ್ಷನ, ಅಪಾನನೆಂಬ ದಧಿಮುಖನ, ನಾಗನೆಂಬ ಪನಸನ, ಕೂರ್ಮನೆಂಬ ನೀಲನ, ಕಿಕೀಲಕನೆಂಬ ಶತ
ವಲಿಯ ಧನಂಜಯನೆಂಬ ನಳನ, ದೇವದತ್ತನೆಂಬ ಸುಶೀರ್ಷಣನೇ ಮೊದಲಾದ ಮುಖ್ಯ ಬಲಗಳೂ, ಇವರ ಕಾಲಾಳುಗಳೂ, ಸು
ಚರಿತ್ರನೆಂಬ ಸುಮುಖ, ಮಧುರನೆಂಬ ಮಣ್ವಾಕ, ರಸನೆಂಬ ರೌದ್ರ, ಭಯಹರನಾದ ಭೈರವ, ಯುಕ್ತಹಾರನೆಂಬ ವಿಗ್ರಹರ, ಧೈರ್ಯ
ನೆಂಬ ಧವ, ಸಮಾನನೆಂಬ ಕುಮುದ, ಜಯನೆಂಬ ನುಕೇಸರಿ, ಶ್ರದ್ಧೆಯೆಂಬ ಮುದ್ರಿತ, ಲಕ್ಷಣನೆಂಬಗ್ನಿ ಕುಮಾರ, ಸುವಾಸನೆಂಬ
ಗಂಧಮಾದನ, ಭವರೋಗವೈದ್ಯನೆಂಬ ತಿಮಿರ, ಯೋಗವೆಂಬ ಗಜಮುಖರೇ ಮೊದಲಾದ ಕಪಿನಾಯಕರ ಕೂಡಿಕೊಂಡು ರೇಚಕ

ಪೂರಕವೆಂಬ ಮಾರ್ಗದಲ್ಲಿ, ಧಾತುವೆಂಬ ಸಮುದ್ರದಲ್ಲಿ, ವಾಸನವೆಂಬ ಪರ್ವತದಿಂದ ಸೇತುವನ್ನು ಕುಂಭದಲ್ಲಿ ಕಟ್ಟಿ, ತ್ರಿಕೂಟಾಚಲ ಪರಿಮಿತ ಲಕ್ಷಿತವಾದ ಆಕಾಶವೆಂಬ ಲಂಕಾ ಪಟ್ಟಣಕ್ಕೆ ಹೋಗಿ, ಅಲ್ಲಿರುವ ಹಂಕಾರನೆಂಬ ರಾಕ್ಷಸನಾದ ರಾವಣನು, ಅಜ್ಞಾನವೆಂಬ ಕುಂಭಕರ್ಣನು, ಕ್ರೋಧನೆಂಬ ಇಂದ್ರಜಿತು, ಮದನೆಂಬ ಅತಿಕಾಯನೂ, ಮೋಹನೆಂಬ ಮಾರಿ ಮುಖನೂ, ಮಾತ್ಸರ್ಯನೆಂಬ ಮೊಕ ರಾಕ್ಷಸ, ಕಾಮನೆಂಬ ಕಬಂಧನ, ಲೋಭನೆಂಬ ಕರಕಾಸುರ, ಮತ್ತು ಅಷ್ಟಮದವೆಂಬ ಆನೆಗಳೂ, ಕರ್ಕಶವೆಂಬ ಕುದುರೆಗಳೂ, ಚಂಚಲವೆಂಬ ರಥಗಳೂ, ಸಂಶಯನೆಂಬ ಪಕ್ಷಿಗಳೂ, ಅಸ್ಥೈರ್ಯವೆಂಬ ಖಡ್ಗಗಳೂ, ಅನಾಚಾರವೆಂಬ ಆಚಾರಗಳೂ, ಅಪಸ್ವರವೆಂಬ ವಾದ್ಯಗಳೂ, ಅಕೀರ್ತಿಯೆಂಬ ಕಾಹಳೆಗಳೂ, ಅಪಚಾರವೆಂಬ ಉಪಚಾರಗಳೂ, ಬಂತೀ ರಿಪುರಾಕ್ಷಸರ ಸಮೂಹವನ್ನೂ ಸಹ್ಮಾರ ಮಾಡಿ ತದನಂತರ ಶ್ರೀರಾಮಚಂದ್ರನು ವಿವೇಕನೆಂಬ ವಿಭೀಷಣನಿಗೆ ಆ ಲಂಕಾ ಪಟ್ಟವನ್ನು ಕಟ್ಟಿಸಿ, ಶ್ರೀವೆಯೆಂಬ ಮಂಡೋದರಿಗೆ ಅಭಯವನ್ನು ಕೊಟ್ಟು, ಅನಂತರ ಶ್ರೀರಾಮಚಂದ್ರನು ಚಿತ್ತವೆಂಬ ಮಾಯಾ ಸೀತೆಯನ್ನು ತೆಗದುಕೊಂಡು ಜ್ಞಾನಾಗ್ನಿಯಿಂದ ಶೋಧಿಸಿ ಸತ್ಯವಾದ ನಿಜ ಸೀತಾದೇವಿಯಿಂದ ಹೃದಾಕಾಶವೆಂಬ ಅಯೋಧ್ಯಾ ಪಟ್ಟಣಕ್ಕೆ ಬಂದು ಕುಂಡಲೀಯೆಂಬ ಸಿಹ್ಮಾಸನಾರೂಢನಾಗಿ ಸತ್ಯವೆಂಬ ಸುಖದಿಂದ ರಾಜ್ಯವನ್ನಾಳಿ ಆ ಮೇಲೆ ಚಿದಾಕಾಶವೆಂಬ ನಿಜ ರಾಜ್ಯದಲ್ಲಿ ನಿಷ್ಕಳಂಕನಾಗಿಯೂ ನಿರಾಮಯನಾಗಿಯೂ ಶ್ರೀರಾಮಚಂದ್ರನು ಇದ್ದನೆಂದು ಜಗದೀಶ್ವರನು ಜಗದೀಶ್ವರಿಯಾದ ಪಾರ್ವತಿಗೆ ಹೇಳಿದನೆಂಬಲ್ಲಿಗೆ ಶ್ರೀಮದಧ್ಯಾತ್ಮ ರಾಮಾಯಣ ಸಂಪೂರ್ಣವು.

ಸಾ ॥ ಕಾ ॥ ಫುಟ್ಟಪ್ಪ, ಯಾನೆ ತಿರ್ಮಲೈಯ್ಯ.

☞ ಈ ಅಧ್ಯಾತ್ಮ ಪುಸ್ತಕವನ್ನು ಕಾನಲೆ ಪುಟ್ಟಪ್ಪ ಯಾನೆ ತಿರ್ಮಲೈಯ್ಯನವರು, ಬೆಂಗಳೂರು ಹ ॥ ರಾಮೈಯ್ಯನವರು ಇವರುಗಳ ಸೈನು ಇಲ್ಲದೆ ಯಾರೂ ತೆಗದು ಕೊಳ್ಳಕೂಡದು. ಹಾಗೆ ಯಾರು ಸೈನು ಇಲ್ಲದ ಪುಸ್ತಕ ಇಡುತ್ತಾರೋ ಅವರು ಕಳವಿನ ಛಾರ್ಜಿಗೆ ಗುರಿಯಾಗುವರು.

ಅಥ ಶ್ರೀಮದಧ್ಯಾತ್ಮರಾಮಾಯಣೇ

ಉತ್ತರಕಾಂಡ ಪ್ರಾರಂಭಃ.

ಶ್ರೀಸದಾಶಿವಾಯನಮಃ.

# ಶ್ರೀಮದಧ್ಯಾತ್ಮರಾಮಾಯಣೇ-ಉತ್ತರಕಾಂಡ ಪ್ರಾರಂಭಃ.

ಮೂ॥ ಜಯತಿರಘುವಂಶತಿಲಕಃಕೌಸಲ್ಯಾಹೃದಯನಂದನೋರಾಮಃ । ದಶವದನನಿಧನಕಾರೀದಾಶರಥಿಃ

ಪುಂಡರೀಕಾಕ್ಷಃ ... ... ... ॥೧॥

ಟೀ॥ ರಘುವಂಶತಿಲಕಃ-ರಘುಕುಲತಿಲಕಪ್ರಾಯನಾದ, ಕೌಸಲ್ಯಾಹೃದಯನಂದನಃ-ಕೌಸಲ್ಯಾ-ಕೌಸಲ್ಯಾದೇವಿಯ, ಹೃದಯ-ಮನಸ್ಸಿಗೆ, ನಂದನಃ-ಸಂತೋಷವನ್ನುಂಟುಮಾಡುತ್ತಿರುವ, ದಶವದನನಿಧನಕಾರೀ-ದಶವದನ-ರಾವಣಾಸುರನ, ನಿಧನ-ಸಂಹಾರವನ್ನು, ಕಾರೀ-ಮಾಡಿದ, ಪುಂಡರೀಕಾಕ್ಷಃ-ಕಮಲಗಳೋಪಾದಿಯಲ್ಲಿರುವ ನೇತ್ರಗಳುಳ್ಳ, ದಾಶರಥಿಃ-ದಶರಥ ಪುತ್ರನಾದ, ರಾಮಃ-ಶ್ರೀರಾಮನು, ಜಯತಿ - ಸರ್ವೋತ್ಕೃಷ್ಟನಾಗಿಧಾನೆ. ... ॥೧॥

ಈ ಪರಿಯಾಗಿ ಪಾರ್ವತೀ ದೇವಿಯು ಸ್ತುತಿಯಂ ಗೈದು ಪರಮೇಶ್ವರನಂ ಕುರಿತು ಪ್ರಶ್ನೆಯಂಗೈಯ್ಯುವಳದೆಂತೆನೆ.—

ಮೂ॥ ಪಾರ್ವತ್ಯುವಾಚ ॥ ಅಥರಾಮಃಕಿಮಕರೋತ್ಕೌಸಲ್ಯಾನಂದವರ್ಧನಃ । ಹತ್ವಾಮೃಧೇರಾವಣಾ

ದೀನ್ರಾಕ್ಷಸಾನ್ಭೀಮವಿಕ್ರಮಃ ... ... ॥೧॥

ಟೀ॥ ಕೌಸಲ್ಯಾನಂದವರ್ಧನಃ-ಕೌಸಲ್ಯಾದೇವಿಗೆ ಸಂತೋಷವಂ ವೃದ್ಧಿಗೊಳಿಸುತ್ತಿರುವ, ಭೀಮವಿಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ರಾಮಃ-ಶ್ರೀರಾಮನು, ಮೃಧೇ-ಕಾಳಗದಲ್ಲಿ, ರಾವಣಾದೀನ್-ರಾವಣನೇ ಮೊದಲಾಗಿಉಳ್ಳ, ರಾಕ್ಷಸಾನ್-ರಕ್ಕಸರನ್ನು, ಹತ್ವಾ-ಕೊಂದು, ಅಥ-ಬಳಿಕ, ಕಿಮಕರೋತ್-ಯೇನು ಮಾಡಿದನು ॥೨॥

ಮೂ॥ ಅಭಿಷಿಕ್ತಸ್ತ್ವಯೋಧ್ಯಾಯಾಂಸೀತಯಾಸಹರಾಘವಃ। ಮಾಯಾಮಾನುಷತಾಂಪ್ರಾಪ್ಯಕತಿವರ್ಷಾಣಿಭೂತಲೆ॥

ಸ್ಥಿತವಾನ್ಲೀಲಯಾದೇವಃಪರಮಾತ್ಮಾ ಸನಾತನಃ ॥ ಅತ್ಯಜನ್ಮಾನುಷಂಲೋಕಂಕಥಮಂತೇರಘೂದ್ವಹಃ ॥೨॥
ಏತದಾಖ್ಯಾಹಿಭಗವನ್ಶ್ರದ್ಧತ್ಯಾಮಮಪ್ರಭೋ । ಕಥಾಪೀಯೂಷಮಾಸ್ವಾದ್ಯತೃಷ್ಣಾಮೇತೀವವರ್ಧತೇ ॥೪॥
ರಾಮಚಂದ್ರಸ್ಯಭಗವನ್ಬ್ರೂಹಿವಿಸ್ತರಶಃಕಥಾಂ॥ ... ... ॥೪೫॥

ಟೀ॥ ರಾಘವಃ-ಶ್ರೀರಾಮನು, ಅಯೋಧ್ಯಾಯಾಂ-ಅಯೋಧ್ಯಾಪಟ್ಟಣದಲ್ಲಿ, ಸೀತಯಾಸಹ-ಸೀತಾದೇವಿಯೊಡನೆ, ಅಭಿಷಿಕ್ತಃ-ಪಟ್ಟಾಭಿಷಿಕ್ತನಾಗಿ, ಮಾಯಾಮಾನುಷತಾಂ-ಮಾಯಾಮನುಷ್ಯತ್ವವನ್ನು, ಪ್ರಾಪ್ಯ-ಹೊಂದಿ, ಭೂತಲೇ-ಭೂಪ್ರದೇಶದಲ್ಲಿ, ಕತಿವರ್ಷಾಣಿ-ಎಷ್ಟು ಸಂವತ್ಸರಗಳು (ಸ್ಥಿತವಾನ್-ಇದ್ದನು) ॥೧॥ ಸನಾತನಃ-ಅನಾದಿಸಿದ್ಧನಾದ, ಪರಮಾತ್ಮಾ-ಪರಮಾತ್ಮಸ್ವರೂಪನಾದ, ರಘೂದ್ವಹಃ-ರಘುವಂಶದಲ್ಲಿ ಸಂಜನಿಸಿದ, ದೇವಃ-ಶ್ರೀರಾಮನು, ಲೀಲಯಾ-ವಿಲಾಸದಿಂದ,ಅಂತೇ - ತುದಿಯಲ್ಲಿ,ಮಾನುಷಂ ಲೋಕಂ-ಮನುಷ್ಯಲೋಕವನ್ನು, ಕಥಂ-ಹ್ಯಾಗೆ, ಅತ್ಯಜತ್-ಬಿಟ್ಟನು॥೨॥ ಹೇ ಭಗವನ್-ಎಲೈ ಪೂಜ್ಯನೇ, ಹೇ ಪ್ರಭೋ-ಎಲೈ ಸ್ವಾಮಿಯೇ, ಶ್ರದ್ಧತ್ಯಾಃ-ಆಸ್ತಿಕ್ಯಮತಿಯುಳ್ಳ, (ಅಂದರೆ ಈಕಾರ್ಯವಂ ಗೈಯ್ಯೋಣದರಿಂದ ಇಂತಾ ಫಲಮುಂಟಾಗುವದೆಂಬ ನಂಬಿಕೆಯುಳ್ಳ,) ಮಮ-ನನಗೆ, ಏತತ್-ಇದನ್ನು, ಆಖ್ಯಾಹಿ-ಹೇಳು,ಕಥಾಪೀಯೂಷಂ-ಶ್ರೀರಾಮಕಥೆಯೆಂಬ ಅಮೃತವನ್ನು, ಆಸ್ವಾದ್ಯ-ರುಚಿಯಾಗಿರುವಂತೆ ಪಾನಮಾಡಿ, ಅತೀವ- ಬಹಳವಾಗಿ, ಮೇ-ನನಗೆ, ತೃಷ್ಣಾ-ದಾಹವು,ವರ್ಧತೇ-ವೃದ್ಧಿಯಂ ಪಡೆಯುತ್ತದೆ, ಹೇ ಭಗವನ್-ಎಲೈಪೂಜ್ಯನೇ, ರಾಮಚಂದ್ರಸ್ಯ-ಚಂದಿರನಂತೆ ಆಹ್ಲಾದಕರನಾದ ಶ್ರೀರಾಮನ, ಕಥಾಂ-ಚರಿತ್ರೆಯನ್ನು, ವಿಸ್ತರಶಃ-ವಿಸ್ತಾರವಾಗಿ, ಬ್ರೂಹಿ-ಹೇಳು. ॥೪॥

ಎಂಬದಾಗಿ ಪಾರ್ವತೀದೇವಿಯು ಪ್ರಶ್ನೆಯಂ ಗೈಯ್ಯಲು, ಪರಮೇಶ್ವರನು ಅದಕ್ಕೆ ಉತ್ತರವಂ ಕೊಡುವನೆಂತೆನೆ.—

ಮೂ॥ಪರಮೇಶ್ವರ ಉವಾಚ ॥ ರಾಕ್ಷಸಾನಾಂವಧಂಕೃತ್ವಾರಾಜ್ಯಂರಾಮಉಪಸ್ಥಿತೇ । ಆಯಯುರ್ಮುನ
ಯಸ್ಸರ್ವೇಶ್ರೀರಾಮಮಭಿನಂದಿತುಂ ... ... ॥೫॥

ಟೀ॥ ರಾಮೇ-ಶ್ರೀರಾಮನು, ರಾಕ್ಷಸಾನಾಂ-ರಕ್ಕಸರ, ವಧಂ-ಸಂಹಾರವನ್ನು, ಕೃತ್ವಾ-ಮಾಡಿ, ರಾಜ್ಯಂ-ರಾಜ್ಯಾಧಿಪತ್ಯವನ್ನು, ಉಪಸ್ಥಿತೇಸತಿ, ಹೊಂದಿದವನಾಗುತಿರಲೀಕಾಗಿ, ಸರ್ವೇ-ಸಮಸ್ತರಾದ, ಮುನಯಃ-ಋಷಿಗಳು, ಶ್ರೀರಾಮಂ-ಸಂಪದ್ಯುಕ್ತನಾದ ರಾಮನನ್ನು, ಅಭಿನಂದಿತುಂ- ಸಂತೋಷಗೊಳಿಸುವದಕ್ಕೋಸುಗ, ಆಯಯುಃ-ಬಂದರು. ... ... ... ... ॥೫॥

ಅವರುಗಳುಯಾರೆಂದರೆ.—

ಮೂ॥ ವಿಶ್ವಾಮಿತ್ರೋಸಿತಃಕಣ್ವೋದುರ್ವಾಸಾಭೃಗುರಂಗಿರಾಃ। ಕಶ್ಯಪೋವಾಮದೇವೋತ್ರಿಸ್ತಥಾಸಪ್ತರ್ಷಯೋಮಲಾಃ॥

ಟೀ॥ ವಿಶ್ವಾಮಿತ್ರಃ-ವಿಶ್ವಾಮಿತ್ರಮುನಿಯು, ಅಸಿತಃ-ಅಸಿತನೆಂಬಋಷಿಯು, ಕಣ್ವಃ-ಕಣ್ವನೆಂಬತಾಪಸನು, ದುರ್ವಾಸಾಃ-ದೂರ್ವಾಸಮುನಿಯು, ಭೃಗುಃ-ಭೃಗುಋಷಿಯು, ಅಂಗಿರಾಃ-ಅಂಗಿರಸ್ಸೆಂಬ ಮುನಿಯು, ಕಶ್ಯಪಃ-ಕಶ್ಯಪನು, ವಾಮದೇವಃ-ವಾಮದೇವನು, ಅತ್ರಿಃ-ಅತ್ರಿಋಷಿಯು, ತಥಾ-ಹಾಗೆ,ಅಮಲಾಃ- ನಿರ್ಮಲಚಿತ್ತರಾದ, ಸಪ್ತರ್ಷಯಃ-ಸಪ್ತಋಷಿಗಳು, ಆಯಯುಃ-ಬಂದರು. ॥೬॥

ಮೂ॥ ಅಗಸ್ತ್ಯಸ್ಸಹಶಿಷ್ಯೈಶ್ಚ ಮುನಿಭಿಸ್ಸಹಿತೋಭ್ಯಗಾತ್। ದ್ವಾರಮಾಸಾದ್ಯರಾಮಸ್ಯದ್ವಾರಪಾಲಮಥಾಬ್ರವೀತ್॥೭॥

ಟೀ॥ ಅಗಸ್ತ್ಯಃ-ಅಗಸ್ತ್ಯಮುನಿಯು, ಶಿಷ್ಯೈಃ-ಶಿಷ್ಯರಿಂದಲು,ಮುನಿಭಿಶ್ಚ ಸಹ-ಋಷಿಗಳಿಂದಲು ಸಹ, ಸಹಿತಃ-ಕೂಡಿದವನಾಗಿ, ಅಭ್ಯಗಾತ್-ಬಂದನು, ರಾಮಸ್ಯ- ಶ್ರೀರಾಮನ, ದ್ವಾರಂ-ಬಾಗಿಲನ್ನು, ಆಸಾದ್ಯ-ಹೊಂದಿ, ಅಥ-ಬಳಿಕ, ದ್ವಾರಪಾಲಂ-ಬಾಗಿಲುಕಾಯುವ ಭಂಟನನ್ನು ಕುರಿತು, ಅಬ್ರವೀತ್-ನುಡಿದನು. ॥೭॥

ಮೂ॥ ಬ್ರೂಹಿರಾಮಾಯಮುನಯಸ್ಸಮಾಗತ್ಯಬಹಿಃಸ್ಥಿತಾಃ। ಅಗಸ್ತ್ಯಪ್ರಮುಖಾಸ್ಸರ್ವೇ ಆಶೀರ್ಭಿರಭಿನಂದಿತುಂ॥೮॥

ಟೀ॥ ಅಗಸ್ತ್ಯಪ್ರಮುಖಾಃ-ಅಗಸ್ತ್ಯನೇ ಮೊದಲಾಗಿಉಳ್ಳ, ಸರ್ವೇ-ಸಮಸ್ತರಾದ, ಮುನಯಃ-ಋಷಿಗಳು, ಆಶೀರ್ಭಿಃ-ಆಶೀರ್ವಾದಗಳಿಂದ, ಅಭಿನಂದಿತುಂ- ಸಂತೋಷಗೊಳಿಸುವದಕ್ಕೋಸ್ಕರ, ಸಮಾಗತ್ಯ-ಬಂದು, ಬಹಿಃ-ಹೊರಗೆ, ಸ್ಥಿತಾಃ-ನಿಂತಿಧಾರೆ, (ಇತಿ-ಇಂತೆಂದು) ರಾಮಾಯ-ಶ್ರೀರಾಮನಿಗೆ, ಬ್ರೂಹಿ-ಹೇಳು. ॥೮॥

ಮೂ॥ ಪ್ರತೀಹಾರಸ್ತತೋರಾಮಂಅಗಸ್ತ್ಯವಚನಾದ್ದ್ರುತಂ। ನಮಸ್ಕೃತ್ವಾಬ್ರವೀದ್ವಾಕ್ಯಂವಿನಯಾವನತಃಪ್ರಭುಂ॥ ಕೃತಾಂಜಲಿರುವಾಚೇದಮಗಸ್ತ್ಯೋಮುನಿಭಿಸ್ಸಹ। ದೇವತ್ವದ್ದರ್ಶನಾರ್ಥಾಯಪ್ರಾಪ್ತೋಬಹಿರುಪಸ್ಥಿತಃ ॥೧೦॥

ಟೀ॥ ಪ್ರತೀಹಾರಃ-ದ್ವಾರಪಾಲಕನು, ತತಃ-ಬಳಿಕ, ಅಗಸ್ತ್ಯವಚನಾತ್-ಅಗಸ್ತ್ಯಮುನಿಯ ಮಾತಿನದೆಸೆಯಿಂದ, ದ್ರುತಂ- ಶೀಘ್ರವಾಗಿ, ಪ್ರಭುಂ-,ಒಡೆಯನಾದ, ರಾಮಂ-ಶ್ರೀರಾಮನನ್ನು ಕುರಿತು, ನಮಸ್ಕೃತ್ವಾ-ವಂದಿಸಿ, ವಿನಯಾವನತಃ-ನಮ್ರಭಾವದಿಂದ ಬೊಗ್ಗಿದವನಾಗಿ, ವಾಕ್ಯಂ-ವಚನವನ್ನು, ಅಬ್ರವೀತ್- ನುಡಿದನು, ಹೇ ದೇವ-ಎಲೈ ಸ್ವಾಮಿಯೆ, ಅಗಸ್ತ್ಯಃ-ಅಗಸ್ತ್ಯಋಷಿಯು, ಮುನಿಭಿಸ್ಸಹ-ಋಷಿಗಳೊಡನೆ, ತ್ವದ್ದರ್ಶನಾರ್ಥಾಯ-ನಿನ್ನ ದರ್ಶನಾರ್ಥವಾಗಿ, ಪ್ರಾಪ್ತಃ-ಬಂದವನಾಗಿ, ಬಹಿಃ-ಹೊರಗೆ, ಉಪಸ್ಥಿತಃ-ನಿಂತಿಧಾನೆ, ಇತಿ-ಇಂತೆಂದು, ಕೃತಾಂಜಲಿಃ-ಅಂಜಲಿಬದ್ಧನಾಗಿ, ಇದಂ-ಈ ವಚನವನ್ನು, ಉವಾಚ-ಹೇಳಿದನು. ॥೧೦॥

ಮೂ॥ ತಮುವಾಚದ್ವಾರಪಾಲಂಪ್ರವೇಶಯಯಥಾಸುಖಂ। ... ॥೧೧॥

ಟೀ॥ (ರಾಮಃ-ಶ್ರೀರಾಮನು, ) ಯಥಾಸುಖಂ-ಸುಖವಾಗಿ, ಪ್ರವೇಶಯ-ಪ್ರವೇಶಮಾಡಿಸು, (ಇತಿ-ಇಂತೆಂದು,) ತಂದ್ವಾರಪಾಲಂ-ಆದ್ವಾರಪಾಲಕನಂ ಕುರಿತು, ಉವಾಚ-ನುಡಿದನು. ॥೧೧॥

ಮೂ॥ ಪೂಜಿತಾವಿವಿಶುರ್ವೇಶ್ಮ ನಾನಾರತ್ನವಿಭೂಷಿತಂ । ದೃಷ್ಟ್ವಾರಾಮೋಮುನಿಶ್ಶೀಘ್ರಂಪ್ರತ್ಯುತ್ಥಾಯಕೃತಾಂಜಲಿಃ॥ಪಾದ್ಯಾರ್ಘ್ಯಾದಿಭಿರಾಪೂಜ್ಯಗಾಂನಿವೇದ್ಯಯಥಾವಿಧಿ। ನತ್ವಾತೇಭ್ಯೋದದಾದಿವ್ಯಾನ್ಯಾಸನಾನಿಯಥಾರ್ಹತಃ ॥೧೩॥

ಟೀ॥ ಪೂಜಿತಾಃ-ದ್ವಾರಪಾಲಕರಿಂದ ಆದರಿಸಲ್ಪಟ್ಟ ಋಷಿಗಳು, ನಾನಾರತ್ನವಿಭೂಷಿತಂ-ನಾನಾ-ಅನೇಕಬಗೆಗಳಾದ, ರತ್ನ-ರತ್ನಗಳಿಂದ, ವಿಭೂಷಿತಂ-ಅಲಂಕೃತವಾದ, ವೇಶ್ಮ-ಅರಮನೆಯನ್ನು, ವಿವಿಶುಃ-ಹೊಕ್ಕರು, ರಾಮಃ-ಶ್ರೀರಾಮನು, ಮುನೀನ್-ಋಷಿಗಳನ್ನು, ದೃಷ್ಟ್ವಾ-ಕಂಡು, ಶೀಘ್ರಂ-ತ್ವರೆಯಾಗಿ, ಪ್ರತ್ಯುತ್ಥಾಯ-ಪ್ರತ್ಯುತ್ಥಾನಮಂಗೈದು, ಕೃತಾಂಜಲಿಃ-ಅಂಜಲಿಬದ್ಧನಾಗಿ, ಪಾದ್ಯಾರ್ಘ್ಯಾದಿಭಿಃ-ಪಾದ್ಯವು ಅರ್ಘ್ಯವೇ ಮೊದಲಾದ ಉಪಚಾರಗಳಿಂದ, ಆಪೂಜ್ಯ-ಪೂಜಿಸಿ, ಯಥಾವಿಧಿ- ಯಥಾಶಾಸ್ತ್ರವಾಗಿ, ಗಾಂಚ-ಗೋವಿನನ್ನು ಸಹ, ನಿವೇದ್ಯ-ಸಮರ್ಪಿಸಿ, ನತ್ವಾ-ನಮಸ್ಕರಿಸಿ, ತೇಭ್ಯಃ-ಆ ಋಷಿಗಳಿಗೆ, ದಿವ್ಯಾನಿ-ಉತ್ತಮವಾದ, ಆಸನಾನಿ-ಪೀಠಗಳನ್ನು, ಯಥಾರ್ಹತಃ-ಯಥಾಯೋಗ್ಯವಾಗಿ, ದದೌ-ಕೊಟ್ಟನು. ॥೧೩॥

ಮೂ॥ಉಪವಿಷ್ಟಾಃಪ್ರಹೃಷ್ಟಾಶ್ಚ ಮುನಯೋರಾಮಪೂಜಿತಾಃ। ಸಂಪೃಷ್ಟಕುಶಲಾಸ್ಸರ್ವೇರಾಮಂಕುಶಲಮಬ್ರುವನ್ ॥೧೪॥

ಟೀ॥ ಮುನಯಃ-ಋಷಿಗಳು, ರಾಮಪೂಜಿತಾಃ-ಶ್ರೀರಾಮನಿಂದ ಪೂಜಿಸಲ್ಪಟ್ಟವರಾಗಿ, ಉಪವಿಷ್ಟಾಃ-ಕುಳಿತುಕೊಂಡರು, ಪ್ರಹೃಷ್ಟಾಶ್ಚ- ಸಂತೋಷವನ್ನು ಹೊಂದಿದರು, ಸರ್ವೇ-ಎಲ್ಲರು, ಸಂಪೃಷ್ಟಕುಶಲಾಃ-ಕೇಳಲ್ಪಟ್ಟ ಕುಶಲಮುಳ್ಳವರಾಗಿ, ರಾಮಂ-ಶ್ರೀರಾಮನಂಕುರಿತು, ಕುಶಲಂ-ಕ್ಷೇಮವನ್ನು, ಅಬ್ರುವನ್-ನುಡಿದರು ॥೧೪॥

ಮೂ॥ಕುಶಲಂತೇಮಹಾಬಾಹೋಸರ್ವತ್ರರಘುನಂದನ । ದಿಷ್ಟ್ಯಾದಾನೀಂಪ್ರಪಶ್ಯಾಮೋಹತಶತ್ರುಮರಿಂದಮ॥೧೫॥

ಟೀ॥ ಹೇ ರಘುನಂದನ-ಎಲೈ ರಘುಕುಲನಂದಕರನೆ, ಹೆ ಮಹಾಬಾಹೋ-ಎಲೈ ಮಹಾ ಭುಜಪರಾಕ್ರಮಿಯೆ, ಸರ್ವತ್ರ-ಸರ್ವವಿಷಯದಲ್ಲಿಯು, ತೇ-ನಿನಿಗೆ,ಕುಶಲಂ-ಕ್ಷೇಮವೆ, ಹೆ ಅರಿಂದಮ-ಎಲೈ ಶತ್ರುಸಂಹಾರಕನೆ, ಇದಾನೀಂ-ಈಗ, ತ್ವಾಂ-ನಿನ್ನನ್ನು, ದಿಷ್ಟ್ಯಾ-ದೈವಾಧೀನದಿಂದ, ಹತಶತ್ರುಂ-ಸಂಹರಿಸಲ್ಪಟ್ಟ ಶತ್ರುಗಳುಳ್ಳವನನ್ನಾಗಿ, ಪ್ರಪಶ್ಯಾಮಃ-ಕಂಡೆವು. ॥೧೫॥

ಮೂ|| ನಹಿಭಾರಸ್ಸತೇರಾಮರಾವಣೋರಾಕ್ಷಸೇಶ್ವರಃ। ಸಧನುಸ್ತ್ವಂಹಿಲೋಕಾಂಸ್ತ್ರೀನ್ವಿಜೇತುಂಶಕ್ತ ಏವಹಿ ||೧೬||

ಟೀ|| ಹೇರಾಮ-ಎಲೈ ಶ್ರೀರಾಮನೆ, ರಾಕ್ಷಸೇಶ್ವರಃ-ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ತೇ-ನಿನಿಗೆ, ಭಾರಃ-ಭಾರವು,ನಹಿ-ಅಲ್ಲವೇಅಲ್ಲ,ಹಿಯಸ್ಮಾತ್-ಯಾವಕಾರಣದ ದೆಸೆಯಿಂದ, ತ್ವಂ-ನೀನು, ಸಧನುಃ-ಧನುರ್ಬಾಣಗಳಿಂದೊಡಗೂಡಿದವನಾದರೆ, ತ್ರೀನ್ಲೋಕಾನ್-ಮೂರುಲೋಕಗಳನ್ನು, ವಿಜೇತುಂ-ಜಯಿಸುವದಕ್ಕೋಸ್ಕರ, ಶಕ್ತ ಏವಹಿ-ಸಮರ್ಥನಾಗಿಯೆಇದ್ದೀಯೆಯೋ ... .. ||೧೬||

ಮೂ||ದಿಷ್ಟ್ಯಾತ್ವಯಾಹತಾಸ್ಸರ್ವೇರಾಕ್ಷಸಾರಾವಣಾದಯಃ। ಸಹ್ಯಮೇತನ್ಮಹಾಬಾಹೋರಾವಣಸ್ಯನಿಬರ್ಹಣಂ।
ಅಸಹ್ಯಮೇತತ್ಸಂಪ್ರಾಪ್ತಂರಾವಣೇರ್ಯನ್ನಿಷೂದನಂ ... ... ||೧೭||

ಟೀ|| ಹೇಮಹಾಬಾಹೋ-ಎಲೈಮಹಾಭುಜಪರಾಕ್ರಮಶಾಲಿಯೆ,ರಾವಣಾದಯಃ-ರಾವಣಾಸುರನೇಮೊದಲಾಗಿಉಳ್ಳ, ಸರ್ವೇ-ಸಮಸ್ತರಾದ, ರಾಕ್ಷಸಾಃ-ಅಸುರರು, ತ್ವಯಾ-ನಿನ್ನಿಂದ, ದಿಷ್ಟ್ಯಾ-ದೈವಾಧೀನದಿಂದ, ಹತಾಃ-ಸಂಹೃತರಾದರು, ರಾವಣಸ್ಯ-ರಾವಣನ, ನಿಬರ್ಹಣಂ-ಸಂಹಾರವು, ಯತ್-ಯಾವದೋ, ಏತತ್-ಇದು, ಸಹ್ಯಂ-ಸಹಿಸತಕ್ಕದ್ದು (ಅಂದರೆ ಸಾಧ್ಯವು) ರಾವಣೇಃ-ರಾವಣನಪುತ್ರನಾದಇಂದ್ರಜಿತುವಿನ, ನಿಷೂದನಂ-ಕೊಲ್ಲುವಿಕೆಯು, ಯತ್-ಯಾವದೊ, ಏತತ್-ಇದು, ಅಸಹ್ಯಂ-ಸಹಿಸಲಸಾಧ್ಯವಾಗಿ,ಸಂಪ್ರಾಪ್ತಂ-ಸಂಭವಿಸಿತು. ... .. ||೧೭||

ಮೂ||ಅಂತಕಪ್ರತಿಮಾಸ್ಸರ್ವೇಕುಂಭಕರ್ಣಾದಯೋಮೃಧೇ। ಅಂತಕಪ್ರತಿಮೈರ್ಬಾಣೈರ್ಹತಾಸ್ತೇರಘುಸತ್ತಮ ||೧೮||

ಟೀ|| ಕುಂಭಕರ್ಣಾದಯಃ-ಕುಂಭಕರ್ಣನೇಮೊದಲಾಗಿಉಳ್ಳ, ಸರ್ವೇ-ಯಲ್ಲರು, ಮೃಧೇ-ಕಾಳಗದಲ್ಲಿ, ಅಂತಕಪ್ರತಿಮಾಃ-ಯಮನಿಗೆಸದೃಶರಾದವರು, ಹೇರಘುಸತ್ತಮ-ಎಲೈರಘುಶ್ರೇಷ್ಠನೆ, ಅಂತಕಪ್ರತಿಮೈಃ-ಯಮನಿಗೆಸರಿಯಾಗಿರುವ (ತೇ-ನಿನ್ನ) ಬಾಣೈಃ-ಸರಳುಗಳಿಂದ, ತೇ-ಅವರು, ಹತಾಃ-ಕೊಲ್ಲಲ್ಪಟ್ಟರು ||೧೮||

ಮೂ|| ದತ್ತಾಚೇಯಂತ್ವಯಾಸ್ಮಾಕಂಪುರಾಹ್ಯಭಯದಕ್ಷಿಣಾ। ಹತ್ವಾರಕ್ಷೋಗಣಾನ್ಸಂಖ್ಯೇಕೃತಕೃತ್ಯೋದ್ಯಜೀವಸಿ ||

ಟೀ|| ಕಿಂಚ-ಇಷ್ಟುಮಾತ್ರವಲ್ಲ, ಪುರಾ-ಪೂರ್ವಕಾಲದಲ್ಲಿ, ಯಾಅಭಯದಕ್ಷಿಣಾ-ಯಾವಅಭಯರೂಪವಾದದಕ್ಷಿಣೆಯು, ತ್ವಯಾ, ನಿನ್ನಿಂದ, ಅಸ್ಮಾಕಂ-ನಮಿಗೆ, ದತ್ತಾ-ಕೊಡಲ್ಪಟ್ಟಿತೋ, ಸಂಖ್ಯೇ-ಕಾಳಗದಲ್ಲಿರಕ್ಷೋಗಣಾನ್-ರಾಕ್ಷಸರ ತಂಡಗಳನ್ನು, ಹತ್ವಾ-ಕೊಂದು, ಅದ್ಯ-ಈಗ, ಕೃತಕೃತ್ಯಃ-ಕೃತಪ್ರತಿಜ್ಞೆಯುಳ್ಳವನಾಗಿ, ಜೀವಸಿ-ಬದುಕುತಿದ್ದೀಯನ್ನೆ .. .. ||೧೯||

**ಮೂ॥ ಶ್ರುತ್ವಾತುಭಾಷಿತಂತೇಷಾಂಮುನೀನಾಂಭಾವಿತಾತ್ಮನಾಂ।ವಿಸ್ಮಯಂಪರಮಂಗತ್ವಾರಾಮಃಪ್ರಾಂಜಲಿರಬ್ರವೀತ್**

ಟೀ॥ ರಾಮಃ-ಶ್ರೀರಾಮನು, ಭಾವಿತಾತ್ಮನಾಂ-ಧ್ಯಾನಗೋಚರವಾದಪರಬ್ರಹ್ಮಸ್ವರೂಪವುಳ್ಳ, ತೇಷಾಂಮುನೀನಾಂ-ಋಷಿಗಳ, ಭಾಷಿತಂತು-ಮಾತನ್ನಾದರೆ, ಶ್ರುತ್ವಾ-ಕೇಳಿ, ಪರಮಂ-ಬಹಳವಾದ, ವಿಸ್ಮಯಂ-ಆಶ್ಚರ್ಯವನ್ನು, ಗತ್ವಾ-ಹೊಂದಿ, ಪ್ರಾಂಜಲಿಃ-ಬದ್ಧಾಂಜಲಿಯುಳ್ಳವನಾಗಿ, ಅಬ್ರವೀತ್-ನುಡಿದನು ॥೨೦॥

**ಮೂ॥ ರಾವಣಾದೀನತಿಕ್ರಮ್ಯಕುಂಭಕರ್ಣಾದಿರಾಕ್ಷಸಾನ್।ತ್ರಿಲೋಕಜಯಿನೋಹಿತ್ವಾಕಿಂಪ್ರಶಂಸಥರಾವಣಿಂ॥೨೧॥**

ಟೀ॥ ರಾವಣಾದೀನ್-ರಾವಣನಮೊದಲಾಗಿಉಳ್ಳವರನ್ನು, ಅತಿಕ್ರಮ್ಯ-ಅತಿಕ್ರಮಿಸಿ, ತ್ರಿಲೋಕಜಯಿನಃ-ಲೋಕತ್ರಯವನ್ನುಜಯಿಸಿದ, ಕುಂಭಕರ್ಣಾದಿ ರಾಕ್ಷಸಾನ್-ಕುಂಭಕರ್ಣನೆ ಮೊದಲಾಗಿಉಳ್ಳರಾಕ್ಷಸರನ್ನೂ, ಹಿತ್ವಾ-ತೊರೆದು, ರಾವಣಿಂ-ಇಂದ್ರಜಿತುವಿನನ್ನು, ಕಿಂಪ್ರಶಂಸಥ-ಯಾಕೆಶ್ಲಾಘಿಸುತ್ತೀರಿ ॥೨೧॥

**ಮೂ॥ ತತಸ್ತದ್ವಚನಂಶ್ರುತ್ವಾರಾಘವಸ್ಯಮಹಾತ್ಮನಃ।ಕುಂಭಯೋನಿರ್ಮಹಾತೇಜಾರಾಮಂಪ್ರೀತ್ಯಾವಚೋಬ್ರವೀತ್॥**

ಟೀ॥ ತತಃ-ಬಳಿಕ, ಮಹಾತೇಜಾಃ-ಅತಿತೇಜಸ್ವಿಯಾದ, ಕುಂಭಯೋನಿಃ-ಅಗಸ್ತ್ಯಮುನಿಯು, ಮಹಾತ್ಮನಃ-ಮಹಾನುಭಾವನಾದ, ರಾಘವಸ್ಯ-ಶ್ರೀರಾಮನ, ತದ್ವಚನಂ-ಆಮಾತನ್ನು, ಶ್ರುತ್ವಾ-ಕೇಳಿ, ಪ್ರೀತ್ಯಾ-ವಿಶ್ವಾಸದಿಂದ, ರಾಮಂ-ಶ್ರೀರಾಮನಂಕುರಿತು, ವಚಃ-ಮಾತನ್ನು, ಅಬ್ರವೀತ್-ನುಡಿದನು, ॥೨೨॥

**ಮೂ॥ ಶೃಣುರಾಮಯಥಾವೃತ್ತಂರಾವಣೇರಾವಣಸ್ಯಚ।ಜನ್ಮಕರ್ಮವರಾದಾನಂಸಂಕ್ಷೇಪಾದ್ವದತೋಮಮ ॥೨೩॥**

ಟೀ॥ ಹೇರಾಮ-ಎಲೈಶ್ರೀರಾಮನೆ, ರಾವಣಸ್ಯ-ರಾವಣನ, ರಾವಣೇಶ್ಚ-ಮತ್ತುಇಂದ್ರಜಿತುವಿನ, ಜನ್ಮ-ಉತ್ಪತ್ತಿಯನ್ನು, ಕರ್ಮ-ವ್ಯಾಪಾರವನ್ನು, ವರದಾನಂ-ವರವಂಪಡೆಯುವಿಕೆಯನ್ನು, ಯಥಾವೃತ್ತಂ-ನಡೆದಂತೆ, ಸಂಕ್ಷೇಪಾತ್-ಕೊಂಚವಾಗಿ, ವದತಃ-ಹೇಳುತ್ತಿರುವ, ಮಮ-ನನ್ನದೆಸೆಯಿಂದ, ಶೃಣು-ಕೇಳು. ॥೨೩॥

**ಮೂ॥ಪುರಾಕೃತಯುಗೇರಾಮಪುಲಸ್ತ್ಯೋಬ್ರಹ್ಮಣಸ್ಸುತಃ।ತಪಸ್ತಪ್ತುಂಗತೋವಿದ್ವಾನ್ಮೇರೋಃಪಾರ್ಶ್ವಂಮಹಾಮತಿಃ॥**

ಟೀ॥ ಹೇರಾಮ-ಎಲೈಶ್ರೀರಾಮನೆ, ಪುರಾಕೃತಯುಗೇ-ಪೂರ್ವಕೃತಯುಗದಲ್ಲಿ, ಬ್ರಹ್ಮಣಃ-ಚತುರ್ಮುಖಬ್ರಹ್ಮನ, ಸುತಃ-ಕುವರನಾದ, ವಿದ್ವಾನ್-ಜ್ಞಾನೈಶ್ವರ್ಯಸಂಪನ್ನನಾದ, ಮಹಾಮತಿಃ-ಮಹಾಬುದ್ಧಿಶಾಲಿಯಾದ, ಪುಲಸ್ತ್ಯಃ-ಪುಲಸ್ತ್ಯಬ್ರಹ್ಮನು, ತಪಃ-ತಪಸ್ಸನ್ನು, ತಪ್ತುಂ-ಮಾಡುವದಕ್ಕೋಸ್ಕರ, ಮೇರೋಃ-ಮೇರುಪರ್ವತದ, ಪಾರ್ಶ್ವಂ-ಸಮೀಪಪ್ರದೇಶವನ್ನು, ಗತಃ-ಹೊಂದಿದನು ॥೨೪॥

ಮೂ|| ತೃಣಬಿಂದೋರಾಶ್ರಮೇಸೌನ್ಯವಸನ್ಮುನಿಪುಂಗವಃ।ತಪಸ್ತೇಪೇಮಹಾತೇಜಾಸ್ಸ್ವಾಧ್ಯಾಯನಿರತಸ್ಸದಾ||೨೫||

ಟೀ|| ಮಹಾತೇಜಾಃ-ಅತಿ ತೇಜಸ್ವಿಯಾದ, ಮುನಿಪುಂಗವಃ-ಋಷಿಶ್ರೇಷ್ಠನಾದ, ಅಸೌ-ಈ ಪುಲಸ್ತ್ಯಬ್ರಹ್ಮನು, ತೃಣಬಿಂದೋಃ-ತೃಣಬಿಂದುವೆಂಬ ಋಷಿಯ,ಆಶ್ರಮೇ-ಆಶ್ರಮದಲ್ಲಿ, ನ್ಯವಸತ್-ಇದ್ದನು, ಸದಾ-ನಿರಂತರವು, ಸ್ವಾಧ್ಯಾಯನಿರತಃ-ವೇದಜಪದಲ್ಲಿ ಆಸಕ್ತಿಯುಳ್ಳವನಾಗಿ, ತಪಃ-ತಪವನ್ನು, ತೇಪೇ-ಮಾಡಿದನು. ||೨೫||

ಮೂ|| ತತ್ರಾಶ್ರಮೇಮಹಾರಮ್ಯೇದೇವಗಂಧರ್ವಕನ್ಯಕಾಃ।ಗಾಯಂತ್ಯೋನನೃತುಸ್ತತ್ರಹಸಂತ್ಯೋವಾದಯಂತಿಚ||೨೬||

ಟೀ|| ಮಹಾರಮ್ಯೇ-ಅತಿ ಮನೋಹರವಾದ, ತತ್ರಾಶ್ರಮೇ-ಆ ಆಶ್ರಮದಲ್ಲಿ, ದೇವಗಂಧರ್ವಕನ್ಯಕಾಃ-ದೇವಗಂಧರ್ವ ಕನ್ನಿಕೆಯರು, ಗಾಯಂತ್ಯಃ-ಗಾನಮಾಡುತ್ತಿರುವರಾಗಿ, ನನೃತುಃ-ನರ್ತನೆಯಂಗೈದರು, ತತ್ರ-ಅಲ್ಲಿ, ಹಸಂತ್ಯಃ-ನಗುತಿರುವರಾಗಿ, ವಾದಯಂತಿಚ-ಮೊತ್ತಾಡುತ್ತಲು ಇದ್ದರು. ||೨೬||

ಮೂ|| ಪುಲಸ್ತ್ಯಸ್ಯತಪೋವಿಘ್ನಂಚಕ್ರುಸ್ಸರ್ವಾಅನಿಂದಿತಾಃ।ತತಃಕೃದ್ಧೋಮಹಾತೇಜಾವ್ಯಾಜಹಾರವಚೋಮಹತ್ ||೨೭||

ಟೀ|| ಅನಿಂದಿತಾಃ-ನಿಂದಿಸುವದಕ್ಕೆ ಯೋಗ್ಯರಾಗದಿರುವ, ಸರ್ವಾಃ-ಎಲ್ಲರು, ಪುಲಸ್ತ್ಯಸ್ಯ-ಪುಲಸ್ತ್ಯಬ್ರಹ್ಮನ, ತಪೋವಿಘ್ನಂ-ತಪಸ್ಸಿಗೆ ಅಂತರಾಯವನ್ನು, ಚಕ್ರುಃ-ಮಾಡಿದರು, ಮಹಾತೇಜಾಃ-ಅತಿ ತೇಜಸ್ವಿಯಾದ ಪುಲಸ್ತ್ಯನು, ತತಃ-ಆ ವಿಘ್ನದಿಂದ, (ಅಥವಾ-ಬಳಿಕ) ಕೃದ್ಧಃ-ಕುಪಿತನಾಗಿ, ಮಹತ್-ಮಹತ್ತರವಾದ, ವಚಃ-ಮಾತನ್ನು, ವ್ಯಾಜಹಾರ-ನುಡಿದನು. ... ... ... ||೨೭||

ಮೂ|| ಯಾಮೇದೃಷ್ಟಿಪಥಂಗಚ್ಛೇತ್ಸಾಗರ್ಭಂಧಾರಯಿಷ್ಯತಿ।ತಾಸ್ಸರ್ವಾಶ್ಶಾಪಸಂವಿಗ್ನಾಸ್ತಂದೇಶಂಪ್ರಚಕ್ರಮುಃ ||೨೮||

ಟೀ|| ಯಾ-ಯಾವ ಕನ್ನಿಕೆಯು, ಮೇ-ನನ್ನ, ದೃಷ್ಟಿಪಥಂ-ದೃಷ್ಟಿಮಾರ್ಗವನ್ನು, ಗಚ್ಛೇತ್-ಹೊಂದುವಳೊ, ಸಾ-ಆ ಹುಡಿಗಿಯು, ಗರ್ಭಂ-ಗರ್ಭವನ್ನು, ಧಾರಯಿಷ್ಯತಿ-ಧರಿಸುವಳು (ಇತಿ ವ್ಯಾಜಹಾರ-ಇಂತೆಂದುನುಡಿದನು ) ತಾಸ್ಸರ್ವಾಃ-ಆ ಬಾಲಕಿಯರೆಲ್ಲರು, ಶಾಪಸಂವಿಗ್ನಾಃ-ಶಾಪದಿಂದ ವಿಕಲರಾಗಿ, ತಂದೇಶಂ-ಆ ಪ್ರದೇಶವಂಕುರಿತು, ನಪ್ರಚಕ್ರಮುಃ-ಪೋಗಲಿಲ್ಲ. ... ... ||೨೮||

ಮೂ|| ತೃಣಬಿಂದೋಸ್ತುರಾಜರ್ಷೇಃಕನ್ಯಾತನ್ನಾಶೃಣೋದ್ವಚಃ।ವಿಚಚಾರಮುನೇರಗ್ರೇನಿರ್ಭಯಾತಂಪ್ರಪಶ್ಯತೀ||೨೯||

ಟೀ|| ರಾಜರ್ಷೇಃ-ರಾಜನಾಗಿದ್ದು ಋಷಿಯಾದ, ತೃಣಬಿಂದೋಃ-ತೃಣಬಿಂದುವಿನ, ಕನ್ಯಾತು-ಕನ್ನಿಕೆಯಾದರೆ, ತದ್ವಚಃ-ಆ ಮಾತನ್ನು, ನಾಶೃಣೋತ್-ಕೇಳಲಿಲ್ಲ, (ಆದಕಾರಣ) ನಿರ್ಭಯಾ-ಅಂಜದಿರುವಳಾಗಿ, ತಂ-ಅತನನ್ನು,ಪ್ರಪಶ್ಯತೀ-ನೋಡುತಿರುವಳಾಗಿ, ಮುನೇಃ-ಪುಲಸ್ತ್ಯಬ್ರಹ್ಮನ, ಅಗ್ರೇ-ಮುಂದುಗಡೆ, ವಿಚಚಾರ-ತಿರುಗುತಿದ್ದಳು ||

ಮೂ॥ ಬಭೂವಪಾಂಡುರತನುರ್ವ್ಯಂಜಿತಾಂತಶ್ಶರೀರಜಾ। ದೃಷ್ಟ್ವಾ ಸಾದೇಹವೈವರ್ಣ್ಯಂಭೀತಾಪಿತರಮಭ್ಯಗಾತ್ ॥೩೦॥

ಟೀ॥ ಸಾ-ಆಕನ್ನಿಕೆಯು, ಪಾಂಡುರತನುಃ-ಬಿಳುಪಾದದೇಹಮುಳ್ಳವಳು, ವ್ಯಂಜಿತಾಂತಶ್ಶರೀರಜಾ-ವ್ಯಂಜಿತ-ಪ್ರಕಟೀಕೃತವಾದ, ಅಂತಃ-ಮಧ್ಯದಲ್ಲಿರ್ಪ, ಶರೀರಜಾ-ಗರ್ಭಮುಳ್ಳವಳು, ಬಭೂವ-ಆದಳು, ದೇಹವೈವರ್ಣ್ಯಂ-ಶರೀರಬಣ್ಣದಬದಲಾವಣೆಯನ್ನು, ದೃಷ್ಟ್ವಾ-ಕಂಡು, ಭೀತಾ-ಅಂಜಿದವಳಾಗಿ, ಪಿತರಂ-ತಂದೆಯಂಕುರಿತು, ಅಭ್ಯಗಾತ್-ಬಂದಳು ... ... ॥೩೦॥

ಮೂ॥ ತೃಣಬಿಂದುಸ್ತುತಾಂದೃಷ್ಟ್ವಾರಾಜರ್ಷಿರಮಿತದ್ಯುತಿಃ। ಧ್ಯಾತ್ವಾಮುನಿಕೃತಂಸರ್ವಮನ್ವೈದ್ಧಿಜ್ಞಾನಚಕ್ಷುಷಾ ॥೩೧॥

ಟೀ॥ ಅಮಿತದ್ಯುತಿಃ-ಕಡುಕಾಂತಿಯುಳ್ಳ, ರಾಜರ್ಷಿಃ-ರಾಜರ್ಷಿಯಾದ, ತೃಣಬಿಂದುಸ್ತು-ತೃಣಬಿಂದುವಾದರೆ, ತಾಂ-ಆಕನ್ನಿಕೆಯನ್ನು, ದೃಷ್ಟ್ವಾ-ಕಂಡು, ಧ್ಯಾತ್ವಾ-ಧ್ಯಾನಿಸಿ, ಮುನಿಕೃತಂ-ಪುಲಸ್ತ್ಯಮುನಿಯಿಂದ ಮಾಡಲ್ಪಟ್ಟ, ಸರ್ವಂ-ಸಮಸ್ತವನ್ನು, ಜ್ಞಾನಚಕ್ಷುಷಾ-ಜ್ಞಾನನೇತ್ರದಿಂದ, ಅನ್ವೈದ್ಧ-ಅರಿತನಷ್ಟೆ ॥೩೧॥

ಮೂ॥ ತಾಂಕನ್ಯಾಂಮುನಿವರ್ಯಾಯಪುಲಸ್ತ್ಯಾಯದದೌಪಿತಾ ... ... ॥೩೨॥

ಟೀ॥ ಪಿತಾ-ತಂದೆಯಾದತೃಣಬಿಂದುವು, ತಾಂಕನ್ಯಾಂ-ಆಹುಡುಗಿಯನ್ನು, ಮುನಿವರ್ಯಾಯ-ಋಷಿಶ್ರೇಷ್ಠನಾದ, ಪುಲಸ್ತ್ಯಾಯ-ಪುಲಸ್ತ್ಯಬ್ರಹ್ಮನಿಗೆ, ದದೌ-ಕೊಟ್ಟನು ... ... ... ॥೩೨॥

ಮೂ॥ ತಾಂಪ್ರಗೃಹ್ಯಾಬ್ರವೀತ್ಕನ್ಯಾಂಬಾಢಮಿತ್ಯೇವಸದ್ವಿಜಃ ॥೩೩॥

ಟೀ॥ ಸದ್ವಿಜಃ-ಆಬ್ರಾಹ್ಮಣನು, ತಾಂಕನ್ಯಾಂ-ಆಕನ್ಯಕೆಯನ್ನು, ಪ್ರಗೃಹ್ಯ-ಪರಿಗ್ರಹಿಸಿ, ಬಾಢಮಿತ್ಯೇವ-ಹಾಗೆಯೇಆಗಲೆಂದು, ಅಬ್ರವೀತ್-ನುಡಿದನು ॥೩೩॥

ಮೂ॥ ಶುಶ್ರೂಷಣಪರಾಂದೃಷ್ಟ್ವಾಮುನಿಃಪ್ರೀತೋಬ್ರವೀದ್ವಚಃ। ದಾಸ್ಯಾಮಿಪುತ್ರಮೇಕಂತೇಉಭಯೋರ್ವಂಶವರ್ಧನಂ॥

ಟೀ॥ ಮುನಿಃ-ಪುಲಸ್ತ್ಯಬ್ರಹ್ಮನು, ಶುಶ್ರೂಷಣಪರಾಂ-ಸೇವೆಯೊಳಾಸಕ್ತಳಾದ ಪತ್ನಿಯನ್ನು, ದೃಷ್ಟ್ವಾ-ಕಂಡು, ಪ್ರೀತಃ-ಸಂತುಷ್ಟನಾಗಿ, ಉಭಯೋಃ-ಮಾತಾಪಿತೃಗಳೀರ್ವರ, ವಂಶವರ್ಧನಂ-ಕುಲವನ್ನುವೃದ್ಧಿಗೊಳಿಸುತ್ತಿರುವ, ಏಕಂಪುತ್ರಂ-ಒಬ್ಬಮಗನನ್ನು, ತೇ-ನಿನಗೆ, ದಾಸ್ಯಾಮಿ-ಕೊಡುವೆನು (ಇತಿ-ಇಂತೆಂದು) ವಚಃ-ಮಾತನ್ನು, ಅಬ್ರವೀತ್-ನುಡಿದನು ... ... ... ॥೩೪॥

ಮೂ॥ ತತಃಸಾಸೂತಸಾಪುತ್ರಂಪುಲಸ್ತ್ಯಾಲ್ಲೋಕವಿಶ್ರುತಂ। ವಿಶ್ರವಾಇತಿವಿಖ್ಯಾತಃಪೌಲಸ್ತ್ಯಬ್ರಹ್ಮವಿನ್ಮುನಿಃ॥

ಟೀ॥ ತತಃ-ಬಳಿಕ, ಸಾ-ಆಕೆಯು, ಲೋಕವಿಶ್ರುತಂ-ಲೋಕದಲ್ಲಿ ಪ್ರಸಿದ್ಧನಾದ, ಪುತ್ರಂ-ಮಗನನ್ನು, ಪುಲಸ್ತ್ಯಾತ್-ಪುಲಸ್ತ್ಯನದೆಸೆಯಿಂದ, ಪ್ರಾಸೂತ-ಹೆತ್ತಳು,ಬ್ರಹ್ಮವಿತ್-ಆತ್ಮಜ್ಞಾನಿಯಾದ, ಮುನಿಃ-ಮನನಶೀಲನಾದ, ಪೌಲಸ್ತ್ಯಃ-ಪುಲಸ್ತ್ಯಬ್ರಹ್ಮಪುತ್ರನು, ವಿಶ್ರವಾಇತಿ-ವಿಶ್ರವಸ್ಸೆಂದು, ಖ್ಯಾತಃ-ಪ್ರಸಿದ್ಧನಾದನು ॥೩೪॥

ಮೂ॥ತಸ್ಯಶೀಲಾದಿಕಂದೃಷ್ಟ್ವಾಭರದ್ವಾಜೋಮಹಾಮುನಿಃ। ಭಾರ್ಯಾರ್ಥಂಸ್ವಾಂದುಹಿತರಂದದೌವಿಶ್ರವಸೇಮುದಾ॥೩೫॥

ಟೀ॥ ಭರದ್ವಾಜಃ-ಭರದ್ವಾಜನೆಂಬ, ಮಹಾಮುನಿಃ-ಮಹರ್ಷಿಯು, ತಸ್ಯ-ಆವಿಶ್ರವಸ್ಸಿನ, ಶೀಲಾದಿಕಂ-ಸ್ವಭಾವವೇ ಮೊದಲಾಗುಳ್ಳ ಗುಣಗಳನ್ನು, ದೃಷ್ಟ್ವಾ-ಕಂಡು, ಭಾರ್ಯಾರ್ಥಂ-ಪತ್ನ್ಯರ್ಥವಾಗಿ, ಸ್ವಾಂ-ಸ್ವಕೀಯಳಾದ, ದುಹಿತರಂ-ಮಗಳನ್ನು. ವಿಶ್ರವಸೇ-ವಿಶ್ರವಸ್ಸಿಗೆ, ಮುದಾ-ಸಂತೋಷದಿಂದ, ದದೌ-ಕೊಟ್ಟನು ॥೩೫॥

ಮೂ॥ತಸ್ಯಾಂತುಪುತ್ರಸ್ಸಂಜಜ್ಞೇಪೌಲಸ್ತ್ಯಾಲ್ಲೋಕಸಂಮತಃ।ಪಿತೃತುಲ್ಯೋವೈಶ್ರವಣೋಬ್ರಹ್ಮಣಾಚಾನುಮೋದಿತಃ॥

ಟೀ॥ ತಸ್ಯಾಂತು-ಆ ಭರದ್ವಾಜಕನ್ಯಕೆಯಲ್ಲಿ ಆದರೆ, ಲೋಕಸಂಮತಃ-ಜನರಿಗೆಲ್ಲಸಮ್ಮತನಾದ, ಪಿತೃತುಲ್ಯಃ-ತಂದೆಯಾದ ವಿಶ್ರವಸ್ಸಿಗೆಸದೃಶನಾದ, ಬ್ರಹ್ಮಣಾ-ಬ್ರಹ್ಮನಿಂದ, ಅನುಮೋದಿತಃ-ಸಮ್ಮತಿಸಲ್ಪಟ್ಟ, ವೈಶ್ರವಣಃ-ವೈಶ್ರವಣನೆಂಬ, ಪುತ್ರಃ-ಕುವರನು, ಪೌಲಸ್ತ್ಯಾತ್-ವಿಶ್ರವಸ್ಸಿನದೆಸೆಯಿಂದ, ಸಂಜಜ್ಞೇ-ಪುಟ್ಟಿದನು ॥೩೬॥

ಮೂ॥ ದದೌತತ್ತಪಸಾತುಷ್ಟೋಬ್ರಹ್ಮಾತಸ್ಮೈವರಂಶುಭಂ।ಮನೋಭಿಲಷಿತಂತಸ್ಯಧನೇಶತ್ವಮಖಂಡಿತಂ॥೩೭॥

ಟೀ॥ ಬ್ರಹ್ಮಾ-ಚತುರ್ಮುಖಬ್ರಹ್ಮನು, ತತ್ತಪಸಾ-ಆ ವೈಶ್ರವಣನತಪದಿಂದ, ತುಷ್ಟಃ-ಸಂತೋಷಿಸಿದವನಾಗಿ,ತಸ್ಯ-ಆಬಾಲಕನ, ಮನೋಭಿಲಷಿತಂ-ಮನಡಿಂದ ಅಪೇಕ್ಷಿಸಲ್ಪಟ್ಟ, ಅಖಂಡಿತಂ-ಚ್ಯುತಿಯಿಲ್ಲದಿರುವ, ಧನೇಶತ್ವಂ-ಧನಪತಿತ್ವರೂಪವಾದ,ಶುಭಂ-ಶುಭಕರವಾದ, ವರಂ-ವರವನ್ನು, ತಸ್ಮೈ-ಆವೈಶ್ರವಣನಿಗೆ-ದದೌ-ಕೊಟ್ಟನು॥

ಮೂ॥ತತೋಲಬ್ಧವರಸ್ಸೋಪಿಪಿತರಂದ್ರಷ್ಟುಮಾಗತಃ । ಪುಷ್ಪಕೇಣಧನಾಧ್ಯಕ್ಷೋಬ್ರಹ್ಮದತ್ತೇನಭಾಸ್ವತಾ॥೩೮॥

ಟೀ॥ ತತಃ-ಬಳಿಕ, ಲಬ್ಧವರಃ-ಪಡೆಯಲ್ಪಟ್ಟವರವುಳ್ಳ, ಸೋಪಿಧನಾಧ್ಯಕ್ಷಃ-ಆಧನಪತಿಯು, ಪಿತರಂ-ತಂದೆಯನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಬ್ರಹ್ಮದತ್ತೇನ-ಬ್ರಹ್ಮನಿಂದಕೊಡಲ್ಪಟ್ಟ, ಭಾಸ್ವತಾ-ಹೊಳೆಯುತ್ತಿರುವ,ಪುಷ್ಪಕೇಣ-ಪುಷ್ಪಕವಿಮಾನದಿಂದ, ಆಗತಃ-ಬಂದನು ... ॥೩೮॥

ಮೂ॥ನಮಸ್ಕೃತ್ವಾಥಪಿತರಂನಿವೇದ್ಯತಪಸಃಫಲಂ। ಪ್ರಾಹಮೇಭಗವಾನ್ಬ್ರಹ್ಮಾದತ್ವಾವರಮನಿಂದಿತಂ॥೩೯॥

ನಿವಾಸಾಯನಮೆಸ್ಥಾನಂದತ್ತವಾನ್ಪರಮೆಶ್ವರಃ। ಬ್ರೂಹಿಮೆನಿಯತಂಸ್ಥಾನಂಹಿಂಸಾಯತ್ರನಕಸ್ಯಚಿತ್ ॥೪೦॥

ಟೀ॥ ಅಥ-ಬಳಿಕ, ಪಿತರಂ-ತಂದೆಯನ್ನು ಕುರಿತು, ನಮಸ್ಕೃತ್ವಾ-ವಂದಿಸಿ, ತಪಸಃ-ತಪಸ್ಸಿನ, ಫಲಂ-ಪ್ರಯೋಜನವನ್ನು, ನಿವೇದ್ಯ-ತಿಳಿಸಿ, ಭಗವಾನ್- ಪೂಜ್ಯನಾದ, ಪರಮೆಶ್ವರಃ-ಲೋಕಸ್ವಾಮಿಯಾದ, ಬ್ರಹ್ಮಾ-ಚತುರ್ಮುಖನು, ಮೆ-ನನಿಗೆ-ಅನಿಂದಿತಂ-ನಿರ್ದುಷ್ಟವಾದ, ವರಂ-ವರವನ್ನು, ದತ್ವಾ-ಕೊಟ್ಟು, ಮೆ-ನನಿಗೆ, ನಿವಾಸಾಯ-ಇರುವದಕ್ಕೋಸ್ಕರ, ಸ್ಥಾನಂ-ಪ್ರದೇಶವನ್ನು, ನದತ್ತವಾನ್-ಕೊಡದೆಹೋದನು ॥೩೯॥ಯತ್ರ-ಯಾವೆಡೆಯಲ್ಲಿ, ಕಸ್ಯಚಿತ್-ಯಾರಿಗು, ಹಿಂಸಾ-ಬಾಧೆಯು, ನ-ಇಲ್ಲವೊ, ನಿಯತಂ-ನಿಶ್ಚಿತವಾದ, ಸ್ಥಾನಂ-ಪ್ರದೇಶವನ್ನು, ಮೆ-ನನಿಗೆ,ಬ್ರೂಹಿ-ಹೇಳು,ಇತಿ-ಇಂತೆಂದು, ಪ್ರಾಹ-ಪೇಳಿದನು ॥೪೦॥

ಮೂ॥ ವಿಶ್ರವಾಅಪಿತಂಪ್ರಾಹಲಂಕಾನಾಮಪುರೀಶುಭಾ। ರಾಕ್ಷಸಾನಾಂನಿವಾಸಾಯನಿರ್ಮಿತಾವಿಶ್ವಕರ್ಮಣಾ ॥೪೦॥ ತ್ಯಕ್ತ್ವಾವಿಷ್ಣುಭಯಾದ್ದೈತ್ಯಾವಿವಿಶುಸ್ತೆರಸಾತಲಂ।ಸಾಪುರೀದುಷ್ಪ್ರಧರ್ಷಾನ್ಯೈರ್ಮಧ್ಯೆಸಾಗರಮಾಸ್ಥಿತಾ। ತತ್ರವಾಸಾಯಗಚ್ಛತ್ವಂನಾನ್ಯೈಸ್ಸಾಧಿಷ್ಠಿತಾಪುರಾ ... ... ॥೪೧॥

ಟೀ॥ ವಿಶ್ರವಾಅಪಿ-ವಿಶ್ರವಸ್ಸುಕೂಡಾ, ತಂ-ಆ ಕುಬೇರನಂಕುರಿತು, ಲಂಕಾನಾಮ-ಲಂಕಾಪುರಿಯೆಂದು ಪ್ರಸಿದ್ಧವಾದ,ಶುಭಾ-ಶುಭಕರವಾದ, ಪುರೀ- ಪಟ್ಟಣವು, ರಾಕ್ಷಸಾನಾಂ-ರಕ್ಕಸರ, ನಿವಾಸಾಯ-ಇರುವದಕ್ಕೋಸ್ಕರ, ವಿಶ್ವಕರ್ಮಣಾ- ವಿಶ್ವಕರ್ಮಬ್ರಹ್ಮನಿಂದ, ನಿರ್ಮಿತಾ-ನಿರ್ಮಿಸಲ್ಪಟ್ಟಿಧೆ, ತೆದೈತ್ಯಾಃ- ಆ ರಾಕ್ಷಸರು, ವಿಷ್ಣುಭಯಾತ್ -ಶ್ರೀಮನ್ನಾರಾಯಣನ ಭೀತಿಯದೆಸೆಯಿಂದ, (ತಾಂ-ಆ ಲಂಕಾಪಟ್ಟಣವನ್ನು) ತ್ಯಕ್ತ್ವಾ-ಬಿಟ್ಟು, ರಸಾತಲಂ-ಪಾತಾಳಲೋಕವನ್ನು, ವಿವಿಶುಃ- ಹೊಕ್ಕರು, ಸಾಪುರೀ-ಆ ಪಟ್ಟಣವು, ಮಧ್ಯೆಸಾಗರಂ-ಸಮುದ್ರಮಧ್ಯದಲ್ಲಿ, ಆಸ್ಥಿತಾ-ಇರುತಿರುವ ಕಾರಣ, ಅನ್ಯೈಃ-ಇತರರಿಂದ, ದುಷ್ಪ್ರಧರ್ಷಾ - ತಿರಸ್ಕರಿಸಲಸಾಧ್ಯವಾಗಿಧೆ, ತತ್ರ-ಆ ಸ್ಥಳದಲ್ಲಿ, ತ್ವಂ-ನೀನು, ವಾಸಾಯ-ಇರುವದಕ್ಕೋಸ್ಕರ, ಗಚ್ಛ-ತೆರಳು, ಸಾ-ಆ ಪುರವು, ಪುರಾ-ಪೂರ್ವದಲ್ಲಿ, ಅನ್ಯೈಃ-ಮತ್ತಾರಿಂದಲೂ,ನಾಧಿಷ್ಠಿತಾ-ಅಧಿಷ್ಠಿಸಲ್ಪಡಲಿಲ್ಲ, ಇತಿ-ಇಂತೆಂದು, ಪ್ರಾಹ-ನುಡಿದನು ॥೪೧॥

ಮೂ॥ ಪಿತ್ರಾದಿಷ್ಟಸ್ತ್ವಸೌಗತ್ವಾತಾಂಪುರೀಂಧನದೊವಿಶತ್।ಸತತ್ರಸುಚಿರಂಕಾಲಮುವಾಸಪಿತೃಸಂಮತಃ॥

ಟೀ॥ (ಏವಂ-ಈ ಪರಿಯಾಗಿ) ಪಿತ್ರಾ-ತಂದೆಯಿಂದ, ಆದಿಷ್ಟಃ-ಆಜ್ಞಾಪಿಸಲ್ಪಟ್ಟ, ಅಸೌಧನದಃ-ಈ ಕುಬೇರನು, ಗತ್ವಾ- ಪೋಗಿ, ತಾಂಪುರೀಂ-ಆ ಪಟ್ಟಣವನ್ನು, ಅವಿಶತ್-ಹೊಕ್ಕನು, ಸಃ-ಅತನು, ತತ್ರ-ಆ ಪಟ್ಟಣದಲ್ಲಿ, ಸುಚಿರಂಕಾಲಂ-ಬಹುಕಾಲವು, ಪಿತೃಸಂಮತಃ-ತಂದೆಗೆ ಸಂಮತನಾಗಿ, ಉವಾಸ-ಇದ್ದನು ॥೪೨॥

ಮೂ॥ ಕಸ್ಯಚಿತ್ವಥಕಾಲಸ್ಯಸುಮಾಲೀನಾಮರಾಕ್ಷಸಃ। ರಸಾತಲಾನ್ಮರ್ತ್ಯಲೋಕಂಚಚಾರಪಿಶಿತಾಶನಃ॥೪೪॥
ಗೃಹೀತ್ವಾತನಯಾಂಕನ್ಯಾಂ ಸಾಕ್ಷಾದ್ದೇವೀಮಿವಶ್ರಿಯಂ । ಅಪಶ್ಯದ್ಧನದಂದೇವಂಚರಂತಂಪುಷ್ಪಕೇಣಸಃ । ಹಿ
ತಾಯಚಿಂತಯಾಮಾಸರಾಕ್ಷಸಾನಾಂಮಹಾಮನಾಃ ... ... ॥೪೫॥

ಟೀ॥ ಕಸ್ಯಚಿತ್ವಥಕಾಲಸ್ಯ-ಕೆಲವುಕಾಲವಾದ ಬಳಿಕ, ಸುಮಾಲೀನಾಮ-ಸುಮಾಲಿಯೆಂದು ಪ್ರಸಿದ್ಧನಾದ,ಪಿಶಿತಾಶನಃ-ಮಾಂಸಾಹಾರಿಯಾದ, ರಾಕ್ಷಸಃ-ರಕ್ಕಸನು, ಸಾಕ್ಷಾತ್-ಪ್ರತ್ಯಕ್ಷವಾಗಿ ಬಂದಿರುವ, ಶ್ರಿಯಂದೇವಿಮಿವಸ್ಥಿತಂ-ಲಕ್ಷ್ಮಿದೇವಿಯೆಂಬಂತಿರುವ, ಕನ್ಯಾಂ-ಅವಿವಾಹಿತಳಾದ, ತನಯಾಂ-ಮಗಳನ್ನು, ಗೃಹೀತ್ವಾ-ಕರೆದುಕೊಂಡು, ರಸಾತಲಾತ್- ಪಾತಾಳಲೋಕದ ದೆಸೆಯಿಂದ, (ಆಗತ್ಯ-ಬಂದು,) ಮರ್ತ್ಯಲೋಕಂ-ಭೂಲೋಕದಲ್ಲಿ,ಚಚಾರ ಸಂಚರಿಸಿದನು, ಸಃ-ಆತನು, ಪುಷ್ಪಕೇಣ-ಪುಷ್ಪಕವಿಮಾನದಿಂದ, ಚರಂತಂ- ಸಂಚರಿಸುತ್ತಿರುವ, ದೇವಂ-ದೇವನಾದ, ಧನದಂ-ಕುಬೇರನನ್ನು, ಅಪಶ್ಯತ್-ಕಂಡನು, ಮಹಾಮನಾಃ-ಮಹಾ ಮನಸ್ವಿಯಾದ ಆರಾಕ್ಷಸನು, ರಾಕ್ಷಸಾನಾಂ-ರಕ್ಕಸರಿಗೆ, ಹಿತಾಯ- ಹಿತಕ್ಕೋಸುಗ, ಚಿಂತಯಾಮಾಸ-ಯೋಚಿಸಿದನು. ... ... ॥೪೫॥

ಮೂ॥ ಉವಾಚತನಯಾಂತತ್ರಕೈಕಸೀಂನಾಮನಾಮತಃ। ವತ್ಸೇವಿವಾಹಕಾಲಸ್ತೇಯೌವನಂಚಾತಿವರ್ತತೇ॥೪೬॥

ಟೀ॥ ತತ್ರ-ಆ ಸ್ಥಳದಲ್ಲಿ, ನಾಮತಃ-ಹೆಸರಿನಿಂದ, ಕೈಕಸೀಂನಾಮ-ಕೈಕಸಿಯೆಂದು ಪ್ರಸಿದ್ಧಳಾದ, ತನಯಾಂ-ಮಗಳನ್ನು ಕುರಿತು, ಅಬ್ರವೀತ್ - ನುಡಿದನು, ಹೆ ವತ್ಸೇ-ಎಲೈ ಬಾಲಕಿಯೆ, ತೇ-ನಿನಗೆ, ವಿವಾಹಕಾಲಃ-ಮದುವೆಗೆತಕ್ಕ ಸಮಯವು, ಯೌವನಂಚ-ಪ್ರಾಯವೂಕೂಡ, ಅತಿವರ್ತತೆ-ಅತಿಕ್ರಮಿಸುವದು. ॥೪೬॥

ಮೂ॥ ಪ್ರತ್ಯಾಖ್ಯಾನಾಚ್ಚಭೀತೈಸ್ತ್ವಂನವರೈರ್ಗೃಹ್ಯಸೇಶುಭೇ। ಸಾತ್ವಂವರಯಭದ್ರಂತೇಮುನಿಂಬ್ರಹ್ಮಕು
ಲೋದ್ಭವಂ ॥೪೭॥ ಸ್ವಯಮೇವತತಃಪುತ್ರಾಭವಿಷ್ಯಂತಿಮಹಾಬಲಾಃ । ಈದೃಶಾಸ್ಸರ್ವಶೋಭಾಢ್ಯಾಧನದೇನ
ಸಮಾಶ್ಶುಭೆ ... ... ... ॥೪೮॥

ಟೀ॥ ಹೆಶುಭೆ-ಎಲೈ ಶುಭಕರಳೆ, ತ್ವಂ-ನೀನು, ಪ್ರತ್ಯಾಖ್ಯಾನಾತ್-ಪ್ರತಿಯಾಗಿ ಹೇಳುವರೋಯೇನೋ ಯಂಬೋಣದರಿಂದ, (ಅಂದರೆ ಕೇಳಿದವನಿಗೆ ಕೊಡುವದಿಲ್ಲವೆಂದು ಹೇಳುವವರೋಯೇನೋ ಎಂಬ ಸಂದೇಹದ ದೆಸೆಯಿಂದ,) ಭೀತೈಃ-ಅಂಜಿದ, ವರೈಃ-ವರದಿಂದ, ನಗೃಹ್ಯಸೆ-ಗ್ರಹಿಸಲ್ಪಡಲಿಲ್ಲ, ಸಾತ್ವಂ-ಅಂಥಾನೀನು, ಬ್ರಹ್ಮಕುಲೋದ್ಭವಂ-ಬ್ರಂಹವಂಶದಲ್ಲಿ ಪುಟ್ಟಿದ, ಮುನಿಂ-ವಿಶ್ರವಸ್ಸಂಬಮುನಿಯನ್ನು, ವರಯ-ವರಿಸು, ತೇ-ನಿನಗೆ, ಭದ್ರಂ-ಶುಭವು, (ಅಸ್ತು-ಆಗಲಿ) ಹೆಶುಭೆ-ಎಲೈ ಶುಭಕರಳೆ,ತ

ತೇಃ-ಬಳಿಕ, ಧನದೇನ-ಕುಬೇರನೊಡನೆ, ಸಮಾಃ-ಸದೃಶರಾದ, ಸರ್ವಶೋಭಾಢ್ಯಾಃ-ಸಮಸ್ತಕಾಂತಿಗಳಿಂದಲು ತುಂಬಿದವರಾದ, ಮಹಾಬಲಾಃ-ಬಹುಬಲವಂತರಾದ, ಈದೃಶಾಃ-ಪುತ್ರಾಃ-ಇಂತಾಮಕ್ಕಳು, ಸ್ವಯಮೇವ-ತಮ್ಮಷ್ಟಕ್ಕೆ ತಾವೆ, ಭವಿಷ್ಯಂತಿ-ಆಗುವರು .. ... ... ||೪೮||

ಈಪರಿ ಜನಕನು ನುಡಿಯಲು ಆ ಬಾಲಿಕಾಮಣಿಯು ಹಾಗೆಯೇ ಆಗಲೆಂದು ಹೇಳಿ ಆಋಷಿಬಳಿಗೆ ಪೋಗುವಳದೆಂತೆನೆ,—

ಮೂ|| ತಥೇತಿಸಾಶ್ರಮಂಗತ್ವಾಮುನೇರಗ್ರೇವ್ಯವಸ್ಥಿತಾ। ಲಿಖಂತೀಭುವಮಗ್ರೇಣಪಾದೇನಾಧೋಮುಖೀಸ್ಥಿತಾ||೪೯||

ಟೀ|| ಸಾ-ಆಹುಡಿಗಿಯು, ತಥೇತಿ-ಹಾಗೆಯೆಆಗಲೆಂದು ಹೇಳಿ, ಮುನೇಃಋಷಿಯ, ಆಶ್ರಮಂ-ಆಶ್ರಮವನ್ನು, ಗತ್ವಾ-ಹೊಂದಿ, ಅಗ್ರೇ-ಮುಂದೆ, ವ್ಯವಸ್ಥಿತಾ-ನಿಂತಳು, ಅಗ್ರೇಣ-ಮುಂದುಗಡೆಇರುವ, ಪಾದೇನ-ಕಾಲಿನಿಂದ, ಭುವಂ-ಭೂಮಿಯಲ್ಲಿ. ಆಲಿಖಂತೀಸತಿ-ಬರೆಯುತ್ತಿರುವಳಾಗಿ,ಅಧೋಮುಖೀ-ಕೆಳಭಾಗದಲ್ಲಿ ಮಾಡಲ್ಪಟ್ಟಮುಖವುಳ್ಳವಳಾಗಿ, ಸ್ಥಿತಾ-ನಿಂತಳು .. ... ... ||೪೯||

ಮೂ|| ತಾಮಪೃಚ್ಛನ್ಮುನಿಃಕಾತ್ವಂಕಸ್ಯಾಸಿವರವರ್ಣಿನಿ । ||೫೦||

ಟೀ|| ಮುನಿಃ-ವಿಶ್ರವಸ್ಸು, ತಾಂ-ಆಕನ್ಯಕೆಯಂಕುರಿತು, ಹೆವರವರ್ಣಿನಿ-ಎಲೈ ಉತ್ತಮಾಂಗನೆಯೆ, ತ್ವಂ-ನೀನು, ಕಾ-ಯಾರು, ಕಸ್ಯ-ಯಾರಸಂಬಂಧಿಯಾದವಳು (ಇತಿ ಇಂತೆಂದು) ಅಪೃಚ್ಛತ್-ಕೇಳಿದನು ... ... ||೫೦||

ಮೂ|| ಸಾಬ್ರವೀತ್ಪ್ರಾಂಜಲಿರ್ಬ್ರಹ್ಮನ್ಧ್ಯಾನೇನಜ್ಞಾತುಮರ್ಹಸಿ ||೫೦||

ಟೀ|| ಸಾ-ಆಸ್ತ್ರೀಯು, ಪ್ರಾಂಜಲಿಃ-ಅಂಜಲಿಬದ್ಧಳಾಗಿ, ಹೆಬ್ರಹ್ಮನ್-ಎಲೈಬ್ರಾಹ್ಮಣನೇ, ಧ್ಯಾನೇನ-ಧ್ಯಾನದೃಷ್ಟಿಯಿಂದ, ಜ್ಞಾತುಂ-ಅರಿತುಕೊಳ್ಳುವದಕ್ಕೆ, ಅರ್ಹಸಿ-ಯೋಗ್ಯನಾಗಿದ್ದೀ, ಇತ್ಯಬ್ರವೀತ್-ಇಂತೆಂದುನುಡಿದಳು - ... ... ... ||೫೦||

ಮೂ||ತತೋಧ್ಯಾತ್ವಾಮುನಿಸ್ಸರ್ವಂಜ್ಞಾತ್ವಾ ತಾಂಪ್ರತ್ಯಭಾಷತ।ಜ್ಞಾತಂತತ್ವಾಭಿಲಷಿತಂಮತ್ತಃಪುತ್ರಾನಭೀಪ್ಸಸಿ||

ಟೀ|| ಮುನಿಃ-ವಿಶ್ರವಸ್ಸು, ತತಃ-ಬಳಿಕ, ಧ್ಯಾತ್ವಾ-ಧ್ಯಾನಿಸಿ, ಸರ್ವಂ-ಸಮಸ್ತವನ್ನು, ಜ್ಞಾತ್ವಾ-ತಿಳಿದುಕೊಂಡು, ತಾಂ-ಆಬಾಲಿಕೆಯಂಕುರಿತು ಪ್ರತ್ಯಭಾಷತ-ಪ್ರತ್ಯುತ್ತರಕೊಟ್ಟನು, ತತ್ವಾಭಿಲಷಿತಂ-ಯಥಾರ್ಥವಾದಕೋರಿಕೆಯು, ಜ್ಞಾತಂ-ತಿಳಿಯಲ್ಪಟ್ಟಿತು,ಮತ್ತಃ-ನನ್ನ ದೆಸೆಯಿಂದ,ಪುತ್ರಾನ್-ಮಕ್ಕಳನ್ನು,ಅಭೀಪ್ಸಸಿ-ಇಚ್ಛೆಸುತ್ತೀ. .. ... .. ||೫೧||

ವರ್ಣ-ವರ್ಣದಂತೆ ವರ್ಣವುಳ್ಳ, ಅಂಬರ-ಪೀತಾಂಬರವುಳ್ಳ, ಆವೃತಃ-ಸುತ್ತಿಕೊಳ್ಳಲ್ಪಟ್ಟವನಾಗಿ, ಶುದ್ಧಜಾಂಬೂನದಪ್ರಖ್ಯಾಂ-ಶುದ್ಧಜಾಂಬೂನದ, ಶೋಧಿತವಾದ ಅಪರಂಜಿಯ, ಪ್ರಖ್ಯಾಂ-ಬಣ್ಣದಂತೆ ಬಣ್ಣವುಳ್ಳ, ವಾಮಾಂಕಸಂಸ್ಥಿತಾಂ-ಎಡಭಾಗದ ತೊಡೆಯಲ್ಲಿಕುಳಿತುಕೊಂಡಿರುವ, ಸದಾ-ನಿರಂತರವೂ, ಅನಪಾಯಿನೀಂ-ನಾಶರಹಿತಳಾದ, ಶ್ರಿಯಂದೇವೀಂ-ಲಕ್ಷ್ಮೀದೇವಿಯನ್ನು, ಆಲಿಂಗ್ಯ- ಅಪ್ಪಿಕೊಂಡು, ಪಶ್ಯನ್-ನೋಡುತ್ತಿರುವನಾಗಿ, ತಿಷ್ಠತಿ-ಇರುತ್ತಾನೇ ॥೫೦೪॥

ಮೂ॥ ದ್ರಷ್ಟುಂನಶಕ್ಯತೆಕೈಶ್ಚಿದ್ದೇವದಾನವಪನ್ನಗೈಃ। ಯಸ್ಯಪ್ರಸಾದಂಕುರುತೆಸಚೈನಂದ್ರ
ಷ್ಟುಮರ್ಹತಿ ... ... ॥೫೧೪॥

ಟೀ॥ ದೇವದಾನವಪನ್ನಗೈಃ-ದೇವತೆಗಳಿಂದಲೂ, ದಾನವರಿಂದಲೂ, ಸರ್ಪಗಳಿಂದಲೂ, ಕೈಶ್ಚಿತ್-ಮತ್ತು ಯಾರಿಂದಲೂ, ಅಯಂ-ಈ ಶ್ರೀಮಹಾ ವಿಷ್ಣುವು, ದ್ರಷ್ಟುಂ - ನೋಡುವದಕ್ಕೋಸುಗ, ನಶಕ್ಯತೆ-ಸಾಧ್ಯನಲ್ಲಾ, ಯಸ್ಯ-ಯಾವ ಭಕ್ತನಿಗೆ, ಪ್ರಸಾದಂ- ಅನುಗ್ರಹವನ್ನು, ಕುರುತೇ-ಮಾಡುವನೋ, ಸಚ-ಆ ಭಕ್ತನೇ, ಏನಂ-ಈ ಶ್ರೀರಾಮನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಅರ್ಹತಿ-ಯೋಗ್ಯನಾಗುತ್ತಾನೆ. .. ॥೫೧೪॥

ಮೂ॥ ನಚಯಜ್ಞತಪೋಭಿರ್ವಾನದಾನಾಧ್ಯಯನಾದಿಭಿಃ । ಶಕ್ಯತೆಭಗವಾನ್ದ್ರಷ್ಟುಮುಪಾ
ಯೈರಿತರೈರಪಿ ... ... ॥೫೨೪॥

ಟೀ॥ ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಮಹಾವಿಷ್ಣುವು,ಯಜ್ಞತಪೋಭಿರ್ವಾ-ಯಜ್ಞ ಅಗ್ನಿಷ್ಟೋಮಾದಿಯಜ್ಞಗಳಿಂದಲೇ ಆಗಲಿ,ತಪೋಭಿರ್ವಾ-ಕೃಚ್ಛ್ರ ಚಾಂದ್ರಾಯಣಾದ್ಯುಪವಾಸರೂಪ ತಪಗಳಿಂದಲೇ ಆಗಲೀ, ದ್ರಷ್ಟುಂ-ನೋಡುವದಕ್ಕೋಸುಗ, ನಶಕ್ಯತೆ-ಸಾಧ್ಯನಲ್ಲಾ, ನದಾನಾಧ್ಯಯನಾದಿಭಿಃ-ದಾನವೂವೇದಾಧ್ಯಯನವೇ ಮೊದಲಾಗುಳ್ಳವುಗಳಿಂದಲೇಆಗಲೀ, ಇತರೈಃ-ತದಿತರಗಳಾದ, ಉಪಾಯೈರಪಿ-ಉಪಾಯಗಳಿಂದಲೂನು, ದ್ರಷ್ಟುಂ-ನೋಡುವದಕ್ಕೋಸುಗ, ನಶಕ್ಯತೆ-ಸಾಧ್ಯನಲ್ಲಾ॥

ಮೂ॥ ತದ್ಭಕ್ತೈಸ್ತದ್ಗತಪ್ರಾಣೈಸ್ತಚ್ಚಿತ್ತೈರ್ಧೂತಕಲ್ಮಷೈಃ । ಶಕ್ಯತೆಭಗವಾನ್ವಿಷ್ಣು
ರ್ವೇದಾಂತಾಮಲದೃಷ್ಟಿಭಿಃ ... ... ॥೫೩೪॥

ಟೀ॥ ಭಗವಾನ್-ಪೂಜ್ಯನಾದ, ವಿಷ್ಣುಃ-ವಿಷ್ಣುವು, ತದ್ಗತಪ್ರಾಣೈಃ-ಆ ವಿಷ್ಣುವಿನನ್ನೇಹೊಂದಿದ ಪ್ರಾಣಶಕ್ತಿಗಳುಳ್ಳ,(ಅಂದರೆ, ತನ್ನ ಪ್ರಾಣಕ್ಕಿಂತಲೂ ಭಗವಂತನಲ್ಲಿ ಅತಿಪ್ರೇಮೆಯುಳ್ಳ) ತಚ್ಚಿತ್ತೈಃ- ತದೇಕಾಯತ್ತಚಿತ್ತರಾದ, ಧೂತಕಲ್ಮಷೈಃ-ಧೂತ-ಕೊಡಹಲ್ಪಟ್ಟ, ಕಲ್ಮಷೈಃ-ಪಾಪಗಳುಳ್ಳ,ವೇದಾಂತಾಮಲದೃಷ್ಟಿಭಿಃ-ವೇದಾಂತ-

ಉಪನಿಸಿದ ದರ್ಶಜ್ಞಾನದಿಂದ, ಅಮಲ-ನಿರ್ಮಲವಾದ, ದೃಷ್ಟಿಭಿಃ-ಜ್ಞಾನದೃಷ್ಟಿಯುಳ್ಳ, ತದ್ಭಕ್ತ್ಯೈಃ-ತತ್-ಆ ಶ್ರೀರಾಮನಲ್ಲಿ, ಭಕ್ತ್ಯೈಃ-ಭಕ್ತಿಯುಳ್ಳವರಿಂದಲೇ, ದ್ರಷ್ಟುಂ-ನೋಡುವದಕ್ಕೋಸ್ಕರ, ಶಕ್ಯತೆ-ಅರ್ಹನಾಗುತ್ತಾನೇ .. .. .. ||೫೩೫||

ಮೂ॥ ಅಥವಾದ್ರಷ್ಟುಮಿಚ್ಛಾತೇಶೃಣುತ್ವಂಪರಮೇಶ್ವರಂ । ತ್ರೇತಾಯುಗೆಸದೇವೇಶೋಭವಿ
ತಾನೃಪವಿಗ್ರಹಃ ... ... ||೫೪||

ಟೀ॥ ಅಥವಾ-ಹಾಗಲ್ಲದೆ ಹೋದರೇ, ತೆ-ನಿನಗೆ, ಪರಮೇಶ್ವರಂ-ಜಗದೀಶ್ವರನಾದ ಶ್ರೀಮಹಾವಿಷ್ಣುವಿನನ್ನು, ದ್ರಷ್ಟುಂ-ನೋಡುವದಕ್ಕೋಸುಗ, ಇಚ್ಛಾ- ಇಚ್ಛೆಯು, ಅಸ್ತಿಯದಿ-ಇದ್ದದ್ದೇ ಆದರೇ, ತ್ವಂ-ನೀನು, ಶೃಣು-ಕೇಳು, ತ್ರೇತಾಯುಗೇ-ತ್ರೇತಾಯುಗದಲ್ಲಿ, ದೇವಶಃ-ದೇವತಾಸ್ವಾಮಿಯಾದ, ಸಃ-ಆ ಶ್ರೀಮಹಾವಿಷ್ಣುವು, ನೃಪವಿಗ್ರಹಃ-ನೃಪ-ರಾಜನ, ವಿಗ್ರಹಃ-ಶರೀರಮುಳ್ಳವನು, ಭವಿತಾ-ಆಗುವನು .. .. ||೫೪೫||

ಮೂ॥ ಹಿತಾರ್ಥಂದೇವಮರ್ತ್ಯಾನಾಂಇಕ್ಷ್ವಾಕೂಣಾಂಕುಲೇಹರಿಃ । ರಾಮೋದಾಶರಥಿ
ರ್ಭೂತ್ವಾಮಹಾಸತ್ವಪರಾಕ್ರಮಃ ||೫೫||

ಟೀ॥ ಹರಿಃ-ಶ್ರೀಮಹಾವಿಷ್ಣುವು, ದೇವಮರ್ತ್ಯಾನಾಂ-ದೇವತೆಗಳಿಗೂ, ಮನುಷ್ಯರಿಗೂನು, ಹಿತಾರ್ಥಂ-ಹಿತವನ್ನು ಮಾಡುವದಕ್ಕೋಸ್ಕರ, ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥರಾಜರುಗಳ, ಕುಲೆ- ವಂಶದಲ್ಲಿ, ಮಹಾಸತ್ವಪರಾಕ್ರಮಃ - ಮಹಾ-ದೊಡ್ಡದಾದ, ಸತ್ವ-ಬಲವು, ಪರಾಕ್ರಮಃ - ಶೌರ್ಯವೂನೂವುಳ್ಳ, ದಾಶರಥಿಃ-ದಶರಥನುಹಾರಾಜನ ಮಗನಾದ, ರಾಮಃ-ಶ್ರೀರಾಮನು, ಭೂತ್ವಾ-ಆಗಿ. .. .. ||೫೫೫||

ಮೂ॥ ಪಿತುರ್ನಿಯೋಗಾತ್ಸಭ್ರಾತ್ರಾಭಾರ್ಯಯಾದಂಡಕೇವನೆ । ವಿಚರಿಷ್ಯತಿಧರ್ಮಾತ್ಮಾಜ
ಗನ್ಮಾತ್ರಾಸ್ವಮಾಯಯಾ ||೫೬||

ಟೀ॥ ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆರಾಮಾವತಾರವೆತ್ತಿದ ಶ್ರೀ ಮಹಾವಿಷ್ಣುವು, ಪಿತುಃ-ತಂದೆಯಾದ ದಶರಥರಾಯನ, ನಿಯೋಗಾತ್-ಅಜ್ಞದ ದೆಸೆಯಿಂದ, ಭ್ರಾತ್ರಾ-ತಮ್ಮನಾದ ಲಕ್ಷ್ಮಣನೊಡನೆ, ಜಗನ್ಮಾತ್ರಾ-ಜಗಜ್ಜನನಿಯಾದ, ಸ್ವಮಾಯಯಾ-ತನ್ನ ಮಾಯಾಸ್ವರೂಪಳಾದ, ಭಾರ್ಯಯಾ-ಹೆಂಡತಿಯಾದ ಸೀತಾದೇವಿಯೊಡನೇ, ದಂಡಕೇವನೆ, ದಂಡಕಾರಣ್ಯದಲ್ಲಿ, ವಿಚರಿಷ್ಯತಿ-ಸಂಚರಿಸುವನು. .. .. ||೫೬||

ಮೂ|| ಏವಂತೆಸರ್ವಮಾಖ್ಯಾತಂಮಯಾರಾವಣವಿಸ್ತರಾತ | ಭಜಸ್ವಭಕ್ತಿಭಾವೇನತದಾರಾಮಂಶ್ರಿಯಾಯುತಂ || ||೫೭||

ಟೀ || ಹೇರಾವಣ-ಎಲೈ ರಾವಣನೇ, ತೆ-ನಿನಗೆ, ಏವಂ-ಈಪರಿಯಾಗಿ, ವಿಸ್ತರಾತ್-ವಿಸ್ತಾರದಿಂದ, ಸರ್ವಂ-ಸಮಸ್ತವೂ, ಮಯಾ-ನನ್ನಿಂದ, ಆಖ್ಯಾತಂ- ಹೇಳಲ್ಪಟ್ಟಿತು, ತದಾ-ಆ ರಾಮಾವತಾರ ಕಾಲದಲ್ಲಿ, ಶ್ರಿಯಾ-ಲಕ್ಷ್ಮೀಸ್ವರೂಪಳಾದ ಸೀತಾದೇವಿಯಿಂದ, ಯುತಂ-ಕೂಡಿಕೊಂಡಿರುವ, ರಾಮಂ-ಶ್ರೀರಾಮನನ್ನು, ಭಕ್ತಿಭಾವೇನ-ಭಕ್ತಿಯಿಂದ ಕೂಡಿದ ಅಭಿಪ್ರಾಯದಿಂದ, ಭಜಸ್ವ-ಭಜನಮಾಡು. ||೫೭||

ಮೂ|| ಏವಂಶ್ರುತ್ವಾಸುರಾಧ್ಯಕ್ಷೋಧ್ಯಾತ್ವಾಕಿಂಚಿದ್ವಿಚಾರ್ಯಚ | ತ್ವಯಾಸಹವಿರೋಧೇಪ್ಸುರ್ಮುಮುದೇರಾವಣೋಮಹಾನ್ || ||೫೮||

ಟೀ|| ಅಸುರಾಧ್ಯಕ್ಷಃ-ರಾಕ್ಷಸಾಧಿಪತಿಯಾದ, ಮಹಾನ್-ದೊಡ್ಡವನಾದ, ರಾವಣಃ-ರಾವಣನು, ಏವಂ-ಈಪರಿಯಾಗಿ, ಶ್ರುತ್ವಾ-ಕೇಳಿ, ಕಿಂಚಿತ್-ಕೊಂಚವಾಗಿ, ವಿಚಾರ್ಯಚ-ವಿಮರ್ಶೆಯನ್ನೂ ಮಾಡಿ, ತ್ವಯಾಸಹ-ನಿನ್ನೊಡನೇ, ವಿರೋಧೇಪ್ಸುಃ-ದ್ವೇಷವನ್ನೇ ಕೋರುತ್ತಿರುವನಾಗಿ, ಮುಮುದೇ-ಸಂತೋಷಿಸಿದನು. ||೫೮||

ಮೂ|| ಯುದ್ಧಾರ್ಥೀಸರ್ವತೋಲೋಕಾನ್ ಪರ್ಯಟನ್ಸಮವಸ್ಥಿತಃ || ಏತದರ್ಥಮ್ಮಹಾರಾಜರಾವಣೋತೀವಬುದ್ಧಿಮಾನ್ || ||೫೯||

ಟೀ|| ಹೇ ಮಹಾರಾಜ-ಎಲೈ ಶ್ರೀರಾಮನೆ, ಅತೀವ-ಅತ್ಯಂತವಾಗಿ, ಬುದ್ಧಿಮಾನ್-ಬುದ್ಧಿಶಾಲಿಯಾದ, ರಾವಣಃ-ರಾವಣನು, ಏತದರ್ಥಂ-ಇದಕ್ಕೋಸ್ಕರವಾಗಿ, ಯುದ್ಧಾರ್ಥೀ-ಕಾಳಗವನ್ನೇ ಬೇಡುತ್ತಿರುವನಾಗಿ, ಸರ್ವತಃ-ಸಮಸ್ತಗಳಾದ, ಲೋಕಾನ್-ಲೋಕಗಳಲ್ಲಿ, ಪರ್ಯಟನ್-ಸಂಚಾರಮಾಡುತ್ತಿರುವನಾಗಿ, ಸಮವಸ್ಥಿತಃ-ನಿಂತವನಾಗಿ

ಮೂ|| ಹೃತವಾನ್ಜಾನಕೀಂದೇವೀಂತ್ವಯಾತ್ಮವಧಕಾಂಕ್ಷಯಾ|

ಟೀ|| ತ್ವಯಾ-ನಿನ್ನಿಂದ, ಆತ್ಮವಧಕಾಂಕ್ಷಯಾ-ಆತ್ಮ-ತನ್ನ, ವಧ-ಸಂಹಾರದ, ಕಾಂಕ್ಷಯಾ-ಕೋರಿಕೆಯಿಂದ, ಜಾನಕೀಂದೇವೀಂ-ಸೀತಾದೇವಿಯನ್ನು, ಹೃತವಾನ್-ಅಪಹರಿಸಿದನು. ||೫೯||

ಮೂ || ಇಮಾಂಕಥಾಂಯಶ್ಶೃಣುಯಾತ್ಪಠೇದ್ವಾ ಸಂಶ್ರಾವಯೇದ್ವಾ ಶ್ರವಣಾರ್ಥಿನಾಂ ಸದಾ ||
ಆಯುಷ್ಯಮಾರೋಗ್ಯಮನಂತಸೌಖ್ಯಂ ಪ್ರಾಪ್ನೋತಿ ಲಾಭಂ ಧನಮಕ್ಷಯಂಚ ||೬೦||

ಟೀ|| ಯಃ-ಯಾವ ಪುರುಷನು, ಇಮಾಂಕಥಾಂ-ಈ ಕಥೆಯನ್ನು, ಸದಾ-ನಿರಂತರವು, ಶೃಣುಯಾತ್-ಕೇಳುವನೋ, ಪಠೇದ್ವಾ-ಪಾರಾಯಣಮಾಡುವನೊ, ಶ್ರವಣಾರ್ಥಿನಾಂ-ಕೇಳುವದಕ್ಕೆ ಇಚ್ಛೆಯುಳ್ಳವರಿಗೆ, ಸಂಶ್ರಾವಯೇದ್ವಾ-ಕೇಳಿಸುವನೊ, ಸಃ-ಆ ಪುರುಷನು, ಆಯುಷ್ಯಂ-ದೀರ್ಘಾಯುರ್ಭಾವವನ್ನು, ಆರೋಗ್ಯಂ- ಆರೋಗ್ಯಭಾಗ್ಯವನ್ನು, ಅನಂತಸೌಖ್ಯಂ-ಅನಂತ-ನಾಶವಿಲ್ಲದ, ಸೌಖ್ಯಂ-ಸುಖವನ್ನು, ಲಾಭಂ-ಲಾಭವನ್ನು, ಅಕ್ಷಯಂ-ನಾಶವಿಲ್ಲದಿರುವ, ಧನಂಚ-ಧನವನ್ನು, (ಯದ್ವಾ) ಧನಂ- ಧನರೂಪವಾದ, ಲಾಭಂ-ಅರ್ಥಲಾಭವನ್ನು, ಪ್ರಾಪ್ನೋತಿ-ಹೊಂದುವನು. ||೬೦||

ಇತಿ ಶ್ರೀಮದಧ್ಯಾತ್ಮ ರಾಮಾಯಣೇ ಉಮಾಮಹೇಶ್ವರ ಸಂವಾದೇ ಉತ್ತರಕಾಂಡೇ ತೃತೀಯಸ್ಸರ್ಗಃ.

---

ಮೂ|| ಏಕದಾಬ್ರಹ್ಮಣೋಲೋಕಾದಾಯಾಂತಂನಾರದಂಮುನಿಂ। ಪರ್ಯಟನ್ ರಾವಣೋಲೋಕಾನ್ದೃಷ್ಟ್ವಾನತ್ವಾಬ್ರವೀದ್ವಚಃ ||೧||

ಟೀ|| ಏಕದಾ-ಒಂದಾನೊಂದು ದಿನದಲ್ಲಿ, ಲೋಕಾನ್-ಲೋಕಗಳಂ ಕುರಿತು, ಪರ್ಯಟನ್-ಸಂಚರಿಸುತ್ತಿರುವ, ರಾವಣಃ-ರಾವಣನು, ಬ್ರಹ್ಮಣಃ- ಚತುರ್ಮುಖ ಬ್ರಹ್ಮನ, ಲೋಕಾತ್-ಸತ್ಯಲೋಕದ ದೆಸೆಯಿಂದ, ಆಯಾಂತಂ-ಬರುತಿರುವ, ನಾರದಂಮುನಿಂ-ನಾರದ ಋಷಿಯನ್ನು, ದೃಷ್ಟ್ವಾ-ಕಂಡು, ನತ್ವಾ-ನಮಸ್ಕರಿಸಿ,ವಚಃ-ಮಾತನ್ನು, ಅಬ್ರವೀತ್-ನುಡಿದನು. ||೧||

ಮೂ|| ಭಗವನ್ ಬ್ರೂಹಿಮೇಯೋದ್ಧುಂಕುತ್ರಸಂತಿಮಹಾಬಲಾಃ || ಯೋದ್ಧುಮಿಚ್ಛಾಮಿಬಲಿಭಿಸ್ತ್ವಂಜ್ಞಾತಾಸಿಜಗತ್ತ್ರಯಂ || ||೨||

ಟೀ|| ಹೆ ಭಗವನ್-ಎಲೈ ಪೂಜ್ಯನಾದ ನಾರದಋಷಿಯೇ, ತ್ವಂ-ನೀನು, ಜಗತ್ತ್ರಯಂ-ಲೋಕತ್ರಯವನ್ನು,ಜ್ಞಾತಾ- ತಿಳಿದವನು, ಅಸಿ-ಆಗಿದ್ದೀ, ಬಲಿಭಿಃ- ಬಲವಂತರೊಡನೆ, ಯೋದ್ಧುಂ-ಕಾಳಗಮಾಡುವದಕ್ಕೋಸುಗ, ಇಚ್ಛಾಮಿ-ಬೇಡುತ್ತೇನೆ, ಮೇ-ನನಗೆ, ಯೋದ್ಧುಂ-ಕಾಳಗ ಮಾಡುವದಕ್ಕೋಸುಗ, ಮಹಾಬಲಾಃ- ಮಹಾ ಬಲವಂತರೂ,ಕುತ್ರ-ಎಲ್ಲಿ, ಸಂತಿ-ಇರುತ್ತಾರೆ, ತಾನ್-ಅವರನ್ನು, ಬ್ರೂಹಿ-ಹೇಳು. ||೩||

ಮೂ|| ಮುನಿರ್ಧ್ಯಾತ್ವಾಹಸುಚಿರಂಶ್ವೇತದ್ವೀಪನಿವಾಸಿನಃ । ಮಹಾಬಲಾಮಹಾಕಾಯಾ
ಸ್ತತ್ರಯಾಹಿಮಹಾಮತೇ ॥ ... ... ||೩||

ಟೀ|| ಮುನಿಃ-ನಾರದಮಹಾಮುನಿಯು, ಸುಚಿರಂ-ಬಹುಕಾಲವು, ಧ್ಯಾತ್ವಾ-ಧ್ಯಾನಮಾಡಿ, ಹೆ ಮಹಾಮತೆ, ಎಲೈ ಮಹಾ ಬುದ್ಧಿಯುಳ್ಳವನೇ, ಶ್ವೇತದ್ವೀಪನಿವಾಸಿನಃ-ಶ್ವೇತದ್ವೀಪದಲ್ಲಿರುವವರು, ಮಹಾಬಲಾಃ-ಬಲವಂತರಾಗಿಧಾರೇ, ಮಹಾಕಾಯಾಃ-ದೊಡ್ಡ ಶರೀರಮುಳ್ಳವರಾಗಿಧಾರೇ, ತತ್ರ-ಅಲ್ಲಿ, ಯಾಹಿ-ಪೋಗು, ಇತಿ-ಇಂತೆಂದು, ಆಹ-ಪೇಳಿದನು. ... ... ... ... ... ||೩||

ಮೂ|| ವಿಷ್ಣುಪೂಜಾರತಾಯೆವೈವಿಷ್ಣುನಾನಿಹತಾಶ್ಚಯೆ । ತಏವತತ್ರಸಂಜಾತಾಃಅಜೆಯಾ
ಶ್ಚಸುರಾಸುರೈಃ ॥ ... ... ||೪||

ಟೀ|| ಯೆ-ಯಾರು, ವಿಷ್ಣುಪೂಜಾರತಾಃ-ಸರ್ವಕಾಲದಲ್ಲಿಯೂ ವಿಷ್ಣುವಿನ ಪೂಜೆಯಲ್ಲಿ ಆಸಕ್ತರೊ, ವಿಷ್ಣುನಾ-ಶ್ರೀಮಹಾವಿಷ್ಣುವಿನಿಂದ, ನಿಹತಾಶ್ಚ-ಹೊಡೆಯಲ್ಪಟ್ಟವರು, ಯೆ-ಯಾರೋ, ತಏವ-ಅವರೇ, ತತ್ರ-ಆ ಶ್ವೇತದ್ವೀಪದಲ್ಲಿ, ಸಂಜಾತಾಃ-ಹುಟ್ಟಿದವರಾಗಿ, ಸುರಾಸುರೈಃ-ದೇವರಾಕ್ಷಸರಿಂದ, ಅಜೆಯಾಶ್ಚ-ಜಯಿಸ ಲಸಾಧ್ಯರಾಗಿಧಾರೇ. .. .. .. .. .. .. ||೪||

ಮೂ|| ಶೃತ್ವಾತದಾರಾವಣೊವೇಗಾನ್ಮಂತ್ರಿಭಿಃಪುಷ್ಪಕೇಣತಾನ್ । ಯೊದ್ಧುಕಾಮಸ್ಸಮಾಗ
ತ್ಯಶ್ವೇತದ್ವೀಪಸಮೀಪತಃ ॥ ... ... ||೫||

ಟೀ|| ರಾವಣಃ-ರಾವಣನು, ತತ್-ಆ ನಾರದ ವಚನವನ್ನು, ಶೃತ್ವಾ-ಕೇಳಿ, ಪುಷ್ಪಕೇಣ-ಪುಷ್ಪಕದಿಂದ, ತಾನ್-ಆ ಶ್ವೇತದ್ವೀಪವಾಸಿಗಳಂ ಕುರಿತು,ಯೊದ್ಧುಕಾಮಃ-ಕಾಳಗ ಮಾಡುವದಕ್ಕೆ ಇಚ್ಛೆಯುಳ್ಳವನಾಗಿ, ಮಂತ್ರಿಭಿಃ-ಮಂತ್ರಿಗಳೊಡನೆ, ಸಮಾಗತ್ಯ-ಬಂದು, ಶ್ವೇತದ್ವೀಪಸಮೀಪತಃ-ಶ್ವೇತದ್ವೀಪಸಮೀಪದಲ್ಲಿ. ||೫||

ಮೂ|| ತತ್ಪ್ರಭಾಹತತೇಜಸ್ಕಂಪುಷ್ಪಕಂನಾಚಲತ್ತತಃ । ತ್ಯಕ್ತ್ವಾವಿಮಾನಂಪ್ರಯಯೌ
ಮಂತ್ರಿಣಶ್ಚದಶಾನನಃ ॥ ... ... ||೬||

ಟೀ|| ಪುಷ್ಪಕಂ-ಪುಷ್ಪಕವಿಮಾನವು, ತತ್ಪ್ರಭಾಹತತೇಜಸ್ಕಂ-ತತ್-ಆ ಶ್ವೇತದ್ವೀಪದ, ಪ್ರಭಾ-ಕಾಂತಿವಿಶೇಷದಿಂದ, ಹತ-ಹೊಡೆಯಲ್ಪಟ್ಟ, ತೇಜಸ್ಕಂ - ತೇಜಸ್ಸುಳ್ಳ

ದ್ದಾಗಿ, ತತಃ-ಅದರ ಸಮೀಪಕ್ಕಿಂತಲೂ ಆಚೆ,ನಾಚಲತ್-ಕದಲದೇಹೋಯಿತು, ದಶಾನನಃ-ರಾವಣಾಸುರನು, ವಿಮಾನಂ-ವಿಮಾನವನ್ನು, ತ್ಯಕ್ತ್ವಾ-ಬಿಟ್ಟು, ಪ್ರಯಯೌ-ಹೊರಟನು, ಮಂತ್ರಿಣಶ್ಚ-ಮಂತ್ರಿಗಳೂಕೂಡ, ಪ್ರಯಯುಃ-ಹೊರಟರು ... ... ||೬||

ಮೂ॥ ಪ್ರವಿಶನ್ನೇವತದ್ದ್ವೀಪಂಧೃತೋಹಸ್ತೇನಯೋಷಿತಾ । ಪೃಷ್ಟಶ್ಚ ತ್ವಂಕುತಃಕೋಸಿಪ್ರೇ
ಷಿತಃಕೇನವಾವದ ॥ ... ... ||೭||

ಟೀ॥ ತದ್ದ್ವೀಪಂ-ಆ ದ್ವೀಪವನ್ನು, ಪ್ರವಿಶನ್ನೇವ-ಪ್ರವಿಷ್ಟನಾಗುತ್ತಲೇ, ಯೋಷಿತಾ-ಸ್ತ್ರೀಯಿಂದ, ಹಸ್ತೇನ-ಒಂದು ಕೈಯಿಂದ, ಧೃತಃ-ಧರಿಸಲ್ಪಟ್ಟವನಾಗಿ, ತ್ವಂ-ನೀನು, ಕುತಃ-ಯಲ್ಲಿಂದ ಬಂದೆ, ಕಃ-ಯಾರೋನು, ಅಸಿ-ಆಗಿದ್ದೀ, ಕೇನವಾ-ಯಾರಿಂದತಾನೇ, ಪ್ರೇಷಿತಃ-ಕಳುಹಿಸಲ್ಪಟ್ಟೀ, ವದ-ಹೇಳು, ಇತಿ-ಇಂತೆಂದು, ಪೃಷ್ಟಃ-ಕೇಳಲ್ಪಟ್ಟನು. .. .. .. .. ||೭||

ಮೂ॥ ಇತ್ಯುಕ್ತೋ ಲೀಲಯಾಸ್ತ್ರೀಭಿಃಹಸಂತೀಭಿಃಪುನಃಪುನಃ। ಕೃಚ್ಛ್ರಾದ್ಧಸ್ತಾನ್ವಿನಿರ್ಮು
ಕ್ತಸ್ತಾಸಾಂಸ್ತ್ರೀಣಾಂದಶಾನನಃ ॥ ... ||೮||

ಟೀ॥ ದಶಾನನಃ-ರಾವಣನು, ಹಸಂತೀಭಿಃ-ನಗುತ್ತಿರುವ, ಸ್ತ್ರೀಭಿಃ-ಹೆಂಗಸರಿಂದ, ಇತಿ-ಈಪರಿಯಾಗಿ, ಸಲೀಲಂ-ವಿಲಾಸದಿಂದೊಡಗೂಡಿದಂತೆ, ಪುನಃಪುನಃ- ಬಾರಿಬಾರಿಗೂ, ಉಕ್ತಃ-ಹೇಳಲ್ಪಟ್ಟವನಾಗಿ, ಕೃಚ್ಛ್ರಾತ್-ಕಷ್ಟದ ದೆಸೆಯಿಂದ, ತಾಸಾಂಸ್ತ್ರೀಣಾಂ-ಆ ಹೆಂಗಸರ,ಹಸ್ತಾತ್-ಹಸ್ತದದೆಸೆಯಿಂದ,ವಿನಿರ್ಮುಕ್ತಃ-ಬಿಡಲ್ಪಟ್ಟವನಾದನು॥

ಮೂ॥ ಆಶ್ಚರ್ಯಮತುಲಂಲಬ್ಧ್ವಾಚಿಂತಯಾಮಾಸದುರ್ಮತಿಃ। ವಿಷ್ಣುನಾನಿಹತೋಯಾಮಿವೈ
ಕುಂಠಮಿತಿನಿಶ್ಚಿತಃ ॥ ... ... ... ||೯||

ಟೀ॥ ದುರ್ಮತಿಃ-ದುಷ್ಟಬುದ್ಧಿಯುಳ್ಳ ರಾವಣನು, ಅತುಲಂ-ಸಮಾನವಿಲ್ಲದಿರುವ, ಆಶ್ಚರ್ಯಂ-ಆಶ್ಚರ್ಯವನ್ನು, ಲಬ್ಧ್ವಾ-ಹೊಂದಿ, ಚಿಂತಯಾಮಾಸ- ಆ ಲೋಚಿಸಿದನು, ವಿಷ್ಣುನಾ-ಶ್ರೀಮಹಾವಿಷ್ಣುವಿನಿಂದ, ನಿಹತಃ-ಹೊಡೆಯಲ್ಪಟ್ಟವನಾಗಿ, ಅಹಂ-ನಾನು, ವೈಕುಂಠಂ-ವೈಕುಂಠವನ್ನು, ಯಾಮಿ-ಹೊಂದುವೆನು, ಇತಿ- ಇಂತೆಂದು, ನಿಶ್ಚಿತಃ-ನಿಶ್ಚಯಮುಳ್ಳವನಾದವನು. ||೯||

ಮೂ॥ ಮಯಿವಿಷ್ಣೌ ರ್ಯಥಾಕುಪ್ಯೇತ್ತಥಾಕಾರ್ಯ್ಯಂಕರೋಮ್ಯಹಂ। ಇತಿನಿಶ್ಚಿತ್ಯವೈದೇಹೀಂಜಹಾ
ರವಿಪಿನೇಸುರಃ ॥ ... ... ... ||೧೦||

ಟೀ॥ ವಿಷ್ಣೌಃ-ಶ್ರೀ ಮಹಾ ವಿಷ್ಣುವು, ಮಯಿ-ನನ್ನಲ್ಲಿ, ಯಥಾ-ಹ್ಯಾಗೆ, ಕುಪ್ಯೇತ್-ಕೋಪಿಸುವನೋ, ತಥಾ-ಹಾಗೆ, ಕಾರ್ಯಂ-ದ್ವೇಷಕಾರ್ಯ್ಯವನ್ನು, ಅಹಂ-ನಾನು, ಕರೋಮಿ-ಮಾಡುತ್ತೇನೆ, ಇತಿ-ಇಂತೆಂದು, ನಿಶ್ಚಿತ್ಯ-ನಿಶ್ಚಯಿಸಿ, ಅಸುರಃ-ರಾಕ್ಷಸನಾದ ರಾವಣನು, ವೈದೇಹೀಂ-ಸೀತಾದೇವಿಯನ್ನು, ವಿಪಿನೇ-ಅರಣ್ಯದಲ್ಲಿ, ಜಹಾರ- ಅಪಹರಿಸಿದನು. .. - .. .. ||೧೦||

ಮೂ॥ ಜಾನನ್ನೇವಪರಾತ್ಮಾನಂಸಜಹಾರಾವನೀಸುತಾಂ । ಮಾತೃವತ್ಪಾಲಯಾಮಾಸತ್ವ
ತ್ತಃಕಾಂಕ್ಷನ್ವಧಂಸ್ವಕಂ ॥ ... ... ... ||೧೧||

ಟೀ॥ ಸಃ-ಆ ರಾವಣನು, ಪರಾತ್ಮಾನಂ-ಪರಮಾತ್ಮಸ್ವರೂಪನಾದ ನಿನ್ನನ್ನು, ಜಾನನ್ನೇವ-ತಿಳಿದವನಾಗಿಯೇ, ತ್ವತ್ತಃ-ನಿನ್ನಿಂದ, ಸ್ವಕಂ-ಸ್ವಕೀಯ್ಯವಾದ,ವಧಂ-ಸಂಹಾರವನ್ನು, ಕಾಂಕ್ಷನ್-ಕೋರುತ್ತಿರುವನಾಗಿ, ಅವನೀಸುತಾಂ-ಸೀತಾದೇವಿಯನ್ನು, ಜಹಾರ-ಅಪಹರಿಸಿದನು, ಮಾತೃವತ್-ತಾಯಿಯನ್ನಂತೆ, ಪಾಲಯಾಮಾಸ- ಪರಿಪಾಲಿಸಿದನು. ... ... ... ... ||೧೧||

ಮೂ॥ ರಾಮತ್ವಂಪರಮೇಶ್ವರೋಪಿಸಕಲಂಜಾನಾಸಿವಿಜ್ಞಾನದೃಕ್ಭೂತಂಭವ್ಯಮಿದಂತ್ರಿಕಾ
ಲಕಲನಾಸಾಕ್ಷೀವಿಕಲ್ಪೋಜ್ಝಿತಃ । ಭಕ್ತಾನಾಮನುವರ್ತನಾಯಸಕಲಾಂಕುರ್ವನ್ಕ್ರಿಯಾಸಂಹ
ತಿಂತ್ವಂಶೃಣ್ವನ್ಮನುಜಾಕೃತಿರ್ಮುನಿವಚೋಭಾಸೀಶಲೋಕಾರ್ಚಿತಃ ॥ ||೧೨||

ಟೀ॥ ಹೇ ಈಶ-ಎಲೈ ಸ್ವಾಮಿಯೇ, ಹೇ ರಾಮ-ಎಲೈ ಶ್ರೀರಾಮನೆ, ತ್ವಂ-ನೀನು, ಪರಮೇಶ್ವರೋಪಿ-ಪರಮೇಶ್ವರನಾದರೂನು, ಸಕಲಂ-ಸಮಸ್ತವಾದ, ಭೂತಂ-ಹಿಂದೆ ನಡೆದಂಥಾ, ಭವ್ಯಂ-ಮುಂದೆ ಆಗತಕ್ಕ, ಇದಂ-ಈಪ್ರಪಂಚವನ್ನು, ಜಾನಾಸಿ-ತಿಳಿದಿದ್ದೀ, ವಿಜ್ಞಾನದೃಕ್-ವಿಜ್ಞಾನ-ಸ್ವರೂಪಜ್ಞಾನವೇ, ದೃಕ್-ದೃಷ್ಟಿಯಾಗುಳ್ಳ, ತ್ವಂ-ನೀನು, ತ್ರಿಕಾಲಕಲನಾಸಾಕ್ಷೀ-ತ್ರಿ-ಮೂರಾದ, ಕಾಲ - ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿ, ಕಲನಾ-ಆಯಾಯಕಾಲ ವೈಶಿಷ್ಟ್ಯವನ್ನು ಕುರಿತು, ಸಾಕ್ಷೀ-ದ್ರಷ್ಟುವಾಗಿದ್ದಂಥಾವನಾಗಿ, ವಿಕಲ್ಪೋಜ್ಝಿತಃ - ವಿಕಲ್ಪ-ಕಾರ್ಯ್ಯ ಕಾರಣ ಕರ್ತೃಗಳೆಂಬ ಭೇದದಿಂದ, ಉಜ್ಝಿತಃ-ಬಿಡಲ್ಪಟ್ಟವನಾಗಿ, (ಅಥವಾ ವಿಕಲ್ಪೋಜ್ಝಿತಃ-ಪರಿತ್ಯಕ್ತವಾದ

ಸಂಶಯಮುಳ್ಳವನಾಗಿ, ಭಕ್ತಾನಾಂ-ಭಕ್ತರ, ಅನುವರ್ತನಾಯ-ಅವರವರಗಳಿಂದ, ಮಾಡಲ್ಪಟ್ಟ ಕೀರ್ತನಾದಿಪುಣ್ಯಗಳಿಂದ ಅವರವರ ಪಾಪಪರಿಹಾರಕ್ಕೋಸ್ಕರ ಸಕಲಾಂ-ಸಮಸ್ತವಾದ, ಕ್ರಿಯಾಸಂಹತಿಂ-ಕ್ರಿಯಾ-ಕರ್ಮಗಳ, ಸಂಹತಿಂ-ಸಮೂಹವನ್ನು, ಕುರ್ವ್ವ-ಮಾಡುತ್ತಿರುವನಾಗಿ, ಮನುಜಾಕೃತಿಃ-ಮನುಷ್ಯಾಕೃತಿಯಂತೆ ಆಕಾರವುಳ್ಳವನಾಗಿ, ಲೋಕಾರ್ಚಿತಃ-ಲೋಕಾರಾಧ್ಯನಾದರೂ, ಮುನಿವಚಃ- ನಮ್ಮಂಥ ಋಷಿಗಳ ಮಾತನ್ನು, ಅಶೃಣ್ವ-ಕೇಳುತ್ತಿರುವನಾಗಿ, ಭಾಸಿ-ಪ್ರಕಾಶಿಸುತ್ತೀ ॥೧೧॥

ಮೂ॥ ಸ್ತುತ್ವೈವಂರಾಘವಂತೇನಪೂಜಿತಃಕುಂಭಸಂಭವಃ।ಸ್ವಾಶ್ರಮಂಮುನಿಭಿಸ್ಸಾರ್ಧಂಪ್ರ
ಯಯೌಹೃಷ್ಟಮಾನಸಃ ... ... ॥೧೨॥

ಟೀ॥ ಕುಂಭಸಂಭವಃ-ಅಗಸ್ತ್ಯಋಷಿಯು, ಏವಂ-ಈಪರಿಯಾಗಿ, ರಾಘವಂ-ಶ್ರೀರಾಮನನ್ನು, ಸ್ತುತ್ವಾ-ಸ್ತೋತ್ರಮಾಡಿ, ತೇನ-ಆ ಶ್ರೀರಾಮನಿಂದ, ಪೂಜಿತಃ-ಪೂಜಿಸಲ್ಪಟ್ಟವನಾಗಿ, ಹೃಷ್ಟಮಾನಸಃ-ಸಂತೋಷಯುಕ್ತವಾದಮನವುಳ್ಳವನಾಗಿ, ಮುನಿಭಿಸ್ಸಾರ್ಧಂ-ಋಷಿಗಳೊಡಗೂಡ, ಸ್ವಾಶ್ರಮಂ-ತಮ್ಮ ಆಶ್ರಮವನ್ನು ಕುರಿತು, ಪ್ರಯಯೌ-ತೆರಳಿದನು ... ... ... ॥ ೧೨ ॥

ಮೂ॥ ರಾಮಸ್ತುಸೀತಯಾಸಾರ್ಧಂಭ್ರಾತೃಭಿಸ್ಸಹಮಂತ್ರಿಭಿಃ । ಸಂಸಾರೀವರಮಾನಾಥೋ
ರಮಮಾಣೋವಸದ್ಗೃಹೆ ... ... ॥೧೪॥

ಟೀ॥ ರಮಾನಾಥಃ-ಲಕ್ಷ್ಮೀಪತಿಯಾದ, ರಾಮಸ್ತು-ಶ್ರೀರಾಮನಾದರೋ,ಸೀತಯಾ-ಸೀತಾದೇವಿಯಿಂದಲೂ, ಭ್ರಾತೃಭಿಸ್ಸಾರ್ಧಂ-ತಮ್ಮಂದಿರಿಂದಲೂ ಕೂಡ, ಮಂತ್ರಿಭಿಸ್ಸಹ-ಮಂತ್ರಿಗಳಿಂದೊಡಗೂಡಿ, ಸಂಸಾರೀವ-ಸಂಸಾರಿಯಂತೆ, ಗೃಹೆ-ಮನೆಯಲ್ಲಿ, ರಮಮಾಣಃ-ವಿಹರಿಸುತ್ತಿರುವನಾಗಿ, ಅವಸತ್-ಇದ್ದನು ॥೧೪॥

ಮೂ॥ ಅನಾಸಕ್ತೋಪಿವಿಷಯಾನ್ಬುಭುಜೆಪ್ರಿಯಯಾಸಹ । ಹನೂಮತ್ಪ್ರಮುಖೈಸ್ಸದ್ಭಿ
ರ್ವಾನರೈಃಪರಿವೇಷ್ಟಿತಃ ... ... ॥೧೫॥

ಟೀ॥ ಹನೂಮತ್ಪ್ರಮುಖೈಃ-ಹನುಮಂತನೇಮೊದಲಾಗುಳ್ಳ, ಸದ್ಭಿಃ-ಸತ್ಪುರುಷರಿಂದಲೂ, ವಾನರೈಃ-ವಾನರಗಳಿಂದಲೂ, ಪರಿವೇಷ್ಟಿತಃ-ಸುತ್ತಿಕೊಳ್ಳಲ್ಪಟ್ಟವನಾಗಿ, ಅನಾಸಕ್ತೋಪಿ-ವಿಷಯಾಸಕ್ತನಲ್ಲವೇಹೋದರೂ, ಪ್ರಿಯಯಾಸಹ-ಹೆಂಡತಿಯಾದ ಸೀತಾದೇವಿಯೊಡನೆ, ವಿಷಯಾನ್-ಸ್ರಕ್ಚಂದನಾದಿವಿಷಯಗಳನ್ನು,ಬುಭುಜೆ-ಅನುಭವಿಸಿದನು ... ... ... ॥ ೧೫ ॥

ಮೂ॥ ಪುಷ್ಪಕಂಚಾಗಮದ್ರಾಮಮೇಕದಾಪೂರ್ವವತ್ಪ್ರಭುಂ। ಪ್ರಾಹದೇವಕುಬೇರೇಣಪ್ರೇಷಿತಂ
ತ್ವಾಮಹಂತತಃ ... ॥೧೬॥

ಟೀ॥ ಏಕದಾ-ಒಂದಾನೊಂದುಕಾಲದಲ್ಲಿ, ಪುಷ್ಪಕಂಚ-ಪುಷ್ಪಕವಿಮಾನವೂಸಹ, ಪ್ರಭುಂ-ಲೋಕಾಧಿಪತಿಯಾದ, ರಾಮಂ-ಶ್ರೀರಾಮನಂಕುರಿತು, ಪೂರ್ವವತ್-ಮೊದಲಿನಂತೆಯೆ, ಆಗಮತ್-ಬಂದಿತು, ಹೆದೇವ-ಎಲೈಸ್ವಾಮಿಯೆ, ತತಃ-ನಿನ್ನ ಆಜ್ಞೆಯಿಂದ ಕುಬೇರನಬಳಿಗೆ ಪೋದಬಳಿಕ, ಅಹಂ-ನಾನು, ತ್ವಾಂ-ನಿನ್ನನ್ನು ಕುರಿತು, ಕುಬೇರೇಣ-ಕುಬೇರನಿಂದ, ಪ್ರೇಷಿತಂ-ಕಳುಹಿಸಲ್ಪಟ್ಟೆನು ... ... ... ॥ ೧೬ ॥

ಆತನು ಹೇಳಿ ಕಳುಹಿಸಿರುವ ಮಾತೇನಂದರೆ.—

ಮೂ॥ ಜಿತಂತ್ವಂರಾವಣೇನಾದೌಪಶ್ಚಾದ್ರಾಮೇಣನಿರ್ಜಿತಂ । ಅತಸ್ತ್ವಂರಾಘವಂನಿತ್ಯಂ
ವಹಯಾವದ್ವಸೇದ್ಭುವಿ ... ॥೧೭॥

ಟೀ॥ ಆದೌ-ಮೊದಲು, ತ್ವಂ-ನೀನು, ರಾವಣೇನ-ರಾವಣನಿಂದ, ಜಿತಂ-ಜಯಿಸಲ್ಪಟ್ಟೆ, ಪಶ್ಚಾತ್-ಬಳಿಕ, ರಾಮೇಣ-ಶ್ರೀರಾಮನಿಂದ, ನಿರ್ಜಿತಂ-ಗೆಲ್ಲಲ್ಪಟ್ಟೆ, ಅತಃ-ಈ ಕಾರಣದ ದೆಶೆಯಿಂದ, (ರಾಘವಃ-ಶ್ರೀರಾಮನು) ಭುವಿ-ನೆಲದಲ್ಲಿ, ಯಾವತ್-ಯಿದುವರಿವಿಗೂ, ವಸೇತ್-ಇರುವನೋ, ತಾವತ್-ಅದುವರಿವಿಗೂ, ತ್ವಂ-ನೀನು, ನಿತ್ಯಂ-ನಿರಂತರವೂ, ರಾಘವಂ-ಶ್ರೀರಾಮನನ್ನು, ವಹ-ವಹಿಸು. .. .. .. ॥೧೭॥

ಮೂ॥ ಯದಾಗಚ್ಛೇದ್ರಘುಶ್ರೇಷ್ಠೋವೈಕುಂಠಂಯಾಹಿಮಾಂತದಾ ॥ ॥೧೭॥

ಟೀ॥ ರಘುಶ್ರೇಷ್ಠಃ-ರಘುವಂಶದಲ್ಲಿ ಉತ್ತಮನಾದ ಶ್ರೀರಾಮನು, ಯದಾ-ಯಾವಾಗ, ವೈಕುಂಠಂ-ವೈಕುಂಠವಂ ಕುರಿತು, ಗಚ್ಛೇತ್-ತೆರಳುವನೊ, ತದಾ- ಆಗ, ಮಾಂ-ನನ್ನನ್ನು ಕುರಿತು, ಯಾಹಿ-ಬಾ. .. .. .. ॥೧೭॥

ಮೂ॥ ತಚ್ಛ್ರುತ್ವಾರಾಘವಃಪ್ರಾಹಪುಷ್ಪಕಂಸೂರ್ಯಸನ್ನಿಭಂ ... ॥೧೮॥

ಟೀ॥ ರಾಘವಃ-ಶ್ರೀರಾಮನು, ತತ್-ಆಮಾತನ್ನು, ಶ್ರುತ್ವಾ-ಕೇಳಿ, ಸೂರ್ಯಸನ್ನಿಭಂ-ಸೂರ್ಯಸದೃಶವಾದ, ಪುಷ್ಪಕಂ - ಪುಷ್ಪಕ ವಿಮಾನವನ್ನು ಕುರಿತು, ಪ್ರಾಹ-ನುಡಿದನು ... ... ... ... ॥ ೧೮ ॥

ಮೂ॥ ಯದಾಸ್ಮರಾಮಿಭದ್ರಂತೇತದಾಗಚ್ಛ ಮಮಾಂತಿಕಂ । ತಿಷ್ಠಾಂತರ್ಧಾಯಸರ್ವತ್ರ

ಗಚ್ಛ ದಾನೀಂಮಮಾಜ್ಞಯಾ ... ... ॥೧೯॥

ಟೀ॥ ತೆ-ನಿನಗೆ, ಭದ್ರಂ-ಶುಭವಾಗಲಿ, ಯದಾ-ಯಾವಾಗ, ಸ್ಮರಾಮಿ-ಸ್ಮರಿಸುವೆನೋ, ತದಾ-ಆಗ, ಮಮ-ನನ್ನ, ಅಂತಿಕಂ-ಸಮೀಪವಂಕುರಿತು, ಆಗಚ್ಛ-ಬಾ, (ಆಗಮನೋತ್ತರಂ-ಬಂದುಬಳಿಕ,) ಅಂತರ್ಧಾಯ-ದೃಷ್ಟಿಗೋಚರವಾಗಿಲ್ಲದೆ, ಸರ್ವತ್ರ-ಯೆಲ್ಲೆಲ್ಲಿಯೂ, ತಿಷ್ಠ-ನಿಲ್ಲು, ಇದಾನೀಂ-ಈಗ, ಮಮ-ನನ್ನ, ಆಜ್ಞಯಾ-ಅಪ್ಪಣೆಯಿಂದ, ಗಚ್ಛ-ತೆರಳು ... ... ... ... ॥ ೧೯ ॥

ಮೂ॥ ಇತ್ಯುಕ್ತ್ವಾರಾಮಚಂದ್ರೋಪಿಪೌರಕಾರ್ಯಾಣಿಸರ್ವಶಃ । ಭ್ರಾತೃಭಿರ್ಮಂತ್ರಿಭಿ

ಸ್ಸಾರ್ಧಂಯಥಾನ್ಯಾಯ್ಯಂಚಕಾರಸಃ ... ... ॥೨೦॥

ಟೀ॥ ಸರಾಮಚಂದ್ರೋಪಿ-ಆ ಶ್ರೀರಾಮನುಕೂಡ, ಇತಿ-ಇಂತೆಂದು, ಉಕ್ತ್ವಾ-ಹೇಳಿ, ಭ್ರಾತೃಭಿಃ-ತಮ್ಮಂದರಿಂದೊಡಗೂಡಿ,ಮಂತ್ರಿಭಿಸ್ಸಾರ್ಧಂ - ಮಂತ್ರಿಗಳಿಂದಯುಕ್ತನಾಗಿ, ಸರ್ವಶಃ-ಸರ್ವಪ್ರಕಾರದಲ್ಲಿಯೂ, ಯಥಾನ್ಯಾಯ್ಯಂ-ನ್ಯಾಯವಿದ್ದಂತೆ, ಪೌರಕಾರ್ಯಾಣಿ-ಪಟ್ಟಣಸ್ಥರಕೆಲಸಗಳನ್ನು,ಚಕಾರ-ಮಾಡಿದನು ॥ ೨೦॥

ಮೂ॥ ರಾಘವೇಶಾಸತಿಭುವಂಲೋಕನಾಥೇರಮಾಪತೌ । ವಸುಧಾಸಸ್ಯಸಂಪನ್ನಾಫಲವಂತ

ಶ್ಚಭೂರುಹಾಃ ... ... ... ॥೨೧॥

ಟೀ॥ ರಮಾಪತೌ-ಲಕ್ಷ್ಮೀಪತಿಯಾದ, ಲೋಕನಾಥೇ-ಲೋಕಸ್ವಾಮಿಯಾದ, ರಾಘವೇ-ರಘುವಂಶದಲ್ಲಿ ಪುಟ್ಟಿದ ಶ್ರೀರಾಮನು, ಭುವಂ-ಭೂಮಿಯನ್ನು, ಶಾಸತಿಸತಿ-ಪರಿಪಾಲಿಸುತಿರುವನಾಗುತಿರಲೀಕಾಗಿ, ವಸುಧಾ-ಭೂಮಿಯು, ಸಸ್ಯಸಂಪನ್ನಾ-ಸಸ್ಯ-ಪೈರುಗಳಿಂದ, ಸಂಪನ್ನಾ-ಕೂಡಿದಂಥಾದ್ದಾಯಿತು, ಪಾದಪಾಶ್ಚ-ವೃಕ್ಷಗಳೂಸಹ, ಫಲವಂತಃ-ಹಣ್ಣುಗಳುಳ್ಳಂಥಾವುಗಳು (ಅಭವನ್-ಆದವು) ... ... ... ॥ ೨೧ ॥

ಮೂ॥ ಜನಾಧರ್ಮಪರಾಸ್ಸರ್ವೆಪತಿಭಕ್ತಿರತಾಃಸ್ತ್ರಿಯಃ।ನಾಪಶ್ಯತ್ಪುತ್ರಮರಣಂಕಶ್ಚಿದಾ

ಜನಿರಾಘವೆ ... ... ॥೨೨॥

ಟೀ॥ ರಾಘವೆ-ಶ್ರೀರಾಮನು, ರಾಜನಿಸತಿ-ರಾಜ್ಯಭಾರವನ್ನು ಮಾಡುತಿರಲೀಕಾಗಿ, ಸರ್ವೆ-ಸಮಸ್ತರಾದ, ಜನಾಃ-ಜನಗಳು, ಧರ್ಮಪರಾಃ-ಧರ್ಮದಲ್ಲಿಯೆ ಆಸ

ಕ್ತಿಯುಕ್ತವರು, ಸ್ತ್ರಿಯಃ-ಹೆಂಗಸರು, ಪತಿಭಕ್ತಿರತಾಃ-ತಮ್ಮ ತಮ್ಮ ಪತಿಗಳಲ್ಲಿ ಭಕ್ತಿಯುಕ್ತರಾದವರು, ಕಶ್ಚಿತ್-ಯಾವ ಪುರುಷನಾದರೂ, ಪುತ್ರಮರಣಂ-ಮಗನ ಮೃತಿಯನ್ನು, ನಾಪಶ್ಯತ್-ನೋಡಲಿಲ್ಲ .. .. ॥೨೨॥

ಮೂ॥ ಸಮಾರುಹ್ಯವಿಮಾನಾಗ್ರ್ಯಂರಾಘವಸ್ಸೀತಯಾಸಹ । ವಾನರೈರ್ಭ್ರಾತೃಭಿಸ್ಸಾರ್ಧಂ
ಸಂಚಚಾರಾವನಿಂಪ್ರಭುಃ ... ... ॥೨೩॥

ಟೀ॥ ಪ್ರಭುಃ-ಜಗತ್ಸ್ವಾಮಿಯಾದ, ರಾಘವಃ-ಶ್ರೀರಾಮನು, ಸೀತಯಾಸಹ-ಸೀತಾದೇವಿಯೊಡನೆಯೂ, ವಾನರೈಃ-ಕಪಿಗಳೊಡನೆಯೂ, ಭ್ರಾತೃಭಿಸ್ಸಾರ್ಧಂ- ತಮ್ಮಂದರೊಡನೆಯೂ, ವಿಮಾನಾಗ್ರ್ಯಂ-ಶ್ರೇಷ್ಠವಾದ ಪುಷ್ಪಕವಿಮಾನವನ್ನು, ಸಮಾರುಹ್ಯ-ಏರಿ, ಅವನಿಂ-ಭೂಮಂಡಲದಲ್ಲಿ, ಸಂಚಚಾರ-ಸಂಚರಿಸಿದನು ॥೨೩॥

ಮೂ॥ ಅಮಾನುಷಾಣಿಕಾರ್ಯಾಣಿಚಕಾರಬಹುಶೋಭುವಿ । ಬ್ರಾಹ್ಮಣಸ್ಯಸುತಂದೃಷ್ಟ್ವಾಬಾಲಂಮೃತಮಕಾಲತಃ ॥೨೪॥ ಶೋಚಂತಂಬ್ರಾಹ್ಮಣಂಚಾಪಿಜ್ಞಾತ್ವಾರಾಮೋಮಹಾಮತಿಃ । ತಪಸ್ಯಂತಂವನೇಶೂದ್ರಂಹತ್ವಾಬ್ರಾಹ್ಮಣಬಾಲಕಂ।ಜೀವಯಾಮಾಸಶೂದ್ರಸ್ಯದದೌಸ್ವರ್ಗಮನುತ್ತಮಂ ॥

ಟೀ॥ ಭುವಿ-ಭೂಮಿಯಲ್ಲಿ, ಅಮಾನುಷಾಣಿ-ಮನುಷ್ಯರು ಮಾಡಲಸಾಧ್ಯವಾದ, ಕಾರ್ಯಾಣಿ-ಕೃತ್ಯಗಳನ್ನು, ಬಹುಶಃ-ಬಹುಬಗೆಯಾಗಿ, ಚಕಾರ-ಮಾಡಿದನು, ಅಕಾಲತಃ-ಅಸಮಯದಲ್ಲಿ, ಮೃತಂ-ಮರಣವಂಪಡೆದ, ಬ್ರಾಹ್ಮಣಸ್ಯ- ಬ್ರಾಹ್ಮಣನ, ಸುತಂ-ಕುಮಾರನಾದ, ಬಾಲಂ-ಹುಡುಗನನ್ನು, ದೃಷ್ಟ್ವಾ-ಕಂಡು, ಶೋಚಂತಂ- ದುಃಖಿಸುತ್ತಿರುವ, ಬ್ರಾಹ್ಮಣಂಚಾಪಿ- ಬ್ರಾಹ್ಮಣನನ್ನೂ ಕೂಡ, ಜ್ಞಾತ್ವಾ-ತಿಳಿದು, ಮಹಾಮತಿಃ - ಮಹಾಬುದ್ಧಿಶಾಲಿಯಾದ, ರಾಮಃ-ಶ್ರೀರಾಮನು, ತಪಸ್ಯಂತಂ - ತಪವಂಗೈಯುತಿರುವ, ಶೂದ್ರಂ-ಶೂದ್ರನನ್ನು, ಹತ್ವಾ-ಕೊಂದು, ಬ್ರಾಹ್ಮಣಬಾಲಕಂ-ದ್ವಿಜನ ಹುಡುಗನನ್ನು, ಜೀವಯಾಮಾಸ - ಬದುಕಿಸಿದನು, ಶೂದ್ರಸ್ಯ - ಶೂದ್ರನಿಗೆ, ಅನುತ್ತಮಂ-ಸರ್ವೋತ್ತಮವಾದ, ಸ್ವರ್ಗಂ-ಸ್ವರ್ಗವನ್ನು, ದದೌ-ಕೊಟ್ಟನು .. .. ॥೨೫॥

ಮೂ॥ ಲೋಕಾನಾಮುಪದೇಶಾರ್ಥಂಪರಮಾತ್ಮಾರಘೂತ್ತಮಃ। ಕೋಟಿಶಸ್ಥಾಪಯಾಮಾಸಶಿವಲಿಂಗಾನಿಸರ್ವಶಃ ... ... ॥೨೬॥

ಟೀ॥ ಪರಮಾತ್ಮಾ-ಪರಮಾತ್ಮಸ್ವರೂಪನಾದ, ರಘೂತ್ತಮಃ-ರಘುವಂಶದಲ್ಲಿ ಉತ್ತಮನಾದ ಶ್ರೀರಾಮನು, ಲೋಕಾನಾಂ-ಜನಗಳಿಗೆ, ಉಪದೇಶಾರ್ಥಂ-ಮಾಡಬೇ

ಕೆಂಬ ಮತಿಯುಂಟಾಗುವದಕ್ಕೋಸ್ಕರ, ಕೋಟಿಶಃ - ಕೋಟಿಸಂಖ್ಯಾತವಾದ, ಶಿವಲಿಂಗಾನಿ-ಶಿವಲಿಂಗಗಳನ್ನು, ಸರ್ವಶಃ- ಎಲ್ಲಾದಿಕ್ಕುಗಳಲ್ಲಿಯೂ, ಸ್ಥಾಪಯಾಮಾಸ-ಪ್ರತಿಷ್ಠೆ ಮಾಡಿದನು .. .. .. .. ॥೨೬॥

ಮೂ॥ ಸೀತಾಂಚರಮಯಾಮಾಸಸರ್ವಭೋಗೈರಮಾನುಷೈಃ । ಶಶಾಸರಾಮೋಧರ್ಮೇಣ
ರಾಜ್ಯಂಪರಮಧರ್ಮವಿತ್ ... ॥೨೭॥

ಟೀ॥ ಪರಮಧರ್ಮವಿತ್-ಮಹಾ ಧರ್ಮವೇತ್ತನಾದ, ರಾಮಃ-ಶ್ರೀರಾಮನು, ಅಮಾನುಷೈಃ-ಮನುಷ್ಯರಿಗೆ ಮಾಡಲಸಾಧ್ಯವಾದ, ಭೋಗೈಃ - ವಿಷಯಸುಖಾದಿಗಳಿಂದ, ಸೀತಾಂಚ-ಸೀತಾದೇವಿಯನ್ನೂ ಕೂಡ, ರಮಯಾಮಾಸ-ವಿಹಾರಮಾಡಿಸಿದನು, ರಾಜ್ಯಂ-ರಾಜ್ಯವನ್ನು, ಧರ್ಮೇಣ-ಧರ್ಮದಿಂದ, ಶಶಾಸ- ಪಾಲಿಸಿದನು. ॥೨೭॥

ಮೂ॥ ಕಥಾಂಸಂಸ್ಥಾಪಯಾಮಾಸಸರ್ವಲೋಕಮಲಾಪಹಾಂ ॥೨೮॥

ಟೀ॥ ಸರ್ವಲೋಕಮಲಾಪಹಾಂ-ಸರ್ವ-ಸಮಸ್ತರಾದ, ಲೋಕ-ಜನಗಳ, ಮಲಾಪಹಾಂ-ಪಾಪಪರಿಹಾರಕವಾದ, ಕಥಾಂ-ತನ್ನ ಚರಿತ್ರೆಯನ್ನು, ಸಂಸ್ಥಾಪಯಾಮಾಸ-ಶಾಶ್ವತವಾಗಿ ನಿಲ್ಲಿಸಿದನು. .. .. .. ॥೨೮॥

ಮೂ॥ ದಶವರ್ಷಸಹಸ್ರಾಣಿಮಾಯಾಮಾನುಷವಿಗ್ರಹಃ । ಚಕಾರರಾಜ್ಯಂವಿಧಿವಲ್ಲೋಕವಂ
ದ್ಯಪದಾಂಬುಜಃ ... ... ॥೨೯॥

ಟೀ॥ ಮಾಯಾಮಾನುಷವಿಗ್ರಹಃ-ಮಾಯಾ-ಜಗತ್ಕಾರಣೀಭೂತವಾದ ಮಾಯೆಯಿಂದ ಕಲ್ಪಿತವಾದ, ಮಾನುಷವಿಗ್ರಹಃ-ಮನುಷ್ಯಶರೀರವುಳ್ಳವನಾದ, ಲೋಕವಂದ್ಯಪದಾಂಬುಜಃ-ಲೋಕ-ಸರ್ವಲೋಕವಾಸಿಗಳಿಂದ, ವಂದ್ಯ-ವಂದನೀಯವಾದ ಪದಾಂಬುಜಃ-ಪಾದಾರವಿಂದಗಳುಳ್ಳ ಶ್ರೀ ರಾಮಚಂದ್ರನು, ದಶವರ್ಷಸಹಸ್ರಾಣಿ-ಹತ್ತುಸಾವಿರ ವರುಷಗಳು, ರಾಜ್ಯಂ-ರಾಜ್ಯಭಾರವನ್ನು. ವಿಧಿವತ್-ಯಥಾಶಾಸ್ತ್ರೀಯವಾಗಿ, ಚಕಾರ ಮಾಡಿದನು. .. .. ॥೨೯॥

ಮೂ॥ ಏಕಪತ್ನೀವ್ರತೋರಾಮೋರಾಜರ್ಷಿಸ್ಸರ್ವದಾಶುಚಿಃ । ಗೃಹಮೇಧೀಯಮಖಿಲಮಾ
ಚರನ್ಶಿಕ್ಷಯನ್ಜನಾನ್ ... ... ॥೩೦॥

ಟೀ॥ ಏಕಪತ್ನೀವ್ರತಃ-ಏಕ-ಓರ್ವಳಾದ, ಪತ್ನೀ-ಹೆಂಡತಿಯಲ್ಲಿ, ವ್ರತಃ-ನಿಯಮವುಳ್ಳ, ರಾಜರ್ಷಿಃ-ರಾಜನಾಗಿಯೂ ಋಷಿಯಾಗಿಯೂ ಇರುವ, ಸರ್ವದಾ-ಸ

ರ್ವಕಾಲದಲ್ಲಿಯೂ, ಶುಚಿಃ-ಪರಿಶುದ್ಧನಾದ, ರಾಮಃ-ಶ್ರೀರಾಮನು, ಜನಾನ್-ಜನಗಳನ್ನು, ಶಿಕ್ಷಯನ್-ಶಿಕ್ಷಿಸುತ್ತಿರುವನಾಗಿ (ಅಂದರೆ ಲೋಕಶಿಕ್ಷಾರ್ಥವಾಗಿ) ಗೃಹಮೇಧಿಯ್ಯಂ-ಗೃಹಸ್ಥಾಶ್ರಮಿಗಳು ಮಾಡತಕ್ಕ, ಅಖಿಲಂ-ಸಮಸ್ತ ಕರ್ಮವನ್ನು, ಆಚರನ್-ಮಾಡುತ್ತಿರುವನಾಗಿ. .. .. ॥೨೦॥

ಮೂ॥ ಸೀತಾಪ್ರೇಮ್ಣಾನುವೃತ್ತ್ಯಾಚಪ್ರಶ್ರಯೇಣದಮೇನಚ । ಭರ್ತುರ್ಮನೋಹರಾಸಾಧ್ವೀ
ಭಾವಜ್ಞಾ ಸೀದ್ಧಿಯಾಭಿಯಾ ... ... ॥೨೧॥

ಟೀ॥ ಸಾಧ್ವೀ-ಪತಿವ್ರತೆಯಾದ, ಸೀತಾ-ಸೀತಾದೇವಿಯು, ಪ್ರೇಮ್ಣಾ-ಪತಿಯಲ್ಲಿ ವಿಶ್ವಾಸದಿಂದಲೂ, ಅನುವೃತ್ತ್ಯಾಚ-ಅನುಸರಣೆಯಿಂದಲೂ, ಪ್ರಶ್ರಯೇಣ-ನಮ್ರಭಾವದಿಂದಲೂ, ದಮೇನಚ-ಇಂದ್ರಿಯ ನಿಗ್ರಹದಿಂದಲೂನು, ಭರ್ತುಃ-ಗಂಡನಾದ ಶ್ರೀರಾಮನಿಗೆ, ಮನೋಹರಾ-ಮನಸ್ಸಿಗೆ ಇಂಪಾಗಿರುವಳಾಗಿ, ಭಾವಜ್ಞಾ-ಪತಿಯಅಭಿಪ್ರಾಯವನ್ನು ತಿಳಿದವಳಾಗಿ, ಭಿಯಾಭಿಯಾ-ಭಯಭಯದಿಂದ, ಆಸೀತ್-ಇದ್ದಳು. .. .. .. ॥೨೧॥

ಮೂ॥ ಏಕದಾಕ್ರೀಡವಿಪಿನೇಸರ್ವಭೋಗಸಮನ್ವಿತೇ । ಏಕಾಂತೇದಿವ್ಯಭವನೇಸುಖಾಸೀನಂರ
ಘೂತ್ತಮಂ ... ... ॥೨೨॥

ಟೀ॥ ಏಕದಾ-ಒಂದುದಿನದಲ್ಲಿ, ಸರ್ವಭೋಗಸಮನ್ವಿತೇ-ಸರ್ವ ಸೌಖ್ಯಗಳಿಂದ ಕೂಡಿಕೊಂಡಿರುವ, ಆಕ್ರೀಡವಿಪಿನೇ-ಉದ್ಯಾನವನದಲ್ಲಿ, ಏಕಾಂತೇ-ರಹಸ್ಯಸ್ಥಳದಲ್ಲಿ, ದಿವ್ಯಭವನೇ-ದಿವ್ಯ-ಮನೋಹರನಾದ, ಭವನೇ-ಮನೆಯಲ್ಲಿ, ಸುಖಾಸೀನಂ-ಸುಖವಾಗಿ ಕುಳಿತುಕೊಂಡಿರುವ. .. .. ॥೨೨॥

ಮೂ॥ ನೀಲಮಾಣಿಕ್ಯಸಂಕಾಶಂದಿವ್ಯಾಭರಣಭೂಷಿತಂ । ಪ್ರಸನ್ನವದನಂಶಾಂತಂವಿದ್ಯು
ತ್ಪುಂಜನಿಭಾಂಬರಂ ॥ ಸೀತಾಕಮಲಪತ್ರಾಕ್ಷೀಸರ್ವಾಭರಣಭೂಷಿತಾ।ರಾಮಮಾಹಕರಾಭ್ಯಾಂ
ಸಾಲಾಲಯಂತೀಪದಾಂಬುಜೇ ... ... ॥೨೪॥

ಟೀ॥ ನೀಲಮಾಣಿಕ್ಯಸಂಕಾಶಂ-ನೀಲ-ನೀಲಗಳೆಂಬ, ಮಾಣಿಕ್ಯ-ಮಣಿಗಳಿಗೆ, ಸಂಕಾಶಂ-ಸಮಾನಕಾಂತಿಯುಳ್ಳ, ದಿವ್ಯಾಭರಣಭೂಷಿತಂ-ಅಮೂಲ್ಯವಾದ ಒಡವೆಗಳಿಂದ ಅಲಂಕೃತನಾದ, ಪ್ರಸನ್ನವದನಂ-ನಮ್ರನಾದ ಮುಖವುಳ್ಳ, ಶಾಂತಂ-ಇಂದ್ರಿಯನಿಗ್ರಹಶಾಲಿಯಾದ, ವಿದ್ಯುತ್ಪುಂಜನಿಭಾಂಬರಂ-ವಿದ್ಯುತ್-ಮಿಂಚುಗಳ, ಪುಂಜ-ರಾಶಿಗೆ, ನಿಭ-ಸಮಾನವಾದ, ಅಂಬರಂ-ಪೀತಾಂಬರವುಳ್ಳ, ರಘೂತ್ತಮಂ-ರಘುವಂಶೋತ್ಪನ್ನ ರಾಜರಲ್ಲಿ ಶ್ರೇಷ್ಠನಾದ, ರಾಮಂ-ಶ್ರೀರಾಮನಂ ಕುರಿತು, ಕಮಲಪತ್ರಾಕ್ಷೀ-ಕಮಲದ

ರೇಖೆಗಳಂತೆ ವಿಶಾಲವಾದ ನೇತ್ರಗಳುಳ್ಳ, ಸರ್ವಾಭರಣಭೂಷಿತಾ-ಸಮಸ್ತವಾದ ಒಡವೆಗಳಿಂದಲೂ ಅಲಂಕರಿಸಲ್ಪಟ್ಟ, ಸಾಸೀತಾ- ಆ ಸೀತಾದೇವಿಯು, ಕರಾಭ್ಯಾಂ- ಹಸ್ತಗಳಿಂದ, ಪಾದಾಂಬುಜೇ-ಪಾದಕಮಲಗಳನ್ನು, ಲಾಲಯಂತೀ-ಒತ್ತುತ್ತಿರುವಳಾಗಿ, ಆಹ-ಪೇಳಿದಳು. .. .. ॥೨೪॥

ಮೂ॥ ದೇವದೇವಜಗನ್ನಾಥಪರಮಾತ್ಮನ್ಸನಾತನ । ಚಿದಾನಂದಾದಿಮಧ್ಯಾನ್ತರಹಿತಾಶೇಷಕಾರಣ । ದೇವದೇವಾಸ್ಸಮಾಸಾದ್ಯಮಾಮೇಕಾಂತೇಬ್ರುವನ್ವಚಃ ॥೨೫॥

ಟೀ॥ ಹೆ ದೇವದೇವ-ಎಲೈ ದೇವದೇವೋತ್ತಮನೆ, ಹೆ ಜಗನ್ನಾಥ-ಎಲೈ ಲೋಕಕ್ಕೆಲ್ಲಾ ಸ್ವಾಮಿಯೇ, ಹೇ ಪರಮಾತ್ಮನ್-ಎಲೈ ಪರಮಾತ್ಮಸ್ವರೂಪನೇ, ಹೆ ಸನಾತನ-ಎಲೈ ಅನಾದಿಸಿದ್ಧನೇ, ಹೆ ಚಿದಾನಂದ ಎಲೈ ಚಿದಾನಂದರೂಪನೇ, ಹೆ ಆದಿಮಧ್ಯಾಂತರಹಿತ-ಉತ್ಪತ್ತಿಸ್ಥಿತಿಲಯಗಳಿಲ್ಲದವನೇ, ಅಶೇಷಕಾರಣ-ಸಮಸ್ತಜಗತ್ತಿಗು ಕಾರಣೀಭೂತನಾದವನೇ, ಹೆ ದೇವ-ಎಲೈ ಸ್ವಾಮಿಯೇ, ದೇವಾಃ-ದೇವತೆಗಳು, ಸಮಾಸಾದ್ಯ-ಬಂದು, ಮಾಂ-ನನ್ನನ್ನು ಕುರಿತು, ಏಕಾಂತೇ-ರಹಸ್ಯದಲ್ಲಿ, ವಚಃ- ಮಾತನ್ನು, ಅಬ್ರುವನ್-ನುಡಿದರು. .. .. .. .. .. ॥೨೫॥

ಮೂ॥ ಬಹುಶೋರ್ಥಯಮಾನಾಸ್ತೆವೈಕುಂಠಗಮನಂಪ್ರತಿ ॥೨೬

ಟೀ॥ ತೆ-ಆದೇವತೆಗಳು, ಬಹುಶಃ-ಬಹುಬಗೆಯಾಗಿ, ವೈಕುಂಠಗಮನಂಪ್ರತಿ-ವೈಕುಂಠ ಲೋಕವನ್ನು ಕುರಿತು ಗಮನವನ್ನು ಉದ್ದೇಶಿಸಿ, ಅರ್ಥಯಮಾನಾಃ-ಬೇಡಿಕೊಳ್ಳುತ್ತಾ ಇದ್ದಾರೆ. .. .. .. ॥೨೬॥

ಮೂ॥ ತ್ವಯಾಸಮೇತಶ್ಚಿಚ್ಛಕ್ತ್ಯಾರಾಮಸ್ತಿಷ್ಠತಿಭೂತಲೆ । ವಿಸೃಜ್ಯಾಸ್ಮಾನ್ಸ್ವಕಂಧಾಮವೈಕುಂಠಂಚಸನಾತನಂ ... ... ॥೨೭॥

ಟೀ॥ ಚಿಚ್ಛಕ್ತ್ಯಾ-ಚಿಚ್ಛಕ್ತಿಸ್ವರೂಪವಾದ, ತ್ವಯಾ-ನಿನ್ನಿಂದ, ಸಮೇತಃ-ಕೂಡಿಕೊಂಡಿರುವ, ರಾಮಃ-ಶ್ರೀರಾಮನು, ಅಸ್ಮಾನ್-ನಮ್ಮಗಳನ್ನು, ಸ್ವಕಂ- ಸ್ವಕೀಯ್ಯವಾದ, ಧಾಮ-ಸ್ಥಾನವಾದ, ಸನಾತನಂ-ಅನಾದಿಯಾದ, ವೈಕುಂಠಂಚ ವೈಕುಂಠವನ್ನೂ, ವಿಸೃಜ್ಯ-ಬಿಟ್ಟು, ಭೂತಲೆ-ಭೂಲೋಕದಲ್ಲಿ, ತಿಷ್ಠತಿ-ಇಧಾನೇ. ॥೨೭॥

ಮೂ॥ ಆಸ್ತೆತ್ವಯಾಜಗದ್ಧಾತ್ರಿರಾಮಃಕಮಲಲೋಚನಃ । ಅಗ್ರತೋಯಾಹಿವೈಕುಂಠಂತ್ವಂತಥಾಚೆದ್ರಘೂತ್ತಮಃ ... ... ॥೨೮॥

ಟೀ॥ ಹೇ ಜಗದ್ಧಾತ್ರಿ-ಎಲೈ ಜಗತ್ತಿಗೆ ತಾಯಿಯಾದವಳೇ, ಕಮಲಲೋಚನಃ-ಕಮಲಗಳಿಗೆ ಸಮಾನವಾದ ನೇತ್ರಗಳುಳ್ಳ, ರಾಮಃ-ಶ್ರೀರಾಮನು, ತ್ವಯಾಸಹ- ನಿನ್ನೊಡಗೂಡಿ, ಆಸ್ತೇ-ಇರುತ್ತಾನೆ, ತ್ವಂ-ನೀನು, ಅಗ್ರತಃ-ಮೊದಲು, ವೈಕುಂಠಂ-ವೈಕುಂಠವನ್ನು ಕುರಿತು, ಯಾಹಿ-ಬಾ, ತ್ವಂ-ನೀನು, ತಥಾಚೇತ್-ಹಾಗೆ ಮಾಡಿದವಳಾದರೆ, ರಘೂತ್ತಮಃ-ಶ್ರೀರಾಮನು, ವೈಕುಂಠಂ-ವೈಕುಂಠವನ್ನು ಕುರಿತು, ಆಗಮಿಷ್ಯತಿ-ಬರುವನು. .. .. ॥೩೮॥

ಮೂ॥ ಆಗಮಿಷ್ಯತಿವೈಕುಂಠಂಸನಾಥಾನ್ನಃಕರಿಷ್ಯತಿ । ಇತಿವಿಜ್ಞಾಪಿತಾಹಂತೈಃಮಯಾವಿ
ಜ್ಞಾಪಿತೊಭವಾನ್ ... ... ॥೩೯॥

ಟೀ॥ ನಃ-ನಮ್ಮಗಳನ್ನು, ಸನಾಥಾನ್-ಸ್ವಾಮಿಯಿಂದೊಡಗೂಡಿದವರನ್ನಾಗಿ, ಕರಿಷ್ಯತಿ-ಮಾಡುವನು, ಇತಿ-ಈ ಪರಿಯಾಗಿ, ತೈಃ-ಆ ದೇವತೆಗಳಿಂದ, ಅಹಂ-ನಾನು, ವಿಜ್ಞಾಪಿತಾ-ಬೇಡಿಕೊಳ್ಳಲ್ಪಟ್ಟೆನು, ಮಯಾ-ನನ್ನಿಂದ, ಭವಾನ್-ನೀನು, ವಿಜ್ಞಾಪಿತಃ-ವಿಜ್ಞಾಪಿಸಲ್ಪಟ್ಟೆ ॥೩೯॥

ಮೂ॥ ಯದ್ಯುಕ್ತಂತತ್ಕುರುಷ್ವಾದ್ಯನಾಹಮಾಜ್ಞಾಪಯೆಪ್ರಭೊ । ಸೀತಾಯಾಸ್ತದ್ವಚ
ಶ್ಶ್ರುತ್ವಾರಾಮೊಧ್ಯಾತ್ವಾಬ್ರವೀತ್ಕ್ಷಣಾತ್ ... ॥೪೦॥

ಟೀ॥ ಹೆಪ್ರಭೊ-ಎಲೈ ಸ್ವಾಮಿಯೇ, ಯತ್-ಯಾವದು, ಯುಕ್ತಂ-ಯುಕ್ತವೋ, ತತ್-ಅದನ್ನು, ಅದ್ಯ-ಈಗ, ಕುರುಷ್ವ-ಮಾಡು, ಅಹಂ- ನಾನು, ನಾಜ್ಞಾಪಯೆ-ಆಜ್ಞಾಪಿಸುವಳಲ್ಲಾ, ಸೀತಾಯಾಃ-ಸೀತಾದೇವಿಯ, ತದ್ವಚಃ-ಆಮಾತನ್ನು, ಶ್ರುತ್ವಾ-ಕೇಳಿ, ರಾಮಃ-ಶ್ರೀರಾಮನು, ಧ್ಯಾತ್ವಾ-ಆಲೋಚಿಸಿ, ಕ್ಷಣಾತ್-ಕ್ಷಣಮಾತ್ರದಲ್ಲಿ, ಅಬ್ರವೀತ್-ನುಡಿದನು .. .. .. ॥೪೦॥

ಮೂ॥ ದೇವಿಜಾನಾಮಿಸಕಲಂತತ್ರೊಪಾಯಂವದಾಮಿತೆ। ಕಲ್ಪಯಿತ್ವಾಮಿಷಂದೇವಿಲೊಕ
ವಾದಂತ್ವದಾಶ್ರಯಂ ॥೪೧॥ ತ್ಯಜಾಮಿತಾಂವನೆಲೊಕವಾದಾದ್ಭೀತಇವಾಪರಃ॥

ಟೀ॥ ಹೇದೇವಿ- ಎಲೈ ಸೀತಾದೇವಿಯೇ, ಸಕಲಂ-ಸಮಸ್ತವನ್ನು, ಜಾನಾಮಿ-ತಿಳಿದುಕೊಂಡಿದ್ದೇನೆ, ತತ್ರ-ಆ ಅರ್ಥದಲ್ಲಿ,ತೆ-ನಿನಗೆ, ಉಪಾಯಂ-ಉಪಾಯವನ್ನು, ವದಾಮಿ-ಹೇಳುವೆನು, ಹೆದೇವಿ-ಎಲೈ ಸೀತಾದೇವಿಯೇ, ತ್ವದಾಶ್ರಯಂ-ನೀನೆ ಆಶ್ರಯವಾಗುಳ್ಳ, ಲೊಕವಾದಂ-ಲೋಕವಾರ್ತೆಯನ್ನು, ಮಿಷಂ-ವ್ಯಾಜವನ್ನಾಗಿ,ಕಲ್ಪಯಿತ್ವಾ-

ಕಲ್ಪಿಸಿ, ಲೋಕವಾದಾತ್-ಲೋಕಾಪವಾದದಪೇಕ್ಷೆಯಿಂದ, ಭೀತಃ-ಭಯಗೊಂಡೆ, ಅಪರಃ ಇವ- ಮತ್ತೊಬ್ಬ ಪ್ರಾಕೃತಮನುಷ್ಯನಂತೆ, ತ್ವಾಂ-ನಿನ್ನನ್ನು, ವನೆ- ವನದಲ್ಲಿ, ತ್ಯಜಾಮಿ-ತ್ಯಾಗಮಾಡುವೆನು ॥೪೧॥

ಮೂ॥ ಭವಿಷ್ಯತಃಕುಮಾರೌದ್ವೌವಾಲ್ಮೀಕೇರಾಶ್ರಮಾಂತಿಕೆ । ಇದಾನೀಂದೃಶ್ಯತೆಗರ್ಭಃ

ಪುನರಾಗತ್ಯಮಾಂತಿಕಂ ॥೪೨॥

ಟೀ॥ ಇದಾನೀಂ-ಈಗ, ಗರ್ಭಃ-ಗರ್ಭವು, ದೃಶ್ಯತೆ-ಕಾಣಲ್ಪಡುತ್ತಿದೆ, ವಾಲ್ಮೀಕೇಃ-ವಾಲ್ಮೀಕಿಋಷಿಯ, ಆಶ್ರಮಾಂತಿಕೆ-ಆಶ್ರಮ ಸಮೀಪದಲ್ಲಿ, ದ್ವೌಕುಮಾರೌ - ಇಬ್ಬರುಮಕ್ಕಳು, ಭವಿಷ್ಯತಃ-ಆಗುವರು, ಪುನಃ-ಮತ್ತು, ಮಾ-ನನ್ನ, ಅಂತಿಕಂ-ಸಮೀಪವನ್ನು ಕುರಿತು, ಆಗತ್ಯ-ಬಂದು ॥೪೨॥

ಮೂ॥ ಲೋಕಾನಾಂಪ್ರತ್ಯಯಾರ್ಥಂತ್ವಂಕೃತ್ವಾಶಪಥಮಾದರಾತ್ । ಭೂಮೇರ್ವಿವರಮಾ

ತ್ರೇಣವೈಕುಂಠಂಯಾಸ್ಯಸಿದ್ರುತಂ॥೪೩॥ಪಶ್ಚಾದಹಂಗಮಿಷ್ಯಾಮಿಏಷಏವಾಸ್ತುನಿಶ್ಚಯಃ ॥೪೪॥

ಟೀ॥ ಲೋಕಾನಾಂ-ಜನರಿಗೆ, ಪ್ರತ್ಯಯಾರ್ಥಂ-ನಂಬಿಕೆನಿಮಿತ್ತವಾಗಿ, ಶಪಥಂ-ಶಪಥವನ್ನು, ಆದರಾತ್-ಆದರಣೆಯ ದೆಸೆಯಿಂದ, ಕೃತ್ವಾ-ಮಾಡಿ, ಭೂಮೇಃ-ಭೂದೇವಿಯ-ವಿವರಮಾತ್ರೇಣ-ರಂಧ್ರಮಾತ್ರದಿಂದ, ವೈಕುಂಠಂ-ವೈಕುಂಠಲೋಕವನ್ನು ಕುರಿತು, ದ್ರುತಂ-ಜಾಗ್ರತೆಯಾಗಿ, ಯಾಸ್ಯಸಿ-ಹೋಗುತ್ತೀ ॥ ಪಶ್ಚಾತ್- ಹಿಂದಗಡೇಲೇ, ಅಹಂ-ನಾನು, ಗಮಿಷ್ಯಾಮಿ-ಬರುವೆನು, ಏಷಏವ-ಇದೇ, ನಿಶ್ಚಯಃ-ನಿಶ್ಚಯವು, ಅಸ್ತು-ಅಗಲೀ ॥೪೪॥

ಮೂ॥ ಇತ್ಯುಕ್ತ್ವಾತಾಂವಿಸೃಜ್ಯಾಥರಾಮೋಜ್ಞಾನೈಕಲಕ್ಷಣಃ । ಮಂತ್ರಿಭಿರ್ಮಂತ್ರತತ್ವ

ಜ್ಞೈಃಬಲಮುಖ್ಯೈಶ್ಚಸಂವೃತಃ ॥೪೫॥

ಟೀ॥ ಜ್ಞಾನೈಕಲಕ್ಷಣಃ-ಜ್ಞಾನ-ಜ್ಞಾನವೇ, ಏಕ-ಮುಖ್ಯವಾದ, ಲಕ್ಷಣಃ-ಲಕ್ಷಣವುಳ್ಳ, ರಾಮಃ-ಶ್ರೀರಾಮನು, ಇತಿ-ಈಪರಿಯಾಗಿ, ತಾಂ- ಆ ಸೀತಾದೇವಿಯಂ ಕುರಿತು, ಉಕ್ತ್ವಾ-ಹೇಳಿ, ತಾಂ-ಆ ಸೀತಾದೇವಿಯನ್ನು, ವಿಸೃಜ್ಯ-ಬಿಟ್ಟು, ಅಥ-ಬಳಿಕ, ಮಂತ್ರತತ್ವಜ್ಞೈಃ-ಆಲೋಚನೆಯಲ್ಲಿ ನಿಪುಣರಾದ, ಬಲಮುಖ್ಯೈಶ್ಚ - ಸೈನ್ಯದಲ್ಲಿ ಮುಖಂಡರಾದ, ಮಂತ್ರಿಭಿಃ-ಮಂತ್ರಿಗಳಿಂದ, ಸಂವೃತಃ-ಕೂಡಿಕೊಂಡವನು, ಅಭೂತ್-ಆದನು ॥೪೫॥

ಉ॥ ಕಾ
ಸ॥ ॥೪.

ಅ॥ ರಾ
೬೫

ಮೂ॥ ತತೋಪ್ರವಿಷ್ಟಂಶ್ರೀರಾಮಂಸುಹೃದಃಪರ್ಯುಪಾಸತ । ಹಾಸ್ಯಪ್ರೌಢಕಥಾಸುಜ್ಞಾಃ
ಹಾಸಯಂತಃಸ್ಥಿತಾಹರಿಂ ॥೪೬॥

ಟೀ॥ ತತ್ರ-ಆ ಸಭೆಯಲ್ಲಿ, ಉಪವಿಷ್ಟಂ-ಕುಳಿತುಕೊಂಡಿರುವ, ಸ್ಥಿತಂ-ಇರುತ್ತಿರುವ, ಹರಿಂ-ವಿಷ್ಣುಸ್ವರೂಪನಾದ, ರಾಮಂ- ಶ್ರೀರಾಮನನ್ನು, ಹಾಸ್ಯಪ್ರೌಢಕಥಾಸುಜ್ಞಾ-ಹಾಸ್ಯ- ಹಾಸ್ಯರಸದಿಂದ, ಪ್ರೌಢ-ಪ್ರಗಲ್ಭವಾದ, ಕಥಾ-ಕಥೆಗಳಲ್ಲಿ, ಸುಜ್ಞಾಃ-ವಿಶೇಷಜ್ಞರಾದ, ಹಾಸಯಂತಃ-ಪರಸ್ಪರವಾಗಿಹಾಸ್ಯವನ್ನು ಮಾಡುತ್ತಿರುವ, ಸುಹೃದಃ-ಸ್ನೇಹಿತರು, ಪರ್ಯುಪಾಸತ-ಸೇವಿಸಿದರು .. .. .. ॥೪೬॥

ಮೂ॥ ಕಥಾಪ್ರಸಂಗಾತ್ಪಪ್ರಚ್ಛರಾಮೋವಿಜಯನಾಮಕಂ । ಪೌರಾಜಾನಪದಾಮೇಕಿಂ
ವದಂತೀಹಶುಭಾಶುಭಂ ... ... ॥೪೭॥

ಟೀ॥ ರಾಮಃ-ಶ್ರೀರಾಮನು, ಕಥಾಪ್ರಸಂಗಾತ್-ಮಾತುಗಳಪ್ರಸ್ತಾವದ ದೆಶೆಯಿಂದ, ವಿಜಯನಾಮಕಂ – ವಿಜಯನೆಂಬ ಹೆಸರುಳ್ಳಗೂಢಚಾರಿಯಂಕುರಿತು, ಮೇ-ನನ್ನವಿಷಯವಾಗಿ, ಪೌರಾಃ-ಪಟ್ಟಣಸ್ಥರೂನು, ಜಾನಪದಾಃ-ದೇಶವಾಸಿಗಳೂನು, ಶುಭಾಶುಭಂ-ಶುಭಾಶುಭಗಳನ್ನು ಕುರಿತು, ಕಿಂವದಂತಿ-ಯೇನುಹೇಳುತ್ತಾರೆ. ॥೪೭॥

ಮೂ॥ ಸೀತಾಂವಾಮಾತರಂವಾಮೆಭ್ರಾತೄನ್ವಾಕೈಕಯೀಮಥ । ನಭೇತ್ತವ್ಯಂತ್ವಯಾ
ಬ್ರೂಹಿಶಾಪಿತೋಸಿಮಮೋಪರಿ ॥೪೮॥

ಟೀ॥ ಸೀತಾಂವಾ-ಸೀತಾದೇವಿಯನ್ನೇಆಗಲೀ, ಮೇ-ನನ್ನ, ಮಾತರಂವಾ-ತಾಯಿಯನ್ನೇ ಆಗಲೀ, ಭ್ರಾತೄನ್ವಾ-ತಮ್ಮಂದಿರನ್ನೇ ಆಗಲೀ, ಅಥ-ಬಳಿಕ,ಕೈಕಯೀಮಪಿ- ಕೈಕೆಯೀದೇವಿಯನ್ನುದ್ದೇಶಿಸಿ, ಕಿಂವದಂತಿ-ಯೇನು ಹೇಳುತ್ತಾರೆ, ಬ್ರೂಹಿ-ಹೇಳು, ತ್ವಯಾ-ನಿನ್ನಿಂದ, ನಭೇತ್ತವ್ಯಂ-ಭಯಪಡತಕ್ಕದ್ದಲ್ಲಾ, ಮಮೋಪರಿ-ನನ್ನಮ್ಯಾಲೆ, ಶಾಪಿತಃ-ಶಪಿಸಲ್ಪಟ್ಟವನು, ಅಸಿ-ಆಗುವೀ .. .. . ॥೪೮॥

ಮೂ॥ ಇತ್ಯುಕ್ತಃಪ್ರಾಹವಿಜಯೋದೇವಸರ್ವೆವದಂತಿತೇ ॥ ಕೃತಂಸುದುಷ್ಕರಂಸರ್ವಂರಾಮೇಣ
ವಿದಿತಾತ್ಮನಾ ॥ ॥೪೯॥

ಟೀ॥ ಇತಿ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ವಿಜಯಃ-ಜಯನೂ ಎಂಬವನು, ಪ್ರಾಹ-ಹೇಳಿದನು, ಹೆ ದೇವ-ಎಲೊ ಸ್ವಾಮಿಯೇ, ತೆ-ನಿನ್ನ ವಿಷಯವಾಗಿ,

ವಿದಿತಾತ್ಮನಾ–ತಿಳುವಳಿಕೆಯುಳ್ಳ ಮನಸ್ಸುಳ್ಳ, ರಾಮೇಣ–ಶ್ರೀರಾಮನಿಂದ, ಸರ್ವಂ–ಸಮಸ್ತವಾದ, ಸುದುಷ್ಕರಂ–ಮನುಷ್ಯರಿಂದ ಮಾಡಲಸಾಧ್ಯವಾದ ಕಾರ್ಯವು, ಕೃತಂ–ಮಾಡಲ್ಪಟ್ಟಿತು, ಇತಿ–ಇಂತೆಂದು, ಸರ್ವೇ–ಸಮಸ್ತರೂನು, ವದಂತಿ–ಹೇಳುತ್ತಾರೆ. .. .. ॥೪೯॥

ಮೂ॥ ಕಿಂತುಹತ್ವಾದಶಗ್ರೀವಂಸೀತಾಮಾಹೃತ್ಯರಾಘವಃ । ಅಮರ್ಷಂಪೃಷ್ಠತಃಕೃತ್ವಾ
ಸ್ವಂವೇಶ್ಮಪ್ರತ್ಯಪಾದಯತ್ ॥ ॥೫೦॥

ಟೀ॥ ಕಿಂತು–ಮತ್ತೇನಂದರೇ, ರಾಘವಃ–ಶ್ರೀರಾಮನು, ದಶಗ್ರೀವಂ–ರಾವಣನನ್ನು, ಹತ್ವಾ–ಕೊಂದು, ಸೀತಾಂ–ಸೀತಾದೇವಿಯನ್ನು, ಆಹೃತ್ಯ– ಕರದುಕೊಂಡು ಬಂದು, ಅಮರ್ಷಂ–ಕೋಪವನ್ನು, ಪೃಷ್ಠತಃ–ಹಿಂದಗಡೆ, ಕೃತ್ವಾ–ಮಾಡಿ, ಸ್ವಂ–ಸ್ವಕೀಯ್ಯವಾದ, ವೇಶ್ಮ–ಮನೆಯನ್ನು, ಪ್ರತ್ಯಪಾದಯತ್–ಪ್ರವೇಶಿಸುವಳನಾಗಿಮಾಡಿದನು ॥

ಮೂ॥ ಕೀದೃಶಂಹೃದಯೇತಸ್ಯಸೀತಾಸಂಭೋಗಜಂಸುಖಂ । ಯಾಹೃತಾವಿಜನೇರಣ್ಯೇರಾವಣೇ
ನದುರಾತ್ಮನಾ ॥ ... ... ॥೫೧॥

ಟೀ॥ ಯಾ–ಯಾವ ಸೀತಾದೇವಿಯು, ದುರಾತ್ಮನಾ–ದುಷ್ಟನಾದ, ರಾವಣೇನ–ರಾವಣಾಸುರನಿಂದ, ವಿಜನೇ– ಜನರಹಿತವಾಗಿರುವ, ಅರಣ್ಯೇ– ಅರಣ್ಯದಲ್ಲಿ, ಹೃತಾ–ಅಪಹರಿಸಲ್ಪಟ್ಟಳೋ, ತಸ್ಯ–ಆ ಶ್ರೀರಾಮನ, ಹೃದಯೇ–ಮನದಲ್ಲಿ, ಸೀತಾಸಂಭೋಗಜಂ–ಅಂಥಾ ಸೀತಾದೇವಿಯ ಸಂಭೋಗದಿಂದ ಹುಟ್ಟಿದ, ಸುಖಂ–ಸುಖವು, ಕೀದೃಶಂ–ಯಂಥಾದ್ದೋ. .. .. .. .. ॥೫೧॥

ಮೂ॥ ಅಸ್ಮಾಕಮಪಿದುಷ್ಕರ್ಮ ಯೋಷಿತಾಂಮರ್ಷಣಂಭವೇತ್ । ಯಾದೃಗ್ಭವತಿವೈರಾಜಾ
ತಾದೃಶ್ಯೋನಿಯತಂಪ್ರಜಾಃ ॥ ... ... ॥೫೨॥

ಟೀ॥ ಅಸ್ಮಾಕಮಪಿ–ನಮಿಗೂನು, ಯೋಷಿತಾಂ–ಸ್ತ್ರೀರುಗಳ, ದುಷ್ಕರ್ಮ–ದುರ್ವ್ಯಾಪಾರವು, ಮರ್ಷಣಂ–ಸಹನಯೋಗ್ಯವು, ಭವೇತ್–ಆಗುವದು, ರಾಜಾವೈ–ಅರಸಾದರೇ, ಯಾದೃಗ್ಭವತಿ–ಯಂಥಾವನಾಗುತ್ತಾನೋ, ಪ್ರಜಾಃ–ಪ್ರಜೆಗಳು, ತಾದೃಶ್ಯಃ–ಅಂಥಾವರೇ, ಭವತಿ–ಆಗುವರು, ನಿಯತಂ–ನಿಶ್ಚಯವು. ॥೫೨

ಮೂ ॥ ಶ್ರುತ್ವಾತದ್ವಚನಂರಾಮಃಸ್ವಜನಾನ್ಸರ್ವ್ಯಪೃಚ್ಛತ । ತೇಪಿನತ್ವಾಬ್ರುವನ್ರಾಮಂಪಿ
ವಮೇತನ್ನಸಂಶಯಃ ॥ ... ... ॥೫೩॥

ಟೀ॥ ರಾಮಃ-ಶ್ರೀರಾಮನು, ತದ್ವಚನಂ-ಆ ವಿಜಯನೆಂಬ ಮಂತ್ರಿಯ ವಚನವನ್ನು, ಶ್ರುತ್ವಾ-ಕೇಳಿ, ಸ್ವಜನಾನ್-ತಮ್ಮ ಜನಗಳನ್ನು, ಪರ್ಯಪೃಚ್ಛತ- ಕೇಳಿದನು, ತೇಪಿ-ಆ ಸ್ವಜನರೂ ಕೂಡ, ರಾಮಂ-ಶ್ರೀರಾಮನನ್ನು, ನತ್ವಾ-ನಮಸ್ಕರಿಸಿ, ಏತತ್-ಇದು, ಹೀಗೇ ಸತ್ಯವೇಸರಿ, ಸಂಶಯಃ-ಸಂಶಯವು, ನ-ಇಲ್ಲಾ, ಇತಿ-ಈಪರಿಯಾಗಿ, ಅಬ್ರುವನ್-ಹೇಳಿದರು. .. .. .. .. ॥೫೩॥

ಮೂ॥ ತತೋವಿಸೃಜ್ಯಸಚಿವಾನ್ವಿಜಯಂಸುಹೃದಸ್ತಥಾ । ಆಹೂಯಲಕ್ಷ್ಮಣಂರಾಮೋವ
ಚನಂಚೆದಮಬ್ರವೀತ್ ॥ ... ... ॥೫೪॥

ಟೀ॥ ತತಃ-ಬಳಿಕ, ಸಚಿವಾನ್-ಮಂತ್ರಿಗಳನ್ನು, ವಿಜಯಂ-ವಿಜಯನನ್ನು, ತಥಾ-ಹಾಗೆಯೇ, ಸುಹೃದಃ-ಸ್ನೇಹಿತರನ್ನು, ವಿಸೃಜ್ಯ-ಬಿಟ್ಟು, ರಾಮಃ-ಶ್ರೀರಾಮನು, ಲಕ್ಷ್ಮಣಂ-ಲಕ್ಷ್ಮಣನನ್ನು, ಆಹೂಯ-ಕರದು, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು. .. ॥೫೪॥

ಮೂ॥ ಲೋಕಾಪವಾದಸ್ತುಮಹಾನ್ಸೀತಾಮಾಶ್ರಿತ್ಯಮೆಭವತ್। ಸೀತಾಂಪ್ರಾತಸ್ಸಮಾನೀ
ಯ್ಯವಾಲ್ಮೀಕೆರಾಶ್ರಮಾಂತಿಕೆ ॥೫೫॥ ತ್ಯಕ್ತ್ವಾಶೀಘ್ರಂರಥೆನತ್ವಂಪುನರಾಯಾಹಿಲಕ್ಷ್ಮಣ ॥

ಟೀ॥ ಹೆ ಲಕ್ಷ್ಮಣ-ಎಲೊ ಲಕ್ಷ್ಮಣನೇ, ಲೋಕಾಪವಾದಸ್ತು-ಲೋಕಪ್ರವಾದವಾದರೇ, ಸೀತಾಂ-ಸೀತಾದೇವಿಯನ್ನು, ಆಶ್ರಿತ್ಯ-ಆಶ್ರಯಿಸಿ,ಮೆ-ನನಿಗೆ, ಮಹಾನ್-ದೊಡ್ಡದು, ಅಭವತ್-ಆಯಿತು, ಪ್ರಾತಃ-ಪ್ರಾತಃಕಾಲದಲ್ಲಿ, ಸೀತಾಂ-ಸೀತಾದೇವಿಯನ್ನು, ರಥೇನ-ರಥದಿಂದ, ಸಮಾನೀಯ್ಯ-ಕರದುಕೊಂಡು ಹೋಗಿ, ವಾಲ್ಮೀಕೆಃ-ವಾಲ್ಮೀಕಿಋಷಿಯ, ಆಶ್ರಮಾಂತಿಕೆ-ಆಶ್ರಮದ ಬಳಿಲಿ, ತ್ಯಕ್ತ್ವಾ-ಬಿಟ್ಟು, ತ್ವಂ-ನೀನು, ಶೀಘ್ರಂ-ಜಾಗ್ರತೆಯಾಗಿ, ಪುನಃ-ಮತ್ತು-ಆಯಾಹಿ-ಬಾರೈಯ್ಯನೆ ॥೫೫

ಮೂ॥ ವಕ್ಷ್ಯಸೆಯದಿವಾಕಿಂಚಿತ್ತದಾಮಾಂಹತವಾನಸಿ ॥ ॥೫೬॥

ಟೀ॥ ಕಿಂಚಿಸ್ವಾ-ಯಾವ ಮಾತನ್ನಾದರೂ, ವಕ್ಷ್ಯಸೆಯದಿ-ಹೇಳಿದವನಾದರೇ, ತದಾ-ಆ ಕಾಲದಲ್ಲಿ, ಮಾಂ-ನನ್ನನ್ನು-ಹತವಾನ್-ಹೊಡದವನು, ಅಸಿ-ಆದಿಯಾ ॥

ಮೂ॥ ಇತ್ಯುಕ್ತೊಲಕ್ಷ್ಮಣೊಪ್ರೀತ್ಯಾಪ್ರಾತರುತ್ಥಾಯಜಾನಕೀಂ। ಸುಮಂತ್ರೇಣರಥೇಕೃ
ತ್ವಾಜಗಾಮಸಹಸಾವನಂ ॥ ... ॥೫೭॥

ಟೀ॥ ಇತಿ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಲಕ್ಷ್ಮಣಃ-ಲಕ್ಷ್ಮಣನು, ಅಪ್ರೀತ್ಯಾ-ಅಸಂತೋಷದಿಂದ, ಪ್ರಾತಃ-ಪ್ರಾತಃಕಾಲದಲ್ಲಿ,ಉತ್ಥಾಯ-ನಿದ್ರೆ ಹೆಚ್ಚರಗೊಂಡು, ಸುಮಂತ್ರೇಣ-ಸುಮಂತ್ರನಿಂದ ತರಲ್ಪಟ್ಟ, ರಥೇ-ರಥದಲ್ಲಿ, ಜಾನಕೀಂ-ಸೀತಾದೇವಿಯನ್ನು, ಕೃತ್ವಾ-ಕುಳಿತುಕೊಳ್ಳುವಳನ್ನಾಗಿಮಾಡಿ, ಸಹಸಾ-ಜಾಗ್ರತೆಯಾಗಿ, ವನಂ-ವನವನ್ನು ಕುರಿತು, ಜಗಾಮ-ಹೊರಟನು. .. .. .. ॥೪೭॥

ಮೂ॥ ವಾಲ್ಮೀಕೇರಾಶ್ರಮಸ್ಯಾಂತೇತ್ಯಕ್ತ್ವಾಸೀತಾಮುವಾಚಸಃ। ಲೋಕಾಪವಾದಭೀತ್ಯಾ

ತ್ವಾಂತ್ಯಕ್ತ್ವಾರ್ಗರಾಘವೋವನೇ ॥ ... ... ॥೪೮॥

ಟೀ॥ ವಾಲ್ಮೀಕೇಃ-ವಾಲ್ಮೀಕಿಯ, ಆಶ್ರಮಸ್ಯ-ಆಶ್ರಮದ, ಅಂತೇ-ಬಳಿಯಲ್ಲಿ, ಸೀತಾಂ-ಸೀತಾದೇವಿಯನ್ನು, ತ್ಯಕ್ತ್ವಾ-ಬಿಟ್ಟು, ರಾಘವಃ-ಶ್ರೀರಾಮನು, ತ್ವಾಂ- ನಿನ್ನನ್ನು, ಲೋಕಾಪವಾದ ಭೀತ್ಯಾ-ಲೋಕದಲ್ಲಿ ನಿಂದಾ ವಾರ್ತೆಯ ದೆಸೆಯಿಂದ, ಭೀತ್ಯಾ-ಭೀತಿಯಿಂದ, ವನೇ-ವನದಲ್ಲಿ, ತ್ಯಕ್ತವಾರ್ನ್-ಬಿಟ್ಟುಬಿಟ್ಟನು, ಇತಿ-ಇಂತೆಂದು,ಸಃ-ಆ ಲಕ್ಷ್ಮಣನು, ಸೀತಾಂ-ಸೀತಾದೇವಿಯಂ ಕುರಿತು, ಉವಾಚ-ಹೇಳಿದನು. .. .. ॥೪೮॥

ಮೂ॥ ದೋಷೋನಕಶ್ಚಿನ್ಮೇಮಾತಃಗಚ್ಛಾಶ್ರಮಪದಂಮುನೇಃ । ಇತ್ಯುಕ್ತ್ವಾಲಕ್ಷ್ಮಣಶ್ಶೀ

ಘ್ರಂಗತವಾರ್ನ್ರಾಮಸನ್ನಿಧಿಂ ॥ ... ॥೪೯॥

ಟೀ॥ ಹೇ ಮಾತಃ-ಎಲೈ ತಾಯಿಯೆ, ಮೇ-ಯನಗೆ, ಕಶ್ಚಿತ್-ದೋಷಃ-ಯಾವ ದೋಷವು, ನ-ಇಲ್ಲ, ಮುನೇಃ-ವಾಲ್ಮೀಕಿಯ, ಆಶ್ರಮಪದಂ- ಆಶ್ರಮಸ್ಥಾನವನ್ನು ಕುರಿತು, ಗಚ್ಛ-ಹೋಗು, ಇತಿ-ಈಪರಿಯಾಗಿ, ಉಕ್ತ್ವಾ-ಹೇಳಿ, ಲಕ್ಷ್ಮಣಃ-ಲಕ್ಷ್ಮಣನು, ಶೀಘ್ರಂ-ಜಾಗ್ರತೆಯಾಗಿ, ರಾಮಸಾನ್ನಿಧ್ಯಂ-ರಾಮ-ಶ್ರೀರಾಮನ, ಸಾನ್ನಿಧ್ಯಂ-ಸನ್ನಿಧಿಯಂ ಕುರಿತು, ಗತವಾರ್ನ್-ಹೊರಟು ಬಂದನು. .. .. .. ॥೪೯॥

ಮೂ॥ ಸೀತಾಪಿದುಃಖಸಂತಪ್ತಾವಿಲಲಾಪಾತಿಮುಗ್ಧವತ್ । ಶಿಷ್ಯೈಶ್ಶ್ರುತ್ವಾಚವಾಲ್ಮೀಕಿಃ

ಸೀತಾಂಜ್ಞಾತ್ವಾಸದಿವ್ಯದೃಕ್ ... ... ॥೫೦॥

ಟೀ॥ ಸೀತಾಪಿ-ಸೀತಾದೇವಿಯೂ, ದುಃಖಸಂತಪ್ತಾ-ದುಃಖದಿಂದ ಪರಿತಪಿಸುತ್ತಿರುವಳಾಗಿ, ಅತಿಮುಗ್ಧವತ್-ಅತಿ ಮೂಢಳಂತೆ, ವಿಲಲಾಪ--ಪ್ರಲಾಪಿಸಿದಳು, ಶಿ

ಪ್ಯೈಃ-ಶಿಷ್ಯರಿಂದ, ವಾಲ್ಮೀಕಿಃ-ವಾಲ್ಮೀಕಿಋಷಿಯು, ಕೃತ್ವಾಚ-ಕೇಳಿಯೂನು, ದಿವ್ಯದೃಕ್-ದಿವ್ಯದೃಷ್ಟಿಯುಳ್ಳ, ಸಃ-ಆ ವಾಲ್ಮೀಕಿಋಷಿಯು, ಸೀತಾಂ-ಸೀತಾದೇವಿಯನ್ನು ಜ್ಞಾತ್ವಾ-ತಿಳಿದವನಾದನು. .. .. .. ||೬೦||

ಮೂ|| ಅರ್ಘ್ಯಾದಿಭಿಃಪೂಜಯಿತ್ವಾಸಮಾಶ್ವಾಸ್ಯಚಜಾನಕೀಂ । ಜ್ಞಾತ್ವಾಭವಿಷ್ಯಂಸಕ
ಲಂಅರ್ಪಯನ್ಮುನಿಯೋಷಿತಾಂ || ... ... ||೬೧||

ಟೀ|| ಅರ್ಘ್ಯಾದಿಭಿಃ-ಅರ್ಘ್ಯವೇ ಮೊದಲಾದ ಪೂಜೆಗಳಿಂದ, ಜಾನಕೀಂ-ಸೀತಾದೇವಿಯನ್ನು, ಪೂಜಯಿತ್ವಾ-ಪೂಜೆಯಂಮಾಡಿ, ಸಮಾಶ್ವಾಸ್ಯಚ-ಸಮಾಧಾನಗೊಳಿಸಿ,ಸಕಲಂ-ಸಮಸ್ತವಾದ, ಭವಿಷ್ಯಂ-ಭವಿಷ್ಯದ್ವರ್ತವನ್ನು, ಜ್ಞಾತ್ವಾ-ತಿಳಿದು, ತಾಸಾಂಮುನಿಯೋಷಿತಾಂ-ಆ ಋಷಿಪತ್ನಿಗಳಿಗೆ, ಅರ್ಪಯತ್-ಸಮರ್ಪಿಸಿದನು. ||೬೧||

ಮೂ|| ತಾಸಾಂಸಂಪೂಜಯಂತಿಸ್ಮಸೀತಾಂಭಕ್ತ್ಯಾದಿನೇದಿನೇ । ಜ್ಞಾತ್ವಾಪರಾತ್ಮನೋಲ
ಕ್ಷ್ಮೀಂಮುನಿವಾಕ್ಯೇನಯೋಷಿತಃ ||೬೨|| ಸೇವಾಂಚಕ್ರುಸ್ಸದಾತಸ್ಯಾಃವಿನಯಾದಿಭಿರಾದರಾತ್ ||

ಟೀ|| ಯೋಷಿತಃ-ಸ್ತ್ರೀಯರುಗಳು, ಮುನಿವಾಕ್ಯೇನ-ವಾಲ್ಮೀಕಋಷಿಯ ವಚನದಿಂದ, ಭಕ್ತ್ಯಾ-ಭಕ್ತಿಯಿಂದ,ಸೀತಾಂ-ಸೀತಾದೇವಿಯನ್ನು,ಪರಾತ್ಮನಃ-ಪರಮಾತ್ಮಸ್ವರೂಪನಾದ ನಾರಾಯಣನಪತ್ನಿಯಾದ, ಲಕ್ಷ್ಮೀಂ-ಲಕ್ಷ್ಮೀದೇವಿಯನ್ನಾಗಿ, ಜ್ಞಾತ್ವಾ-ತಿಳಿದು, ಸದಾ-ನಿರಂತರವೂನು, ದಿನೇದಿನೇ-ಪ್ರತಿದಿನದಲ್ಲಿಯೂನು, ಪೂಜಯಂತಿಸ್ಮ-ಪೂಜೆಮಾಡಿದರು, ಆದರಾತ್-ಆದರಣೆಯಿಂದ, ತಸ್ಯಾಃ-ಆ ಸೀತಾದೇವಿಗೆ, ವಿನಯಾದಿಭಿಃ-ನಮ್ರಭಾವಾದಿಗಳಿಂದ, ಸೇವಾಂ-ಸೇವೆಯನ್ನು ಚಕ್ರುಃ-ಮಾಡಿದರು ||೬೨||

ಮೂ || ರಾಮೋಪಿಸೀತಾರಹಿತಃಪರಾತ್ಮಾವಿಜ್ಞಾನದೃಕ್ಕೇವಲಮಾದಿದೇವಃ।ಸಂತ್ಯಜ್ಯಭೋ
ಗಾನಖಿಲಾನ್ವಿರಕ್ತೋಮುನಿವ್ರತೋಭೂನ್ಮುನಿಸೇವಿತಾಂಘ್ರಿಃ ||೬೩||

ಟೀ|| ಮುನಿಸೇವಿತಾಂಘ್ರಿಃ-ಮುನಿ-ಋಷಿಗಳಿಂದ, ಸೇವಿತ-ಸೇವಿಸಲ್ಪಟ್ಟ, ಅಂಘ್ರಿಃ-ಪಾದಗಳುಳ್ಳ, ರಾಮೋಪಿ-ಶ್ರೀರಾಮನೂನು, ಸೀತಾರಹಿತಃ- ಸೀತಾದೇವಿಯಿಂದ ರಹಿತನಾದಂಥಾವನಾಗಿ, ಪರಾತ್ಮಾ- ಪರಮಾತ್ಮಸ್ವರೂಪನಾದ, ವಿಜ್ಞಾನದೃಕ್- ಸಾಕ್ಷಿಚೈತನ್ಯರೂಪನಾದ, ಕೇವಲಃ-ಅದ್ವಿತೀಯನಾದ, ಆದಿದೇವಃ- ಪುರಾಣಪುರು

ಷೋತ್ತಮನಾದ ಕಾರಣ, ಅಖಿಲಾರ್ಥ-ಸಮಸ್ತಂಗಳಾದ, ಭೋಗಾರ್ಥ- ವಿಷಯಸುಖಂಗಳನ್ನು, ಸಂತ್ಯಜ್ಯ-ಬಿಟ್ಟು, ವಿರಕ್ತಃ- ವಿರಕ್ತನಾಗಿ, ಮುನಿವ್ರತೇಃ- ಋಷಿವ್ರತಮುಳ್ಳವನು, ಅಭೂತ್-ಆದನು .. .. .. ... ॥೬೩॥

## ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರ ಸಂವಾದೇ

## *ಉತ್ತರಕಾಂಡೇ ಚತುರ್ಥಸ್ಸರ್ಗಃ.*

ಶ್ರೀಮಹಾದೇವ ಉವಾಚ ॥

ಮೂ॥ ತತೋಜಗನ್ಮಂಗಳಮಂಗಳಾತ್ಮನಾವಿಧಾಯರಾಮಾಯಣಕೀರ್ತಿಮುತ್ತಮಾಂ । ಚ
ಕಾರಪೂರ್ವಾಚರಿತಂರಘೂತ್ತಮೋರಾಜರ್ಷಿವರ್ಯ್ಯೈರಭಿಸೇವಿತಂಯಥಾ ॥೧॥

ಟೀ॥ ತತಃ-ಬಳಿಕ, ಜಗನ್ಮಂಗಳ ಮಂಗಳಾತ್ಮನಾ-ಜಗತ್-ಜಗತ್ತಿಗೆ, ಮಂಗಳ-ಮಂಗಳಕರವಾದ ವಸ್ತುಗಳಿಂದಲೂ, ಮಂಗಳಾತ್ಮನಾ-ಕಲ್ಯಾಣಕರವಾದ ಸ್ವರೂಪದಿಂದ, ಉತ್ತಮಾಂ-ಉತ್ಕೃಷ್ಟವಾದ, ರಾಮಾಯಣಕೀರ್ತಿಂ-ರಾಮಾಯಣಾಖ್ಯಗ್ರಂಥದಿಂದ ಹೇಳಲ್ಪಟ್ಟ, ಕೀರ್ತಿಂ-ಕೀರ್ತಿಯನ್ನು, ವಿಧಾಯ-ಮಾಡಿ, ರಘೂತ್ತಮಃ -ರಘುವಂಶೋತ್ಪನ್ನರಲ್ಲಿ ಶ್ರೇಷ್ಠನಾದ ಶ್ರೀರಾಮನು, ಯಥಾ-ಹ್ಯಾಗೆ, ರಾಜರ್ಷಿವರ್ಯೈಃ-ರಾಜಶ್ರೇಷ್ಠರಿಂದ, ಅಭಿಸೇವಿತಂ-ಸೇವಿಸಲ್ಪಟ್ಟಿತೋ, ತಥಾ-ಹಾಗೆಯೇ, ಪೂರ್ವಾಚರಿತಂ-ಪೂರ್ವ-ಸ್ವಪೂರ್ವಿಕದಿಂದ, ಆಚರಿತಂ-ನಡಿಸಲ್ಪಟ್ಟ ನಡತೆಯನ್ನು, ಚಚಾರ-ಆಚರಿಸಿದನು .. .. ॥೧॥

ಮೂ॥ ಸೌಮಿತ್ರಿಣಾಪೃಷ್ಟಉದಾರಬುದ್ಧಿನಾರಾಮಃಕಥಾಪ್ರಾಹಪುರಾತನೈಶ್ಶುಭಾಃ । ರಾ
ಜ್ಞಃಪ್ರಮತ್ತಸ್ಯನೃಗಸ್ಯಶಾಪತೋದ್ವಿಜಸ್ಯತಿರ್ಯಕ್ತ್ವಮಥಾಹರಾಘವಃ ॥೨॥

ಟೀ॥ ರಾಘವಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು, ಉದಾರಬುದ್ಧಿನಾ-ಉದಾರ-ಮಹತ್ತರವಾದ, ಬುದ್ಧಿನಾ-ಬುದ್ಧಿಯುಳ್ಳ, (ಯದ್ವಾ- ಉದಾರ-ದಾನಶೀಲವಾದ, ಬುದ್ಧಿನಾ-ಬುದ್ಧಿಯುಳ್ಳ, ಸೌಮಿತ್ರಿಣಾ-ಲಕ್ಷ್ಮಣಸ್ವಾಮಿಯಿಂದ, ಪೃಷ್ಟಃ-ಕೇಳಲ್ಪಟ್ಟವನಾಗಿ, ಪುರಾತನೈಃ-ಪ್ರಾಚೀನರಾಜರ ಸಂಬಂಧಿಗಳಾದ,ಶುಭಾಃ-

ಶುಭಕರವಾದ, ಕಥಾಃ-ಕಥೆಗಳನ್ನು, ಪ್ರಾಹ-ಪೇಳಿದನು, ಪ್ರಮತ್ತಸ್ಯ-ಪ್ರಮಾದವನ್ನು ಹೊಂದಿದ, ನೃಗಸ್ಯರಾಜ್ಞಃ-ನೃಗರಾಯನಿಗೆ, ದ್ವಿಜಸ್ಯ-ಬ್ರಾಹ್ಮಣನ, ಶಾಪತಃ - ಶಾಪದಿಂದ, ತಿರ್ಯಕ್ತ್ವಂ-ತಿರ್ಯಗ್ಜನ್ಮವನ್ನು, ಅಥ-ಬಳಿಕ, ಆಹ-ಪೇಳಿದನು .. .. .. ||೨||

ಮೂ॥ ಕದಾಚಿದೇಕಾಂತಉಪಸ್ಥಿತಂಪ್ರಭುಂರಾಮಂರಮಾಲಾಲಿತಪಾದಪಂಕಜಂ । ಸೌಮಿ
ತ್ರಿರಾಸಾದಿತಶುದ್ಧಭಾವನಃಪ್ರಣಮ್ಯಭಕ್ತ್ಯಾವಿನಯಾನ್ವಿತೋಬ್ರವೀತ್ ||೩||

ಟೀ॥ ಕದಾಚಿತ್-ಒಂದಾನೊಂದುಕಾಲದಲ್ಲಿ, ಏಕಾಂತೇ-ರಹಸ್ಯದಲ್ಲಿ, ಉಪಸ್ಥಿತಂ-ಕುಳಿತುಕೊಂಡಿರುವ, ಪ್ರಭುಂ-ಸ್ವಾಮಿಯಾದ, ರಮಾಲಾಲಿತಪಾದಪಂಕಜಂ- ರಮಾ ಲಕ್ಷ್ಮೀಸ್ವರೂಪಳಾದ ಸೀತಾದೇವಿಯಿಂದ, ಲಾಲಿತ-ವತ್ತಲ್ಪಟ್ಟ, ಪಾದಪಂಕಜಂ- ಕಮಲಗಳೋಪಾದಿಯಲ್ಲಿರುವ ಪಾದಗಳುಳ್ಳ, ರಾಮಂ- ಶ್ರೀರಾಮನನ್ನು ಕುರಿತು, ಪ್ರಣ ಮ್ಯ-ನಮಸ್ಕರಿಸಿ, ಆಸಾದಿತ ಶುದ್ಧಭಾವನಃ-ಆಸಾದಿತ-ಹೊಂದಲ್ಪಟ್ಟ, ಶುದ್ಧಭಾವನಃ-ನಿರ್ಮಲವಾದ ಅಂತಃಕರಣವುಳ್ಳ, ಸೌಮಿತ್ರಿಃ-ಲಕ್ಷ್ಮಣನು, ಭಕ್ತ್ಯಾ- ಭಕ್ತಿಯಿಂ ದ, ವಿನಯಾನ್ವಿತಃ-ನಮ್ರತೆಯಿಂ ಕೂಡಿಗೂಡಿದವನಾಗಿ, ಅಬ್ರವೀತ್-ನುಡಿದನು .. .. .. ||೩||

ಮೂ॥ ತ್ವಂಶುದ್ಧಬೋಧೋಸಿಹಿಸರ್ವದೇಹಿನಾಮಾತ್ಮಾಸ್ಯಧೀಶೋಸಿನಿರಾಕೃತಿಸ್ಸ್ವಯಂ ।
ಪ್ರತೀಯಸೇಜ್ಞಾನದೃಶಾಂಮಹಾಮತೇಪಾದಾಬ್ಜಭೃಂಗಾಹಿತಸಂಗಸಂಗಿನಾಂ ||೪||

ಟೀ॥ ಹೇ ಮಹಾಮತೇ-ಎಲೈ ಮಹಾಬುದ್ಧಿಶಾಲಿಯಾದವನೆ (ಅಂದರೆ ಸರ್ವಜ್ಞನು) ತ್ವಂ-ನೀನು, ಶುದ್ಧಬೋಧಃ-ಅನವಚ್ಛಿನ್ನವಾದ ಚೈತನ್ಯರೂಪನು, ಅಸಿ - ಆಗಿ ದ್ದೀ, ಸರ್ವದೇಹಿನಾಂ-ಎಲ್ಲಾಜೀವರಾಶಿಗಳಿಗೂ, ಆತ್ಮಾ-ಅಂತರ್ಯಾಮಿರೂಪನು, ಅಸಿ-ಆಗಿದ್ದೀ, ಅಧೀಶಃ-ನಿಯಾಮಕನು, ಅಸಿ-ಆಗಿದ್ದೀ, ಸ್ವಯಂ-ತಾನು, ನಿರಾಕೃತಿಃ-ಆ ಕಾರರಹಿತನಾದವನು, ಪಾದಾಬ್ಜಭೃಂಗಾಹಿತ ಸಂಗಸಂಗಿನಾಂ-ಪಾದಾಬ್ಜ-ಪಾದಕಮಲಗಳಿಗೆ, ಭೃಂಗ-ದುಂಬಿಗಳ, ಸಂಗ-ಸಂಬಂಧವುಳ್ಳವರ, ಸಂಗಿನಾಂ-ಸಂಬಂಧವುಳ್ಳ, ಜ್ಞಾನ ದೃಶಾಂ-ಜ್ಞಾನದೃಷ್ಟಿಯುಳ್ಳ ಭಕ್ತರಿಂದ, ಪ್ರತೀಯ್ಯಸೇ-ತಿಳಿಯಲ್ಪಡುತ್ತಿ - .. .. ||೪||

ಮೂ ॥ ಅಹಂಪ್ರಪನ್ನೋಸ್ಮಿಪದಾಂಬುಜಂಪ್ರಭೋಭವಾಪವರ್ಗಂತವಯೋಗಿಭಾವಿತಂ ।
ಯಥಾಂಜಸಾಜ್ಞಾನಮಪಾರವಾರಿಧಿಂಸುಖಂತರಿಷ್ಯಾಮಿತಥಾನುಶಾಧಿಮಾಂ ||೫||

ಟೀ॥ ಅಹಂ-ನಾನು, ಭವಾಪವರ್ಗಂ-ಭವ-ಜನನಮರಣ ಪ್ರವಾಹರೂಪವಾದ ಸಂಸಾರಕ್ಕೆ, ಅಪವರ್ಗಂ-ನಿವೃತ್ತಿಸಾಧಕವಾದ, ಯೋಗಿಭಾವಿತಂ-ಯೋಗಿ-ಜ್ಞಾ

ನಯೋಗಿಗಳಿಂದ, ಭಾವಿತಂ-ಧ್ಯಾನಿಸಲ್ಪಟ್ಟ, ತವ-ನಿನ್ನ, ಪದಾಂಬುಜಂ-ಪಾದಕಮಲವನ್ನು, ಪ್ರಪನ್ನಃ-ಶರಣವಾಗಿ ಹೊಂದಿದವನು, ಅಸ್ಮಿ-ಆಗಿಧ್ದೇನೆ, ಯಥಾ-ಹ್ಯಾಗೆ, ಅಂಜಸಾ-ಶೀಘ್ರವಾಗಿ, ಅಪಾರವಾರಿಧಿಂ-ಅಪಾರ-ಮಿತಿಯಿಲ್ಲದಿರುವ, ವಾರಿಧಿಂ-ಸಮುದ್ರರೂಪವಾಗಿರುವ, ಅಜ್ಞಾನಂ-ಸಂಸಾರಕ್ಕೆ ಮೂಲಕಾರಣೀಭೂತವಾದ ಅಜ್ಞಾನವನ್ನು, ಅಂಜಸಾ-ತ್ವರೀಯವಾಗಿ, ಸುಖಂ-ಕ್ಲೇಶವಿಲ್ಲದೆ, ತರಿಷ್ಯಾಮಿ- ದಾಂಟುವೆನೋ, ತಥಾ-ಹಾಗೆ, ಮಾಂ-ನನ್ನನ್ನು, ಅನುಶಾಧಿ- ಉಪದೇಶದಿಂದ ಶಿಕ್ಷಿಸುವಂಥಾವನಾಗು, (ಅಂದರೆ ನನಗೆ ಜ್ಞಾನೋಪದೇಶಮಾಡಿ ಅಜ್ಞಾನನಿವೃತ್ತಿಯಂ ಮಾಡುವಂಥಾವನಾಗೆಂದು ಪ್ರಶ್ನಾಭಿಪ್ರಾಯವು. ॥೫॥

ಮೂ ॥ ಶ್ರುತ್ವಾಥಸೌಮಿತ್ರಿವಚೋಽಖಿಲಂತದಾಪ್ರಾಹಪ್ರಪನ್ನಾರ್ತಿಹರಃಪ್ರಸನ್ನಧೀಃ ।
ವಿಜ್ಞಾನಮಜ್ಞಾನತಮೋಪಶಾಂತಯೆಶ್ರುತಿಪ್ರಪನ್ನಂಕ್ಷಿತಿಪಾಲಭೂಷಣಃ॥ ॥೬॥

ಟೀ॥ ಅಥ-ಬಳಿಕ, ಅಖಿಲಂ-ಸಮಸ್ತವಾದ, ಸೌಮಿತ್ರಿವಚಃ-ಸೌಮಿತ್ರಿ-ಲಕ್ಷ್ಮಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ತದಾ-ಆ ಸಮಯದಲ್ಲಿ, ಪ್ರಪನ್ನಾರ್ತಿಹರಃ-ಪ್ರಪನ್ನ-ಶರಣಾಗತರಾದ ಭಕ್ತರ, ಆರ್ತಿ-ಸಂಸಾರದುಃಖವನ್ನು, ಹರಃ-ಅಪಹರಿಸುತ್ತಿರುವ, ಪ್ರಸನ್ನಧೀಃ-ಪ್ರಸನ್ನ-ಭ್ರಮಪ್ರಮಾದಾದಿ ದೋಷಗಳಿಲ್ಲದಿರುವ, ಧೀಃ- ಬುದ್ಧಿಯುಳ್ಳ, ಕ್ಷಿತಿಪಾಲಭೂಷಣಃ-ಕ್ಷಿತಿಪಾಲ-ಭೂಪತಿಗಳಿಗೆ, ಭೂಷಣಃ-ಅಲಂಕಾರಪ್ರಾಯನಾದ ಶ್ರೀರಾಮನು, ಅಜ್ಞಾನತಮೋಪಶಾಂತಯೆ- ಅಜ್ಞಾನ-ಅಜ್ಞಾನವೆಂಬ, ತಮಃ-ಅಂಧಕಾರದ, ಉಪಶಾಂತಯೆ-ನಿವೃತ್ತಿಗೋಸುಗ, ಶ್ರುತಿಪ್ರಪನ್ನಂ-ವೇದಗಳಿಂದ ಅಂಗೀಕರಿಸಲ್ಪಟ್ಟ, ವಿಜ್ಞಾನಂ-ಶ್ರವಣಾದಿ ಸಹಕೃತವಾದ ಶಾಸ್ತ್ರಜನ್ಯ ಜ್ಞಾನವನ್ನು, ಪ್ರಾಹ-ನಿರೂಪಿಸಿದನು. ॥೬॥

ಮೂ ॥ ಆದೌಸ್ವವರ್ಣಾಶ್ರಮವರ್ಣಿತಾಃಕ್ರಿಯಾಃಕೃತ್ವಾ ಸಮಾಸಾದಿತಶುದ್ಧಮಾನಸಃ ।
ಸಮಾಪ್ಯತತ್ಪೂರ್ವಮುಪಾತ್ತಸಾಧನಸ್ಸಮಾಶ್ರಯೆತ್ಸದ್ಗುರುಮಾತ್ಮಲಬ್ಧಯೆ॥ ॥೭॥

ಟೀ॥ ಆದೌ-ಪ್ರಥಮದಲ್ಲಿ, ಸ್ವವರ್ಣಾಶ್ರಮವರ್ಣಿತಾಃ-ಸ್ವ-ತನ್ನ, ವರ್ಣ-ಬ್ರಾಹ್ಮಣಾದಿ ಜಾತಿಗಳಲ್ಲಿಯೂ, ಆಶ್ರಮ ಬ್ರಹ್ಮಚರ್ಯಾದಿಮೊದಲಾದ ಆಶ್ರಮಗಳಲ್ಲಿಯೂ, ವರ್ಣಿತಾಃ-ಯೋಗ್ಯವಾಗಿ ಹೇಳಲ್ಪಟ್ಟ, ಕ್ರಿಯಾಃ-ನಿತ್ಯನೈಮಿತ್ತಿಕ ಯಜ್ಞ ದಾನಗಳೇ ಮುಂತಾದ ಕರ್ಮಗಳನ್ನು, ಕೃತ್ವಾ-ಮಾಡಿ, ಸಮಾಸಾದಿತ ಶುದ್ಧಮಾನಸಃ-ಸಮಾಸಾದಿತ-ಹೊಂದಲ್ಪಟ್ಟ, ಶುದ್ಧ-ಪಾರಿಶುದ್ಧ್ಯವುಳ್ಳ, (ಅಂದರೆ ನಿರ್ಮಲವಾದ, ಮಾನಸಃ- ಮನಸ್ಸುಳ್ಳವನಾಗಿ, ತತ್ಪೂರ್ವಂ-ಆ ಮನೋನೈರ್ಮಲ್ಯ ಪ್ರಾಪ್ತವಾಗುವದಕ್ಕಿಂತಲು ಮುಂಚಿತವಾಗಿ ಯೇಕರ್ಮಾನುಷ್ಠಾನ ಪೂರ್ವಕವಾಗಿ, ಉಪಾತ್ತಸಾಧನಃ-ಉಪಾತ್ತ-ಗ್ರಹಿಸಲ್ಪಟ್ಟ, ಸಾಧನಃ-ಶಮದಮಾದಿ ಸಾಧನಗಳುಳ್ಳವನಾಗಿ, ಆತ್ಮಲಬ್ಧಯೆ- ಬ್ರಹ್ಮಜ್ಞಾನೋದಯಕ್ಕೋಸ್ಕರ, ಸದ್ಗುರುಂ-ಶ್ರೋತ್ರಿಯನಾಗಿಯೂ, ಬ್ರಹ್ಮನಿಷ್ಠಾಪರನಾಗಿಯೂ ಇರುವ ಗುರುವಿನನ್ನು, ಸಮಾಶ್ರಯೇತ್-ಆಶ್ರಯಿಸಬೇಕು, ಅಂದರೆ ಪುರುಷನು

ಪ್ರಥಮತಃ ವರ್ಣಾಶ್ರಮಧರ್ಮಗಳನ್ನಾಚರಿಸಿದರೆ ಮನಶುದ್ಧಿಯುಂಟಾಗುವದು, ಅದರಿಂ ಶಮದಮಾದಿ ಗುಣಗಳು ಪ್ರಾಪ್ತಿ ಮೋಕ್ಷೇಚ್ಛೆಯುಳ್ಳವನಾಗಿ ಗುರುವಿನನ್ನು ಸೇವಿಸಿ, ಅದರಿಂದ ತತ್ವಜ್ಞಾನವಂ ಪಡೆದು ಮೋಕ್ಷವಂ ಪೊಂದಬೇಕೆಂದು ತಾತ್ಪರ್ಯವು. ||೬||

ಮೂ || ಕ್ರಿಯಾಶರೀರೋದ್ಭವಹೇತುರಾದೃತಾಪ್ರಿಯಾಪ್ರಿಯೌತೌಭವತಸ್ಸುರಾಗಿಣಃ । ಧರ್ಮೇತರೌತತ್ರಪುನಶ್ಶರೀರಕಂಪುನಃಕ್ರಿಯಾಚಕ್ರವದೀರ್ಯತೇಭವಃ ||೭||

ಟೀ|| ಆದೃತಾ-ಆದರಣೆಯಿಂದ ಪೂರ್ವಜನ್ಮದಲ್ಲಿಮಾಡಲ್ಪಟ್ಟ, ಕ್ರಿಯಾ-ಕರ್ಮವು, ಶರೀರೋದ್ಭವಹೇತುಃ-ಶರೀರ-ಈ ಜನ್ಮದಲ್ಲಿರುವ ಶರೀರದ, ಉದ್ಭವ-ಉತ್ಪತ್ತಿಗೆ, ಹೇತುಃ-ಕಾರಣವು, ತತ್ರ-ಆ ಜನ್ಮದಲ್ಲಿ, ಸುರಾಗಿಣಃ-ವಿಷಯಾಭಿಲಾಷೆಯುಳ್ಳ ಪುರುಷನಿಗೆ, ತೌಧರ್ಮೇತರೌ- ಶಾಸ್ತ್ರದಲ್ಲಿಯೂ ಲೋಕದಲ್ಲಿಯೂ ಪ್ರಸಿದ್ಧವಾದ, ಧರ್ಮಾಧರ್ಮಗಳು, ಪ್ರಿಯಾಪ್ರಿಯೌ-ಇಷ್ಟಾನಿಷ್ಟಗಳಾದ ಸುಖದುಃಖಗಳನ್ನು ಹುಟ್ಟಿಸುವಂಥಾವುಗಳು, ಭವತಃ-ಆಗುವವು, (ತೇನ-ಆ ಕರ್ಮದಿಂದ) ಪುನಃ-ಮತ್ತು, ಶರೀರಕಂ-ಶರೀರವು,(ಭವತಿ-ಆಗುತ್ತದೆ) (ತೇನ-ಆ ಶರೀರದಿಂದ,) ಪುನಃ-ಮರಳಿ, ಕ್ರಿಯಾ-ಕರ್ಮವು, (ಏವಂ-ಈ ಪರಿಯಾಗಿ) ಭವಃ-ಸಂಸಾರವು, ಚಕ್ರವತ್-ಚಕ್ರದಂತೆ, ಈರ್ಯತೇ-ಹೇಳಲ್ಪಡುತ್ತೇ (ಅಂದರೆ ಪೂರ್ವಜನ್ಮಾರ್ಜಿತ ಕರ್ಮದಿಂದಶರೀರವು, ಅದರಿಂದ ಪುನಃ ಕರ್ಮಾಚರಣೆಯು, ಆ ಕರ್ಮದಿಂಮತ್ತೊಂದು ದೇಹೋತ್ಪತ್ತಿಯು, ಈಪರಿ ಚಕ್ರಭ್ರಮಣನ್ಯಾಯದಿಂದ ಕರ್ಮವಿಲ್ಲದೆ ಶರೀರವಿಲ್ಲ ಕರ್ಮವೂ ಇಲ್ಲವೆಂಬ ಭಾವವು ||೭||

ಮೂ|| ಅಜ್ಞಾನಮೇವಾಸ್ಯಹಿಮೂಲಕಾರಣಂತದ್ಧಾನಮೇವಾತ್ರವಿಧೌವಿಧೀಯತೆ। ವಿದ್ಯೈವತನ್ನಾಶವಿಧೌಪಟೀಯಸೀನಕರ್ಮತಜ್ಜಂಸವಿರೋಧಮೀರಿತಂ ||೮||

ಟೀ|| ಅಸ್ಯ-ಜನನಮರಣಪ್ರವಾಹ ರೂಪವಾಗಿರ್ಪ ಮತ್ತು ಅನಾದಿಯಾದಸಂಸಾರಕ್ಕೆ, ಅಜ್ಞಾನಮೇವ-ಅಜ್ಞಾನವೆ, ಮೂಲಕಾರಣಂಹಿ - ಉಪಾದಾನ ಕಾರಣ (ಅಂದರೆಮುಖ್ಯಹೇತುವಾಗುತ್ತದೆ)ಅತ್ರವಿಧೌ-ಈ ಸಂಸಾರನಿವೃತ್ತಿರೂಪವಾದಕರ್ತವ್ಯಾಂಶದಲ್ಲಿ ತದ್ಧಾನಮೇವ-ಮೂಲಕಾರಣೀಭೂತವಾದಅಜ್ಞಾನನಿವೃತ್ತಿಯೆ,ವಿಧೀಯತೇ-ಶ್ರುತಿವಾಕ್ಯಗಳಿಂದ ವಿಧಿಸಲ್ಪಡುತ್ತೆ, ವಿದ್ಯೈವ-ಜ್ಞಾನವೆ, ತನ್ನಾಶವಿಧೌ-ತತ್-ಆಮೂಲಾಜ್ಞಾನದ, ನಾಶವಿಧೌ-ನಿವೃತ್ತಿಮಾಡುವದರಲ್ಲಿ,ಪಟೀಯಸೀ-ಸಮರ್ಥವಾಗುತ್ತದೆ, ತಜ್ಜಂ-ತತ್-ಆ ಅಜ್ಞಾನದಿಂದ, ಜಂ-ಹುಟ್ಟಿದ, ಕರ್ಮ-ಕರ್ಮವು, ನ-ಅಜ್ಞಾನನಿವೃತ್ತಿಗೆ ಕಾರಣವಲ್ಲ, (ಕಿಂತು- ಮತ್ತೇನೆಂದರೆ) ಸವಿರೋಧಂ-ಜ್ಞಾನ ವಿರೋಧದಿಂ ದೊಡಗೂಡಿದ ಜ್ಞಾನವೆ, ಈರಿತಂ-ಅಜ್ಞಾನನಾಶಕವೆಂಬದಾಗಿ ಹೇಳಲ್ಪಡುತ್ತದೆ, (ಅಂದರೆ ಸಂಸಾರಕ್ಕೆ ಅಜ್ಞಾನವೇಮೂಲಕಾರಣವು, ಇಂಥಾ ಅಜ್ಞಾನನಿವೃತ್ತಿಯು ಜ್ಞಾನದಿಂದುಂಟಾಗುವದೇ ಹೊರತು ಸಾಧನಾಂತರದಿಂದುಂಟಾಗಲಾರದು.) ||೮||

ಮೂ|| ನಾಜ್ಞಾನಹಾನಿರ್ನಚರಾಗಸಂಕ್ಷಯೋಭವೇತ್ತತಃಕರ್ಮಸದೋಷಮುದ್ಭವೇತ । ತ
ತಃಪುನಸ್ಸಂಸೃತಿರಪ್ಯವಾರಿತಾತಸ್ಮಾದ್ಬುಧೋಜ್ಞಾನವಿಚಾರವಾನ್ಭವೇತ ||೧೦||

ಟೀ|| (ಕರ್ಮಣಾ-ಕರ್ಮದಿಂದ) ಅಜ್ಞಾನಹಾನಿಃ-ಅಜ್ಞಾನನಾಶವು, ನ-ಆಗಲಾರದು, ರಾಗಸಂಕ್ಷಯಃ-ದೇಹಾದ್ಯಭಿಮಾನ ವಿಲ್ಲದಿರೋಣವು, ನಭವೇತ್- ಆಗಲಾರದು, ತತಃ-ಆಕರ್ಮಾನುಷ್ಠಾನದಿಂದ, ಸದೋಷಂ-ದೋಷಯುಕ್ತವಾದ, ಕರ್ಮ-ಕರ್ಮವು, ಉದ್ಭವೇತ್-ಹುಟ್ಟುವದು, ತತಃ-ಅದರದೆಸೆಯಿಂದ, ಪುನಃ-ಮತ್ತು, ಸಂಸೃತಿರಪಿ-ಸಂಸಾರಪ್ರಾಕೂಡಾ, ಅವಾರಿತಾ-ನಿವಾರಿಸಲ್ಪಡಲಾರದು, ತಸ್ಮಾತ್-ಆ ಕಾರಣದದೆಸೆಯಿಂದ, ಬುಧಃ-ಜ್ಞಾನಿಯು,ಜ್ಞಾನವಿಚಾರವಾನ್-ಜ್ಞಾನ- ತತ್ವಮಸೀತ್ಯಾದಿ ಮಹಾವಾಕ್ಯಗಳ, ವಿಚಾರವಾನ್-ಅರ್ಥವಿಮರ್ಶೆಯಲ್ಲಿ ಮತಿಯುಳ್ಳವನು, ಭವೇತ್-ಆಗಬೇಕು,(ಅಂದರೆ ಯಜ್ಞಾದಿ ಕರ್ಮದಿಂದ ಅಜ್ಞಾನನಿವೃತ್ತಿಯು ಸರ್ವಥಾಆಗಲಾರದೆಂಬಭಾವವು ||೧೦||

ಪಕ್ಷಿಯು ಎರಡುಪಕ್ಷಗಳಿಂದ ಹ್ಯಾಗೆ ಹಾರುವದೋ ಹಾಗೆ ಪುರುಷನು ಜ್ಞಾನ ಕರ್ಮಗಳೆರಡರಿಂದಲೂ,
ಯಾಕೆಮುಕ್ತಿಯಂ ಪಡೆಯಲಾಗದೆಂಬದಾಗಿ ಪೂರ್ವಪಕ್ಷವನ್ನನುವಾದಿಸುವನದೆಂತೆನೆ,—

ಮೂ|| ನನುಕ್ರಿಯಾವೇದಮುಖೇನಚೋದಿತಾಯಥೈವವಿದ್ಯಾಪುರುಷಾರ್ಥಸಾಧನಂ । ಕರ್ತ
ವ್ಯತಾಪ್ರಾಣಭೃತಃಪ್ರಚೋದಿತಾವಿದ್ಯಾಸಹಾಯತ್ವಮುಪೈತಿಸಾಪುನಃ ||೧೧||

ಟೀ|| ನನು-ಎಲೈ, ವಿದ್ಯಾ-ಜ್ಞಾನವು, ಯಥೈವ-ಹ್ಯಾಗೆ, ಪುರುಷಾರ್ಥಸಾಧನಂ-ಮೋಕ್ಷರೂಪವಾದ ಪುರುಷಾರ್ಥಕ್ಕೆ ಸಾಧನವಾಗಿ ಯೆಲ್ಲರುವೆಪ್ಪಬೇಕಾಗಿಧೆಯೊ, ತಥೈವ-ಹಾಗೆಯೆ, ಕ್ರಿಯಾ-ಕರ್ಮವು, ವೇದಮುಖೇನ-ವೇದವೇ ಮೊದಲಾಗುಳ್ಳ ಪ್ರಮಾಣಗಳಿಂದ, ಚೋದಿತಾ-ಪ್ರೇರೇಪಿಸಲ್ಪಟ್ಟಿಧೆ, ಪ್ರಾಣಭೃತಃ-ದೇಹಧಾರಿಗಳಿಗೆ, ಪ್ರಚೋದಿತಾ-ವಿಧಿವಾಕ್ಯಗಳಿಂದ ಪ್ರೇರಿಸಲ್ಪಟ್ಟ, ಸಾಕರ್ತವ್ಯತಾ-ಆ ಕರ್ಮಾವಶ್ಯಕತ್ವವು, ವಿದ್ಯಾಸಹಾಯತ್ವಂ-ವಿದ್ಯಾ-ಜ್ಞಾನಕ್ಕೆ, ಸಹಾಯತ್ವಂ-ಸಹಕಾರಿಭಾವವನ್ನು,ಪುನಃ-ಮತ್ತು, ಉಪೈತಿ-ಹೊಂದುತ್ತದೆ ಎಂಬದಾಗಿ ಹೇಳುವೆಯೋ ಹಾಗಲ್ಲ ||೧೧||

ಮೂ|| ಕರ್ಮಾಕೃತೌದೋಷಮಪಿಶ್ರುತಿರ್ಜಗೌತಸ್ಮಾತ್ಸದಾಕಾರ್ಯಮಿದಂಮುಮುಕ್ಷುಣಾ।
ನನುಸ್ವತಂತ್ರಾಧ್ರುವಕಾರ್ಯಕಾರಿಣೀವಿದ್ಯಾನಕಿಂಚಿನ್ಮನಸಾಪ್ಯಪೇಕ್ಷತೇ ||೧೨||

ಟೀ|| ಶೃತಿಃ-ವೇದವು, ಕರ್ಮಾಕೃತೌ-ಕರ್ಮವಂಗೈಯುವಿರುವ ಪಕ್ಷದಲ್ಲಿ, ದೋಷಮಪಿ-ದೋಷವನ್ನೂ ಸಹ, ಜಗೌ-ಹೇಳುತದೆ, ತಸ್ಮಾತ್-ಆ ಕಾರಣದದೆಸೆಯಿಂ ದ, ಮುಮುಕ್ಷುಣಾ-ಸಂಸಾರಿಯಾಗಿದ್ದು ಸಂಸಾರಬಂಧವಿಮೋಚನೆಯನ್ನಿಚ್ಛೆಸುತ್ತಿರುವ ಪುರುಷನಿಂದ, ಇದಂ-ಈ ಕರ್ಮವು, ಸದಾ-ನಿರಂತರವು, ಕಾರ್ಯಂ-ಮಾಡತಕ್ಕದ್ದು, ಧ್ರುವಕಾರ್ಯಕಾರಿಣೀ-ಧ್ರುವ-ಸ್ಥಿರವಾಗಿರುವ, ಕಾರ್ಯ-ಮೋಕ್ಷರೂಪಕಾರ್ಯವನ್ನು, ಕಾರಿಣೀ-ಮಾಡುತ್ತಿರುವ (ಅಂದರೆ ಶಾಶ್ವತವಾದ ಮೋಕ್ಷಕ್ಕೆಕಾರಣವಾದ ಜ್ಞಾನವು) ಸ್ವತಂತ್ರಾ-ನನು-ಸಹಾಯಾಂತರವನ್ನಿಚ್ಛೆಸದಿರುವಂಥಾದ್ದಪ್ಪೆ, ಮನಸಾಪಿ-ಮನಸಿಂದಲೂಕೂಡ, ಕಿಂಚಿತ್-ಯಾವವಸ್ತ್ವಂತರವನ್ನು, ನಾಪೇಕ್ಷತೇ-ಬಯಸುವದಿಲ್ಲ ||೧೮||

ಮೂ|| ನಸತ್ಯಕಾರ್ಯೋಪಿಹಿಯದ್ವದಧ್ವರಃಪ್ರಕಾಂಕ್ಷತೇನ್ಯಾನಪಿಕಾರಕಾದಿಕಾನ್ । ತಥೈ
ವವಿದ್ಯಾವಿಧಿತಃಪ್ರಕಾಶಿತೈರ್ವಿಶಿಷ್ಯತೇಕರ್ಮಭಿರೇವಮುಕ್ತಯೇ ||೧೩||

ಟೀ|| ಸತ್ಯಕಾರ್ಯೋಪಿ-ಸತ್ಯ-ಶೃತಿಪ್ರಮಾಣದಿಂದ ಶಾಶ್ವತವಾದ, ಕಾರ್ಯೋಪಿ-ಪ್ರಯೋಜನವುಳ್ಳದ್ದಾದರು, ಅಧ್ವರಃ-ಯಾಗವು, ಅನ್ಯಾನಪಿ-ಇತರಗಳಾದ,ಕಾರಕಾದಿಕಾನ್-ಕಾರಕ-ಆರಾದುಪಕಾರಕವೆ, ಆದಿಕಾನ್-ಮೊದಲಾಗಿಉಳ್ಳ ಪ್ರಯಾಜ ಅನುವ್ಯಾಜಾದ್ಯಂಗಗಳನ್ನು, ಯದ್ವತ್-ಹ್ಯಾಗೆ,ಪ್ರಕಾಂಕ್ಷತೇ-ಅಪೇಕ್ಷಿಸುತ್ತಿಧೆಯೋ, ತಥಾ-ಹಾಗೆ, ವಿದ್ಯಾಪಿ-ಜ್ಞಾನವೂಕೂಡಾ, ವಿಧಿತಃ-ವಿಧಿವಾಕ್ಯಗಳಿಂದ, ಪ್ರಕಾಶಿತೈಃ-ಸ್ಪಷ್ಟಮಾಡಲ್ಪಟ್ಟ, ಕರ್ಮಭಿಃ-ಕರ್ಮಗಳಿಂದ, ಸಹಿತೈವ-ಕೂಡಿದಂಥಾದ್ದಾಗಿಯೆ, ಮುಕ್ತಯೇ-ಮುಕ್ತಿರೂಪಪ್ರಯೋಜನಕ್ಕೆ, ವಿಶಿಷ್ಯತೇ-ಸಮರ್ಥವಾಗುತದೆ, ಅಂದರೆ ಪೂರ್ವಶ್ಲೋಕದ ದ್ವಿತೀಯಾರ್ಧದಲ್ಲಿ ಹೇಳಿರುವಂತೆ, ವಿದ್ಯೆಯು ಇತರಸಾಧನಗಳಿಂದ ಸಹಕೃತವಾಗದೆ ಸ್ವತಂತ್ರವಾಗಿ ಮುಕ್ತಿಗೆ ಕಾರಣವಾಗಲಾರದೆಂದು ಭಾವವು. ||೧೩||

ಆದರೆ ಕೆಲಬರು ಜ್ಞಾನಕರ್ಮಗಳೆರಡು ಮುಕ್ತಿಗೆ ಕಾರಣವಾಗುವದೆಂದು ಊಹಿಸಿ, ಹೇಳುವರು, ಅದು ಅಸಾಧುವೆಂದು ಮುಂದಣ ಶ್ಲೋಕದಲ್ಲಿ ನಿರೂಪಿಸುವನು.

ಶ್ಲೋ|| ಕೇಚಿದ್ವದಂತೀತಿವಿತರ್ಕವಾದಿನಸ್ತದಪ್ಯಸದ್ದೃಷ್ಟವಿರೋಧಕಾರಣಾತ್ । ದೇಹಾಭಿ
ಮಾನಾದಭಿವರ್ಧತೇಕ್ರಿಯಾವಿದ್ಯಾಗತಾಹಂಕೃತಿತಃಪ್ರಸಿದ್ಧ್ಯತಿ ||೧೪||

ಟೀ|| ವಿತರ್ಕವಾದಿನಃ-ಜ್ಞಾನಕರ್ಮಗಳೆರಡು ಮಿಶ್ರವಾಗಿ ಮುಕ್ತಿಗೆ ಸಾಧನವಾಗುತ್ತೆಂದು ಯೋಚಿಸಿ ಹೇಳತಕ್ಕ, ಕೇಚಿತ್-ಕೆಲಬರು, ಇತಿ- ಈ ಮೊದಲುಹೇಳಿದಂತೆ,ವದಂತಿ-ಹೇಳುತ್ತಾರೆ, ತದಪಿ-ಅದೂಸಹ, ಅಸತ್-ಅಯುಕ್ತವು, ಅಂದರೆ ಮುಖ್ಯವಾಗಿ ಕರ್ಮಮಾತ್ರವೆ ಹ್ಯಾಗೆ ಮೋಕ್ಷಕ್ಕೆ ಸಾಧನವಾದದ್ದಲ್ಲವೋ ಹಾಗೆಜ್ಞಾನ ಕರ್ಮಗಳೆರಡು ಸೇರಿಯೂ, ಮೋಕ್ಷಸಾಧನವಾಗುವದೆಂದು ಹೇಳುವದೂ ಯುಕ್ತವಲ್ಲ, ಯಾಕಂದರೆ ದೃಷ್ಟ ವಿರೋಧಕಾರಣಾತ್-ದೃಷ್ಟ-ಕಾಣಿಸಲ್ಪಟ್ಟ, ವಿರೋಧ-ವಿರೋಧರೂಪವಾದ ಕಾರಣಾತ್-ಹೇತುವಿನದೆಸೆಯಿಂದ, ಕ್ರಿಯಾ-ಕರ್ಮವು, ದೇಹಾಭಿಮಾನಾತ್-ದೇಹ-ಆತ್ಮಭಿನ್ನವಾದ ದೇಹದಲ್ಲಿ,ಅಭಿಮಾನಾತ್-ಆತ್ಮತ್ವಭ್ರಾಂತಿಯಿಂದ, ಅಭಿವರ್ಧತೇ-ವೃದ್ಧಿಹೊಂ

ದುತ್ತದೆ, ಅಂದರೆ ಕರ್ಮಮಾಡತಕ್ಕ ಪುರುಷನಿಗೆ ದೇಹಾಭಿಮಾನವು ಅವಶ್ಯವಾಗಿರುತ್ತದೆ, ಅದುಹ್ಯಾಗಂದರೆ, ನಾನು ಅರ್ಥವಂತನು, ದೇಹದಾರಢ್ಯವುಳ್ಳವನು,ವೇದಾರ್ಥವನ್ನರಿತವನು, ಪುತ್ರವಂತನು, ಕರ್ಮಪ್ರದಕರ್ಮದಲುಗಳುಳ್ಳವನು ಎಂಬದಾಗಿ ಯಾವಪುರುಷನು, ಅರಿತುಕೊಂಬುವನೋ ಅವನೆ ಕರ್ಮಾಧಿಕಾರಿಯೆಂದು ಶ್ರುತಿಗಳಲ್ಲಿ ಪ್ರಸಿದ್ಧವಾಗಿರುವದು, ಆದ್ದರಿಂದ ಆತ್ಮಭಿನ್ನವಾದ ಸ್ಥೂಲದೇಹದಲ್ಲಿ ಆತ್ಮತ್ವಭ್ರಾಂತಿಯು, ಆ ಪುರುಷನಿಗೆ ತಪ್ಪಲಾರದು ಆ ಅಭಿಮಾನವಿಲ್ಲದವನಿಗೆ ಉಪರಿಯುಂಟಾಗಲಾರದು,ವಿದ್ಯಾ–ಜ್ಞಾನವು, ಗತಾಹಂಕೃತಿತಃ–ಗತ–ಅತೀತವಾದ, ಅಹಂಕೃತಿತಃ–ಅಹಂಕಾರವುಳ್ಳಪುರುಷನಿಗೆ, ಪ್ರಸಿಧ್ಯತಿ–ಸಫಲವಾಗುತ್ತದೆ, ಅಂದರೆ ಆತ್ಮವ್ಯತಿರಿಕ್ತವಾದ ದೇಹಾದಿಗಳಲ್ಲಿ ಇದು ನನ್ನದು ನಾನಿಂಥಾವ ಈಕರ್ಮವನ್ನು ನಾನು ಮಾಡತಕ್ಕವನೆಂಬ ಕರ್ತೃತ್ವಾದ್ಯಹಂಕಾರಾದಿಗಳಂ ನೀಗಿದ ಪುರುಷನಿಗೆ ಅಹಂಬ್ರಹ್ಮಾಸ್ಮೀತ್ಯಾಕಾರಕ ಮಹಾವಾಕ್ಯಜನ್ಯಬ್ರಹ್ಮಾಕಾರಾಂತಃಕರಣವೃತ್ತಿರೂಪವಾದ ಜ್ಞಾನವು ಹುಟ್ಟುವದೆಂದು ಭಾವವು .. ... ॥೧೪॥

ಇದೇ ಅರ್ಥವನ್ನೇ ಈ ಶ್ಲೋಕದೊಳು ಸ್ಪಷ್ಟ ಮಾಡುತ್ತಾನೆ.

ಶ್ಲೋ॥ ವಿಶುದ್ಧವಿಜ್ಞಾನವಿರೋಚನಾಂಚಿತಾವಿದ್ಯಾತ್ಮವೃತ್ತಿಶ್ಚರಮೇತಿಭಣ್ಯತೇ । ಉದೇತಿಕರ್ಮಾಖಿಲಕಾರಕಾದಿಭಿರ್ನಿಹಂತಿವಿದ್ಯಾಖಿಲಕಾರಕಾದಿಕಂ ॥೧೫॥

ಟೀ॥ ವಿಶುದ್ಧವಿಜ್ಞಾನವಿರೋಚನಾಂಚಿತಾ – ವಿಶುದ್ಧ–ನಿರ್ದೋಷವಾದ, ವಿಜ್ಞಾನ–ಬ್ರಹ್ಮಜ್ಞಾನಪ್ರದವೇದಾಂತವಾಕ್ಯಗಳ, ವಿರೋಚನ–ವಿಚಾರದಿಂದ, ಅಂಚಿತಾ–ಪ್ರಾಪ್ತವಾದ, ಚರಮಾ–ತುದಿಯಲ್ಲಿ ಪುಟ್ಟುವ, ಆತ್ಮವೃತ್ತಿಃ–ಬ್ರಹ್ಮಾಕಾರಾಂತಃಕರಣವೃತ್ತಿಯು ಅಂದರೆ ನಾನು ಬ್ರಹ್ಮನೆಂಬ ತಿಳುವಳಿಕೆಯು) ವಿದ್ವದ್ಭಿಃ–ವಿದ್ವಾಂಸರಿಂದ,ವಿದ್ಯೇತಿ–ಜ್ಞಾನವೆಂದು, ಭಣ್ಯತೇ ಹೇಳಲ್ಪಡುತ್ತೆ ) ಅಂದರೆ ಅಸಂಭಾವನಾವಿಪರೀತ, ಭಾವನಾದಿದೋಷರಹಿತವಾಗಿಯೂ, ನಿರ್ದೋಷವಾಗಿಯೂ ಇರುವ ಜ್ಞಾನವು ತತ್ವಮಸ್ಯಾದಿ ಮಹಾವಾಕ್ಯಗಳಿಂದ ಹುಟ್ಟುತ್ತದೆ, ಆದಕಾರಣ ಬ್ರಹ್ಮಜ್ಞಾನಕ್ಕೆ ವೇದಾಂತವಾಕ್ಯಗಳೇ ಕಾರಣವು ಅವುಗಳ ಅರ್ಥವಿಚಾರಣೆಯಿಂದಲೆ ಬ್ರಹ್ಮಜ್ಞಾನವುಸಂಭವಿಸುವದು, ಅದುಸಕೃದಾವರ್ತಿಪುಟ್ಟದರೆ ಆವೃತ್ತಿಯು ಸ್ಥಿರವಾಗಿ ನಿಲ್ಲಲಾರದು, ಆದ್ದರಿಂದ ತುದಿಯಲ್ಲಿ ಪುಟ್ಟುವ ಬ್ರಹ್ಮಾಕಾರಾಂತಃ ಕರಣವೃತ್ತಿಯುಯಾವದೋ, ಅದೇವಿದ್ಯೆಯೆಂದುವಿದ್ವಾಂಸರು ಹೇಳುವರು,ಅಸಂಭಾವನಾ ಅಂದರೆ ದೇಹೇಂದ್ರಿಯಾದಿಗಳು ದೃಶ್ಯವಾದ್ದರಿಂದ ಅನುಭವಸಿದ್ಧವಾಗಿವೆ, ಆತ್ಮನೆಂಬುವನು ಅದೃಶ್ಯನಾದ್ದರಿಂದ ಆತ್ಮನೇಇಲ್ಲವೆಂದುಭಾವಿಸೋಣವೆಂಬದಾಗಿ ತಿಳಿಯತಕ್ಕದ್ದು. ವಿಪರೀತ ಭಾವನಾ ಅಂದರೆ—ಆತ್ಮಭಿನ್ನವಾದ ದೇಹಾದಿಗಳಲ್ಲಿ, ಶರೀರವೇ ಆತ್ಮ ಇಂದ್ರಿಯವೆ ಆತ್ಮಸ್ವರೂಪವು, ಅಥವಾಮನವೇ ಆತ್ಮರೂಪವಾಗಿದೆ, ಪ್ರಾಣವೇ ಆತ್ಮಸ್ವರೂಪವೂ ಎಂಬದಾಗಿ ಭಾವಿಸೋಣವುಯಾವದೋ, ಅದು ವಿಪರೀತಭಾವನಾ ಶಬ್ದಾರ್ಥವು, ಇಂಥಾ ಅಸಂಭಾವನಾ ವಿಪರೀತಭಾವನಾದಿ ದೋಷಗಳಿಲ್ಲದಿರುವ ಬ್ರಹ್ಮಜ್ಞಾನವೆ ವಿಶುದ್ಧಜ್ಞಾನವೆಂದು ಹೇಳಲ್ಪಡುತ್ತೇ. ಈ ಪರಿಯಾದ ವಿಜ್ಞಾನಕ್ಕೂ ಕರ್ಮಗಳಿಗೂ ಬಹಳ ವೈಷಮ್ಯ

ವಿಧೆ, ಅದನ್ನೆ ಈ ಉತ್ತರಾರ್ಧದಲ್ಲಿ ಸ್ಪಷ್ಟವಾಗಿ ಹೇಳುವನದೆಂತೆನೆ, ಕರ್ಮ-ಯಜ್ಞಾದಿಕರ್ಮವು, ಅಖಿಲಕಾರಕಾದಿಭಿಃ -ಅಖಿಲ- ಸಮಸ್ತವಾದ, ಕಾರಕಾದಿಭಿಃ-ಯಜ್ಞಾಸ್ಫೂರ್ತಿ ಸಂಪಾದಕವಾದ ಪ್ರಯೋಜನವೇ ಮೊದಲಾದವುಗಳಿಂದ (ಸಹಿತಂಸತ್-ಕೂಡಿದ್ದುದಾಗಿ) ಉದೇತಿ-ಫಲೋನ್ಮುಖವಾಗುತ್ತದೆ, ವಿದ್ಯಾಪುನಃ-ವಿದ್ಯೆಯಾದರೆ, ಅಖಿಲಕಾರಕಾದಿಕಂ- ಅಖಿಲ-ಸಮಸ್ತವಾದ, ಕಾರಕಾದಿಕಂ - ಸಾಧನತ್ವಕರ್ತೃತ್ವಾದಿ ಬುದ್ಧಿಯನ್ನು, ನಿಹಂತಿ-ನಾಶಮಾಡುತ್ತದೆ (ಅಂದರೆ-ಸಕಲಕರ್ಮಗಳಿಗೂ ಮನಶ್ಶುದ್ಧಿಯೆಮುಖ್ಯವಾದ ಪ್ರಯೋಜನವು, ಇದರಿಂದ ವೈರಾಗ್ಯಾದಿಗಳು ಪುಟ್ಟಿ ಬ್ರಹ್ಮಜ್ಞಾನ ಮುಂಟಾಗುವದಾದ ಕಾರಣಕರ್ಮಾ ಪೇಕ್ಷೆಯೇಹೊರತು, ವಿದ್ಯೆಯು ಸ್ವತಂತ್ರವಾಗಿ ಹ್ಯಾಗೆ ಮೋಕ್ಷಸಾಧನವಾಗಿರುವದೋ ಹಾಗೆ ಕರ್ಮವು ಸ್ವತಂತ್ರವಾಗಿ ಕರ್ತೃತ್ವಾದ್ಯಭಿಮಾನವಂ ಹೋಗಲಾಡಿಸಲಾರದು, ಈರೀತಿಯಾಗಿ ರೋಣದರಿಂದ ಕರ್ಮಗಳಿಗೂ, ಜ್ಞಾನಕ್ಕೂ ಬಹಳವಿರೋಧವು, ಸ್ಫುಟವಾಗಿ ಕಾಣುವದೆಂದು ಭಾವವು|| ||೧೫||

ಶ್ಲೋ|| ತಸ್ಮಾತ್ತ್ಯಜೇತ್ಕಾರ್ಯಮಶೇಷತಸ್ಸುಧೀರ್ವಿದ್ಯಾವಿರೋಧಾನ್ನಸಮುಚ್ಚಯೋಭವೇತ್।
ಆತ್ಮಾನುಸಂಧಾನಪರಾಯಣಸ್ಸದಾನಿವೃತ್ತಸರ್ವೇಂದ್ರಿಯವೃತ್ತಿಗೋಚರಃ ||೧೬||

ಟೀ|| ವಿದ್ಯಾವಿರೋಧಾತ್-ಜ್ಞಾನಕರ್ಮಗಳ ಪರಸ್ಪರ ವಿರೋಧದ ದೆಶೆಯಿಂದ, ಸುಮುಚ್ಚಯುಃ-ಜ್ಞಾನಕರ್ಮಗಳಕೇರಿ ಮುಕ್ತಿಗೆ ಸಾಧನವಾಗುತ್ತೆಂಬ ಪಕ್ಷವು,ನಭವೇತ್-ಆಗಲಾರದು, ತಸ್ಮಾತ್-ಆಕಾರಣದದೆಶೆಯಿಂದ, ಸುಧೀಃ-ಜ್ಞಾನವಂತನು, ಕಾರ್ಯಂ ಕರ್ತವ್ಯವಾದ ಯಜ್ಞಾದಿಕರ್ಮಗಳನ್ನು, ಅಶೇಷತಃ-ಸಮಗ್ರವಾಗಿ, ತ್ಯಜೇತ್-ಬಿಡಬೇಕು, (ಎಂಥಾ ಜ್ಞಾನಿಯು ಬಿಡಬೇಕೆಂದರೆ,) (ಯಃ-ಯಾವನು) ಸದಾ-ನಿರಂತರವು, ನಿವೃತ್ತಸರ್ವೇಂದ್ರಿಯ ವೃತ್ತಿಗೋಚರಃ-ನಿವೃತ್ತ-ಹೋಗಲಾಡಿಸಲ್ಪಟ್ಟ, ಸರ್ವ-ಸಮಸ್ತವಾದ, ಇಂದ್ರಿಯ-ತ್ವಕ್ ಚಕ್ಷುಶ್ಶ್ರೋತ್ರಜಿಹ್ವಾಘ್ರಾಣಗಳೆಂಬ ಇಂದ್ರಿಯಗಳ, ವೃತ್ತಿ-ವೃತ್ತಿಗೆ, ಗೋಚರಃ-ಶಬ್ದಸ್ಪರ್ಶರೂಪರಸಗಂಧಗಳೆಂಬ ವಿಷಯಗಳುಳ್ಳವನಾಗಿ, ಆತ್ಮಾನುಸಂಧಾನಪರಾಯಣಃ - ಆತ್ಮ-ಸಚ್ಚಿದಾನಂದಸ್ವರೂಪನಾದ ಆತ್ಮನ, ಅನುಸಂಧಾನ-ಧ್ಯಾನವೆ, ಪರ-ಮುಖ್ಯವಾಗಿ, ಅಯಣಃ-ಪ್ರಾಪ್ಯವಾಗುಳ್ಳವನು, ಭವೇತ್-ಆಗುವನೋ (ಸಃ-ಅಂಥವನು, ತ್ಯಜೇತ್-ಬಿಡಬೇಕು) ಅಂದರೆ ಇಂದ್ರಿಯ ಪ್ರತ್ಯಾಹಾರರೂಪವಾದ ಯೋಗಾಭ್ಯಾಸವಂಗೈದು ಆ ಬಳಿಕ, ಸಚ್ಚಿದಾನಂದ ಸ್ವರೂಪವಾದ ಬ್ರಹ್ಮಾನುಸಂಧಾನದಲ್ಲಿ ತಗಲಿದಮನವುಳ್ಳವನಾಗಿ, ದೇಹಾಭಿಮಾನವಂ ತ್ಯಜಿಸಿದವನ್ಯಾರೊ, ಅಂಥಾ ಜ್ಞಾನಿಯು ಈ ಕರ್ಮವನ್ನಗಲಬಹುದೆಂಬಭಾವವು ||೧೬||

ಮೂ|| ಯಾವಚ್ಛರೀರಾದಿಷುಮಾಯಯಾತ್ಮಧೀಸ್ತಾವದ್ವಿಧೆಯೊವಿಧಿವಾದಕರ್ಮಣಾಂ ।
ನೇತೀತಿವಾಕ್ಯೈರಖಿಲಂನಿಷಿಧ್ಯತತ್ಜ್ಞಾತ್ವಾಪರಾತ್ಮಾನಮಥತ್ಯಜೇತ್ಕ್ರಿಯಾಃ ||೧೭||

ಟೀ|| ಮಾಯಯಾ-ಅವಿದ್ಯೆಯಿಂದ, ಶರೀರಾದಿಷು-ಆತ್ಮಭಿನ್ನವಾದ ದೇಹಾದಿಗಳಲ್ಲಿ, ಆತ್ಮಧೀಃ-ನಾನುಕರ್ತನೆಂಬ ಬುದ್ಧಿಯು, ಯಾವತ್ - ಎಷ್ಟುಪರ್ಯಂತವು

(ವರ್ತತೇ-ಇರುವದೊ) ತಾವತ್-ಅಷ್ಟುಪರ್ಯಂತವು, (ಪುರುಷಃ-ಮನುಷ್ಯನು) ವಿಧಿ-ಯಜ್ಞಾದಿಕರ್ಮಗಳಂ ಮಾಡತಕ್ಕದ್ದೆಂಬ ವಿಧಿವಾಕ್ಯಗಳೇ, ವಾದ-ಕರ್ತವ್ಯತಾಬೋಧಕವಾಗಿವುಳ್ಳ, ಕರ್ಮಣಾಂ-ಯಜ್ಞಾದಿಗಳಿಗೆ, ವಿಧೇಯಃ-ಅಧೀನನಾಗಿ ಆ ಕರ್ಮಗಳಂಗೈಯುವವನು, ಭವೇತ್-ಆಗಬೇಕು, ತತ್-ಆ ಬ್ರಹ್ಮನು, ಜಗತ್-ಜಗತ್ತು, ನೇತಿ-ಅಲ್ಲವೆಂದು ಹೇಳುತ್ತಿರುವ, ವಾಕ್ಯೈಃ-ವಾಕ್ಯಗಳಿಂದ, ಅಖಿಲಂ-ಆಸಮಸ್ತವಾದ ಜಗವನ್ನು, ನಿಷಿಧ್ಯ-ಸತ್ಯತ್ವೇನ ನಿಷೇಧಿಸಿ, (ಅಂದರೆ ಸತ್ಯವಾದ್ದಲ್ಲ ಮಿಥ್ಯಾಭೂತವಾದದ್ದೆಂದು ನಿರ್ಣಯಿಸಿ, ಪರಾತ್ಮಾನಂ-ಪರಮಾತ್ಮನನ್ನು, ಜ್ಞಾತ್ವಾ-ಸತ್ಯಸ್ವರೂಪನನ್ನಾಗಿ ತಿಳಿದು, ಅಥ-ಬಳಿಕ, ಕ್ರಿಯಾಃ-ಕರ್ಮಗಳನ್ನು, ತ್ಯಜೇತ್-ಬಿಡಬೇಕು ||೧೭||

ಮೂ॥ ಯದಾಪರಾತ್ಮಾತ್ಮವಿಭೇದಭೇದಕಂವಿಜ್ಞಾನಮಾತ್ಮನ್ಯವಭಾತಿಭಾಸ್ವರಂ । ತದೈವಮಾಯಾಪ್ರವಿಲೀಯತೇಜಸಾಸಕಾರಕಾಕಾರಣಮಾತ್ಮಸಂಸ್ಕೃತೇಃ ... ||೧೮||

ಟೀ॥ ಯದಾ-ಯಾವಕಾಲದಲ್ಲಿ, ಪರಾತ್ಮಾತ್ಮವಿಭೇದಭೇದಕಂ-ಪರಾತ್ಮ-ಪರಮಾತ್ಮನಿಗೂ, ಆತ್ಮ-ಜೀವನಿಗೂ, ವಿಭೇದ-ಮಾಯಾಅವಿದ್ಯಗಳೆಂಬ ಎರಡುವಿಧವಾದ ಉಪಾಧಿಗಳಿಂದ ಕಲ್ಪಿತವಾದ ಭೇದಕ್ಕೆ, ಭೇದಕಂ-ನಾಶಕವಾದ, ಭಾಸ್ವರಂ-ಪ್ರಕಾಶಶೀಲವಾದ, ವಿಜ್ಞಾನಂ-ಬ್ರಹ್ಮಾಕಾರಾಖಂಡವೃತ್ತಿಯು, ಆತ್ಮನಿ-ಅಂತಃಕರಣದಲ್ಲಿ, ಅವಭಾತಿ-ಸ್ಫುರಿಸುತ್ತದೋ, ತದೈವ-ಆಕಾಲದಲ್ಲಿಯೆ, ಆತ್ಮಸಂಸ್ಕೃತೇಃ-ಆತ್ಮ-ಅಂತಃಕರಣಾವಚ್ಛಿನ್ನ ಚೈತನ್ಯವೆಂಬ ಜೀವನ ಸಂಬಂಧವಾದ, ಸಂಸ್ಕೃತೇಃ-ಸಂಸಾರಕ್ಕೆ, ಕಾರಣಂ-ಹೇತುಭೂತವಾದ, ಸಕಾರಕಾ-ಜನ್ಮಾಂತರ ದೇಹಪ್ರಾಪಕವಾದ ಕರ್ಮದಿಂದೊಡಗೂಡಿದ, ಮಾಯಾ-ಮಾಯೆಯು, ಅಂಜಸಾ-ತ್ವರೆಯಾಗಿ, ಪ್ರವಿಲೀಯತೇ-ಲಯವಂ ಪೊಂದುತ್ತದೆ ||೧೮||

ಇದೇ ಅರ್ಥವನ್ನೆ ಪುನಃ ಹೇಳುತ್ತಾನೆ.—

ಮೂ॥ ಶ್ರುತಿಪ್ರಮಾಣಾಭಿವಿನಾಶಿತಾಚಸಾಕಥಂಭವಿಷ್ಯತ್ಯಪಿಕಾರ್ಯಕಾರಿಣೀ । ವಿಜ್ಞಾನಮಾತ್ರಾದಮಲಾದ್ವಿತೀಯತಸ್ತಸ್ಮಾದವಿದ್ಯಾನಪುನರ್ಭವಿಷ್ಯತಿ ... ||೧೯||

ಟೀ॥ ಶ್ರುತಿಪ್ರಮಾಣಾಭಿವಿನಾಶಿತಾ-ಶ್ರುತಿ-ತತ್ವಮಸೀತ್ಯಾದಿ ಮಹಾವಾಕ್ಯರೂಪವಾದ, ಪ್ರಮಾಣ-ಪ್ರಮಾಣಗಳಿಂದ ಹುಟ್ಟಿದ ತತ್ವಜ್ಞಾನದಿಂದ, ಅಭಿವಿನಾಶಿತಾ-ಸಮೂಲವಾಗಿ ನಾಶಮಾಡಲ್ಪಟ್ಟ, ಸಾ-ಆ ಅವಿದ್ಯೆಯು, ಕಾರ್ಯಕಾರಿಣ್ಯಪಿ-ಕಾರ್ಯ-ಜಗತ್ಸೃಷ್ಟಿರೂಪವಾದ ಕಾರ್ಯವನ್ನು, ಕಾರಿಣ್ಯಪಿ - ಮಾಡುವಂಥಾದ್ದು, ಕಥಂಭವಿಷ್ಯತಿ-ಹ್ಯಾಗೆಆದೀತು (ಅಂದರೆ ಸರ್ವಥಾಸುಖದುಃಖಾದಿಗಳನ್ನುಂಟುಮಾಡುವಂಥಾದ್ದಾಗಲಾರದೆಂದು ಭಾವವು) ಅಮಲಾದ್ವಿತೀಯತಃ-ಅಮಲ-ಶುದ್ಧವಾದ, ಅದ್ವಿತೀಯತಃ-ಶುದ್ಧಬ್ರಹ್ಮವಿಷಯಕವಾದ, ವಿಜ್ಞಾನಮಾತ್ರಾತ್-ಕಾರಣಾಂತರ ಸಹಾಯವಿಲ್ಲದ ಬ್ರಹ್ಮಜ್ಞಾನಮಾತ್ರದಿಂದಲೆ, ಯತಃ-ಯಾವಕಾರಣದಪೇಕ್ಷೆಯಿಂದ, ನಷ್ಟಾ-ನಾಶವ

ಉ॥ ಕಾ॥ ಸ॥ ೫

ಅ। ರಾ॥ ೭೯

೧೪

ನ್ನು ಹೊಂದಿತೋ, ತಸ್ಮಾತ್-ಆಕಾರಣದದೆಸೆಯಿಂದ, ಅವಿದ್ಯಾ-ಅವಿದ್ಯೆಯು, ಪುನಃ-ಮತ್ತು, ನಭವಿಷ್ಯತಿ-ಹುಟ್ಟಲಾರದು ... ॥ ೧೯ ॥

ಇದುವರಿಗು ಬ್ರಹ್ಮಜ್ಞಾನವು ಇತರಸಹಾಯಾಪೇಕ್ಷೆಯಿಲ್ಲದೆ ಮುಕ್ತಿಗೆ ಕಾರಣವಾಗುತ್ತೆಂದು ಹೇಳಿದ್ದು ಸರಿಯಷ್ಟೆ, ಕೇಳತಕ್ಕವರಿಗೆ ಮನೋದಾರ್ಢ್ಯಮುಂಟಾಗುವದಕ್ಕೋಸುಗ ಅದನ್ನೆ ಪುನಃ ಯುಕ್ತಿಪೂರ್ವಕವಾಗಿ ಹೇಳುತ್ತಾನೆ.—

ಮೂ॥ ಯದಿಸ್ಮನಷ್ಟಾನಪುನಃಪ್ರಸೂಯತೆಕರ್ತಾಹಮಸ್ಯೇತಿಮತಿಃಕಥಂಭವೇತ್ । ತಸ್ಮಾ
ತ್ಸ್ವತಂತ್ರಾನಕಿಮಪ್ಯಪೇಕ್ಷತೆವಿದ್ಯಾವಿಮೋಕ್ಷಾಯವಿಭಾತಿಕೆವಲಾ ॥೨೦॥

ಟೀ॥ ನಷ್ಟಾಯದಿ-ತತ್ವಜ್ಞಾನದಿಂದ ನಾಶವನ್ನು ಹೊಂದಿದುಥಾದ್ದಾದರೆ, ಸಾ-ಆ ಅವಿದ್ಯೆಯು, ಪುನಃ-ಮತ್ತು, ನಪ್ರಸೂಯತೆ-ಹುಟ್ಟುವದಿಲ್ಲ, ಅಹಂ-ನಾನು, ಅಸ್ಯ-ಈ ಕಾರ್ಯಕ್ಕೆ, ಕರ್ತಾ-ಕರ್ತನು, ಇತಿ-ಇಂತೆಂದು, ಮತಿಃ-ಬುದ್ಧಿಯು, ಕಥಂಭವೇತ್-ಹ್ಯಾಗೆ ಆದೀತು (ಅಂದರೆ ನಾನು ಇದಕ್ಕೆ ಕರ್ತನು ಇದು ನನ್ನದು ಎಂಬ ಮತಿಗೆ ಉಪಾದಾನಕಾರಣೀಭೂತವಾದ ಮೂಲವಿದ್ಯೆಯು ಯಾವಾಗ ನಷ್ಟವಾಯಿತೋ, ಆಗ ತತ್ಕಾರ್ಯಭೂತವಾದ ಕರ್ತೃತ್ವಬುದ್ಧಿಯು ನಷ್ಟವಾಗುವದೆಂದು ಭಾವವು.) ತಸ್ಮಾತ್-ಆಕಾರಣದದೆಸೆಯಿಂದ, ವಿದ್ಯಾ-ಜ್ಞಾನಸಂಪತ್ತು, ಸ್ವತಂತ್ರಾ-ಇತರಾಪೇಕ್ಷೆಯಿಲ್ಲದಂಥಾದ್ದಾಗಿ, ಕಿಮಪಿ-ಯಾವಸಾಧನವನ್ನೂ ಕೂಡ, ವಿಮೋಕ್ಷಾಯ-ಮೋಕ್ಷಕ್ಕೋಸುಗ, ನಾಪೇಕ್ಷತೆ-ಇಚ್ಛೈಸುವದಿಲ್ಲ, ಕೇವಲಾ-ಸಹಾಯವಿಲ್ಲದಿರುವದಾಗಿ, ವಿಭಾತಿ-ಪ್ರಕಾಶಿಸುತ್ತದೆ. ... ... ॥೨೦॥

ಈ ಅರ್ಥದಲ್ಲಿ ತೈತ್ತಿರೀಯಶ್ರುತಿಯೇ ಪ್ರಮಾಣವೆಂದು ಹೇಳುತ್ತಾನೆ.—

ಮೂ॥ ಸಾತೈತ್ತಿರೀಯಶ್ರುತಿರಾಹಸಾದರಂನ್ಯಾಸಂಪ್ರಶಸ್ತಾಖಿಲಕರ್ಮಣಾಂಸ್ಫುಟಂ । ಏ
ತಾವದಿತ್ಯಾಹಚವಾಜಸನಾಂಶ್ರುತಿಜ್ಞಾನಂವಿಮೋಕ್ಷಾಯನಕರ್ಮಸಾಧನಂ ... ॥೨೧॥

ಟೀ॥ ಸಾ-ಪ್ರಸಿದ್ಧವಾದ, ತೈತ್ತಿರೀಯಶ್ರುತಿಃ-ತೈತಿರೀಯ-ತೈತ್ತಿರೀಯೋಪನಿಷತ್ತಿನಲ್ಲಿರುವ, ಶ್ರುತಿಃ-ವೇದವಾಕ್ಯವು, ಪ್ರಶಸ್ತಾಖಿಲಕರ್ಮಣಾಂ-ಪ್ರಶಸ್ತ-ಅರ್ಥವಾದ ವಾಕ್ಯಗಳಿಂದ ಬಹಳವಾಗಿ ಶ್ಲಾಘಿಸಲ್ಪಟ್ಟ, ಅಖಿಲ-ಸಮಸ್ತವಾದ, ಕರ್ಮಣಾಂ-ಅಗ್ನಿಷ್ಟೋಮಾದಿಕರ್ಮಗಳಿಗೆ, ನ್ಯಾಸಂ-ತ್ಯಾಗವನ್ನು, ಸಾದರಂ-ಆದರಣೆಯಿಂದೊಡಗೂಡಿದಂತೆ, ಸ್ಫುಟಂ-ವ್ಯಕ್ತವಾಗಿ, ಆಹ-ಹೇಳುತ್ತದೆ, ವಾಜಿನಾಂ-ವಾಜಿಸನೇಯಿಗಳ, ಏತಾವತ್-ಏತಾವದರೆ ಎಂಬ, ಶ್ರುತಿಃ-ವೇದವಾಕ್ಯವೂಕೂಡ, ಆಹಚ-ಇದೇಅರ್ಥವನ್ನೆ ಹೇಳಿತು, ಅತಃ-ಈಕಾರಣದದೆಸೆಯಿಂದ, ಜ್ಞಾನಂ-ಬ್ರಹ್ಮಜ್ಞಾನವೆ, ವಿಮೋಕ್ಷಾಯ-ಮುಕ್ತಿಗೆ, ಸಾಧನಂ-ಸಾಧನವು, ಕರ್ಮ-ಯಜ್ಞಾದಿಕರ್ಮವು, ಸಾಧನಂ-ಹೇತುವು, ನ-ಅಲ್ಲ ... ... ... ... ॥೨೧॥

ಅಹಂಕಾರವು ತತ್ತ್ಯಾಗರೂಪಕಾರಣವು ಈ ಎರಡರಭೇದದಿಂದ ಕರ್ಮಜ್ಞಾನಗಳಿಗೆ ವೈಷಮ್ಯವಂಪೇಳಿ, ಫಲತಾರತಮ್ಯದಿಂದಲೂ ಕರ್ಮಜ್ಞಾನಗಳಿಗೆ ಇರುವ ವಿರೋಧವನ್ನು ತೋರಿಸುವನದೆಂತೆನೆ

ಮೂ॥ ವಿದ್ಯಾಸಮತ್ವೇನತುದರ್ಶಿತಸ್ತ್ವಯಾಕ್ರತುರ್ನದೃಷ್ಟಾಂತಉದಾಹೃತಸ್ಸಮಃ । ಫಲೈಃಪೃಥಕ್ತ್ವಾದ್ಬಹುಕಾರಕೈಃಕ್ರತುಸ್ಸಂಸಾಧ್ಯತೇಜ್ಞಾನಮತೋವಿಪರ್ಯಯಂ ॥೨೦॥

ಟೀ॥ (ಹೆಸಮುಚ್ಚಯವಾದಿ-ಎಲೈ ಜ್ಞಾನಕರ್ಮಗಳೆರಡು ಮುಕ್ತಿಗೆ ಸಾಧಕವೆಂದು ಹೇಳತಕ್ಕವನೆ) ತ್ವಯಾ-ನಿನ್ನಿಂದ, ಕ್ರತುಃ-ಅಗ್ನಿಷ್ಟೋಮಾದಿಯಜ್ಞವು, ವಿದ್ಯಾಸಮತ್ವೇನ-ಜ್ಞಾನಸಂಪತ್ತಿಗೆ ಸಮಾನವಾದದ್ದೆಂದು, ದರ್ಶಿತಃ-ತೋರಿಸಲ್ಪಟ್ಟಿತು, ಸಮಃ-ಸದೃಶವಾದ, ದೃಷ್ಟಾಂತಃ-ಉದಾಹರಣೆಯು, ನೋದಾಹೃತಃ-ತೋರಿಸಲ್ಪಡಲಿಲ್ಲ, ಕ್ರತುಃ-ಯಾಗವು, ಬಹುಕಾರಕೈಃ-ಅನೇಕಸಾಧನಗಳುಳ್ಳ (ಅಂದರೆ ಮಮತೆಯು ಅಭಿಮಾನವು ಮೊದಲಾದ ಅಂತರಂಗ ಸಾಧನಗಳಿಂದಲೂ, ದೇಶಕಾಲಸಿಯಮಾದಿರೂಪಗಳಾದ ಬಾಹ್ಯಸಾಧನಗಳಿಂದಲೂ) ಫಲೈಃ-ಫಲಗಳಿಂದಲೂ, ಪೃಥಕ್ತ್ವಾತ್-ಪ್ರತ್ಯೇಕಭಾವದಿಂದ, ಸಂಸಾಧ್ಯತೇ-ಸಾಧಿಸಲ್ಪಡುತ್ತೆ, ಜ್ಞಾನಂ-ಬ್ರಹ್ಮಜ್ಞಾನವು, ಅತಃ-ಈಕಾರಣಗಳಿಂದಲೂ ಫಲಗಳಿಂದಲೂ, ವಿಪರ್ಯಯಂ-ವ್ಯತ್ಯಾಸವುಳ್ಳದ್ದು ... ... ... ... ॥೨೦॥

ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವು ಬರುವದೆಂಬ ಭೀತಿಯಿಂದ ಅವಶ್ಯವಾಗಿ ಕರ್ಮವಂಗೈಯಬೇಕೆಂದು ಶಂಕಿಸಿ ಈ ಶ್ಲೋಕದಲ್ಲಿ ಉತ್ತರವಂ ಪೇಳುತ್ತಾನೆ.

ಮೂ॥ ಸಪ್ರತ್ಯವಾಯೋಹ್ಯಹಮಿತ್ಯನಾತ್ಮಧೀರಜ್ಞಪ್ರಸಿದ್ಧಾನತುತತ್ವದರ್ಶಿನಃ।ತಸ್ಮಾದ್ಬುಧ್ಯೈಸ್ತ್ಯಾಜ್ಯಮಪಿಕ್ರಿಯಾತ್ಮಭಿರ್ವಿಧಾನತಃಕರ್ಮವಿಧಿಪ್ರಕಾಶಿತಂ ... ॥೨೧॥

ಟೀ ॥ ಅಹಂ-ನಾನು, ಸಪ್ರತ್ಯವಾಯಃ-ಕರ್ಮಪರಿತ್ಯಾಗವಂಗೈದರೆ ಪ್ರತ್ಯವಾಯದಿಂದ ಯುಕ್ತನಾಗುವನೆಂದರಿತಿರುವ, ಅನಾತ್ಮಧೀಃ-ಶುದ್ಧಾತ್ಮನಲ್ಲಿ ಆತ್ಮಭಿನ್ನವಾದ ಅಂತಃಕರಣಾದಿ ಧರ್ಮಗಳನ್ನಾರೋಪಿಸುವ ಬುದ್ಧಿಯು, ಅಜ್ಞಪ್ರಸಿದ್ಧಾ-ಅಜ್ಞ-ತತ್ವಜ್ಞಾನವಿಲ್ಲದವನಿಗೆ, ಪ್ರಸಿದ್ಧಾ-ರೂಢವಾಗಿದೆ, ತತ್ವದರ್ಶಿನಸ್ತು-ತತ್ವಜ್ಞಾನಮುಳ್ಳವನಿಗಾದರೆ, ನ-ಇಲ್ಲ(ಯಾಕಂದರೆ ತತ್ವಜ್ಞಾನಿಯು ಅಹಂಕಾರವಿಲ್ಲದವನಾದ್ದರಿಂದಲೂ ಈ ಪಾಪಾದಿಗಳು ಆತ್ಮಧರ್ಮವಲ್ಲವಾದ್ದರಿಂದಲೂ ಜ್ಞಾನಿಯಾದವನಿಗೆ ಪಾಪಸಂಬಂಧವಿಲ್ಲವೆಂದು ತಿಳಿಯತಕ್ಕದ್ದು) ತಸ್ಮಾತ್-ಆಕಾರಣದಸೆಯಿಂದ, ಕ್ರಿಯಾತ್ಮಭಿಃ-ಕರ್ಮಫಲಗಳಲ್ಲಿ ಅಸಕ್ತನಾದ ಚಿತ್ತಮುಳ್ಳವರಿಗೆ, ವಿಧಾನತಃ-ಯಥಾವಿಧಿಯಾಗಿ, ವಿಧಿಪ್ರಕಾಶಿತಂ-ವಿಧಿ-ವಿಧಿವಾಕ್ಯಗಳಿಂದ, ಪ್ರಕಾಶಿತವಪಿ-ಬೋಧಿಸಲ್ಪಟ್ಟದ್ದಾದರು, ಕರ್ಮ-ಯಜ್ಞಾದಿಕರ್ಮವು, ಬುಧ್ಯೈಃ-ಜ್ಞಾನಿಗಳಿಂದ, ತ್ಯಾಜ್ಯಂ-ಬಿಡಲ್ಪಡತಕ್ಕದ್ದು ॥ ೨೧ ॥

ಕರ್ಮವನ್ನು ಮಾಡದಿರುವ ಪುರುಷನು ಕರ್ಮಗಳನ್ನು ಬಿಟ್ಟು ಯೇನುಮಾಡಬೇಕೆಂದರೆ ಮಹಾವಾಕ್ಯಗಳ ಅರ್ಥವಂ ಗುರುಮುಖದಿಂದ ತಿಳಿದು ಕೊಳ್ಳಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಾನೆ.

ಮೂ॥ ಶ್ರದ್ಧಾನ್ವಿತಸ್ತತ್ತ್ವಮಸೀತಿವಾಕ್ಯತೋಗುರೋಃಪ್ರಸಾದಾದಪಿಶುದ್ಧಮಾನಸಃ । ವಿ
ಜ್ಞಾಯಚೈಕಾತ್ಮ್ಯಮಥಾತ್ಮಜೀವಯೋಸ್ಸುಖೀಭವೇನ್ಮೇರುರಿವಾಪ್ರಕಂಪನಃ ॥೨೪॥

ಟೀ॥ ಶ್ರದ್ಧಾನ್ವಿತಃ-ಗುರುಗಳಲ್ಲಿಯೂ ಶಾಸ್ತ್ರದಲ್ಲಿಯು ವಿಶ್ವಾಸದಿಂದ ಕೂಡಿದ ಪುರುಷನು, ತತ್ತ್ವಮಸೀತಿ-ತತ್ತ್ವಮಸಿಎಂಬ ಶ್ರುತಿವಾಕ್ಯದಿಂದ, ಗುರೋಃ-ಉಪದೇಶಕರ್ತನ, ಪ್ರಸಾದಾದಪಿ-ಅನುಗ್ರಹದವಶಿಯಿಂದಲೂಕೂಡೆ, ಶುದ್ಧಮಾನಸಃ-ನಿರ್ಮಲವಾದ ಅಂತಃಕರಣಮುಳ್ಳವನಾಗಿ, ಅಥ-ಬಳಿಕ, ಆತ್ಮಜೀವಯೋಃ-ಜೀವಾತ್ಮಪರಮಾತ್ಮರೀರ್ವರಿಗೂ, ಐಕಾತ್ಮ್ಯಂ-ಏಕೀಭಾವವನ್ನು, ವಿಜ್ಞಾಯ-ತಿಳಿದು (ಅಂದರೆ ಮನನನಿದಿಧ್ಯಾಸನರೂಪವಾದ ಕಾರಣಗಳಿಂದ ಸಾಕ್ಷಾತ್ತಾಗಿ ಅನುಭವಿಸಿ) ಸುಖೀ-ಸುಖವಂತನಾಗಿ, ಮೇರುರಿವ-ಮೇರುಪರ್ವತದಂತೆ, ಅಪ್ರಕಂಪನಃ-ಸ್ರಕ್ಚಂದನ ವನಿತಾದಿರೂಪವಾದ ವಿಷಯಗಳಲ್ಲಿ ಅಭಿಲಾಷೆಯಿಂದ ಕ್ಷೋಭಿಸದಿರುವ ಅಂತಃಕರಣವುಳ್ಳವನು, ಭವೇತ್-ಆಗುವನು ... ... ... ॥ ೨೪ ॥

ಆ ಮಹಾ ವಾಕ್ಯಗಳ ಅರ್ಥಜ್ಞಾನಕ್ಕೆ ಪದಪದಾರ್ಥಜ್ಞಾನವು ಕಾರಣವಾದದ್ದರಿಂದ ಅದನ್ನು ಪ್ರಥಮತಃ-ಅರಿತುಕೊಳ್ಳಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಾನೆ

ಮೂ॥ ಆದೌಪದಾರ್ಥಾವಗತಿರ್ಹಿಕಾರಣಂವಾಕ್ಯಾರ್ಥವಿಜ್ಞಾನವಿಧೌವಿಧಾನತಃ।ತತ್ತ್ವಂ
ಪದಾರ್ಥೌಪರಮಾತ್ಮಜೀವಕಾವಸೀತಿಚೈಕಾತ್ಮ್ಯಮಥಾನಯೋರ್ಭವೇತ್ ॥೨೫॥

ಟೀ॥ ವಿಧಾನತಃ-ಭ್ರಮುಪ್ರಮಾಣಾದಿಗಳಲ್ಲನೆ, ವಾಕ್ಯಾರ್ಥವಿಜ್ಞಾನವಿಧೌ-ವಾಕ್ಯ-ತತ್ತ್ವಮಸಿ ಎಂಬದೇ ಮೊದಲಾದ ಮಹಾವಾಕ್ಯಗಳ, ಅರ್ಥ-ಅರ್ಥದ, ವಿಜ್ಞಾನ-ಅರಿತುಕೊಳ್ಳುವಿಕೆಯು, ವಿಧೌ-ಉತ್ಪತ್ತಿಯಲ್ಲಿ, ಆದೌ-ಪ್ರಥಮತಃ, ಪದಾರ್ಥಾವಗತಿಃ-ಪದ-ತತ್‌ತ್ವಂಅಸಿ ಎಂಬ ಪದಗಳ, ಅರ್ಥ-ಅರ್ಥದ, ಅವಗತಿಃ-ಬೋಧೆಯು, ಕಾರಣಂಹಿ-ಹೇತುವಷ್ಟೆ, ತತ್ತ್ವಂಪದಾರ್ಥೌ-ತತ್‌ತ್ವಂ ಎಂಬ ಪದಗಳಿಗೆ, ಅರ್ಥೌ-ಅರ್ಥಗಳು, ಪರಮಾತ್ಮಜೀವಕೌ-ಪರಮಾತ್ಮ ಜೀವಾತ್ಮರು (ಅಂದರೆ ತತ್ ಎಂಬ ಪದಕ್ಕೆ ಸರ್ವಜ್ಞತ್ವಾದಿ ಗುಣವಿಶಿಷ್ಟ ಪರಮಾತ್ಮನೆಂದರ್ಥವು. ತ್ವಂ ಎಂಬ ಪದಕ್ಕೆ ಕಿಂಚಿಜ್ಞತ್ವಾದಿ ವಿಶಿಷ್ಟ ಚೈತನ್ಯರೂಪವಾದ ಜೀವನೆಂದರ್ಥವು.) ಅಸೀತಿ-ಅಸಿ ಎಂಬ ಶಬ್ದಕ್ಕೆ, ಐಕಾತ್ಮ್ಯಂ ಏಕೀಭಾವವೆಂದರ್ಥವು, ಅನಯೋಃ-ಈ ಜೀವಾತ್ಮ ಪರಮಾತ್ಮರಿಬ್ಬರಿಗು, ಅಥ-ಬಳಿಕ, ಭವೇತ್-ಆಗುವದು ... ॥೨೫॥

ಸರ್ವಜ್ಞತ್ವಾದಿ ಗುಣ ವಿಶಿಷ್ಟನಾದ ಈಶ್ವರನಿಗೂ, ಕಿಂಚಿತ್‌ಜ್ಞತ್ವಾದಿ ಗುಣ ವಿಶಿಷ್ಟನಾದ ಜೀವನಿಗೂ ಏಕೀಭಾವವು ಹ್ಯಾಗೆ ಉಂಟಾಗುವ ದೆಂದು ಅಕ್ಷೇಪಿಸಿಗೊಂಡು ಉತ್ತರವಂ ಪೇಳುತ್ತಾನೆ.

ಮೂ॥ ಪ್ರತ್ಯಕ್ಪರೋಕ್ಷಾದಿವಿರೋಧಮಾತ್ಮನೋರ್ವಿಹಾಯಸಂಗೃಹ್ಯತಯೋಶ್ಚಿದಾತ್ಮತಾಂ।
ಸಂಶೋಧಿತಾಂಲಕ್ಷಣಯಾಚಲಕ್ಷಿತಾಂಜ್ಞಾತ್ವಾಸ್ವಮಾತ್ಮಾನಮಥಾದ್ವಯೋಭವೇತ್ ॥೨೬॥



ಟೀ॥ ಆತ್ಮನೋಃ-ಜೀವಾತ್ಮ ಪರಮಾತ್ಮರಿಗೆ, ಪ್ರತ್ಯಕ್ಪರೋಕ್ಷಾದಿ ವಿರೋಧಂ-ಅಹಂಬುದ್ಧಿ ವೇದ್ಯತ್ವರೂಪವಾದ ಪ್ರತ್ಯಕ್ತ್ವವೆ ಜೀವಧರ್ಮವು, ಪರೋಕ್ಷತ್ವವೇ ಈಶ್ವರಧರ್ಮವು, ಇವುಗಳೇ ಮೊದಲಾಗುಳ್ಳ ಧರ್ಮಗಳಿಂದ ಹುಟ್ಟಿದ ವಿರೋಧವನ್ನು, ವಿಹಾಯ-ಬಿಟ್ಟು, ತಯೋಃ-ಆ ಜೀವಾತ್ಮ ಪರಮಾತ್ಮರಿಬ್ಬರಿಗು, ಸಂಶೋಧಿತಾಂ-ಚನ್ನಾಗಿ ವಿಚಾರಿಸಲ್ಪಟ್ಟ, ಲಕ್ಷಣಯಾ-ಶಕ್ಯಸಂಬಂಧರೂಪವಾದ ಲಕ್ಷಣಾವೃತ್ತಿಯಿಂದ, ಲಕ್ಷಿತಾಂ-ಬೋಧಿತವಾದ, ಚಿದಾತ್ಮತಾಂ-ಚಿತ್ಸ್ವರೂಪತ್ವವನ್ನು, ಸಂಗೃಹ್ಯ-ಚನ್ನಾಗಿತಿಳಿದು, ಸ್ವಂ-ಜೀವಭಾವವಂಪಡೆದ ತನ್ನನ್ನು, ಆತ್ಮಾನಂ-ಪರಮಾತ್ಮನನ್ನಾಗಿ, ಜ್ಞಾತ್ವಾ-ತಿಳಿದು, ಅಥ-ಏಕಾತ್ಮಜ್ಞಾನಾನಂತರದಲ್ಲಿ, ಅದ್ವಯಃ-ಅದ್ವಿತೀಯ ಬ್ರಹ್ಮಸ್ವರೂಪವಂ ಪೊಂದಿದವನೊಪಾದಿಯಲ್ಲಿ, ಭವೇತ್-ಆಗುವನು. (ಅಂದರೆ ವಾಚ್ಯಾರ್ಥಲಕ್ಷ್ಯಾರ್ಥಗಳೆಂದು ಅರ್ಥಗಳೆರಡು ವಿಧಗಳು. ಅದರಲ್ಲಿ ಪದಶಕ್ತಿಯಿಂದ ಹೇಳುವದಕ್ಕೆ ವಾಚ್ಯಾರ್ಥವೆಂತಲೂ, ಶಕ್ಯಸಂಬಂಧರೂಪವಾದ ಲಕ್ಷಣಾವರ್ತಿಯಿಂದ ಹೇಳತಕ್ಕ ಅರ್ಥಕ್ಕೆ ಲಕ್ಷ್ಯಾರ್ಥವೆಂತಲೂ ಹೇಳುತ್ತಾರೆ, ಅದರಲ್ಲಿ ಶಕ್ಯಸಂಬಂಧರೂಪವಾದ ಲಕ್ಷಣಾವೃತ್ತಿಯು ಮೂರುಬಗೆಗಳಾಗಿಧೆ, ಅವುಗಳು ಯಾವವಂದರೆ, ೧ ಜಹಲ್ಲಕ್ಷಣ, ೧ ಅಜಹಲ್ಲಕ್ಷಣ, ೧ ಜಹದಜಹಲ್ಲಕ್ಷಣ, ಇದರ ವಿವರಣೆಗಳು ಹ್ಯಾಗಂದರೆ,—ಜಹಲ್ಲಕ್ಷಣವೆಂಬದು ಶಕ್ಯಾರ್ಥವಂ ತೊರೆದು ಲಕ್ಷ್ಯಾರ್ಥವನ್ನು ಮಾತ್ರ ಹೇಳುವದು. ಉ, ಮಂಚಾಃಕ್ರೋಶಂತಿ=ಮಂಚಗಳುಕೂಗುತ್ತವೆ, ಎಂಬ ವಾಕ್ಯಾರ್ಥದಲ್ಲಿ ಮಂಚದಲ್ಲಿರುವ ಜನಗಳು ಕೂಗುತ್ತಾರೆಂದು ಅರ್ಥಮಾಡತಕ್ಕದ್ದು.) (ಅಜಹಲ್ಲಕ್ಷಣವು ಹ್ಯಾಗಂದರೆ, ಗಂಗಾಯಾಂಘೋಷಃ-ಎಂಬಪದದಲ್ಲಿ, ಗಂಗಾ ಎಂಬ ಪದಕ್ಕೆ ಗಂಗಾನದಿಯು ಶಕ್ಯಾರ್ಥವು. ಘೋಷಪದಕ್ಕೆ ಮನೆಯೆಂಬರ್ಥ, ಇವೆರತಕ್ಕು ವಿರೋಧಮುಂಟಾಗುತ್ತೆ, ಹ್ಯಾಗಂದರೆ—ಪ್ರವಾಹದಲ್ಲಿ ಮನೆಯುಇದ್ದರೆ ಕೊಚ್ಚಿಕೊಂಡು ಹೋಗುತ್ತೆಂದು ಎಲ್ಲರಿಗೂ ತಿಳಿದಿಧೆ, ಆದ್ದರಿಂದ ಗಂಗಾ ಪದಕ್ಕೆ ಗಂಗಾತೀರವೆಂದು ಅರ್ಥವು ಹೇಳತಕ್ಕದ್ದು. ಇಲ್ಲಿ ಗಂಗಾಶಬ್ದಕ್ಕೆ ಶಕ್ಯಾರ್ಥವನ್ನು ಬಿಡದೆ ಗಂಗಾತೀರದಲ್ಲಿರುವ ಘೋಷವೆಯೆಂದರ್ಥವಾಯಿತಾದ್ದರಿಂದ ಇದು ಅಜಹಲ್ಲಕ್ಷಣವೆಂದನ್ನಲ್ಪಡುತ್ತದೆ.) ಜಹದಜಹಲ್ಲಕ್ಷಣವೆಂಬದು ಯಾವದಂದರೆ, ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ಎಂಬ ಪದಕ್ಕೆ, ವಾಚ್ಯಾರ್ಥವು ಸರ್ವಜ್ಞತ್ವ ವಿಶಿಷ್ಟವಾದ ಪರೋಕ್ಷಚೈತನ್ಯವು, ತ್ವಂ ಎಂಬ ಪದಕ್ಕೆ ಕಿಂಚಿತ್‌ಜ್ಞತ್ವವಿಶಿಷ್ಟ ಪ್ರತ್ಯಕ್ಷ ಚೈತನ್ಯವೇ ವಾಚ್ಯಾರ್ಥವು. ಈ ಅರ್ಥದಲ್ಲಿ ಪ್ರತ್ಯಕ್ಷತ್ವ ಪರೋಕ್ಷತ್ವಗಳೆಂಬ ವಿಶೇಷಣಗಳು ಒಂದಕ್ಕೊಂದು ವಿರುದ್ಧವಾಗಿಧೆ. ಈ ಪರಿ ಸರ್ವಜ್ಞತ್ವ ಕಿಂಚಿತ್‌ಜ್ಞತ್ವಗಳು ಪರಸ್ಪರ ವಿರುದ್ಧವಾಗಿವೆ. ಹೀಗಿದ್ದರೂ ವಿಶೇಷ್ಯಮಾತ್ರ

ಪ್ರೊಂಡೇ ಆಗಿಥೆ. ಶುದ್ಧ ಚೈತನ್ಯ ರೂಪವಾದ ವಿಶೇಷ್ಯವನ್ನು ಬಿಡಲಿಲ್ಲವಾದ್ದರಿಂದ ಅಜಹಲ್ಲಕ್ಷಣವೆಂದೆನ್ನಲ್ಪಡುತ್ತೆ. ವಿರುದ್ಧವಾದ ಸರ್ವಜ್ಞತ್ವ ಕಿಂಚಿಜ್ಞತ್ವ ರೂಪವಾದ ವಿಶೇಷಣಗಳಂ ಬಿಟ್ಟು, ಲಕ್ಷ್ಯಾರ್ಥವಂ ಹೇಳುತ್ತಾದ್ದರಿಂದ ಜಹದಜಹಲ್ಲಕ್ಷಣವೆಂದೆನ್ನಲ್ಪಡುತ್ತೆ. ಇಂಥಾ ಲಕ್ಷಣಾವೃತ್ತಿಯಿಂದ ಲಕ್ಷಿತವಾಗಿರುವ ಚಿದಾತ್ಮಸ್ವರೂಪವಂ ತಿಳಿದು ಜೀವಾತ್ಮನೇ ಪರಮಾತ್ಮನಾದನೆಂಬ ಅರ್ಥವನ್ನು ಅಸಿ ಎಂಬ ಪದವು ತೋರಿಸುತ್ತದೆ, ಅದ್ದರಿಂದ ಈ ಮಹಾವಾಕ್ಯಾರ್ಥ ಜ್ಞಾನದಲ್ಲಿ ಪ್ರತ್ಯೇಕ ಪದಾರ್ಥವು ಕಾರಣವಾಯಿತು. ಇಂಥಾಭಾವವನ್ನು ಯಾವ ಪುರುಷನು ತಿಳಿದು ಕೊಳ್ಳುತ್ತಾನೋ ಅವನು ಅದ್ವಿತೀಯ ಸ್ವರೂಪ ನಾಗುವನೆಂದು ಭಾವವು.

ಮೂ॥ ಏಕಾತ್ಮಕತ್ವಾಜ್ಜಹತೀನಸಂಭವೇತ್ತಥಾಜಹಲ್ಲಕ್ಷಣತಾವಿರೋಧತಃ । ಸೋಽಯಂ
ಪದಾರ್ಥಾವಿವಭಾಗಲಕ್ಷಣಾಯುಜ್ಯೇತತತ್ತ್ವಂಪದಯೋರದೋಷತಃ ... ॥೭೭॥

ಅ॥ ರಾ॥ ೮-೪ ಟೀ॥ (ಜೀವಾತ್ಮಪರಮಾತ್ಮನೋಃ-ಜೀವಾತ್ಮಪರಮಾತ್ಮರಿಗೆ,) ಏಕಾತ್ಮಕತ್ವಾತ್-ಏಕಚೈತನ್ಯಸ್ವರೂಪಭಾವದದೆಸೆಯಿಂದ, ಜಹತೀ-ಜಹಲ್ಲಕ್ಷಣವು, ನಸಂಭವೇತ್-ಸೇರುವದಿಲ್ಲ (ಅಂದರೆ ವಿಶೇಷ್ಯಭೂತವಾದ ಆತ್ಮಪದಾರ್ಥಕ್ಕೆ ಸ್ವರೂಪೈಕ್ಯದದೆಸೆಯಿಂದ ಈ ತತ್ತ್ವಂಪದಗಳು ಸ್ವಶಕ್ಯಾರ್ಥವನ್ನು ಬಿಡದಿರೋಣದರದೆಸೆಯಿಂದ ಜಹತ್ಸ್ವಾರ್ಥಲಕ್ಷಣವು ಉಪಪನ್ನವಾಗುವದಿಲ್ಲ) ತಥಾ-ಹಾಗೆಯೆ, ವಿರೋಧತಃ-ವಿಶೇಷಣಪದಾರ್ಥಗಳಾದ ಸರ್ವಜ್ಞತ್ವಕಿಂಚಿಜ್ಞತ್ವಗಳಿಗೂ ಪರೋಕ್ಷತ್ವಾಪರೋಕ್ಷತ್ವಗಳಿಗೂ ಪರಸ್ಪರವಿರೋಧದದೆಸೆಯಿಂದ, ಅಜಹಲ್ಲಕ್ಷಣತಾ-ಅಜಹತ್-ಸ್ವಾರ್ಥವನ್ನು ಬಿಡದಿರುವ, ಲಕ್ಷಣತಾ-ಲಕ್ಷಣವುಂಟಾಗುವಿಕೆಯು, ನ-ಇಲ್ಲ, (ಮತ್ತೇನಂದರೆ) ಸೋಯಂಪದಾರ್ಥಾವಿವ-ಸೋಯಂದೇವದತ್ತ ಇತ್ಯಾಕಾರಕವಾಕ್ಯ ಘಟಕೀಭೂತತಚ್ಛಬ್ದ ಇದಮ್ ಶಬ್ದಗಳ ಅರ್ಥಗಳಂತೆ, ಭಾಗಲಕ್ಷಣಾ-ಜಹದಜಹಲ್ಲಕ್ಷಣವು, ತತ್ತ್ವಂಪದಯೋಃ-ತತ್ಪದ ತ್ವಂಪದಗಳಿಗೆ, ಅದೋಷತಃ-ದೋಷವಿಲ್ಲದಿರೋಣದರದೆಸೆಯಿಂದ, ಯುಜ್ಯೇತ-ಘಟಿಸುತ್ತದೆ, (ಅದು ಹ್ಯಾಗಂದರೆ, ಸೋಯಂದೇವದತ್ತಃ ಎಂಬ ವಾಕ್ಯದಲ್ಲಿ ಸಃ-ಎಂಬಪದಕ್ಕೆ ತತ್ಕಾಲತದ್ದೇಶಾವಚ್ಛಿನ್ನತ್ವವಿಶಿಷ್ಟಚೈತನ್ಯವೆ ಅರ್ಥ(ಅಂದರೆ, ಆಕಾಲದಲ್ಲಿ ಆ ದೇಶದಲ್ಲಿ ನೋಡಲ್ಪಟ್ಟವನು)ಅಯಂ ಎಂಬಪದಕ್ಕೆ ಏತತ್ಕಾಲ ಏತದ್ದೇಶಾವಚ್ಛಿನ್ನತ್ವವಿಶಿಷ್ಟಚೈತನ್ಯವೇ ಅರ್ಥ (ಅಂದರೆ ಈ ಕಾಲದಲ್ಲಿ ಈಗ ಪ್ರತ್ಯಕ್ಷವಾಗಿರುವ ಪುರುಷನು) ಈ ಪದಾರ್ಥಗಳಲ್ಲಿ ಚೈತನ್ಯಮಾತ್ರವೇ ವಿಶೇಷ್ಯವು, ವಿಶೇಷಣಗಳು ತತ್ಕಾಲಾವಚ್ಛಿನ್ನತ್ವಂ ಏತತ್ಕಾಲಾವಚ್ಛಿನ್ನತ್ವಂ ಇತ್ಯಾದಿಗಳು ವಿಶೇಷಣಗಳು ಈ ವಿಶೇಷಣಗಳಿಗೆ ಪರಸ್ಪರವಿರೋಧಮಿದ್ದದ್ದರಿಂದ, ತದ್ಭಾಗ-ವಿಶೇಷಣಾಂಶಗಳನ್ನು ಪರಿತ್ಯಜಿಸಿ ಈ ಲಕ್ಷಣದಿಂದ ಅರ್ಥವಂ ಹೇಳಬೇಕಾಗುತ್ತದೆ, ಅದ್ದರಿಂದ ವಿರುದ್ಧವಾದ ಏಕಾಂಶವಂಬಿಟ್ಟು ಏಕಾಂಶವಂಬಿಡದೆ ಇರುವದ್ದರಿಂದ ಭಾಗತ್ಯಾಗಲಕ್ಷಣವೆಂಬದು ಸೋಯಂದೇವದತ್ತಃ-ಎಂಬ ವಾಕ್ಯದಲ್ಲಿ ಹ್ಯಾಗೆ ಉಪಪನ್ನವಾಗುತ್ತದೆಯೋ ಹಾಗೆ ತತ್ತ್ವಂಪದಗಳಿಗೂ ಏಕಾಂಶವನ್ನು ತ್ಯಜಿಸಿ ವಿಶೇಷ್ಯಾಂಶವನ್ನು ಮಾತ್ರ ಪರಿಗ್ರಹಿಸಿ ಅರ್ಥಗಳಿಗೆ ಅನ್ವಯವನ್ನು ಹೇಳತಕ್ಕದ್ದು. ಅದಕಾರಣ ಈ ಸ್ಥಳದಲ್ಲಿ ಭಾಗತ್ಯಾಗಲಕ್ಷಣವು ಉಪಪನ್ನವಾಗುತ್ತೆ. ... ... ... ॥೭೭॥ ಉ॥ ಕಾ॥ ಸ॥ ೫

ಮೂ॥ ರಸಾದಿಪಂಚೀಕೃತಭೂತಸಂಭವಂಭೋಗಾಲಯಂದುಃಖಸುಖಾದಿಕರ್ಮಣಾಂ॥ ಶರೀ
ರಮಾದ್ಯಂತವದಾದಿಕರ್ಮಜಂಮಾಯಾಮಯಂಸ್ಥೂಲಮುಪಾಧಿಮಾತ್ಮನಃ ॥೨೮॥

ಟೀ॥ ರಸಾದಿಪಂಚೀಕೃತಭೂತಸಂಭವಂ-ರಸ-ಪೃಥಿವಿಯೇ, ಆದಿ-ಮೊದಲಾಗುಳ್ಳ, ಪಂಚೀಕೃತ- ಪಂಚೀಕರಣದಿಂದ ಕೂಡಿಕೊಂಡಿರುವ, ಭೂತ-ಪಂಚಮಹಾಭೂತಗಳಿಂದ, ಸಂಭವಂ-ಉತ್ಪತ್ತಿಯುಳ್ಳ, ದುಃಖಸುಖಾದಿಕರ್ಮಣಾಂ-ದುಃಖಸುಖ-ದುಃಖಸುಖಗಳಿಗೆ, ಆದಿ-ಕಾರಣವಾದ, ಕರ್ಮಣಾಂ-ಕರ್ಮಗಳ, ಭೋಗಾಲಯಂ-ಭೋಗ-ಅನುಭವಕ್ಕೆ, ಆಲಯಂ-ಆಶ್ರಯವಾದ, ಆದ್ಯಂತವತ್-ಉತ್ಪತ್ತಿನಾಶಗಳುಳ್ಳ, ಆದಿಕರ್ಮಜಂ- ಪೂರ್ವಜನ್ಮಸಂಬಂಧವಾದಕರ್ಮದಿಂದ ಹುಟ್ಟಿದ, ಮಾಯಾಮಯಂ-ಮಾಯಾವಿಕಾರರೂಪ, ಶರೀರಂ-ಶರೀರವನ್ನು, ಆತ್ಮನಃ-ಆತ್ಮನಿಗೆ, ಸ್ಥೂಲಂ-ಸ್ಥೂಲವಾದ, ಉಪಾಧಿಂ-ಉಪಾಧಿಯನ್ನಾಗಿ, ವದಂತಿ-ಹೇಳುತ್ತಾರೇ (ಅಂದರೇ, ಆತ್ಮಾ ಎಂಬವದು ಶುದ್ಧಚೈತನ್ಯಸ್ವರೂಪವು, ಅದಕ್ಕೆ ವ್ಯವಹಾರಯೋಗ್ಯತ್ವಬರಬೇಕಾಗಿದ್ದರೇ, ಉಪಾಧಿ ಮೇಳವಾಗಬೇಕು, ಉಪಾಧಿಗಳು ಯಾವವಂದರೇ, ಸ್ಥೂಲೋಪಾಧಿ-ಸೂಕ್ಷ್ಮೋಪಾಧಿ- ಕಾರಣೋಪಾಧಿಎಂಬ ಉಪಾಧಿತ್ರಯವು ಅವರಲ್ಲಿ, ಸ್ಥೂಲಶರೀರವೆ-ಸ್ಥೂಲವುಪಾಧಿ ಎಂಬದಾಗಿ ತಿಳಿಯತಕ್ಕದ್ದು ॥ ೨೮ ॥

ಈಪರಿ ಜೀವೋಪಾಧಿಗಳಂ ಪೇಳಿ ಸೂಕ್ಷ್ಮೋಪಾಧಿಯಂ ನಿರೂಪಿಸುವನದೆಂತೆನೆ.—

ಮೂ॥ ಸೂಕ್ಷ್ಮಂಮನೋಬುದ್ಧಿದಶೇಂದ್ರಿಯೈರ್ಯುತಂಪ್ರಾಣೈರಪಂಚೀಕೃತಭೂತಸಂಭವಂ।
ಭೋಕ್ತುಸ್ಸುಖಾದೇರನುಸಾಧನಂಭವೇಚ್ಛರೀರಮನ್ಯದ್ವಿದುರಾತ್ಮನೋಬುಧಾಃ ॥೨೯॥

ಟೀ॥ ಬುಧಾಃ-ಜ್ಞಾನಿಗಳು, ಮನೋಬುದ್ಧಿದಶೇಂದ್ರಿಯೈಃ-ಮನಃ-ಮನಸ್ಸಿನಿಂದಲೂ, ಬುದ್ಧಿ-ಬುದ್ಧಿಯಿಂದಲೂ, ದಶೇಂದ್ರಿಯೈಃ - ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಗಳೆಂಬ ಪಂಚಜ್ಞಾನೇಂದ್ರಿಯಗಳು, ವಾಕ್ಪಾಣಿ ಪಾದಪಾಯೂಪಸ್ಥಾತ್ಮಕ ಕರ್ಮೇಂದ್ರಿಯಗಳೆಂಬ ದಶೇಂದ್ರಿಯಗಳಿಂದಲೂ, ಪ್ರಾಣೈಃ-ಪ್ರಾಣಾಪಾನವ್ಯಾನೋದಾನಸಮಾನಗಳಿಂದಲೂ, ಯುತಂ-ಕೂಡಿಕೊಂಡಿರುವ, ಅಪಂಚೀಕೃತಭೂತಸಂಭವಂ-ಅಪಂಚೀಕೃತ-ಪರಸ್ಪರಮಿಶ್ರವಾಗದಿರುವ, ಭೂತ-ಭೂತಗಳಿಂದ, ಸಂಭವಂ-ಉತ್ಪನ್ನವಾದ, ಭೋಕ್ತುಃ-ಅಂತಃಕರಣಾವಚ್ಛಿನ್ನ ಚೇತನನಿಗೆ, ಸುಖಾದೇಃ-ಸುಖದುಃಖಾದ್ಯನುಭವಕ್ಕೆ, ಅನುಸಾಧನಂ-ಸಾಧಕವಾದ, ಅನ್ಯತ್-ಸ್ಥೂಲಶರೀರಕ್ಕಿಂತಲೂ ಭಿನ್ನವಾದ, ಸೂಕ್ಷ್ಮಂ-ಅದೃಶ್ಯವಾದ, ಶರೀರಂ-ಲಿಂಗಶರೀರವನ್ನು, ಆತ್ಮನಃ-ಆತ್ಮಪದಾರ್ಥಕ್ಕೆ, ಉಪಾಧಿಂ-ಉಪಾಧಿಯನ್ನಾಗಿ, ವಿದುಃ-ತಿಳಿಯುತ್ತಾರೇ, ( ಅಂದರೇ, ಲಿಂಗಶರೀರವೇ ಸೂಕ್ಷ್ಮೋಪಾಧಿಎಂದು ತಿಳಿಯತಕ್ಕದ್ದು) (ಲಿಂಗ ಶರೀರವು, ಸಪ್ತದಶತತ್ವಾತ್ಮಕವು, ಸಪ್ತದಶತತ್ವಗಳು ಯಾವವಂದರೆ, ಪಂಚಪ್ರಾಣಗಳು, ಮನಸ್ಸು, ಬುದ್ಧಿ ಕರ್ಮೇಂದ್ರಿಯ ಪಂಚಕವು, ಪಂಚಜ್ಞಾನೇಂದ್ರಿಯಗಳು ಇವೆಲ್ಲಾ ಸೇರಿದರೆ ಸಪ್ತದಶತತ್ವಗಳು, ಇಂಥಾಸಪ್ತದಶತತ್ವಾತ್ಮಕವೇ ಲಿಂಗ ಶರೀರವೆಂದು ತಿಳಿಯತಕ್ಕದ್ದು) ॥೨೯॥

ಈ ರೀತಿಯಾಗಿ ಜೀವನ ಉಪಾಧಿಗಳೆ ರಡಂಪೇಳಿ ಈಶೋಪಾಧಿಯಂಪೇಳುವೆನು.

ಮೂ॥ ಅನಾದ್ಯನಿರ್ವಾಚ್ಯಮಪೀಹಕಾರಣಂಮಾಯಾಪ್ರಧಾನಂತುಪರಂಶರೀರಕಂ। ಉಪಾ
ಧಿಭೇದಾತ್ತು ಯತಃಪೃಥಕ್ಸ್ಥಿತಂಆತ್ಮಾನಮಾತ್ಮನ್ಯವಧಾರಯೇತ್ಕ್ರಮಾತ್ ॥೩೦॥

ಟೀ॥ ಇಹ-ಈಗ, ಅನಾದಿ-ಉತ್ಪತ್ತಿರಹಿತವಾದ, ಅನಿರ್ವಾಚ್ಯಂ-ಸತ್ ಅಸತ್ ಎಂಬದಾಗಿ ಪೇಳಲಶಕ್ಯಮಾದ, ಮಾಯಾಪ್ರಧಾನಂ-ಮಾಯಾ-ಮಾಯಾರೂಪವಮಾದ, ಪ್ರಧಾನಂ-ಮುಖ್ಯಮಾದ, ಪರಂ-ಸ್ಥೂಲಸೂಕ್ಷ್ಮಗಳಿಗಿಂತಲೂ ಉತ್ಕೃಷ್ಟಮಾದ, ಶರೀರಕಂ-ಶರೀರವನ್ನು, ಕಾರಣಂ-ಕಾರಣೋಪಾಧಿಯನ್ನಾಗಿ, ವಿದುಃ-ತಿಳಿಯುತ್ತಾರೇ, ಉಪಾಧಿಭೇದಾತ್-ಸ್ಥೂಲಸೂಕ್ಷ್ಮಕಾರಣರೂಪಗಳಾದ, ಉಪಾಧಿಗಳ ಭೇದದದೆಸೆಯಿಂದ, ಯತಃ-ಯಾವಕಾರಣದ ದೆಸೆಯಿಂದ, ಪೃಥಕ್-ಜೀವನೂ, ಈಶ್ವರನು ಎಂಬ ಭೇದದಿಂದ ಪ್ರತೀತವಾಗಿ, ಸ್ಥಿತಂ-ಇರುತ್ತದೋ, (ಅಂದರೆ, ಭೇದಬುದ್ಧಿ ವಿಷಯವಾಗುತದೋ) ತಸ್ಮಾತ್, ಆಕಾರಣದದೆಸೆಯಿಂದ, ಸ್ವಾತ್ಮಾನಂ-ತನ್ನಾತ್ಮನನ್ನು, ಕ್ರಮಾತ್-ಶ್ರವಣಮನನನಿಧಿಧ್ಯಾಸನಗಳ ಕ್ರಮದಿಂದ, ಆತ್ಮನಿ-ಪರಮಾತ್ಮನಲ್ಲಿ, ಅವಧಾರಯೇತ್-ಆ ಭೇದಪಿಂದ ತಿಳುಕೊಳ್ಳತಕ್ಕದ್ದು .. ॥೩೦॥

ಅದರ ಫಲವೇನಂದರೆ.—

ಮೂ ॥ ಕೋಶೇಷ್ವಯಂತೇಷುತುತತ್ತದಾಕೃತಿಃ ವಿಭಾತಿಸಂಗಾತ್ಸ್ಫಟಿಕೋಪಲೋಯಥಾ ॥
ಅಸಂಗರೂಪೋಯಮಜೋಯತೋದ್ವಯೋವಿಜ್ಞಾಯತೇಸ್ಮಿನ್ಪರಿತೋವಿಚಾರಿತೇ ॥೩೧॥

ಟೀ॥ ಅಯಂ-ಈ ಆತ್ಮನು, ತೇಷು-ಪ್ರಸಿದ್ಧಗಳಾದ, ಕೋಶೇಷು-ಪಂಚಕೋಶಗಳಲ್ಲಿ, ಸಂಗಾತ್-ಸಂಬಂಧದದೆಸೆಯಿಂದ, ಸ್ಫಟಿಕೋಪಲೋಯಥಾ-ಸ್ಫಟಿಕಮಣಿಯಂತೇ, ತತ್ತದಾಕೃತಿಃ-ಆಯಾಯ ಉಪಾಧಿಗಳ ಆಕಾರದಂತೆ ಆಕಾರವುಳ್ಳವನಾಗಿ, ವಿಭಾತಿ-ತೋರುತ್ತಾನೇ, ಯತಃ-ಯಾವಕಾರಣದದೆಸೆಯಿಂದ, ಅಯಂ-ಈ ಆತ್ಮನು, ಅಸಂಗರೂಪಃ-ಅಸಂಗಸ್ವರೂಪನಾಗಿಯೂ, ಅಜಃ-ಉತ್ಪತ್ತಿರಹಿತನಾಗಿಯೂ, ಅದ್ವಿತೀಯ್ಯಃ-ಅದ್ವಿತೀಯ್ಯನಾಗಿಯೂ, ಪರಿತಃ-ಯಲ್ಲಾ ಕಡೆಯಲ್ಲಿ, ಅಸ್ಮಿನ್-ಈ ತತ್ವಮಸಿ ಎಂಬ ವಾಕ್ಯವು, ವಿಚಾರತೇ-ಚನ್ನಾಗಿ ವಿಚಾರಿಸಲ್ಪಟ್ಟನ್ನಾಗುತಿರಲೀಕಾಗಿ, ವಿಜ್ಞಾಯತೇ-ತಿಳಿಯಲ್ಪಡುತ್ತಾನೆ. (ಅಂದರೇ ಪಂಚಕೋಶಗಳನ್ನು ಪೊದಲು ಬ್ರಹ್ಮಸ್ವರೂಪವಾಗಿರುವಂಥಾವುಗಳನ್ನಾಗಿ ತಿಳದು ಆತ್ಮನನ್ನು ತತ್ತದಾಕಾರಉಳ್ಳವನನ್ನಾಗಿ, ಅರಿತುಕೊಳ್ಳತಕ್ಕದ್ದು, ಅದು ಹ್ಯಾಗಂದರೆ ಸ್ಫಟಿಕಮಣಿಯು [ಕೆಂದಾಶಿವಾಳದ ಹುವ್ವಿನ ಸಮೀಪದಲ್ಲಿರುವಾಗ ಕೆಂಪಾಗಿಯೂ, ಕಪ್ಪುಗಿರ್ಸ ಹುವ್ವಿನ ಸಮೀಪದಲ್ಲಿರುವಾಗ ಕಪ್ಪಾಗಿಯೂ ಇರುವಂತೆ ಹ್ಯಾಗೆ ತೋರುತ್ತೊ ಅದರಂತೆ ಆತ್ಮನು ತೋರು

ತ್ಮಾನೆ) ಆ ಬಳಿಕ ಪಂಚಕೋಶವ್ಯತಿರಿಕ್ತನಾದ ಆತ್ಮನನ್ನು, ಮಹಾವಾಕ್ಯಾರ್ಥವಿಚಾರದಿಂದ ಅದ್ವಿತೀಯಬ್ರಹ್ಮನನ್ನಾಗಿ ತಿಳಿದು ಜೀವಾತ್ಮಪರಮಾತ್ಮಭೇದಬುದ್ಧಿಯನ್ನು ತತ್ವಮಸ್ಯಾದಿ ಮಹಾವಾಕ್ಯಗಳ ವಿಚಾರಣೆಯಿಂದ ನಿರಾಕರಿಸಬೇಕೆಂದು ಭಾವವು ... ... ||೨೦||

ಜಾಗ್ರತ್ ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಿತಯವು ಬುದ್ಧಿಧರ್ಮವೇ ಹೊರ್ತು ಆತ್ಮಧರ್ಮವಲ್ಲ ಎಂಬದಾಗಿ ಈ ಶ್ಲೋಕದಲ್ಲಿ ಹೇಳುತ್ತಾನೆ

ಮೂ॥ ಬುದ್ಧೇಸ್ತ್ರಿಧಾವೃತ್ತಿರಪೀಹದೃಶ್ಯತೆಸ್ವಪ್ನಾದಿಭೇದೇನಗುಣತ್ರಯಾತ್ಮನಃ । ಅನ್ಯೋ

ನ್ಯತೋಸ್ಮಿನ್ವ್ಯಭಿಚಾರತೋಮೃಷಾನಿತ್ಯೇಪರೇಬ್ರಹ್ಮಣಿಕೇವಲೇಶುಭೇ ||೨೧||

ಟೀ॥ ಇಹ-ಈ ಆತ್ಮನಲ್ಲಿ, ಸ್ವಪ್ನಾದಿಭೇದೇನ-ಜಾಗ್ರತ್ ಸ್ವಪ್ನಸುಷುಪ್ತಿಗಳೆಂಬ ಅವಸ್ಥಾಭೇದದಿಂದ, ತ್ರಿಧಾ-ಮೂರುಬಗೆಯಾದ, ವೃತ್ತಿಃ-ಪರಿಣಾಮವು, ಗುಣತ್ರಯಾತ್ಮನಃ-ಸತ್ವಗುಣ ರಜಸ್ತಮೋರೂಪಗಳಾದ ಗುಣಗಳ, ತ್ರಯ-ಮೂರಿನ, ಆತ್ಮನಃ-ಸ್ವರೂಪವುಳ್ಳ, ಬುದ್ಧೇಃ-ಬುದ್ಧಿಯ, ಧರ್ಮಃ-ಧರ್ಮವು, ಅನ್ಯೋನ್ಯತಃ-ಒಂದಕ್ಕೊಂದು, ವ್ಯಭಿಚಾರತಃ-ಇಲ್ಲದೇ ಇರೋಣದರದಶೆಯಿಂದ, ನಿತ್ಯೇ-ಉತ್ಪತ್ತಿ ನಾಶಗಳಿಲ್ಲದಿರುವ, ಪರೇ-ಗುಣತ್ರಯಾತೀತನಾದ, ಬ್ರಹ್ಮಣೇ-ವ್ಯಾಪಕಚೈತನ್ಯಸ್ವರೂಪನಾದ, ಕೇವಲೇ-ಸಂಬಂಧರಹಿತನಾದ, ಶುಭೇ-ಶುಭಕರವಾದ, ಅಸ್ಮಿನ್ - ಈ ಆತ್ಮನಲ್ಲಿ, (ಬುದ್ಧಿಧರ್ಮಾರೋಪಣೆಯು) ಮೃಷಾ-ಮಿಥ್ಯಾಭೂತವು (ಅಂದರೆ ಉತ್ಪತ್ತ್ಯಾದಿರಹಿತನಾದ ಆತ್ಮನಲ್ಲಿ ಬುದ್ಧಿವೃತ್ತಿಗಳಿಗೆ ಸ್ವಪ್ನಾದಿಭೇದದಿಂದ ಅನೇಕ ಭೇದಗಳು ಹುಟ್ಟುತವೆ, ಅವುಗಳು ಆತ್ಮನಲ್ಲಿ ಅಧ್ಯಾಸ ಮೂಲಕವಾಗಿ ಆರೋಪಿಸಲ್ಪಡುತ್ತವೆ ಹೊರ್ತು ವಾಸ್ತವಿಕವಾದವುಗಳಲ್ಲ) ||೨೧||

ಸಂಸಾರವು ತ್ಯಾಜವೆಂಬುವದಕ್ಕೆ ಅದಕ್ಕೆ ಮೂಲಕಾರಣವಾದ ಬುದ್ಧಿವೃತ್ತಿಯಂ ಹೇಳುತ್ತಾನೆ

ಮೂ॥ ದೇಹೇಂದ್ರಿಯಪ್ರಾಣಮನಶ್ಚಿದಾತ್ಮನಾಂಸಂಘಾದಜಸ್ರಂಪರಿವರ್ತತೇಧಿಯಃ । ವೃತ್ತಿ

ಸ್ತಮೋಮೂಲತಯಾಜ್ಞಲಕ್ಷಣಾಯಾವದ್ಭವೇತ್ತಾವದಸೌಭವೋದ್ಭವಃ ... ||೨೨||

ಟೀ॥ ದೇಹೇಂದ್ರಿಯಪ್ರಾಣಮನಶ್ಚಿದಾತ್ಮನಾಂ-ದೇಹ-ಶರೀರದ, ಇಂದ್ರಿಯ-ದಶೇಂದ್ರಿಯಗಳ, ಪ್ರಾಣ-ಪಂಚಪ್ರಾಣಗಳ, ಮನಃ-ಮನಸ್ಸಿನ, ಚಿದಾತ್ಮನಾಂ-ಚೈತನ್ಯಸ್ವರೂಪನಾದ ಆತ್ಮನ, ಸಂಘಾತ್-ಪರಸ್ಪರವಾಗಿ ಆರೋಪಿಸುವಿಕೆಯೇ ಮೂಲಕಾರಣಕವಾಗಿಉಳ್ಳ ಸಮಷ್ಟಿಯದೆಶೆಯಿಂದ, ಅಜಸ್ರಂ-ನಿರಂತರವು, ಧಿಯಃ-ಬುದ್ಧಿಯ, ವೃತ್ತಿಃ-ಪರಿಣಾಮವು, ತಮೋಮೂಲತಯಾ-ಅಜ್ಞಾನಮೂಲಕತ್ವದಿಂದ,ಅಜಹಲ್ಲಕ್ಷಣಾ-ತಿಳಿಯದಿರುವಿಕೆಗೆ ಸೂಚಕವಾಗಿ, ಯಾವತ್-ಎಷ್ಟುಪರ್ಯಂತವು, ಪರಿವರ್ತತೇ-

ಚಕ್ರಭ್ರಮಣದಂತೆ ತಿರುಗುತ್ತದೆಯೋ, ತಾವತ್-ಅಷ್ಟುಪರ್ಯಂತವು, ಅಸೌ-ಈ ಪರಿದೃಶ್ಯಮಾನವಾದ, ಭವೋದ್ಭವಃ-ಜನನಮರಣಪ್ರವಾಹರೂಪವಾದ ಸಂಸಾರೋತ್ಪತ್ತಿಯು, ಭವೇತ್-ಆಗುವದು (ಅಂದರೆ ಸಂಸಾರಕ್ಕೆ ಮೂಲಕಾರಣಗಳು ರಜಸ್ತಮೋಗುಣಂಗಳು, ಅದಕ್ಕೆ ಮುಖ್ಯಕಾರಣವು ಅಜ್ಞಾನವು, ಈ ಅಜ್ಞಾನದಿಂದ ಆತ್ಮನಲ್ಲಿ ದೇಹೇಂದ್ರಿಯಾದಿಧರ್ಮಂಗಳು ಆರೋಪಿಸಲ್ಪಡುತ್ತವೆ, ಆದಕಾರಣ ಮೊದಲು ತತ್ತ್ವಮಸೀತ್ಯಾದಿ ಮಹಾವಾಕ್ಯಂಗಳ ಅರ್ಥವಿಚಾರವಂಗೈದು ಶ್ರವಣಮನನನಿದಿಧ್ಯಾಸನಗಳಿಂದ ತತ್ವಜ್ಞಾನವಂ ದೃಢಪಡಿಸಿಗೊಂಡರೆ ಆ ಜ್ಞಾನನಿವೃತ್ತಿಯಾಗುತ್ತದೆ, ಅದರಿಂದ ತನ್ಮೂಲಕವಾದ ಸಂಸಾರವು ಬಿಡಲ್ಪಡುತ್ತದೆಂದು ಭಾವವು ... ॥೨೩॥

ಮೂ॥ ನೇತಿಪ್ರಮಾಣೇನನಿರಾಕೃತಾಖಿಲೋಹೃದಾಸಮಾಸ್ವಾದಿತಚಿದ್ಘನಾಮೃತಃ । ತ್ಯಜೇದಶೇ
ಷಂಜಗದಾತ್ತಸದ್ರಸಂಪೀತ್ವಾಯಥಾಂಭಃಪ್ರಜಹಾತಿತತ್ಫಲಂ ... ... ॥೨೪॥

ಟೀ॥ ನೇತಿ-ಬ್ರಹ್ಮನು ಉಪಾಸನಯೋಗ್ಯವಾದ ದೃಶ್ಯವಸ್ತುವಲ್ಲವೆಂಬ,ಪ್ರಮಾಣೇನ-ಪ್ರಮಾಣಭೂತವಾದ ಶ್ರುತಿವಾಕ್ಯಗಳಿಂದ, ನಿರಾಕೃತಾಖಿಲಃ- ನಿರಾಕೃತ-ಮಿಥ್ಯಾಭೂತವಾದ್ದೆಂದು ನಿಶ್ಚಯಿಸಲ್ಪಟ್ಟ, ಅಖಿಲಃ-ಸಮಸ್ತಜಗತ್ತುಳ್ಳವನಾಗಿ,ಹೃದಾ- ಸತ್ವಪ್ರಧಾನವಾದಮನದಿಂದ, ಸಮಾಸ್ವಾದಿತಚಿದ್ಘನಾಮೃತಃ-ಸಮಾಸ್ವಾದಿತ-ಚನ್ನಾಗಿಪಾನಮಾಡಲ್ಪಟ್ಟ, ಚಿದ್ಘನ-ಚಿತ್ಸ್ವರೂಪನಾದಬ್ರಹ್ಮನೆಂಬ,ಅಮೃತಃ-ಅಮೃತವುಳ್ಳವನಾಗಿ, ಆತ್ತಸದ್ರಸಂ-ಆತ್ತ-ಗ್ರಹಿಸಲ್ಪಟ್ಟ, ಸದ್ರಸಂ-ಒಳ್ಳೇಮಾಧುರ್ಯವುಳ್ಳ,ಅಂಭಃ-ನಾಳಿಕೇರೋದಕವನ್ನು, ಪೀತ್ವಾ-ಪಾನಮಾಡಿ, ತತ್ಫಲಂ-ಆ ತೆಂಗಿನಕಾಯಿಯನ್ನು, ಯಥಾ-ಹ್ಯಾಗೆ, ತ್ಯಜತಿ-ಬಿಸಾಡುತ್ತಾರೋ, ತಥಾ- ಹ್ಯಾಗೆ,ಅಶೇಷಂ-ಸಮಸ್ತವಾದ, ಜಗತ್-ದೃಶ್ಯಮಾದಪದಾರ್ಥವನ್ನು, ತ್ಯಜೇತ್-ಬಿಡಬೇಕು,ಅಂದರೆ ಬ್ರಹ್ಮಜ್ಞಾನಿಯಾದವನು ಜಗವನ್ನು ಮಿಥ್ಯಾಭೂತವೆಂದರಿತು,ಬ್ರಹ್ಮಾನಂದಾಮೃತಪಾನವಂಗೈದು ತೃಪ್ತನಾಗಿ, ದಾಹವುಳ್ಳಪುರುಷನು ಎಳೆನೀರುಗಾಯನ್ನು ತಂದು ಅದರಲ್ಲಿರ್ಪ ರಸ ಪಾನವಂಗೈದು ತೃಪ್ತಿಯಂಪಡೆದು ಆ ಫಲವಂ ಬಿಸಾಡುವಂತೆ,ಈ ಜಗವನ್ನೆಲ್ಲ ನಶ್ವರವಾದದ್ದೆಂದು ತಿಳಿದು ಉಪೇಕ್ಷೆಯಂಗೈಯಬೇಕೆಂದು ಭಾವವು ... ... ... ॥೨೪॥

ಇತರ ಪದಾರ್ಥಗಳೆಲ್ಲ ನಿತ್ಯವಾದವುಗಳಲ್ಲ ವಾದ್ದರಿಂದಾ ಅವುಗಳಲ್ಲಿ ವೈರಾಗ್ಯವು ಪುಟ್ಟುವದಕ್ಕೋಸುಗ ಆತ್ಮಪದಾರ್ಥ ನಿತ್ಯವೆಂದು ಪೇಳುತ್ತಾನೆ

ಮೂ॥ ಕದಾಚಿದಾತ್ಮಾನಮೃತೋನಜಾಯತೇನಕ್ಷೀಯತೇನಾಪಿವಿವರ್ಧತೇನವಃ । ನಿರಸ್ತಸ
ರ್ವಾತಿಶಯಸ್ಸ್ವಭಾತ್ಮಕಸ್ಸ್ವಯಂಪ್ರಭಸ್ಸರ್ವಗತೋಯಮದ್ವಯಃ ... ॥೨೫॥

ಟೀ॥ ಅಯಮಾತ್ಮಾ-ಈ ಆತ್ಮನು, ಕದಾಚಿತ್-ಯಾವಾಗಲೂ, ಮೃತಃ-ಮರಣಧರ್ಮವುಳ್ಳವನು, ನ-ಅಲ್ಲ, ನಜಾಯತೇ-ಹುಟ್ಟುವನಲ್ಲ, ನಕ್ಷೀಯತೇ-ಕ್ಷಯಿಸುವನ

ಲ್ಲ, ನಾಪಿವರ್ಧತೆ-ವೃದ್ಧಿ ಹೊಂದುವನೂ ಅಲ್ಲ, ಅನವಃ-ನೂತನವಲ್ಲ, ನಿರಸ್ತಸರ್ವಾತಿಶಯಃ-ನಿರಸ್ತ-ಹೋಗಲಾಡಿಸಲ್ಪಟ್ಟ, ಸರ್ವ-ಸಮಸ್ತವಾದ ದೇಹೇಂದ್ರಿಯಾದಿಗಳ, ಅತಿಶಯಃ-ಮಹತ್ವಮುಳ್ಳವನು, ಸುಖಾತ್ಮಕಃ-ಆನಂದಸ್ವರೂಪನು, ಸ್ವಯಂಪ್ರಭಃ-ಸ್ವಪ್ರಕಾಶನು, ಸರ್ವಗತಃ-ಸರ್ವವ್ಯಾಪಕನು (ಆದ್ದರಿಂದ) ಅಯಂ-ಈ ಪ್ರತ್ಯಗಾತ್ಮನು, ಅದ್ವಯಃ-ಅದ್ವಿತೀಯ ಬ್ರಹ್ಮಸ್ವರೂಪನು (ಅಂದರೆ ಈ ಜೀವಾತ್ಮನು ಷಡ್ಭಾವವಿಕಾರರಹಿತನು ಅವುಗಳು ಯಾವವಂದರೆ, ಇಧಾನೆ ಹುಟ್ಟುತ್ತಾನೆ ಪರಿಣಾಮವನ್ನು ಹೊಂದುತ್ತಾನೆ, ವೃದ್ಧಿಯನ್ನು ಪಡೆಯುತ್ತಾನೆ, ಕ್ಷಯಿಸುತ್ತಾನೆ ನಾಶವಾಗುತ್ತಾನೆ ಎಂಬವುಗಳು ೬, ದೇಹಧರ್ಮಗಳೆ ಹೊರ್ತು ಆತ್ಮಧರ್ಮವಲ್ಲ, ಬ್ರಹ್ಮನು ಹ್ಯಾಗೆ ಸ್ವಯಂಪ್ರಕಾಶನೋ ಹಾಗೆ ಜೀವನು ಸ್ವಯಂಪ್ರಕಾಶನು, ಆದರೆ ಅಜ್ಞಾನದಿಂದ ಆವರಿಸಲ್ಪಟ್ಟವನಾದ ಪ್ರಯುಕ್ತ ಅಜ್ಞತ್ವೇನ ವ್ಯವಹಾರವೇ ಹೊರ್ತು ಮತ್ತೊಂದಲ್ಲವಾದ್ದರಿಂದ ಅದ್ವಿತೀಯ ಬ್ರಹ್ಮಸ್ವರೂಪನೆಂದು ಭಾವವು) ... ... ... ॥೩೫॥

ಹಾಗಾದೊಡೆ ಇಂಥಾ ಬ್ರಹ್ಮಸ್ವರೂಪನಾದ ಜೀವನಲ್ಲಿ ಜನನ ಮರಣಪ್ರವಾಹರೂಪವಾದ ಸಂಸಾರವೂ ಆದರ ದುಃಖಾನುಭವವೂ ಹ್ಯಾಗೆ ತೋರುತ್ತದೆಂದು ಶಂಕಿಸಿ ಸಮಾಧಾನವಂ ಪೇಳುತ್ತಾನೆ

ಮೂ॥ ಏವಂವಿಧೆಜ್ಞಾನಮಯೆಸುಖಾತ್ಮಕೆಕಥಂಭವೋದುಃಖಮಯಃಪ್ರತೀಯತೆ । ಅ
ಜ್ಞಾನತೊಧ್ಯಾಸವಶಾತ್ಪ್ರಕಾಶತೆಜ್ಞಾನೆವಿಲೀಯತೆವಿರೊಧತಃಕ್ಷಣಾತ್ ... ॥೩೬॥

ಟೀ॥ ದುಃಖಮಯಃ-ದುಃಖಪ್ರಚುರವಾದ, ಭವಃ-ಸಂಸಾರವು, ಏವಂವಿಧೆ-ಇಂಥಾ ಷಡ್ಭಾವವಿಕಾರರಹಿತನಾದ, ಜ್ಞಾನಮಯೆ-ಶುದ್ಧಚೈತನ್ಯಸ್ವರೂಪನಾದ, ಸುಖಾತ್ಮಕೆ-ಆನಂದಾತ್ಮಕನಾದ ಆತ್ಮನಲ್ಲಿ, ಕಥಂ-ಹ್ಯಾಗೆ, ಪ್ರತೀಯತೆ-ತೋರುತ್ತದೆ, (ಎಂದು ಶಂಕಿಸಿ) ಅಜ್ಞಾನತಃ-ಅಜ್ಞಾನರೂಪವಾದ ಉಪಾಧಿಯದೆಸೆಯಿಂದ, ಆರೋಪಿಸೋಣದರ ದೆಸೆಯಿಂದ, ಪ್ರಕಾಶತೆ-ತೋರುತ್ತದೆ, ಜ್ಞಾನೆ-ತತ್ವಜ್ಞಾನವು ಪುಟ್ಟಿದಂಥಾದ್ದಾಗುತಿರಲಿಕಾಗಿ, ವಿರೋಧತಃ-ವಿರೋಧದದೆಸೆಯಿಂದ, ಕ್ಷಣಾತ್-ಕ್ಷಣಕಾಲದಲ್ಲಿ, ವಿಲೀಯತೆ-ಲಯವಂಪೊಂದುವದು (ಅಂದರೆ ಇಂಥಾ ಸಚ್ಚಿದಾನಂದಾತ್ಮಕನಾದ ಜೀವಾತ್ಮನು ಪರಬ್ರಹ್ಮಸ್ವರೂಪನಾಗಿದ್ದರೆ, ಆತನು ಹುಟ್ಟುತ್ತಾನೆ ಸಾಯುತ್ತಾನೆ ಎಂಬ ಸಂಸಾರವ್ಯವಹಾರವು ಹ್ಯಾಗೆ ಪ್ರಾಪ್ತವಾಗುವದೆಂದು ಶಂಕಿಸಿ ಉತ್ತರವಂ ಪೇಳುತ್ತಾನೆ, ಅದೇನಂದರೆ ರಜ್ಜುವಿನಲ್ಲಿ ಸರ್ಪಭ್ರಾಂತಿಯುಂಟಾಗುವಂತೆ ಅಜ್ಞಾನದಿಂದ ಸುಖದುಃಖಾದಿಗಳು ಆತ್ಮನಲ್ಲಿ ಆರೋಪಿಸಲ್ಪಡುತ್ತವೆ, ಅದರಂತೆ ನಾನು ಸುಖವಂತನು ದುಃಖವಂತನು ಎಂಬ ಅನುಭವವು ಭ್ರಾಂತಿಯಿಂದ ಹುಟ್ಟುತ್ತದೆ, ತತ್ವಜ್ಞಾನವು ಸಂಭವಿಸಲೂ ಈ ಅಜ್ಞಾನವು ಸ್ವಯಮೇವ ಲಯವಾಗುತ್ತದೆ, ಅಜ್ಞಾನನಾಶವಿಂ ತತ್ಪ್ರಯುಕ್ತವಾದ ಸುಖದುಃಖಾದ್ಯನುಭವವು ಸ್ವಯಮೇವ ನಿವೃತ್ತವಾಗುತ್ತದೆಂದು ಭಾವವು ॥೩೬॥

ಆ ಅಧ್ಯಾಸಲಕ್ಷಣವನ್ನೆ ಪೇಳುತ್ತಾನೆ

ಮೂ॥ ಯದನ್ಯದನ್ಯತ್ರವಿಭಾವ್ಯತೇಭ್ರಮಾದಧ್ಯಾಸಇತ್ಯಾಹುರಮುಂವಿಪಶ್ಚಿತಃ । ಅಸರ್ಪ
ಭೂತೇಹಿವಿಭಾವನಂಯಥಾರಜ್ಜ್ವಾದಿಕೇತದ್ವದಪೀಶ್ವರೇಜಗತ್ ... ॥೩೭॥

ಟೀ॥ ಯತ್-ಯಾವಪದಾರ್ಥವು, ಅನ್ಯತ್ರ-ಮತ್ತೊಂದುಪದಾರ್ಥದಲ್ಲಿ, ಭ್ರಮಾತ್-ಭ್ರಾಂತಿಯದೆಸೆಯಿಂದ, ವಿಭಾವ್ಯತೇ-ತಿಳಿಯಲ್ಪಡುತ್ತದೋ, ವಿಪಶ್ಚಿತಃ-ವಿದ್ವಾಂಸರು, ಅಮುಂ-ಈ ಭ್ರಮವಿಶೇಷವನ್ನು, ಅಧ್ಯಾಸಇತಿ-ಅಧ್ಯಾಸವೆಂದು, ಆಹುಃ-ಪೇಳುತ್ತಾರೆ, ಅಸರ್ಪಭೂತೇ-ಸರ್ಪವಲ್ಲದಿರುವ, ರಜ್ಜ್ವಾದಿಕೇ-ಹಗ್ಗವೇಮೊದಲಾಗುಳ್ಳ ಪದಾರ್ಥದಲ್ಲಿ, ಯಥಾ-ಹ್ಯಾಗೆ, ವಿಭಾವನಂ-ಸರ್ಪವೆಂಬ ಭ್ರಾಂತಿಯೋ, ತದ್ವತ್-ಹಾಗೆ, ಈಶ್ವರೇ-ಮಾಯಾವಚ್ಛಿನ್ನಚೈತನ್ಯರೂಪನಾದ ಆತ್ಮನಲ್ಲಿ, ಜಗತ್-ಜಗತ್ತು,ವಿಭಾವ್ಯತೇಹಿ-ಆರೋಪಿಸಲ್ಪಡುತ್ತದಷ್ಟೆ, (ಅಂದರೆ ಒಂದುಪದಾರ್ಥವಂಕಂಡು ಮತ್ತೊಂದನ್ನಾಗಿ ತಿಳಿದುಗೊಳ್ಳುವಿಕೆಯೆ ಅಧ್ಯಾಸಲಕ್ಷಣವೆಂದು ಪಂಡಿತರು ನುಡಿಯುತ್ತಾರೆ, ಅದು ಹ್ಯಾಗಂದರೆ ಹಗ್ಗವಂಕಂಡು ಸರ್ಪವೆಂದು ಭ್ರಮಿಸಿ ಭಯಕಂಪಾದಿಗಳಂ ಪೊಂದುವಂತೆ ಬ್ರಹ್ಮನಲ್ಲಿ ಜಗವನ್ನಾರೋಪಿಸಿ ಸುಖದುಃಖಾದಿಗಳನ್ನನುಭವಿಸುತ್ತಾರೆಂದು ಭಾವವು ... ... ... ॥೩೭॥

ಆತ್ಮನಲ್ಲಿ ಜಗದಾರೋಪಣೆಯಂಗೈಯುವದಕ್ಕೆ ಏನುಕಾರಣವೆಂದರೆ

ಮೂ॥ ವಿಕಲ್ಪಮಾಯಾರಹಿತೇಚಿದಾತ್ಮಕೇಹಂಕಾರಏಷಪ್ರಥಮಃಪ್ರಕಲ್ಪಿತಃ । ಅಧ್ಯಾಸ
ಏವಾತ್ಮನಿಸರ್ವಕಾರಣೇನಿರಾಮಯೇಬ್ರಹ್ಮಣಿಕೇವಲೇಪರೇ ... ॥೩೮॥

ಟೀ॥ ವಿಕಲ್ಪಮಾಯಾರಹಿತೇ-ವಿಕಲ್ಪ-ನಾನಾವಿಧವಾದ, ಮಾಯಾ-ಮಾಯಾಶಕ್ತಿಗಳಿಂದ, ರಹಿತೇ-ಸಂಬಂಧವಿಲ್ಲದಿರುವ,ಚಿದಾತ್ಮಕೇ-ಚಿತ್ಸ್ವರೂಪನಾದ, ಸರ್ವಕಾರಣೇ-ಸಮಸ್ತಜಗತ್ತಿಗೂ ಕರ್ತೃಭೂತನಾದ, ನಿರಾಮಯೇ-ದುಃಖಸಂಬಂಧವಿಲ್ಲದಿರುವ,ಕೇವಲೇ-ಸರ್ವವಿಕಾರ ಶೂನ್ಯನಾದ, ಪರೇಬ್ರಹ್ಮಣಿ-ಪರಬ್ರಹ್ಮಸ್ವರೂಪನಾದ, ಆತ್ಮನಿ-ಆತ್ಮನಲ್ಲಿ, ಪ್ರಥಮಃ-ಮೊದಲನೆಯದಾದ, ಏಷ ಅಹಂಕಾರಃ-ಈ ನಾನೆಂಬ ಪ್ರತ್ಯಯವು, ಕಲ್ಪಿತಃ-ಉಂಟುಮಾಡಲ್ಪಟ್ಟಿತು, ಸಏವ-ಅದೆ, ಅಧ್ಯಾಸಃ-ಅಧ್ಯಾಸವು (ಅಂದರೆ ಈ ವಿಶೇಷಣ ವಿಶಿಷ್ಟನಾದ ಬ್ರಹ್ಮನಲ್ಲಿ ಪ್ರಥಮತಃ ಅಹಂ ಎಂಬ ಬುದ್ಧಿ ಪುಟ್ಟಿ ಅದೇ ಅಧ್ಯಾಸರೂಪವಾಗಿ ಸರ್ವಸಂಸಾರಕ್ಕೂ ಕಾರಣವಾಯಿತು) ॥೩೮॥

ಮೂ॥ ಇಚ್ಛಾದಿರಾಗಾದಿಸುಖಾದಿಧರ್ಮಿಕಾಸ್ಸದಾಧಿಯಸ್ಸಂಸೃತಿಹೇತವಃಪರೇ । ಯಸ್ಮಾ
ತ್ಪ್ರಸುಪ್ತೌತದಭಾವತಃಪರಃಸುಖಸ್ವರೂಪೇಣವಿಭಾವ್ಯತೇಹಿನಃ ... ॥೩೯॥

ಟೀ॥ ಇಚ್ಛಾದಿ-ಅಪೇಕ್ಷೋಪೇಕ್ಷೆಗಳೂ, ರಾಗಾದಿ-ರಾಗದ್ವೇಷಗಳೂ, ಸುಖಾದಿ-ಸುಖದುಃಖಗಳೆ,ಧರ್ಮಿಕಾಃ-ಧರ್ಮಗಳಾಗಿಉಳ್ಳ,ಧಿಯಃಏವ-ಬುದ್ಧಿಗಳೇ, ಸದಾ-ನಿರಂತರವು, ಪರೆ-ಪರಬ್ರಹ್ಮನಲ್ಲಿ, ಸಂಸೃತಿಹೇತವಃ-ಸಂಸಾರಕ್ಕೆ ಕಾರಣಗಳು, ಯಸ್ಮಾತ್-ಯಾವಕಾರಣದ ದೆಶೆಯಿಂದ, ಸುಷುಪ್ತೌ-ಗಾಢನಿದ್ರಾಸಮಯದಲ್ಲಿ, ತದಭಾವತಃ-ಇಚೊಪೇಕ್ಷಾದಿಗಳಿಲ್ಲದಿರೋಣದರದೆಶೆಯಿಂದ, ಪರಃ-ಪರಬ್ರಹ್ಮನು, ನಃ-ನಮ್ಮಗಳಿಂದ, ಸುಖಸ್ವರೂಪೇಣ-ಸುಖಸ್ವರೂಪನಾಗಿ, ವಿಭಾವ್ಯತೇಹಿ-ನಿಶ್ಚಯಿಸಲ್ಪಡುತ್ತದೆಯೋ, (ಅಂದರೆ ಆತ್ಮನಿಗೆ ಜಾಗ್ರತ್ ಸ್ವಪ್ನಸುಪ್ತಿಗಳೆಂಬ ಅವಸ್ಥಾತ್ರಯವು ಬುದ್ಧಿಕಲ್ಪಿತಗಳು, ಅಪೇಕ್ಷೆ, ಉಪೇಕ್ಷೆ, ರಾಗ, ದ್ವೇಷ, ಸುಖದುಃಖಗಳೆಂಬವು ಬುದ್ಧಿಧರ್ಮಗಳು, ಇವುಗಳೆ ಸಂಸಾರಕ್ಕೆ ಹೇತುಗಳು, ಆದ್ದರಿಂದ ಪರಮಾತ್ಮನಲ್ಲಿ ಸಂಸಾರವನ್ನಾರೋಪಿಸುವದಕ್ಕೆ ಇಂಥಾ ಬುದ್ಧಿಯೇ ಕಾರಣವು, ಇದಿದ್ದರೇ ಸಂಸಾರವುಂಟಾಗುತ್ತೆ, ಈ ಮತಿಯಿಲ್ಲದಿದ್ದರೆ ಸಂಸಾರವಿಲ್ಲವೆಂದು ಅನ್ವಯ ವ್ಯತಿರೇಕಿಗಳನ್ನು ತೋರಿಸಿ, ಸುಷುಪ್ತಿಕಾಲದಲ್ಲಿ ಸುಖದುಃಖಾದಿಗಳಿಲ್ಲವಾದ್ದರಿಂದ ಶುದ್ಧ ಸುಖಸ್ವರೂಪನಾಗಿ ಆತ್ಮನು ಪರಬ್ರಹ್ಮನಾಗಿ ತೋರುತ್ತಾನೆಂದು ನಮಿಗೆಲ್ಲ ಅನುಭವಸಿದ್ಧವಾಗಿಧೆಂದು ತಾತ್ಪರ್ಯವು. ... ... ||೩೯||

ಮತ್ತೂ ಜೀವೇಶ್ವರ ವಾಚಕಂಗಳಾದ (ತತ್-ತ್ವಂ) ಪದಗಳ ಅರ್ಥವಂ ನಿರೂಪಿಸುತ್ತಾನೆ,—

ಮೂ॥ ಅನಾದ್ಯವಿದ್ಯೋದ್ಭವಬುದ್ಧಿಬಿಂಬಿತೋಜೀವಃಪ್ರಕಾಶೋಽಯಮಿತೀರ್ಯತೆಚಿತಃ ।ಆ

ತ್ಮಾಧಿಯಸ್ಸಾಕ್ಷಿತಯಾಪೃಥಕ್ಸ್ಥಿತೋಬುದ್ಧ್ಯಾಪರಿಚ್ಛಿನ್ನಪರಸ್ಸಏವಹಿ ... ||೪೦||

ಟೀ॥ ಅನಾದ್ಯವಿದ್ಯೋದ್ಭವಬುದ್ಧಿಬಿಂಬಿತಃ-ಅನಾದಿ-ಉತ್ಪತ್ತಿಶೂನ್ಯವಾಗಿ ಬಹುಕಾಲದಿಂದ ಪ್ರಾಪ್ತವಾದ,ಅವಿದ್ಯಾ-ಮಲಿನಸತ್ವಪ್ರಧಾನವಾದ,ಮಾಯಿಯದೆಶೆಯಿಂದ, ಉದ್ಭವ-ಉತ್ಪನ್ನವಾದ, ಬುದ್ಧಿ-ಅಂತಃಕರಣದಲ್ಲಿ, ಬಿಂಬಿತಃ-ಪ್ರತಿಫಲಿಸಲ್ಪಟ್ಟ, ಚಿತಃ-ಶುದ್ಧಚೈತನ್ಯದ, ಅಯಂಪ್ರಕಾಶಃ-ಈ ತೋರೋಣವು, ಜೀವಇತಿ-ಜೀವನೆಂದು, ಈರ್ಯತೆ-ಪೇಳಲ್ಪಡುತ್ತೆ, ಆತ್ಮಾ-ಪರಮಾತ್ಮನು, ಧಿಯಃ-ಅಂತಃಕರಣಕ್ಕೆ, ಸಾಕ್ಷಿತಯಾ-ಸಾಕ್ಷಿಯಾಗಿರೋಣದರಿಂದ, ಪೃಥಕ್-ಪ್ರತ್ಯೇಕವಾಗಿ,ಸ್ಥಿತಃ-ತೋರುವನಾಗಿ, ಬುದ್ಧ್ಯಾ-ಅಂತಃಕರಣದಿಂದ, ಅಪರಿಚ್ಛಿನ್ನ ಪರಃ-ಪರಿಚ್ಛೇದವಿಲ್ಲದವನಾದಕಾರಣ, ಪರಃ-ತದ್ವಿಲಕ್ಷಣನಾಗಿ,ತೋರುವನು, ಸಏವಹಿ-ಆತನಷ್ಟೆ, (ಅಂದರೆ ಶುದ್ಧಚೈತನ್ಯ ಸ್ವರೂಪನಾದ ಪರಮಾತ್ಮನು, ಪರಮಾರ್ಥತಃ-ಓರ್ವನಾದರೂ, ಅನಾದಿಯಾಗಿರ್ಪ ಮಾಯಾಪರಿಣಾಮ ರೂಪವಾದ ಅಂತಃಕರಣದಲ್ಲಿ, ಸೂರ್ಯಬಿಂಬವು ಜಲದಲ್ಲಿ ಪ್ರತಿಫಲಿಸಿದಂತೆ ಪ್ರತಿಫಲಿಸಿ, ಜೀವನೆಂದು ಪೇಳಲ್ಪಟ್ಟವನಾಗಿ, ಜಲನಾಶವಾದೊಡೆ ಪ್ರತಿಬಿಂಬವು ಕಾಣಿಸದೆ ಸೂರ್ಯಬಿಂಬವೆ ಹ್ಯಾಗೆ ಕಾಣುವದೊ ಹಾಗೆ ಅಂತಃಕರಣ ನಾಶವಾಗಲೂ ಜೀವಭಾವವು ತೋರದೆ ಪರಮಾತ್ಮನಾಗಿಯೇ ತೋರುವನೆಂದು ಭಾವವು. ... ... ... ||೪೦

ಬುದ್ಧಿಗೂ ಆತ್ಮನಿಗೂ ಅಭೇದ ಭ್ರಾಂತಿಯಿಂದ ಬುದ್ಧಿ ಧರ್ಮಗಳು ಆತ್ಮನಲ್ಲಿ ತೋರುತವೆ, ಆತ್ಮಧರ್ಮಗಳು ಬುದ್ಧಿಯಲ್ಲಿ ತೋರುತ್ತವೆಂದು ನಿರೂಪಿಸುವನದೆಂತೆನೆ.

ಮೂ॥ ಚಿದ್ಬಿಂಬಸಾಕ್ಷಾತ್ಮಧಿಯಾಂಪ್ರಸಂಗತಸ್ತ್ವೇಕತ್ರವಾಸಾದನಲಾಕ್ತಲೋಹವತ್ । ಅ
ನ್ಯೋನ್ಯಮಧ್ಯಾಸವಶಾತ್ಪ್ರತೀಯತೇಜಡಾಜಡತ್ವಂಚಚಿದಾತ್ಮಚೇತಸೋಃ ... ॥೪೧॥

ಟೀ॥ ಚಿದಾತ್ಮಚೇತಸೋಃ-ಚಿತ್-ಚಿತ್ಸ್ವರೂಪನಾದ, ಆತ್ಮ-ಆತ್ಮನಿಗೂ, ಚೇತಸೋಃ-ಅಂತಃಕರಣಕ್ಕೂ, ಅನ್ಯೋನ್ಯಂ-ಪರಸ್ಪರವಾಗಿ, ಅಧ್ಯಾಸವಶಾತ್-ಇದೆ ಅದು ಅದೆ ಇದು ಎಂಬ ತಾದಾತ್ಮ್ಯಭ್ರಾಂತಿಯ ದೆಶೆಯಿಂದ, ಜಡಾಜಡತ್ವಂಚ-ಜಡನಾಗದಿರುವ ಚೇತನನಲ್ಲಿ ಜಡತ್ವವೂ ಚೇತನನಲ್ಲದಿರುವ ಜಡದಲ್ಲಿ ಚೇತನತ್ವವೂ, ಚಿದ್ಬಿಂಬ ಸಾಕ್ಷಾತ್ಮಧಿಯಾ-ಚಿತ್-ಶುದ್ಧಚೈತನ್ಯವೆ, ಬಿಂಬ-ಬಿಂಬವಾಗಿ ಉಳ್ಳ ಚಿದಾಭಾಸದ, ಸಾಕ್ಷ-ಇಂದ್ರಿಯಗಳಿಂದೊಡಗೂಡಿದ, ಆತ್ಮ-ಮನಸ್ಸಿನ, ಧಿಯಾಂ-ಅಂತಃಕರಣದ, ಪ್ರಸಂಗತಃ-ಅತಿ ಸಾಮೀಪ್ಯದ ದೆಶೆಯಿಂದ, ಏಕತ್ರ-ಒಂದುಗಡೆ, ವಾಸಾತ್-ಇರೋಣದರ ದೆಶೆಯಿಂದ, ಅನಲಾಕ್ತಲೋಹವತ್-ಅನಲ - ಅಗ್ನಿಯಿಂದ, ಅಕ್ತ-ತಪ್ತವಾದ, ಲೋಹವತ್-ಅಯಃಪಿಂಡದಂತೆ, ಪ್ರತೀಯತೆ-ತೋರುವಂಥಾದ್ದಾಗುತದೆ(ಅಂದರೆಚೇತನವು ಅಚೇತನವು ಎಂದು ಎರಡು ಪದಾರ್ಥಗಳು, ಅಚೇತನವೆಂದರೆ ಜಡ, ಚೇತನವೆಂದರೆಚಿತ್ತು-ಅವೆ ಆತ್ಮನೆಂದು ಹೇಳಲ್ಪಡುತ್ತೆ, ಇವುಗಳಲ್ಲಿ ಜಡದಲ್ಲಿ ಆತ್ಮಧರ್ಮವೂ ಆತ್ಮನಲ್ಲಿ ಜಡತ್ವವೂ ಈ ಮುಂತಾದ ಧರ್ಮಂಗಳು ಪರಸ್ಪರವಾಗಿ, ಆತ್ಮನೆ ಅಂತಃಕರಣವು, ಅಂತಃಕರಣವೆ ಆತ್ಮನೆಂಬ ತಾದಾತ್ಮ್ಯಭ್ರಾಂತಿಯಿಂದ ತೋರುತ್ತೆ. ಇದು ಚಿದಾಭಾಸವು ಮನವು ಅಂತಃಕರಣವು ಇವುಗಳ ಸಂಬಂಧದಿಂದ ಹುಟ್ಟುತ್ತದೆ, ಅದು ಹ್ಯಾಗಂದರೆ ಕಾಸಲ್ಪಟ್ಟ ಕಬ್ಬಿಣದಲ್ಲಿ ದಾಹಕತ್ವರೂಪವಾದ ಅಗ್ನಿಧರ್ಮವೂ, ಅಯಃಪಿಂಡದಲ್ಲಿರುವ ವರ್ತುಲತ್ವಾದಿ ಧರ್ಮಗಳು ಅಗ್ನಿಯಲ್ಲಿಯೂ ಹ್ಯಾಗೆ ತೋರುತ್ತವೆಯೋ ಅದರಂತೆ ಇವುಗಳು ತೋರುವವೆಂದು ಭಾವವು.) ... ... ... ॥೪೧॥

ಹೇಳಲ್ಪಟ್ಟ ಅರ್ಥವನ್ನೇ ಪುನಃ ಹೇಳುತ್ತಾನೆ.

ಮೂ॥ ಗುರೋಸ್ಸಕಾಶಾದಪಿವೇದವಾಕ್ಯತಸ್ಸಂಜಾತವಿದ್ಯಾನುಭವೋನಿರೀಕ್ಷ್ಯತಂ ।ಸ್ವಾತ್ಮಾ
ನಮಾತ್ಮಸ್ಥಮುಪಾಧಿವರ್ಜಿತಂತ್ಯಜೇದಶೇಷಂಜಡಮಾತ್ಮಗೋಚರಂ ... ॥೪೨॥

ಟೀ॥ ಗುರೋಃ-ಗುರುವಿನ, ಸಕಾಶಾತ್-ಸನ್ನಿಧಾನದ ದೆಶೆಯಿಂದ (ಅಂದರೆ ಗುರೂಪದೇಶದ ದೆಶೆಯಿಂದಲೂ) ವೇದವಾಕ್ಯತಃ-ವೇದವಾಕ್ಯದ ದೆಶೆಯಿಂದಲೂ,) ಅಂದರೆ ಗುರುವಿನಿಂದ ಉಪದೇಶ ಮಾಡಲ್ಪಟ್ಟ ತತ್ತ್ವಮಸ್ಯಾದಿ ವಾಕ್ಯಗಳ ಅರ್ಥಶ್ರವಣದಿಂದ) ಸಂಜಾತವಿದ್ಯಾನುಭವಃ-ಸಂಜಾತ-ಹುಟ್ಟಿದ, ವಿದ್ಯಾ-ವಿದ್ಯಾಸ್ವರೂಪನಾದ ಆತ್ಮನ, ಅನುಭವಃ-ಅನುಭೂತಿಯುಳ್ಳವನಾಗಿ, ತಂ-ಆ ಚಿದಾತ್ಮಸ್ವರೂಪನಾದ, ಆತ್ಮಸ್ಥಂ-ಹೃದಯದಲ್ಲಿರುವ, ಸ್ವಾತ್ಮಾನಂ-ತನ್ನ ಆತ್ಮನನ್ನು, ಉಪಾಧಿವರ್ಜಿತಂ-ತನಗೆ ಉಪಾಧಿಭೂತವಾದ ಅಂತಃಕರಣ ಧರ್ಮಗಳಿಂದ ಬಿಡಲ್ಪಟ್ಟವನನ್ನಾಗಿ, ನಿರೀಕ್ಷ್ಯ-ಅಪರೋಕ್ಷಾನುಭೂತಿಯಿಂದ ನೋಡಿ (ಅಂದರೆ ಸಾಕ್ಷಾದನುಭವದಿಂದ ನೋಡಿ) ಆತ್ಮಗೋಚರಂ- ಅ

ತ್ಮ-ಬುದ್ಧಿಗೆ, ಗೋಚರಂ-ಸ್ಪಷ್ಟವಾದ, ಜಡಂ-ಜಡವಾದ ಜಗವನ್ನು, ತ್ಯಜೇತ್-ಬಿಡತಕ್ಕದ್ದು (ಅಂದರೆ ಆತ್ಮನು ಪಾರಮಾರ್ಥಿಕ ಸತ್ತಾಸ್ವರೂಪನಾದ್ದರಿಂದ ಅದನ್ನೇ ಸತ್ಯವೆಂದರಿತು ಅತನೆ ನಾನೆಂದು ಭಾವಿಸಿ, ಜಡಭೂತವಾದ ಪ್ರಪಂಚವಂ ಮಿಥ್ಯಾಭೂತವಾದ್ದೆಂದೆಣಿಸಿ, ಆ ವಿಷಯವಾಗಿ ಉಪೇಕ್ಷಾ ಬುದ್ಧಿಯುಳ್ಳವನಾಗಿರಬೇಕೆಂದು ಭಾವವು. ||೪೦||

ಜ್ಞಾನಿಯಾದವನು ತಿಳಿಯತಕ್ಕ ನಿರೂಪಾಧಿಕ ಸ್ವರೂಪವನ್ನು ಎರಡು ಶ್ಲೋಕಗಳಿಂದ ಪೇಳುತ್ತಾನೆ,—

ಮೂ॥ ಪ್ರಕಾಶರೂಪೋಹಮಜೋಹಮದ್ವಯೊಸಕೃದ್ವಿಭಾತೋಹಮತೀವನಿರ್ಮಲಃ । ವಿ
ಶುದ್ಧವಿಜ್ಞಾನಘನೊನಿರಾಮಯಸ್ಸಂಪೂರ್ಣಆನಂದಮಯೋಹಮಕ್ರಿಯಃ ॥ ಸದೈವಮುಕ್ತೊ
ಹಮಚಿಂತ್ಯಶಕ್ತಿಮಾನತೀಂದ್ರಿಯಜ್ಞಾನಮವಿಕ್ರಿಯಾತ್ಮಕಃ । ಅನಂತಪಾರೊಹಮಹರ್ನಿಶಂ
ಬುಧೈರ್ವಿಭಾವಿತೊಹಂಹೃದಿವೇದವಾದಿಭಿಃ ... ... ||೪೪||

ಟೀ॥ ಅಹಂ-ನಾನು, ಪ್ರಕಾಶರೂಪಃ-ಸ್ವಯಂಪ್ರಕಾಶರೂಪನು, ಅಹಂ-ನಾನು, ಅಜಃ-ಉತ್ಪತ್ತಿರಹಿತನು, ಅಹಂ-ನಾನು, ಅದ್ವಯಃ-ಸಜಾತಿಯ ರಹಿತನು, ಅಹಂ-ನಾನು,ಅಸಕೃದ್ವಿಭಾತಃ-ಒಂದಾವರ್ತಿಯೂಕೂಡಾ ಇತರಪ್ರಕಾಶಕ ಪದಾರ್ಥವಾದ ಚಂದ್ರಸೂರ್ಯ ಜ್ಯೋತಿಸ್ಸು ಮುಂತಾದವುಗಳಿಂದಪ್ರಕಾಶಮಾನನಾದವನಲ್ಲ,ಅತೀವ-ಬಹಳವಾಗಿ, ನಿರ್ಮಲಃ-ಮಾಯಾವರಣ ವಿಕ್ಷೇಪಾದಿ ದೋಷರಹಿತನು, ವಿಶುದ್ಧವಿಜ್ಞಾನಘನಃ-ವಿಶುದ್ಧವಿಜ್ಞಾನ-ಶುದ್ಧಚೈತನ್ಯವೇ, ಘನಃ-ಮುಖ್ಯರಸವಾಗಿ ಉಳ್ಳವನು, ನಿರಾಮಯಃ-ಕರ್ತೃತ್ವಾದ್ಯಭಿಮಾನವಿಲ್ಲದಿರುವನು, ಸಂಪೂರ್ಣಃ-ದೇಶಕಾಲ ಪರಿಚ್ಛೇದ ರಹಿತನು, ಆನಂದಮಯಃ-ಸ್ವಸ್ವರೂಪಾನಂದ ಸ್ವರೂಪನು, ದೆಹಂ-ನಾನು, ಅಕ್ರಿಯಃ- ಪರಿಣಾಮವಿಲ್ಲದವನು, ಅಹಂ-ನಾನು, ಸದಾ-ಭೂತಭವಿಷ್ಯದ್ವರ್ತಮಾನ ಕಾಲತ್ರಯದಲ್ಲಿ, ಮುಕ್ತಃ-ಸರ್ವಧರ್ಮಗಳಿಂದ ರಹಿತನು, ಅಹಂ-ನಾನು, ಅಚಿಂತ್ಯಶಕ್ತಿಮಾನ್- ಅಚಿಂತ್ಯ-ಊಹಿಸಲಸಾಧ್ಯವಾದ, ಶಕ್ತಿಮಾನ್-ಸಾಮರ್ಥ್ಯವುಳ್ಳವನು, ಅತೀಂದ್ರಿಯಜ್ಞಾನಂ-ಅತೀಂದ್ರಿಯ-ಇಂದ್ರಿಯ ಗೋಚರವಲ್ಲದಿರುವ, ಜ್ಞಾನಂ- ಜ್ಞಾನಸ್ವರೂಪನಾದವನು, ಅವಿಕ್ರಿಯಾತ್ಮಕಃ-ವಿಕಾರಶೂನ್ಯನು, ಅಹಂ-ನಾನು, ಅನಂತಪಾರಃ-ಕಾಲದೇಶಗಳಿಂದ ತುದಿಯಿಲ್ಲದವನು, ವೇದವಾದಿಭಿಃ-ವೇದಾರ್ಥಜ್ಞರಾದ, ಬುಧೈಃ- ಪಂಡಿತರಿಂದ (ಜ್ಞಾನಿಗಳಿಂದ) ಹೃದಿ-ಹೃದಯದಲ್ಲ, ಅಹರ್ನಿಶಂ-ಹಗಲು ರಾತ್ರಿಯು, ವಿಭಾವಿತಃ-ಧ್ಯಾನಮಾಡಲ್ಪಟ್ಟವನು, (ಅಂದರೆ-ಯೊಸಾಸೊಹಂ ಇತ್ಯಾಕಾರಕ ಶ್ರುತಿಯಿಂದ ಆತ್ಮಸ್ವರೂಪವನ್ನರಿತು ತಾನೆ ಅವನೆಂದು ಅಭೇದವಾಗಿ ಉಪಾಸಿಸಬೇಕೆಂದು ಭಾವವು). ... ... ||೪೪||

ಈಪರಿ ಭಾವಿಸಿದ್ದಕ್ಕೆ ಫಲವೇನಂದಗೆ,—

ಮೂ॥ ಏವಂಸದಾತ್ಮನಮಖಂಡಿತಾತ್ಮನಾವಿಚಾರಮಾಣಸ್ಯವಿಶುದ್ಧಭಾವನಾ । ಹನ್ಯಾದವಿ
ದ್ಯಾಮಚಿರೇಣಕಾರಕೈರಸಾಯನಂಯದ್ವದುಪಾಸಿತಸ್ತ್ವರುಃ ... ॥೪೫॥

ಟೀ॥ ಏವಂ-ಈಪರಿಯಾಗಿ, ಸದಾ-ನಿರಂತರದಲ್ಲಿ, ಆತ್ಮಾನಂ-ತನನ್ನನ್ನು, ಅಖಂಡಿತಾತ್ಮನಾ-ಅಖಂಡಿತ-ವಿಷಯಾಸಕ್ತವಾಗದಿರುವ, ಆತ್ಮನಾ-ಚಿತ್ತದಿಂದ, ವಿಚಾರಮಾಣಸ್ಯ-ಧ್ಯಾನಿಸುತಿರುವವನಿಗೆ, ವಿಶುದ್ಧಭಾವನಾ-ಬ್ರಹ್ಮಾಕಾರಾಂತಃಕರಣವೃತ್ತಿಯು, (ಉದೇತಿ-ಹುಟ್ಟುತ್ತದೆ) ಕಾರಕೈಃ-ಅಹಂಕಾರಪೂರ್ವಕವಾದ ಕರ್ಮಗಳಿಂದೊಡಗೂಡಿ, ಅಚಿರೇಣ-ತ್ವರೆಯಾಗಿ, ಉಪಾಸಿತಂ-ಸೇವಿಸಲ್ಪಟ್ಟ, ರಸಾಯನಂ-ಔಷಧವು, ಯದ್ವತ್-ಹ್ಯಾಗೆ, ರುಜಃ-ರೋಗಗಳನ್ನು, ಹಂತಿ-ಹೊಡೆಯುತ್ತದೊ, ತದ್ವತ್-ಹಾಗೆ, ಅವಿದ್ಯಾಂ-ಅಜ್ಞಾನವನ್ನು, ಹನ್ಯಾತ್-ಹೊಡೆಯುವದು. ... ... ... ॥೪೫॥

ಆಧ್ಯಾನ ಪ್ರಕಾರವೆಂತೆನೆ,—

ಮೂ॥ ವಿವಿಕ್ತಆಸೀನಉಪಾರತೇಂದ್ರಿಯೊವಿನಿರ್ಜಿತಾತ್ಮಾವಿಮಲಾಂತರಾಶಯಃ । ವಿಭಾ
ವಯೇದೇಕಮನನ್ಯಸಾಧನೊವಿಜ್ಞಾನದೃಕ್ಕೇವಲಆತ್ಮಸಂಸ್ಥಿತಃ ... ॥೪೬॥

ಟೀ॥ ವಿವಿಕ್ತಃ-ಜನರಹಿತವಾದಸ್ಥಳದಲ್ಲಿರುವನಾಗಿ, ಆಸೀನಃ-ಪದ್ಮಾಸನಾದ್ಯಾಸನಗಳಿಂದ ಕುಳಿತುಕೊಂಡವನಾಗಿ, ಉಪಾರತೇಂದ್ರಿಯಃ-ವಿಷಯಗಳಿಂ ಹಿಂತಿರಿಗಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ, ವಿನಿರ್ಜಿತಾತ್ಮಾ-ಪ್ರಾಣಾಯಾಮಾದಿಗಳಿಂದ ಜಿತವಾದ ಮನವುಳ್ಳವನಾದ ಕಾರಣ, ವಿಮಲಾಂತರಾಶಯಃ-ವಿಮಲ- ನಿರ್ದೋಷವಾದ, ಅಂತರಾಶಯಃ-ಅಂತಃಕರಣ ವುಳ್ಳವನಾಗಿ, ವಿಜ್ಞಾನದೃಕ-ವಿಶೇಷಜ್ಞಾನವೇ ದೃಷ್ಟಿಯಾಗಿ ಉಳ್ಳವನಾಗಿ (ಅಂದರೆ ದೃಷ್ಟುದೃಶ್ಯ ಭೇದಭಾವನಾ ರಹಿತನಾಗಿ) ಅನನ್ಯಸಾಧನಃ-ತತ್ವಜ್ಞಾನಕ್ಕಿಂತಲು ಮುಕ್ತಿಗೆ ಸಾಧಕವಾದ ಪದಾರ್ಥವಲ್ಲವೆಂದು ನಿಶ್ಚಯಮುಳ್ಳವನಾಗಿ, ಕೇವಲಃ-ಸಂಬಂಧರಹಿತನಾಗಿ, ಆತ್ಮಸಂಸ್ಥಿತಃ-ಆತ್ಮನಿಷ್ಠಾಪರನಾಗಿ, ಏಕಂ-ಬ್ರಹ್ಮರೂಪವಾದ ವಸ್ತುವಿನನ್ನೆ, ವಿಭಾವಯೇತ್-ಅಭೇದದಿಂದ ಧ್ಯಾನವಂ ಗೈಯಬೇಕು. ... ... ॥೪೬

ಮೂ॥ ವಿಶ್ವಂಯದೇತತ್ಪರಮಾತ್ಮದರ್ಶನಂವಿಲಾಪಯೇದಾತ್ಮನಿಸರ್ವಕಾರಣೆ । ಪೂರ್ಣಶ್ಚಿ
ದಾನಂದಮಯೋವತಿಷ್ಠತೇನವೇದಬಾಹ್ಯಂನಚಕಿಂಚಿದಾಂತರಂ ... ॥೪೭॥

ಟೀ॥ ಯದೇತತ್-ಯಾವ ಈ, ವಿಶ್ವಂ-ಪ್ರಪಂಚವು, ಪರಮಾತ್ಮದರ್ಶನಂ-ಪರಮಾತ್ಮನೇ ಪ್ರಕಾಶಕಪದಾರ್ಥವಾಗಿಉಳ್ಳದ್ದನ್ನಾಗಿ, ಸರ್ವಕಾರಣೆ-ಸಮಸ್ತಕ್ಕೂ ಉಪಾದಾನಕಾರಣವಾದ, ಆತ್ಮನಿ-ಆತ್ಮನಲ್ಲಿ, ವಿಲಾಪಯೇತ್-ಬ್ರಹ್ಮಸತ್ತಾತಿರಿಕ್ತಕಾರ್ಯಸತ್ವವನ್ನು ಕಾಣಿಸಿಕೊಳ್ಳದಿರಬೇಕು, ಪೂರ್ಣಃ-ಹೊಂದಲ್ಪಟ್ಟ ಸಮಸ್ತ ಇಚ್ಛೆಗಳುಳ್ಳವನಾಗಿ

ಚಿದಾನಂದಮಯಃ-ಚಿತ್ಸ್ವರೂಪನಾಗಿಯೂ ಆನಂದರೂಪನಾಗಿಯೂ ಇರುವನಾಗಿ, ಅವತಿಷ್ಠತೇ-ಇರುತ್ತಾನೆ ಅಂದರೆ ಸ್ವಸ್ವರೂಪಾನಂದವನ್ನು ಅನುಭವಿಸುವವನಾಗಿರುತ್ತಾನೆಂದು ಭಾವವು. ಬಾಹ್ಯಂ-ಹೊರಗಿರುವ ದೃಶ್ಯಪದಾರ್ಥವನ್ನು, ಅಂತರಂ-ಅಂತರಂಗದಲ್ಲಿರುವ ದೃಶ್ಯಪದಾರ್ಥವನ್ನು, ಕಿಂಚಿತ್-ಯಾವದನ್ನು, ನವೇದ-ತಿಳಿಯದೇಇರುತ್ತಾನೆ (ಅಂದರೆ ಸರ್ವತ್ರಬ್ರಹ್ಮಭಾವನೆ ಯಿರುವವನಾದ್ದರಿಂದ ಆತನಿಗೆ ಸರ್ವವೂಬ್ರಹ್ಮಮಯವಾಗಿಯೆ ತೋರುತ್ತೆಂದು ಭಾವವು ... ॥೪೭॥

ಮೂ॥ ಪೂರ್ವಂಸಮಾಧೇರಖಿಲಂವಿಚಿಂತಯೇದೋಂಕಾರಮಾತ್ರಂಸಚರಾಚರಂಜಗತ್ । ತದೇ
ವವಾಚ್ಯಂಪ್ರಣವೋಹಿವಾಚಕೋವಿಭಾವ್ಯತೇಜ್ಞಾನವಶಾನ್ನಬೋಧತಃ ॥೪೮॥

ಟೀ॥ ಸಮಾಧೇಃ-ಸಮಸ್ತವಾದ ವಿಷಯಗಳ ಚಿಂತೆಯನಿವೃತ್ತಿಪೂರ್ವಕವಾಗಿ ಬ್ರಹ್ಮಾಕಾರವೃತ್ತಿಯುಂಟಾಗುವದಕ್ಕಿಂತಲೂ, ಪೂರ್ವಂ-ಮೊದಲು, ಸಚರಾಚರಂ-ಸ್ಥಾವರಜಂಗಮಗಳಿಂದೊಡಗೂಡಿದ, ಜಗತ್-ಜಗವನ್ನು, ಓಂಕಾರಮಾತ್ರಂ-ಓಂಕಾರವೇ ವಾಚಕವಾಗಿ ಉಳ್ಳದ್ದನ್ನಾಗಿ, ವಿಚಿಂತಯೇತ್-ಅರಿತುಕೊಳ್ಳಬೇಕು, ತದೇವ-ಆ ಜಗತ್ತೇ, ಪ್ರಣವಃ-ಪ್ರಣವರೂಪವಾಗಿ, ವಾಚಕಃ-ಅರ್ಥಜ್ಞಾಪಕವಾಗಿ, ಜ್ಞಾನವಶಾತ್-ಸವಿಕಲ್ಪಕಜ್ಞಾನವಿಶೇಷದದೆಶೆಯಿಂದ, ವಿಭಾವ್ಯತೇ-ಊಹಿಸಲ್ಪಡುತ್ತದೆ, ಬೋಧತಃ-ನಿರ್ವಿಶೇಷಬ್ರಹ್ಮಸಾಕ್ಷಾತ್ಕಾರವಾದ ಬಳಿಕ, ನ-ಕಾಣಿಸಲ್ಪಡುವದಿಲ್ಲ (ಯಾಕಂದರೆ ಜಗದ್ವಿಷಯವಾದ ಸಕಲವೃತ್ತಿಗಳು ಬ್ರಹ್ಮಸಾಕ್ಷಾತ್ಕಾರವೃತ್ತಿಯಿಂದ ನಷ್ಟನಾಗುವದೆಂದು ಭಾವವು) ... ... ... ॥೪೮॥

ಈ ಪ್ರಣವಾರ್ಥವನ್ನ ವಿವರವಾಗಿ ಹೇಳುತ್ತಾನೆ.—

ಮೂ॥ ಅಕಾರಸಂಜ್ಞಃಪುರುಷೋಹಿವಿಶ್ವಕೋಹ್ಯುಕಾರಕಸ್ತೈಜಸಈರ್ಯತೇಕ್ರಮಾತ್।ಪ್ರಾ
ಜ್ಞೋಮಕಾರಃಪರಿಪಠ್ಯತೇಖಿಲೈಸ್ಸಮಾಧಿಪೂರ್ವಂನತುತತ್ತ್ವತೋಭವೇತ್ ... ॥೪೯॥

ಮೂ॥ ವಿಶ್ವಂತ್ವಕಾರಂಪುರುಷಂವಿಲಾಪಯೇದುಕಾರಮಧ್ಯೇಬಹುಧಾವ್ಯವಸ್ಥಿತಂ। ತತೋಮ
ಕಾರೇಪ್ರವಿಲೀಯತೈಜಸಂದ್ವಿತೀಯವರ್ಣಂಪ್ರಣವಸ್ಯಚಾಂತಿಮೇ ॥೫೦॥ ಮಕಾರಮಪ್ಯಾತ್ಮ
ನಿಚಿದ್ಘನೇಪರೇವಿಲಾಪಯೇತ್ಪ್ರಾಜ್ಞಮಪೀಹಕಾರಣಂ । ಸೋಹಂಪರಂಬ್ರಹ್ಮಸದಾವಿಮುಕ್ತಿಮದ್ವಿ
ಜ್ಞಾನದೃಙ್ಮುಕ್ತಉಪಾಧಿತೋಮಲಃ ... ... ॥೫೧॥

ಟೀ॥ ಸಮಾಧಿಪೂರ್ವಂ-ಸಮಾಧಿಯೋಗಕ್ಕಿಂತಲೂ ಮೊದಲು, ಅಕಾರಸಂಜ್ಞಃ-ಅಕಾರವಾಚ್ಯನಾದ,ಪುರುಷೋಹಿ-ಪುರುಷನಾದರೆ,ವಿಶ್ವಕಃ-ಜಾಗ್ರದವಸ್ಥೆಯ ಸಾಕ್ಷಿ

ಯಾಗಿರುವ ವಿಶ್ವನೆಂದು ಹೇಳಲ್ಪಡುತ್ತಾನೆ, ಉಕಾರತಃ-ಉಕಾರಪ್ರತಿಪಾದ್ಯನು, ತೈಜಸಇತಿ-ಸ್ವಪ್ನಾವಸ್ಥೆಯ ಸಾಕ್ಷಿಯಾದ ತೈಜಸನೆಂದು, ಕ್ರಮಾತ್-ಕ್ರಮವಾಗಿ, ಈರ್ಯತೇ-ಹೇಳಲ್ಪಡುತ್ತಾನೆ, ತತಃ-ಬಳಿಕ, ಮಕಾರಃ-ಮಕಾರವಾಚ್ಯನಾದವನು, ಪ್ರಾಜ್ಞ ಇತಿ-ಸುಷುಪ್ತ್ಯವಸ್ಥೆ ಸಾಕ್ಷಿಯಾದ ಪ್ರಾಜ್ಞನೆಂದು, ಅಖಿಲೈಃ-ಸಮಸ್ತರಿಂದ,ಪರಿಪಠ್ಯತೇ-ಹೇಳಲ್ಪಡುತ್ತಾನೆ, ತತ್ವತಸ್ತು-ತತ್ವಸಾಕ್ಷಾತ್ಕಾರವಾದರೆ ಆಗುತಿರಲೀಕಾಗಿ, ನಭವೇತ್-ಈ ಮೂರುಭಾವಗಳು ಯಿರಲಾರವು ... ||೪೯||

ಟೀ|| ಅಕಾರಂ-ಅಕಾರಶಬ್ದವಾಚ್ಯನಾದ, ಉಕಾರಮಧ್ಯೇ-ಉಕಾರದಮಧ್ಯದಲ್ಲಿ, ಬಹುಧಾ-ಸ್ಥೂಲಶರೀರಭೇದದಿಂದ, ಸ್ಥಿತಂ-ಇರುವ, ವಿಶ್ವಂ-ವಿಶ್ವನೆಂಬ, ಪುರುಷಂ-ಜೀವನನ್ನು, ವಿಲಾಪಯೇತ್-ಉಕಾರಮಧ್ಯದಲ್ಲಿ ವಿಲೀನನನ್ನಾಗಿ ಭಾವಿಸಬೇಕು (ಅಂದರೆ ವಿಶ್ವನಸತ್ವವು ತೈಜಸದಲ್ಲಿ ನಿಂತರೆ ಭಾವನೆಯಂಗೈಯಬೇಕು) ತತಃ-ಬಳಿಕ, ದ್ವಿತೀಯವರ್ಣಂ-ಎರಡನೆಯ ವರ್ಣವಾದ ಉಕಾರವನ್ನು, ತೈಜಸಃ-ತದಭಿಮಾನಿಯಾದ ಮತ್ತೂ ಸ್ವಪ್ನಾವಸ್ಥೆಯ ಸಾಕ್ಷಿಯಾದ ತೈಜಸನೆಂಬ ಪುರುಷನನ್ನು, ಪ್ರಣವಸ್ಯ-ಓಂಕಾರದ, ಅಂತಿಮೇ-ತುದಿಯಲ್ಲಿರುವ,ಮಕಾರೇ-ಮಕಾರದಲ್ಲಿ, (ಮಕಾರ ಶಬ್ದವಾಚ್ಯನಲ್ಲಿ, ಪ್ರವಿಲಾಪ್ಯ-ಸೇರಿಸಿ, ಮಕಾರಮಪಿ-ಮಕಾರವನ್ನೂ ಮಕಾರಶಬ್ದವಾಚ್ಯನಾದ, ಕಾರಣಂ-ಕಾರಣಶರೀರಾಭಿಮಾನಿಯಾದ, ಪ್ರಾಜ್ಞಮಪಿ-ಪ್ರಾಜ್ಞಶಬ್ದ ವಾಚ್ಯನನ್ನು, ಚಿದ್ಘನೇ-ಚಿತ್ಸರೂಪನಾದ, ಇಹಪರಆತ್ಮನಿ-ಈ ಪರಮಾತ್ಮನಲ್ಲಿ ( ಶರೀರತ್ರಯ ವಿಲಕ್ಷಣನಾದ ಈ ಆಗ್ನಿನಲ್ಲಿ, ವಿಲಾಪಯೇತ್-ಔತುಕೊಂಡಿರುವನನ್ನಾಗಿ ಭಾವಿಸಬೇಕು, ತತಃ-ಬಳಿಕ, ಅಹಂ-ನಾನು, ವಿಮುಕ್ತಮತ್-ನಿತ್ಯಮುಕ್ತಿಸ್ವರೂಪನಾದ, ಸಃ-ತಚ್ಛಬ್ದಪ್ರತಿಪಾದ್ಯನಾದ, ಪರಬ್ರಹ್ಮ-ಪರಬ್ರಹ್ಮಸ್ವರೂಪನು, ವಿಜ್ಞಾನದೃಕ್-ವಿಜ್ಞಾನ-ನಿಧಿಧ್ಯಾಸನವೆ, ದೃಕ್-ದೃಷ್ಟಿಯಾಗಿ ಉಳ್ಳವನು (ಅಂದರೆಸರ್ವಸಾಕ್ಷಿಯಾಗಿರುವನು) ಉಪಾಧಿತಃ-ಉಪಾಧಿಗಳ ದೆಸೆಯಿಂದ, ಮುಕ್ತಃ-ಬಿಡಲ್ಪಟ್ಟವನು, ಅಮಲಃ-ಕರ್ತೃತ್ವಾದಿ ದೋಷರಹಿತನು (ಎಂಬದಾಗಿ ಭಾವಿಸಬೇಕು) (ಅಂದರೆ ಓಂಕಾರದಲ್ಲಿ ಅಕಾರ ಉಕಾರಮಕಾರಗಳೆಂಬ ಮೂರುವರ್ಣಂಗಳೂ ಸೇರಿವೆ, ಹೀಗೆ ಜೀವನಿಗೆ ಜಾಗ್ರದವಸ್ಥೆ ಸ್ವಪ್ನಾವಸ್ಥೆ ಸುಷುಪ್ತ್ಯವಸ್ಥೆ ಯೆಂಬದಾಗಿ ಮೂರು ಅವಸ್ಥೆಗಳುಂಟು, ಈ ಅವಸ್ಥಾತ್ರಯದ ಜೀವನಿಗೆ ವಿಶ್ವತೈಜಸ ಪ್ರಾಜ್ಞಗಳೆಂದು ಮೂರು ಬಗೆಗಳಾಗಿ ಹೆಸರುಗಳುಂಟು, ಸ್ಥೂಲಸೂಕ್ಷ್ಮ ಕಾರಣಂಗಳೆಂದು, ಮೂರು ಶರೀರಂಗಳುಂಟು, ಹಾಗೆಯೆ ಇದರಂತೆ ಈಶ್ವರನಿಗೂ ಅವಸ್ಥಾತ್ರಯಸಾಕ್ಷಿತ್ವದಿಂದ ವಿರಾಟನೆಂತಲೂ ಹಿರಣ್ಯಗರ್ಭನೆಂತಲೂ ಅಂತರ್ಯಾಮಿಯೆಂತಲೂ ತ್ರಿವಿಧವಾಗಿ ಹೆಸರುಗಳುಂಟಾಗುತ್ತವೆ, ಮೇಲೆಹೇಳಿದ ಶರೀರಕ್ರಮವುಸಮಷ್ಟಿವ್ಯಷ್ಟಿಭೇದಗಳಿಂದ ಎರಡು ವಿಧವಾಗಿದೆ, ಸಮಷ್ಟಿಶರೀರಕ್ಕೆ ಅಭಿಮಾನಿಯಾದವನು ಈಶ್ವರನೆಂತಲೂ, ವ್ಯಷ್ಟಿಶರೀರಕ್ಕೆ ಅಭಿಮಾನಿಯಾದವನು ಜೀವನೆಂತಲೂ ಹೇಳಲ್ಪಡುತ್ತಾನೆ, ಇದರಲ್ಲಿ ವಿಲಾಪನಕ್ರಮವು ಹ್ಯಾಗಂದರೆ, ಅಕಾರಕ್ಕೆ ಉಕಾರದಲ್ಲಿಯೂ, ಅಕಾರಶಬ್ದವಾಚ್ಯನಾದ ತೈಜಸನಲ್ಲಿಯೂ, ಉಕಾರಕ್ಕೆ ಮಕಾರದಲ್ಲಿಯೂ ಇದರಂತೆ ಸಮಸಮಷ್ಟಿಸ್ಥೂಲಶರೀರಾತ್ಮಕನಾದ ವಿರಾಟ್ಪುರುಷನಿಗೆ ಹಿರಣ್ಯಗರ್ಭನಲ್ಲಿಯೂ, ಆ ಹಿರಣ್ಯಗರ್ಭನಿಗೆ ಅಂತರ್ಯಾಮಿಯಲ್ಲಿಯೂ ಈ ರೀತಿಯಾಗಿ ವ್ಯಷ್ಟಿಸ್ಥೂಲಶರೀರವೆಂದನ್ನಲ್ಪಡುವಲಿಂಗಶರೀರಕ್ಕೆ ಕಾರಣದಲ್ಲಿಯೂ ಲಯವಂಭಾವಿಸಿ, ಈಶ್ವರಭಾವಜೀವಭಾವಗಳನ್ನು ಲಿಂಗತ್ರಯಾತೀತನಾದ ಪರಬ್ರಹ್ಮನಲ್ಲಿ ಲೀನವನ್ನಾಗಿ ಭಾವಿಸಿ,ಸೋಹಂಭಾವನೆಯಿಂದ ಭಾವಿಸಿದ ಪುರುಷನು ನಿತ್ಯಮುಕ್ತನಾಗುವನೆಂದು ಭಾವವು) ... ... ||೫೦||

ಮೂ|| ಏವಂಸದಾಜಾತಪರಾತ್ಮಭಾವನಸ್ಸ್ವಾನಂದತುಷ್ಟಃಪರಿವಿಸ್ಮೃತಾಖಿಲಃ। ಆಸ್ತೇಸಸು
ತ್ಯಾತ್ಮಸುಖಪ್ರಕಾಶಕಸ್ಸಾಕ್ಷಾದ್ವಿಮುಕ್ತೋಚಲವಾರಿಸಿಂಧುವತ್॥ ||೫೧||

ಟೀ|| ಏವಂ-ಈಪರಿಯಾಗಿ, ಸದಾ-ನಿರಂತರವು, ಜಾತಪರಾತ್ಮಭಾವನಃ-ಜಾತ-ಹುಟ್ಟಿದ, ಪರಾತ್ಮ-ಪರಮಾತ್ಮನೊಬ್ಬನಲ್ಲಿಯೇ, ಭಾವನಃ-ಧ್ಯಾನವುಳ್ಳ, ಪರಿವಿಸ್ಮೃತಾಖಿಲಃ-ಪರಿವಿಸ್ಮೃತ-ಮರತು ಹೋಗಲಾಡಿಸಲ್ಪಟ್ಟ, ಅಖಿಲಃ-ಪುತ್ರಕಳತ್ರದೇಹಾದಿಗಳುಳ್ಳವನಾಗಿ, ಸ್ವಾನಂದತುಷ್ಟಃ-ಸ್ವಸ್ವರೂಪಾನಂದದಿಂದಲೆ ಸಂತೋಷಗೊಂಡವನು, ಯಃ-ಯಾವಾತನೊ, ಸಃ-ಆ ಪುರುಷನು, ಸಾಕ್ಷಾತ್-ಪ್ರತ್ಯಕ್ಷವಾಗಿ, ನಿತ್ಯಾತ್ಮಸುಖಪ್ರಕಾಶಕಃ-ನಿತ್ಯ-ಕಾಲತ್ರಯದಲ್ಲಿ ಅಬಾಧ್ಯನಾದ, ಆತ್ಮ-ಆತ್ಮನ ಸ್ವರೂಪವಾದ, ಸುಖಪ್ರಕಾಶಕಃ-ಸುಖರೂಪವಾಗಿಯೂ ಪ್ರಕಾಶರೂಪವಾಗಿಯೂ ಇರುವನಾಗಿ, ಮುಕ್ತಃ-ಜೀವನ್ಮುಕ್ತನಾಗಿ, ಅಚಲವಾರಿಸಿಂಧುವತ್-ಅಚಲ-ನಿಶ್ಚಂಚಲವಾದ, ವಾರಿ- ಉದಕವುಳ್ಳ, ಸಿಂಧುವತ್-ಕಡಲಿನಂತೆ, ಆಸ್ತೇ-ಇರುವನು. .. .. .. ||೫೧||

ಇಂಥ ವನಿಗೆ ನನ್ನ ಲಾಭವು ಉಂಟಾಗುವದೆಂದು ಹೇಳುತ್ತಾನೆ.

ಮೂ|| ಏವಂಸದಾಭ್ಯಸ್ತಸಮಾಧಿಯೋಗಿನೋನಿವೃತ್ತಸರ್ವೇಂದ್ರಿಯಗೋಚರಸ್ಯಹಿ। ವಿನಿರ್ಜಿ
ತಾಶೇಷರಿಪೋರಹಂಸದಾದೃಶ್ಯೋಭವೇಯಂಜಿತಷಡ್ಗುಣಾತ್ಮನಃ॥ ||೫೨||

ಟೀ|| ಏವಂ-ಈಪರಿಯಾಗಿ, ಸದಾ-ನಿರಂತರವು, ಅಭ್ಯಸ್ತಸಮಾಧಿಯೋಗಿನಃ- ಅಭ್ಯಸ್ತ-ಅಭ್ಯಾಸ ಮಾಡಲ್ಪಟ್ಟ, ಸಮಾಧಿ-ಸಮಾಧಿಯುಳ್ಳ, ಯೋಗಿನಃ- ಯೋಗಿಯಾದ, ನಿವೃತ್ತಸರ್ವೇಂದ್ರಿಯಗೋಚರಸ್ಯ-ನಿವೃತ್ತ-ತೊರೆದು ಹೋದ, ಸರ್ವ-ಸಮಸ್ತವಾದ ಇಂದ್ರಿಯ-ಇಂದ್ರಿಯಗಳ, ಗೋಚರಸ್ಯ-ಶಬ್ದಾದಿ ವಿಷಯಗಳುಳ್ಳ, ವಿನಿರ್ಜಿತಾಶೇಷರಿಪೋಃ-ವಿನಿರ್ಜಿತ-ಜಯಿಸಲ್ಪಟ್ಟ, ಅಶೇಷ-ಸಮಸ್ತವಾದ, ರಿಪೋಃ-ಕಾಮಕ್ರೋಧಾದಿಗಳುಳ್ಳ, ಜಿತಷಡ್ಗುಣಾತ್ಮನಃ-ಜಿತ-ಜಯಿಸಲ್ಪಟ್ಟ, ಷಡ್ಗುಣ-ಸರ್ವಜ್ಞತ್ವ ನಿತ್ಯತ್ವ ನಿತ್ಯತೃಪ್ತತ್ವ ಬೋಧರೂಪತ್ವ ಸ್ವತಂತ್ರ ನಿತ್ಯಮುಕ್ತತ್ವ ರೂಪವಾಗಿರುವ ಆರುಗುಣಗಳುಳ್ಳ, ಆತ್ಮನಃ-ಆತ್ಮನುಳ್ಳವನಿಗೆ, ಅಹಂ-ನಾನು, ದೃಶ್ಯಃ-ಕಾಣುವಂಥಾವನು, ಭವೇಯಂ-ಗುವೆನು, (ಅಂದರೆ ನನ್ನಲ್ಲಿ ಚನ್ನಾಗಿ ಭಕ್ತಿಯುಳ್ಳ ಯೋಗಾಭ್ಯಾಸತತ್ಪರನಿಗೆ ನಾನು ದೃಶ್ಯನಾಗುವೆನೆಂದು ಭಾವವು.) ||೫೩||

ಮೂ|| ಧ್ಯಾತ್ವೈವಮಾತ್ಮಾನಮಹರ್ನಿಶಂಮುನಿಸ್ತಿಷ್ಠೇತ್ಸದಾಮುಕ್ತಸಮಸ್ತಬಂಧನಃ। ಪ್ರಾ
ರಬ್ಧಮಶ್ನನ್ನಭಿಮಾನವರ್ಜಿತೋಮಯ್ಯೇವಸಾಕ್ಷಾತ್ಪ್ರವಿಲೀಯತೇತತಃ॥ ||೫೪||

ಟೀ॥ ಮುನಿಃ-ಮನನಶೀಲನಾದವನಾಗಿ, ಏವಂ-ಈಪರಿಯಾಗಿ, ಆತ್ಮಾನಂ-ಪರಬ್ರಹ್ಮನನ್ನು, ಅಹರ್ನಿಶಂ-ಹಗಲು ರಾತ್ರಿಯು, ಧ್ಯಾತ್ವಾ-ಅಭೇದ ಭಾವನೆಯಿಂದ ಧ್ಯಾನಮಾಡಿ, ಯಃ-ಯಾವನು, ತಿಷ್ಠೇತ್-ಇರುವನೋ, ಸಃ-ಆ ಪುರುಷನು, ಸದಾ-ನಿರಂತರವೂ, ಮುಕ್ತಸಮಸ್ತಬಂಧನಃ-ಮುಕ್ತ-ಬಿಡಲ್ಪಟ್ಟ, ಸಮಸ್ತ-ಸಕಲವಾದ, ಬಂಧನ-ಬಂಧಗಳುಳ್ಳವನಾಗಿ, ಪ್ರಾರಬ್ಧಂ-ಪ್ರಾರಬ್ಧವನ್ನು, ಪೂರ್ವಜನ್ಮಾರ್ಜಿತವಾದ ಕರ್ಮಫಲವನ್ನು, ಅಶ್ನನ್-ಅನುಭವಿಸುತ್ತಿರುವನಾಗಿ, ಅಭಿಮಾನವರ್ಜಿತಃ- ದೇಹಕಳತ್ರ ಪುತ್ರಾದಿಗಳಲ್ಲಿ ಅಭಿಮಾನವಂ ತ್ಯಜಿಸಿದವನಾಗಿ, ತತಃ-ಈ ದೇಹಪಾತಾನಂತರದಲ್ಲಿ, ಮಯ್ಯೇವ-ನನಲ್ಲೇ, ಸಾಕ್ಷಾತ್-ಪ್ರತ್ಯಕ್ಷವಾಗಿ,ಪ್ರವಿಲೀಯತೇ-ಲಯವನ್ನು ಹೊಂದುತ್ತಾನೆಅಂದರೆ ನನ್ನ ಸ್ವರೂಪನಾಗುತ್ತಾನೆ. ॥೫೪॥

ಎಲ್ಲಾ ಧರ್ಮಗಳಿಗಿಂತಲೂ ನನ್ನ ಆಶ್ರಯಿಸುವಿಕೆಯೆ ಪರಮಧರ್ಮವೆಂದು ನಿರೂಪಿಸುತ್ತಾನೆ,—

ಮೂ॥ ಆದೌಚಮಧ್ಯೇಚತಥೈವಚಾಂತತೋಭವಂವಿದಿತ್ವಾಭಯಶೋಕಕಾರಣಂ । ಹಿತ್ವಾ
ಸಮಸ್ತಂವಿಧಿವಾದಚೋದಿತಂಭಜೇತ್ಸ್ವಮಾತ್ಮಾನಮಥಾಖಿಲಾತ್ಮನಾಂ ॥ ॥೫೫॥

ಟೀ॥ ಆದೌಚ-ಸೃಷ್ಟ್ಯಾದಿಯಲ್ಲಿಯೂ, ಮಧ್ಯೇಚ-ಮಧ್ಯಕಾಲದಲ್ಲಿಯೂ, ತಥೈವ-ಹಾಗೆಯೆ, ಅಂತತಶ್ಚ-ತುದಿಕಾಲದಲ್ಲಿಯೂ, ಭವಂ-ಸಂಸಾರವನ್ನು, ಭಯಶೋಕಕಾರಣಂ-ಭಯಕ್ಕೂ ವ್ಯಸನಕ್ಕೂ ಕಾರಣೀಭೂತವಾದ್ದನ್ನಾಗಿ, ವಿದಿತ್ವಾ-ತಿಳಿದು, ವಿಧಿವಾದಚೋದಿತಂ-ವಿಧಿವಾದ-ವಿಧಿವಾಕ್ಯಗಳಿಂದ, ಚೋದಿತಂ-ಬೋಧಿಸಲ್ಪಟ್ಟ, ಸಮಸ್ತಂ-ಸಕಲವಾದ ಕರ್ಮಮಾರ್ಗವನ್ನು, ಹಿತ್ವಾ-ಬಿಟ್ಟು, ಅಥ-ಬಳಿಕ, ಅಖಿಲಾತ್ಮನಾಂ-ಸಮಸ್ತ ಜೀವರಾಶಿಗಳಿಗೂ, ಸ್ವಂ-ಸ್ವರೂಪಭೂತನಾದ, (ಮಾಂ-ನನ್ನನ್ನು)ಆತ್ಮಾನಂ-ಆತ್ಮಸ್ವರೂಪನಾದ ಪರಮೇಶ್ವರನನ್ನಾಗಿ, ಭಜೇತ್-ಧ್ಯಾನಿಸಬೇಕು. ॥೫೫॥

ನನ್ನಲ್ಲಿ ಅಭೇದ ಭಾವನೆಯಿಂದ ನಾಮರೂಪಂಗಳನ್ನು ತ್ಯಜಿಸಿ ನನ್ನ ಸ್ವರೂಪವನ್ನೇ ಹೊಂದುತ್ತಾನೆಂದುಹೇಳುತ್ತಾನೆ,—

ಮೂ॥ ಆತ್ಮನ್ಯಭೇದೇನವಿಭಾವಯನ್ನಿದಂಭವತ್ಯಭೇದೇನಮಯಾತ್ಮನಾತದಾ। ಯಥಾಜಲಂವಾ
ರಿನಿಧೌಯಥಾಪಯಃಕ್ಷೀರೇವಿಯದ್ವ್ಯೋಮ್ನ್ಯನಿಲೇಯಥಾನಿಲಃ ॥ ॥೫೬॥

ಟೀ॥ ಆತ್ಮನಿ-ಸರ್ವಾಧಿಷ್ಠಾನ ಭೂತನಾದ ನನ್ನಲ್ಲಿ, ಇದಂ-ಈ ಸ್ವಸ್ವರೂಪವನ್ನು, ಅಭೇದೇನ-ಭೇದರಾಹಿತ್ಯದಿಂದ, ವಿಭಾವಯನ್-ಧ್ಯಾನಮಾಡುತ್ತಿರುವವನಾಗಿ,ಯದಾ-ಯಾವಕಾಲದಲ್ಲಿ. ತಿಷ್ಠತಿ-ಇರುತ್ತಾನೋ, ತದಾ-ಆ ಕಾಲದಲ್ಲಿ, ಆತ್ಮನಾ-ಆತ್ಮಸ್ವರೂಪನಾದ, ಮಯಾ-ನನ್ನಿಂದ, ಅಭೇದೇನ-ಭೇದಭಾವದಿಂದಲೇ ಅಂದರೆ ಅದ್ವೈತಭಾವದಿಂದಲೆ) ಭವತಿ-ಆಗುತ್ತಾನೆ, (ಅಂದರೆ ಸ್ವಸ್ವರೂಪಾನಂದವನನ್ನನುಭವಿಸಿ ನನ್ನ ಸ್ವರೂಪವನ್ನೇ ಹೊಂದುತ್ತಾನೆ) ಯಥಾ-ಹ್ಯಾಗೆ, ವಾರಿನಿಧೌ-ಸಮುದ್ರದಲ್ಲಿ, ಜಲಂ- ಉದಕ

ವ್ಯೋ, ಕ್ಷೀರೇ-ಹಾಲಿನಲ್ಲಿ, ಪಯಃ-ಕ್ಷೀರವು, ಯಥಾ-ಹ್ಯಾಗಿಯೋ, ವಿಯತ್-ಖಂಡಾಕಾಶವು, ವ್ಯೋಮ್ನಿ-ಅಖಂಡಾಕಾಶದಲ್ಲಿ, ಯಥಾ-ಹ್ಯಾಗಿಯೋ, ಅನಿಲೇ-ವಾಯುವಿನಲ್ಲಿ, ಅನಿಲಃ-ವಾಯುವು, ಯಥಾ-ಹ್ಯಾಗಿಯೋ, (ಹಾಗೆ ಅದ್ವೈತಭಾವನೆಯಿಂದ ನನ್ನನ್ನು ಹೊಂದುತ್ತಾನೆ.) ॥೫೬॥

ಈಪರಿ ಆತ್ಮತತ್ವಜ್ಞಾನವುಳ್ಳವನಿಗೆ ಜಗತ್ಸತ್ಯತ್ವ ಭ್ರಾಂತಿಯು ತನ್ನಷ್ಟಕ್ಕೆ ತಾನೆ ಲಯವಾಗುವದೆಂದು ಹೇಳುತ್ತಾನೆ.—

ಮೂ॥ ಇತ್ಥಂಪರೀಕ್ಷೇತಹಿಲೋಕಸಂಸ್ಥೋಜಗನ್ಮೃಷೈವೇತಿವಿಭಾವಯನ್ಮುನಿಃ । ನಿರಾಕೃ
ತತ್ವಾಚ್ಛ್ರುತಿಯುಕ್ತಿಮಾನತೋಯಥೇಂದುಭೇದೋದಿಶಿದಿಗ್ಭ್ರಮಾದಯಃ ॥೫೭॥

ಟೀ॥ ಲೋಕಸಂಸ್ಥಃ-ಲೋಕದಲ್ಲಿರುವನಾದರು, ಜಗತ್-ಜಗವನ್ನು, ಮೃಷೈವೇತಿ-ಮಿಥ್ಯಾಭೂತವೆಂದು, ವಿಭಾವಯನ್-ನಿಶ್ಚಯಿಸುತ್ತಿರುವನಾಗಿ, ಯದಿ-ಯಾವಕಾಲದಲ್ಲಿ, ಇತ್ಥಂ-ಈಪರಿಯಾಗಿ, ಮುನಿಃ-ಮನನಶೀಲನಾಗಿ, ಈಕ್ಷೇತ-ತಿಳುವಳಿಕೆ ಯುಳ್ಳವನಾಗುವನೋ (ಅಂದರೆ ಜಗತ್ತು ಮಿಥ್ಯಾಭೂತವೆಂದರಿತು ಅಭೇದಭಾವನೆಯಿಂದ ಮನನಶೀಲನು ಯಾವಾಗ ಆಗುವನೊ) ತದಾ-ಆ ಕಾಲದಲ್ಲಿ ಶ್ರುತಿಯುಕ್ತಿಮಾನತಃ-ಶ್ರುತಿ-ಮಿಥ್ಯಾತ್ವ ಬೋಧಕವಾದ ಶ್ರುತಿಗಳಿಂದ, ಯುಕ್ತಿಮಾನತಃ- ಯಾವದು ದೃಶ್ಯವೋ ಅದು ನಶ್ವರವಾಗಿ ಮಿಥ್ಯಾಭೂತವೆಂಬ ಯುಕ್ತಿರೂಪವಾದ, ಅನುಮಾನರೂಪ ಪ್ರಮಾಣಗಳಿಂದಲೂ, ನಿರಾಕೃತತ್ವಾತ್-ನಿರಾಕರಿಸಲ್ಪಟ್ಟದ್ದರ ದೆಸೆಯಿಂದ, ಇಂದು, ಭೇದಃ-ದ್ವಿಚಂದ್ರತ್ವ ಭ್ರಾಂತಿಯು, ಯಥಾ-ಹ್ಯಾಗೋ, ದಿಶಿ-ಒಂದೆ ದಿಕ್ಕಿನಲ್ಲಿ, ದಿಗ್ಭ್ರಮಾದಯಃ-ಪೂರ್ವಪಶ್ಚಿಮ ದಿಕ್ಕುಗಳೆಂಬ ಭ್ರಾಂತಿಮುಂತಾದವುಗಳು, ಯಥಾ- ಹ್ಯಾಗೆ ನಿವೃತ್ತಮಾಗುವದೋ (ತಥಾ-ಹಾಗೆ, ನಿವೃತ್ತ ಜಗತ್ಸತ್ಯತ್ವಭ್ರಮಃ-ಗತವಾದ, ಜಗತ್-ಜಗತ್ತಿನಲ್ಲಿ, ಸತ್ಯತ್ವ-ಸತ್ಯಪ್ರಕಾರಕವಾದ, ಭ್ರಮಃ-ಭ್ರಾಂತಿಯುಳ್ಳವನು, ॥೫೭॥ ಆಗುತ್ತಾನೆ.)

ಈ ಅಭೇದಜ್ಞಾನವು ಯಾವ ಉಪಾಯದಿಂ ದುಂಟಾಗುವದೋ ಆ ಉಪಾಯವಂ ಹೇಳುತ್ತಾನೆ.—

ಮೂ॥ ಯಾವನ್ನಪಶ್ಯೇದಖಿಲಂಮದಾತ್ಮಕಂತಾವನ್ಮದಾರಾಧನತತ್ಪರೋಭವೇತ್। ಶ್ರದ್ಧಾಳು
ರತ್ಯೂರ್ಜಿತಭಕ್ತಿಲಕ್ಷಣೋಯಸ್ತಸ್ಯದೃಶ್ಯೋಹಮಹರ್ನಿಶಂಹೃದಿ ॥೫೮॥

ಯಾವತ್-ಎಷ್ಟುಪರ್ಯಂತವು, ಅಖಿಲಂ-ಸಮಸ್ತ ಜಗತ್ತನ್ನು, ಮದಾತ್ಮಕಂ-ನನ್ನ ಸ್ವರೂಪವನ್ನಾಗಿ, ನಪಶ್ಯೇತ್-ಕಾಣುವದಿಲ್ಲವೋ, (ಅಂದರೆ ಪ್ರಪಂಚವು ನನ್ನ ವಿವರ್ತಭೂತವು, ವಿವರ್ತವೆಂದರೆ ರೂಪಾಂತರವು) ಈ ಜಗಕ್ಕೆ ಅಧಿಷ್ಠಾನವು ನಾನೆಂಬಜ್ಞಾನವು ಎದುವರಿಗು ಹುಟ್ಟುವದಿಲ್ಲವೋ) ತಾವತ್- ಅಷ್ಟುಪರ್ಯಂತವು, ಮದಾರಾಧ

ನತತ್ಪರಃ-ಮತ್-ನನ್ನ, ಆರಾಧನ- ಪೂಜೆಯಲ್ಲಿ, ತತ್ಪರಃ-ಆಸಕ್ತನಾದವನು, ಭವೇತ್-ಆಗಬೇಕು, ಶ್ರದ್ಧಾಳುಃ-ಭಗವತ್ಪೂಜೆಯೆ ಜ್ಞಾನಸಾಧಕವೆಂದು ನಂಬಿಕೆಯುಳ್ಳವನಾಗಿ, ಊರ್ಜಿತಭಕ್ತಿಲಕ್ಷಣಃ-ಊರ್ಜಿತ-ವೃದ್ಧಿ ಹೊಂದಲ್ಪಟ್ಟ, ಭಕ್ತಿ-ಭಗವಂತನೆ ಪೂಜ್ಯನೆಂಬಜ್ಞಾನವೇ, ಲಕ್ಷಣಃ-ಚಿನ್ಹವುಳ್ಳವನಾಗಿ, ಯಃ-ಯಾವ ಪುರುಷನು,(ಇರುವನೋ,) ತಸ್ಯ-ಆತನ, ಹೃದಿ-ಹೃದಯದಲ್ಲಿ, ಅಹಂ-ನಾನು, ಅಹರ್ನಿಶಂ-ಅಹೋರಾತ್ರವು, ದೃಶ್ಯಃ-ಕಾಣಿಸತಕ್ಕವನು, (ಅಂದರೆ ಸಕಲಜಗತ್ತು ನಾಮರೂಪಾತ್ಮಕ ವಾದದ್ದು ಇದು ಮಿಥ್ಯಾಭೂತವು, ಇಥಾಪ್ರಪಂಚಕ್ಕೆ ಅಧಿಷ್ಠಾನವು ಬ್ರಹ್ಮನೆಂದು ಎಷ್ಟುಪರ್ಯಂತವು ಹುಟ್ಟುವದಿಲ್ಲವೋ ಅದುವರಿವಿಗು ಭಗವದಾರಾಧನದಲ್ಲಿ ಆಸಕ್ತಿಯುಳ್ಳವನಾಗಬೇಕು, ಭಕ್ತಿಶ್ರದ್ಧೆಗಳುಳ್ಳವನೇ ಜ್ಞಾನಿಯಾಗುವನು, ಜ್ಞಾನವುಳ್ಳವನೆ ಮುಕ್ತನಾಗುವನೆಂದು ಭಾವವು) ||೫೮||

ಮೂ|| ರಹಸ್ಯಮೇತಚ್ಛ್ರುತಿಸಾರಸಂಗ್ರಹಂಮಯಾವಿನಿಶ್ಚಿತ್ಯತವೋದಿತಂಪ್ರಿಯ।ಯಸ್ತ್ವೇತ-
ದಾಲೋಚಯತೀಹಬುದ್ಧಿಮಾನ್ಸಮುಚ್ಯತೆಪಾತಕರಾಶಿಭಿಃಕ್ಷಣಾತ್ ||೫೯||

ಹೆ ಪ್ರಿಯ-ಎಲೈ ಪ್ರೀತಿಪಾತ್ರನೇ, ಶ್ರುತಿಸಾರಸಂಗ್ರಹಂ-ಶ್ರುತಿ-ವೇದಗಳಲ್ಲಿ, ಸಾರ-ಸ್ಥಿರಾಂಶದ, ಸಂಗ್ರಹಂ-ಗ್ರಹಣರೂಪವಾದ, ಏತದ್ರಹಸ್ಯಂ- ಈ ಗೋಪ್ಯವಾದ ಬ್ರಹ್ಮತತ್ವವು, ಮಯಾ-ನನ್ನಿಂದ, ವಿನಿಶ್ಚಿತ್ಯ-ನಿಶ್ಚೈಸಿ, ತವ-ನಿನಗೆ, ಉದಿತಂ-ಪೇಳಲ್ಪಟ್ಟಿತು, ಇಹ-ಈ ಲೋಕದಲ್ಲಿ, ಬುದ್ಧಿಮಾನ್-ತಿಳುವಳಿಕೆಯುಳ್ಳ, ಯಸ್ತು-ಯಾವಪುರುಷನಾದರೆ, ಏತತ್-ನನ್ನಿಂದಪೇಳಲ್ಪಟ್ಟ ಈ ಜ್ಞಾನಮಾರ್ಗವನ್ನು, ಆಲೋಚಯತಿ-ಶ್ರವಣಮನನಾದಿಗಳಿಂದ ನಿಶ್ಚಯಿಸುತ್ತಾನೋ, ಸಃ-ಅವನು, ಪಾತಕರಾಶಿಭಿಃ-ಪಾಪಗಳ ತಂಡಗಳಿಂದ, ಕ್ಷಣಾತ್-ಕ್ಷಣದಲ್ಲಿ, ಮುಚ್ಯತೆ-ಬಿಡಲ್ಪಡುತ್ತಾನೆ ||೫೯||

ಮೂ|| ಭ್ರಾತರ್ಯದೀದಂಪರಿದೃಶ್ಯತೆಜಗನ್ಮಾಯೈವಸರ್ವಂಪರಿಹೃತ್ಯಚೆತಸಾ।ಮದ್ಭಾವನಾ-
ಭಾವಿತಶುದ್ಧಮಾನಸಸ್ಸುಖೀಭವಾನಂದಮಯೋನಿರಾಮಯಃ ||೬೦||

ಹೆ ಭ್ರಾತಃ-ಎಲೈ ತಮ್ಮನೆ, ಯದಿದಂ-ಯಾವ ಈಜಗತ್ತು, ಪರಿದೃಶ್ಯತೆ-ಕಾಣಲ್ಪಡುತ್ತೋ, ತತ್ಸರ್ವಂ-ಅದನ್ನೆಲ್ಲ, ಮಾಯೈವ-ಮಿಥ್ಯಾಭೂತವಾದದ್ದೆಂದು, ಚೆತಸಾ-ಮನಸಿಂದ, ಪರಿಹೃತ್ಯ-ಪರಿತ್ಯಜಿಸಿ, ಮದ್ಭಾವನಾಭಾವಿತಶುದ್ಧಮಾನಸಃ-ಮತ್-ನನ್ನ ಧ್ಯಾನದಲ್ಲಿಯೆ,ಭಾವನಾ-ಧ್ಯಾನದಿಂದ, ಭಾವಿತ-ಇರಿಸಲ್ಪಟ್ಟ, ಶುದ್ಧ-ನಿರ್ಮಲವಾದ, ಮಾನಸಃ-ಮನಸ್ಸುಳ್ಳವನಾಗಿ,ನಿರಾಮಯಃ-ರೋಗಾದಿ ಬಾಧೆಗಳಿಲ್ಲದವನಾಗಿ,ಆನಂದಮಯಃ-ಆನಂದ ಸ್ವರೂಪನಾಗಿ,ಸುಖೀ-ದುಃಖನಿವೃತ್ತಿ ಯುಳ್ಳವನು, ಭವ-ಆಗು ||

ಮೂ|| ಯಸ್ಸೇವತೆಮಾಮಗುಣಂಗುಣಾತ್ಪರಂಹೃದಾಕದಾವಾಯದಿವಾಗುಣಾತ್ಮಕಂ। ಸೊ
ಹಂಸ್ವಪಾದಾಂಚಿತರೇಣುಭಿಸ್ಸ್ಪೃಶನ್ಪುನಾತಿಲೋಕತ್ರಿತಯಂಯಥಾರವಿಃ ||೬೧||

ಯಃ-ಯಾವ ಪುರುಷನು,ಯದಾಕದಾವಾ-ಯಾವಕಾಲದಲ್ಲಿಯೇ ಆಗಲೀ, ಹೃದಾ-ನಿರ್ಮಲವಾದ ಅಂತಃಕರಣದಿಂದ, ಅಗುಣಂ-ಸತ್ವಾದಿಗುಣ ರಹಿತನಾದ, ಗುಣಾತ್-ಅವ್ಯಕ್ತರೂಪವಾದ ಮಾಯೆಗಿಂತಲು, ಪರಂ-ಅತಿರಿಕ್ತನಾದ, ಗುಣಾತ್ಮಕಂ-ಸರ್ವಜ್ಞತ್ವ ಲಾವಣ್ಯಾದಿಗುಣಯುಕ್ತಮಾದ ಶರೀರವುಳ್ಳ, ಮಾಂ-ನನ್ನನ್ನು, ಸತತೆ-ಭಕ್ತಿಯಿಂದ ಭಜಿಸುತ್ತಾನೋ, ಸಃ-ಅವನು, ಅಹಂ-ನನ್ನ ಸ್ವರೂಪನಾಗಿ, ಸ್ವಪಾದಾಂಚಿತರೇಣುಭಿಃ-ಸ್ವ-ಸ್ವಕೀಯವಾದ, ಪಾದ-ಪಾದದಿಂದ, ಅಂಚಿತ- ಹೊಂದಲ್ಪಟ್ಟ, ರೇಣುಭಿಃ-ಧೂಳಿಗಳಿಂದ, ಸಂಸ್ಪರ್ಶ-ಸ್ಪೃಶಿಸುತ್ತಿರುವನಾಗಿ, ರವಿರ್ಯಥಾ-ಸೂರ್ಯನಂತೆ, ಲೋಕತ್ರಿತಯಂ-ಮೂರುಲೋಕಗಳನ್ನು, ಪುನಾತಿ-ಪರಿಶುದ್ಧನನ್ನಾಗಿ ಮಾಡುತ್ತಾನೆ ॥

ಮೂ॥ ವಿಜ್ಞಾನಮೇತದಖಿಲಶ್ರುತಿಸಾರಮೇಕಂವೇದಾಂತವೇದ್ಯಚರಣೇನಮಯೈವಗೀತಂ । ಯ
ಶ್ಶ್ರದ್ಧಯಾಪರಿಪಠೇದ್ಗುರುಭಕ್ತಿಯುಕ್ತೋಮದ್ರೂಪಮೇತಿಯದಿಮದ್ವಚನೇಷುಭಕ್ತಿಃ ॥೬೧॥

ಯಃ-ಯಾವ ಪುರುಷನು, ವೇದಾಂತವೇದ್ಯಚರಣೇನ-ವೇದಾಂತ-ಉಪನಿಷದ್ವಾಕ್ಯಗಳಿಂದ, ವೇದ್ಯ-ತಿಳಿದುಕೊಳ್ಳತಕ್ಕ, ಚರಣೇನ-ಜಗಜ್ಜನ್ಮಾದಿ ರೂಪವಾದವ್ಯಾಪಾರವುಳ್ಳ, ಮಯೈವ-ನನ್ನಿಂದಲೆ, ಗೀತಂ-ಉಪದೇಶಮಾಡಲ್ಪಟ್ಟ, ಅಖಿಲಶ್ರುತಿಸಾರಂ-ಅಖಿಲ- ಸಮಸ್ತವಾದ, ಶ್ರುತಿ-ವೇದಗಳಲ್ಲಿ, ಸಾರಂ-ಸಾರಭೂತವಾದ, ವಿಜ್ಞಾನಂ- ಬ್ರಹ್ಮಜ್ಞಾನ ಜನಕವಾದ, ಏತತ್-ಈಗೀತೆಯೆಂಬದನ್ನು, ಶ್ರದ್ಧಯಾ-ಇದರಿಂದ ಫಲವುಂಟಾಗುವದೆಂಬ ನಿಶ್ಚಯದಿಂದ, ಗುರುಭಕ್ತಿಯುಕ್ತಃ-ಗುರು-ಗುರುವಿನಲ್ಲಿ, ಭಕ್ತಿ -ಭಕ್ತಿಯಿಂದ, ಯುಕ್ತಃ-ಕೂಡಿದವನಾಗಿ, ಪರಿಪಠೇತ್-ಪಠಿಸುವನೋ, ಮದ್ವಚನೇಷು-ನನ್ನ ಮಾತುಗಳಲ್ಲಿ, ಭಕ್ತಿಃ-ಭಕ್ತಿಯು, ಸ್ಯಾದ್ಯದಿ-ಇದ್ದದ್ದಾದರೆ, ಸಃ- ಆಪುರುಷನು, ಮದ್ರೂಪಂ-ನನ್ನ ಸ್ವರೂಪವನ್ನು, ಏತಿ-ಹೊಂದುತ್ತಾನೇ ॥೬೧॥

*ಇತಿ ಶ್ರೀಮದಧ್ಯಾತ್ಮರಾಮಾಯಣೆ ಉಮಾಮಹೇಶ್ವರ ಸಂವಾದೆ ಉತ್ತರಕಾಂಡೆ ಪಂಚಮಸ್ಸರ್ಗಃ.*

ಶ್ರೀಮಹಾದೇವ ಉವಾಚ॥

ಮೂ॥ ಏಕದಾಮುನಯಸ್ಸರ್ವೆಯಮುನಾತೀರವಾಸಿನಃ । ಆಜಗ್ಮೂ ರಾಘವಂದ್ರಷ್ಟುಂಭ
ಯಾಲ್ಲವಣರಕ್ಷಸಃ ... ... ॥೧॥

ಏಕದಾ-ಒಂದಾನೊಂದು ಕಾಲದಲ್ಲಿ, ಯಮುನಾತೀರವಾಸಿನಃ-ಯಮುನಾ-ಯಮುನಾನದಿಯ, ತೀರ-ದಡದಲ್ಲಿ, ವಾಸಿನಃ-ವಾಸಿಸುತ್ತಿರುವ, ಸರ್ವೆ - ಸಮಸ್ತರಾದ, ಮುನಯಃ-ಋಷಿಗಳು, ಲವಣರಕ್ಷಸಃ-ಲವಣಾಸುರನ,ಭಯಾತ್-ಭೀತಿಯುದೆಸೆಯಿಂದ,ರಾಘವಂ-ಶ್ರೀರಾಮನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ,ಆಜಗ್ಮುಃ-ಬಂದರು॥

ಮೂ॥ ಕೃತ್ವಾಗ್ರೆತುಮುನಿಶ್ರೇಷ್ಠ ಭಾರ್ಗವಂಚ್ಯವನೆಂದ್ವಿಜಾಃ । ಅಸಂಖ್ಯಾತಾಸ್ಸಮಾಯಾ
ತಾರಾಮಾದಭಯಕಾಂಕ್ಷಿಣಃ ... ... ॥೧॥

ಅಸಂಖ್ಯಾತಾಃ-ಅಪರಿಮಿತರಾದ, ದ್ವಿಜಾಸ್ತು-ಬ್ರಾಹ್ಮಣರಾದರೆ, ರಾಮಾತ್-ಶ್ರೀರಾಮನ ದೆಸೆಯಿಂದ, ಅಭಯಕಾಂಕ್ಷಿಣಃ-ಅಭಯ-ಲವಣಾಸುರನಿಂದ ಮಾಡಲ್ಪಟ್ಟ ಭೀತಿಯನಾಶವನ್ನು, ಕಾಂಕ್ಷಿಣಃ-ಇಚ್ಛೆಸಿದವರಾಗಿ, ಭಾರ್ಗವಂ-ಭೃಗುವಂಶೋತ್ಪನ್ನನಾದ, ಚ್ಯವನಂ-ಚ್ಯವನನೆಂಬ, ಮುನಿಶ್ರೇಷ್ಠಂ-ಋಷಿಶ್ರೇಷ್ಠನನ್ನು, ಅಗ್ರೇ-ಮುಂಭಾಗದಲ್ಲಿ, ಕೃತ್ವಾ-ಮಾಡಿ, ಸಮಾಯಾತಾಃ-ಬಂದರು ॥೧॥

ಮೂ॥ ತತ್ಪೂಜಯಿತ್ವಾಪರಯಾಭಕ್ತ್ಯಾರಘುಕುಲೋತ್ತಮಃ । ಉವಾಚಮಧುರಂವಾ
ಕ್ಯಂ ಹರ್ಷಯನ್ಮುನಿಮಂಡಲಂ ... ... ॥೨॥

ರಘುಕುಲೋತ್ತಮಃ-ರಘುವಂಶದಲ್ಲಿ ಶ್ರೇಷ್ಠನಾದ ಶ್ರೀರಾಮನು, ಪರಯಾ-ಉತ್ತಮವಾದ, ಭಕ್ತ್ಯಾ-ಭಕ್ತಿಯಿಂದ,ತಾನ್-ಆ ಮಹರ್ಷಿಗಳನ್ನು, ಪೂಜಯಿತ್ವಾ-ಅರ್ಚಿಸಿ, ಮುನಿಮಂಡಲಂ-ಮುನಿ-ಋಷಿಗಳ, ಮಂಡಲಂ-ಸಮೂಹವನ್ನು, ಹರ್ಷಯನ್-ಸಂತೋಷಗೊಳಿಸುತ್ತಿರುವನಾಗಿ, ಮಧುರಂ-ಮನೋಹರವಾದ, ವಾಕ್ಯಂ - ಮಾತನ್ನು, ಉವಾಚ-ಹೇಳಿದನು ... ... ॥೩॥

ಮೂ॥ ಕರವಾಣಿಮುನಿಶ್ರೇಷ್ಠಾಃಕಿಮಾಗಮನಕಾರಣಂ। ಧನ್ಯೋಸ್ಮಿಯದಿಯೂಯಂಮಾಂ
ಪ್ರೀತ್ಯಾದ್ರಷ್ಟುಮಿಹಾಗತಾಃ ... ... ॥೪॥

ಹೆ ಮುನಿಶ್ರೇಷ್ಠಾಃ-ಎಲೈ ಋಷಿಗಳಲ್ಲಿ ಉತ್ತಮರಾದವರೇ, ಆಗಮನಕಾರಣಂ-ಆಗಮನ ಬರುವದಕ್ಕೆ, ಕಾರಣಂ-ಹೇತುವು, ಕಿಂ-ಏನು, (ಆಗಮನಕೃತ್ಯೇ- ಬಂದಕಾರ್ಯದಲ್ಲಿ) ಕಿಂ-ಯಾವದನ್ನು, ಕರವಾಣಿ-ಮಾಡಲಿ, ಯದಿ-ಆದರೆ, ಯೂಯಂ-ನೀವುಗಳು, ಯತ್-ಯಾವಕಾರಣದ ದೆಸೆಯಿಂದ, ಮಾಂ-ನನ್ನನ್ನು,ದ್ರಷ್ಟುಂ-ನೋಡುವದಕ್ಕೋಸ್ಕರ, ಪ್ರೀತ್ಯಾ-ವಿಶ್ವಾಸದಿಂದ, ಇಹ-ಇಲ್ಲಿ, ಆಗತಾಃ-ಬಂದಿರೋ (ತತ್-ಆಕಾರಣದಿಂದ) ಅಹಂ-ನಾನು, ಧನ್ಯಃ-ಧನ್ಯನು, ಅಸ್ಮಿ-ಇದೇನು ॥೪॥

ಮೂ॥ ದುಷ್ಕರಂಚಿಕಾಪಿಯತ್ಕಾರ್ಯಂಭವತಾಂತತ್ಕರೋಮ್ಯಹಂ । ಆಜ್ಞಾಪಯಂತುಮಾಂಭೃ
ತ್ಯಂಬ್ರಾಹ್ಮಣಾದ್ದೈವತಂಹಿಮೇ ॥ ... ॥೫॥

ಅ॥ ರಾ ಟೀ॥ ಭವತಾಂ-ನಿಮ್ಮಗಳ, ಯತ್ಕಾರ್ಯಂ-ಯಾವ ಕೃತ್ಯವು. ದುಷ್ಕರಂಚಾಪಿ-ಮಾಡಲಸಾಧ್ಯವಾದರೂ, ತತ್-ಅದನ್ನು, ಅಹಂ-ನಾನು, ಕರೋಮಿ-ಮಾಡುತ್ತೇನೆ, ಹಿಂಯ

೧೦೩ ಸ್ಮಾತ್-ಯಾವ ಕಾರಣದ ದೆಶೆಯಿಂದ ಬ್ರಾಹ್ಮಣಾಃ-ಬ್ರಾಹ್ಮಣರು, ಮೇ-ನನಗೆ, ದೈವತಂ-ದೇವತಾಸ್ವರೂಪವೋ, ತತ್-ಆ ಕಾರಣದಿಂದ, ಭೃತ್ಯಂ-ಚಾಕರನಾದ,ಮಾಂ-ನನ್ನನ್ನು, ಆಜ್ಞಾಪಯಂತಿ-ಅಪ್ಪಣೆಯಂಕೊಡಿಸಿರಿ. .. .. ॥೫॥

ಮೂ॥ ತಚ್ಛ್ರುತ್ವಾ ಸಹಸಾ ಹೃಷ್ಟಶ್ಚ್ಯವನೋ ವಾಕ್ಯಮಬ್ರವೀತ್ ॥೫॥ ಉ॥ ಕಾ॥

ಟೀ॥ ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಚ್ಯವನಃ-ಚ್ಯವನನೆಂಬ ಮುನಿಯು, ಹೃಷ್ಟಃ-ಸಂತುಷ್ಟನಾಗಿ, ಸಹಸಾ - ಜಾಗ್ರತೆಯಾಗಿ, ವಾಕ್ಯಂ-ಮಾತನ್ನು, ಅ ಸ॥ ೬॥

ಬ್ರವೀತ್-ನುಡಿದನು. ... ... ... ॥೫॥

ಮೂ॥ ಮಧುನಾಮಾ ಮಹಾದೈತ್ಯಃ ಪುರಾ ಕೃತಯುಗೇ ಪ್ರಭೋ ॥೬॥ ಆಸೀದತೀವ ಧರ್ಮಾ
ತ್ಮಾ ದೇವಬ್ರಾಹ್ಮಣಪೂಜಕಃ । ತಸ್ಯ ತುಷ್ಟೋ ಮಹಾದೇವೋ ದದೌ ಶೂಲಮನುತ್ತಮಂ ॥೭॥ ಪ್ರಾಹ
ಚಾನೇನ ಯಂ ಹಂಸಿ ಸ ತು ಭಸ್ಮೀ ಭವಿಷ್ಯತಿ । ರಾವಣಸ್ಯಾನುಜಾ ಭಾರ್ಯಾ ತಸ್ಯ ಕುಂಭೀನಸೀ ಶ್ರುತಾ ॥

ಟೀ॥ ಹೇ ಪ್ರಭೋ-ಎಲೈ ಸ್ವಾಮಿಯೆ, ಪುರಾ-ಪೂರ್ವದಲ್ಲಿ, ಕೃತಯುಗೇ-ಕೃತಯುಗದಲ್ಲಿ, ಮಧುನಾಮಾ-ಮಧುವೆಂದು ಪೆಸರುಳ್ಳ, ಮಹಾದೈತ್ಯಃ-ಮಹಾರಾಕ್ಷಸನು, ಅತೀವ-ಬಹಳವಾಗಿ, ಧರ್ಮಾತ್ಮಾ-ಧರ್ಮಸ್ವಭಾವ ವುಳ್ಳವನು, ದೇವಬ್ರಾಹ್ಮಣಪೂಜಕಃ- ದೇವತೆಗಳನ್ನೂ ಬ್ರಾಹ್ಮಣರನ್ನೂ ಪೂಜಿಸುತ್ತಿರುವನು, ಆಸೀತ್-ಆದನು,ತಸ್ಯ-ಅತನಿಗೆ, ಮಹಾದೇವಃ-ಪರಮೇಶ್ವರನು, ತುಷ್ಟಂ-ಸಂತೃಪ್ತನಾಗಿ, ಅನುತ್ತಮಂ-ಸರ್ವೋತ್ತಮವಾದ, ಶೂಲಂ-ಶೂಲಾಯುಧವನ್ನು, ದದೌ-ಕೊಟ್ಟನು, ಅನೇನ-ಈ ಶೂಲದಿಂದ, ಯಂ-ಯಾವಪುರುಷನನ್ನು, ಹಂಸಿ-ಹೊಡೆಯುತ್ತೀಯೋ, ಸಃ-ಅವನು, ಭಸ್ಮೀಭವಿಷ್ಯತಿ-ಭಸ್ಮೀ ಭೂತನಾಗುವನು, ಇತಿಚ-ಇಂತೆಂದು, ಪ್ರಾಹ-ಹೇಳಿದನು, ರಾವಣಸ್ಯ-ರಾವಣಾಸುರನ, ಅನುಜಾ-ತಂಗಿಯಾದ, ಕುಂಭೀನಸೀ-ಕುಂಭೀನಸಿಯೆಂಬಾಕೆಯು, ತಸ್ಯ-ಆ ಮಧ್ವಸುರನಿಗೆ, ಭಾರ್ಯಾ-ಹೆಂಡತಿಯೆಂದು, ಶ್ರುತಾ-ಕೇಳಲ್ಪಟ್ಟಿದ್ದಳೆ ॥೮॥

ಮೂ ॥ ತಸ್ಯಾಂ ತು ಲವಣೋ ನಾಮ ರಾಕ್ಷಸೋ ಭೀಮವಿಕ್ರಮಃ । ಆಸೀದ್ದುರಾತ್ಮಾ ದುರ್ಧ
ರ್ಷೋ ದೇವಬ್ರಾಹ್ಮಣಹಿಂಸಕಃ ... ... ॥೯॥

ಟೀ॥ ತಸ್ಯಾಂತು-ಆ ಕುಂಭೀನಸಿಯಲ್ಲಿಯಾದರೆ, ಭೀಮವಿಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ದುರಾತ್ಮಾ-ದುರ್ಬುದ್ಧಿಯುಳ್ಳ, ದುರ್ಧರ್ಷಃ-ತಿರಸ್ಕರಿಸ ಲ

ಸಾಧ್ಯನಾದ, ದೇವಬ್ರಾಹ್ಮಣ ಹಿಂಸಕಃ-ದೇವ- ದೇವತೆಗಳಿಗೂ, ಬ್ರಾಹ್ಮಣ-ಬ್ರಾಹ್ಮಣರಿಗೂ, ಹಿಂಸಕಃ-ಹಿಂಸೆಯಂಗೈಯುತ್ತಿರುವ, ಲವಣೋನಾಮ-ಲವಣನೆಂದು ಪ್ರಸಿದ್ಧನಾದ ರಾಕ್ಷಸಃ-ಅಸುರನು, ಆಸೀತ್-ಆದನು. ... ... ... ||೯||

ಮೂ|| ಪೀಡಿತಾಸ್ತೇನರಾಜೇಂದ್ರವಯಂತ್ವಾಂಶರಣಂಗತಾಃ ||೯೫||

ಟೀ|| ಹೆ ರಾಜೇಂದ್ರ-ಎಲೈ ಚಕ್ರವರ್ತಿಯೆ, ವಯಂ-ನಾವುಗಳು, ತೇನ-ಆ ಲವಣಾಸುರನಿಂದ, ಪೀಡಿತಾಃ-ಬಾಧೆಸಲ್ಪಟ್ಟವರಾಗಿ, ತ್ವಾಂ-ನಿನ್ನನ್ನು, ಶರಣಂ-ರಕ್ಷಕನನ್ನಾಗಿ, ಗತಾಃ-ಹೊಂದಿದ್ದೇವೆ (ಇತಿ-ಇಂತೆಂದು, ಚ್ಯವನಃ-ಭಾರ್ಗವಚ್ಯವನೆಂಬ ಮುನಿಯು, ಅಬ್ರವೀತ್-ನುಡಿದನು.) ... ||೯೫||

ಮೂ|| ತಚ್ಛ್ರುತ್ವಾರಾಘವೋಪ್ಯಾಹವಾಭೀರ್ವೋಮುನಿಪುಂಗವಾಃ । ಲವಣಂನಾಶಯಿಷ್ಯಾ
ಮಿಗಚ್ಛಂತುವಿಗತಜ್ವರಾಃ ॥ ಇತ್ಯುಕ್ತ್ವಾಪ್ರಾಹರಾಮೋಪಿಭ್ರಾತೄನ್ಸೋಽವಧಿಷ್ಯತಿ । ಲವ
ಣಂರಾಕ್ಷಸಂದದ್ಯಾದ್ಬ್ರಾಹ್ಮಣೇಭ್ಯೋಭಯಂಮಹತ್ ||೧೧೫||

ಟೀ|| ರಾಘವಃ-ರಘುವಂಶೋತ್ಪನ್ನನಾದ, ರಾಮೋಪಿ-ಶ್ರೀರಾಮನೂ ಕೂಡಾ, ತತ್-ಆ ಚ್ಯವನಋಷಿಯ ವಾಕ್ಯವನ್ನು, ಶ್ರುತ್ವಾ-ಕೇಳಿ, ಆಹ- ಹೇಳಿದನು, ಹೆ ಮುನಿಪುಂಗವಾಃ-ಎಲೈ ಋಷಿಶ್ರೇಷ್ಠರುಗಳಿರಾ, ವಃ-ನಿಮಗೆ, ಭೀಃ-ಭಯವು, ಮಾಭವತು-ಆಗಬೇಡ, ಲವಣಂ-ಲವಣಾಸುರನನ್ನು, ನಾಶಯಿಷ್ಯಾಮಿ- ವಿನಾಶಿಸುವೆನು, ವಿಗತಜ್ವರಾಃ-ವಿಗತ-ಹೋದಂಥಾ, ಜ್ವರಾಃ-ದುಃಖವುಳ್ಳವರಾಗಿ, ಗಚ್ಛಂತು-ತೆರಳಿರಿ, ಇತಿ-ಇಂತೆಂದು, ಉಕ್ತ್ವಾ-ಹೇಳಿ, ಭ್ರಾತೄನ್-ತಮ್ಮಂದಿರುಗಳ ಕುರಿತು, ಲವಣಂ-ಲವಣನೆಂಬ, ರಾಕ್ಷಸಂ-ರಾಕ್ಷಸನನ್ನು, ಕೋವಾ-ಯಾವನಾದರೆ, ಹನಿಷ್ಯತಿ-ಸಂಹರಿಸುವನು, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೆ, ಮಹತ್-ಮಹತ್ತರವಾದ, ಅಭಯಂ-ಅಭಯವನ್ನು, ದದ್ಯಾತ್-ಕೊಡುವನು, ಇತಿ-ಇಂತೆಂದು, ಪ್ರಾಹ-ಹೇಳಿದನು. ... ... ||೧೧೫||

ಮೂ|| ತಚ್ಛ್ರುತ್ವಾಪ್ರಾಂಜಲಿಃಪ್ರಾಹಭರತೋರಾಘವಾಯವೈ। ಅಹಮೇವಹನಿಷ್ಯಾಮಿದೇವಾ
ಜ್ಞಾಪಯಮಾಂಪ್ರಭೋ ... ... ||೧೨೫||

ಟೀ|| ತತ್-ಆಮಾತನ್ನು, ಶ್ರುತ್ವಾವೈ-ಕೇಳುತ್ತಲೆ, ಭರತಃ-ಭರತನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ರಾಘವಾಯ-ಶ್ರೀರಾಮನಿಗೆ, ಪ್ರಾಹ-ಹೇಳಿದನು, ಹೆದೇವ-ಎಲೈ ಸ್ವಾಮಿಯೇ, ಅಹಮೇವ-ನಾನೆ, ಹನಿಷ್ಯಾಮಿ-ಸಂಹರಿಸುವೆನು, ಹೆಪ್ರಭೋ-ಎಲೈ ಸಮರ್ಥನೆ, ಮಾಂ-ನನ್ನನ್ನು, ಆಜ್ಞಾಪಯ-ಆಜ್ಞಾಪಿಸು ||೧೨೫||

ಮೂ॥ ತತೋರಾಮಂನಮಸ್ಕೃತ್ಯಶತ್ರುಘ್ನೋವಾಕ್ಯಮಬ್ರವೀತ್ । ಲಕ್ಷ್ಮಣೇನಮಹತ್ಕಾ
ರ್ಯಂಕೃತಂರಾಘವಸಂಯುಗೇ । ನಂದಿಗ್ರಾಮೇಮಹಾಬಾಹುರ್ಭರತೋದುಃಖಮನ್ವಭೂತ್॥೧೪॥ಅ
ಹಮೇವಗಮಿಷ್ಯಾಮಿಲವಣಸ್ಯವಧಾಯಚ।ತ್ವತ್ಪ್ರಸಾದಾದ್ರಘುಶ್ರೇಷ್ಠ ಹನ್ಯಾಂತಂರಾಕ್ಷಸಂಯುಧಿ॥

ಟೀ॥ ತತಃ-ಬಳಿಕ, ಶತ್ರುಘ್ನಃ-ಶತ್ರುಘ್ನನು, ರಾಮಂ-ಶ್ರೀರಾಮನಂ ಕುರಿತು, ನಮಸ್ಕೃತ್ಯ-ನಮಸ್ಕರಿಸಿ, ಹೆ ರಾಘವ-ಎಲೈ ಶ್ರೀರಾಮನೆ, ಸಂಯುಗೇ-ಕಾಳಗದಲ್ಲಿ, ಲಕ್ಷ್ಮಣೇನ-ಲಕ್ಷ್ಮಣನಿಂದ, ಮಹತ್ಕಾರ್ಯಂ-ಮಹಾಕಾರ್ಯವು, ಕೃತಂ-ಮಾಡಲ್ಪಟ್ಟಿತು, ಮಹಾಬಾಹುಃ-ಮಹಾ ಭುಜಪರಾಕ್ರಮಿಯಾದ, ಭರತಃ - ಭರತನು, ನಂದಿಗ್ರಾಮೇ-ನಂದಿಗ್ರಾಮದಲ್ಲಿ, ದುಃಖಂ-ವ್ಯಸನವನ್ನು, ಅನ್ವಭೂತ್-ಅನುಭವಿಸಿದನು ॥೧೪॥ ಲವಣಸ್ಯ-ಲವಣಾಸುರನ, ವಧಾಯ-ಸಂಹಾರಕ್ಕೋಸ್ಕರ, ಅಹಮೇವ-ನಾನೆ, ಗಮಿಷ್ಯಾಮಿ-ಹೋಗುವೆನು, ಹೆ ರಘುಶ್ರೇಷ್ಠ-ಎಲೈ ರಘುವಂಶಸ್ಥರಲ್ಲಿ ಉತ್ತಮನಾದವನೇ, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದದೆಸೆಯಿಂದ, ಯುಧಿ-ಕಾಳಗದಲ್ಲಿ, ತಂರಾಕ್ಷಸಂ -ಆ ರಾಕ್ಷಸನನ್ನು, ಹನ್ಯಾಂ-ಹೊಡೆಯುವೆನು, (ಇತಿ-ಇಂತೆಂದು) ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೫॥

ಮೂ॥ ತಚ್ಛ್ರುತ್ವಾಸ್ವಾಂಕಮಾರೋಪ್ಯಶತ್ರುಘ್ನಂಶತ್ರುಸೂದನಃ। ಪ್ರಾಹಾದ್ಯೈವಾಭಿಷೇ
ಕ್ಷ್ಯಾಮಿಮಧುರಾರಾಜ್ಯಕಾರಣಾತ್ ... ... ॥೧೬॥

ಟೀ॥ ಶತ್ರುಸೂದನಃ-ಶತ್ರುಸಂಹಾರಕನಾದ ಶ್ರೀರಾಮನು, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಶತ್ರುಘ್ನಂ-ಶತ್ರುಘ್ನನನ್ನು, ಸ್ವಾಂಕಂ-ತನ್ನ ತೊಡೆಯನ್ನು, ಆರೋಪ್ಯ-ಏರಿಸಿ, ಮಧುರಾರಾಜ್ಯಕಾರಣಾತ್-ಮಧುರಾ- ಮಧುರಾಪಟ್ಟಣದ, ರಾಜ್ಯಕಾರಣಾತ್-ರಾಜ್ಯಭಾರದ ಹೇತುವಿನದೆಸೆಯಿಂದ, ಅದ್ಯೈವ - ಈಗಲೆ, ಅಭಿಷೇಕ್ಷ್ಯಾಮಿ-ಪಟ್ಟಾಭಿಷೇಕಮಾಡುವೆನು (ಇತಿ-ಇಂತೆಂದು) ಪ್ರಾಹ-ಪೇಳಿದನು. ॥೧೬॥

ಮೂ॥ ಆನಾಯ್ಯಚಸುಸಂಭಾರಾನ್ ಲಕ್ಷ್ಮಣೇನಾಭಿಷೇಚನೇ। ಅನಿಚ್ಛಂತಮಪಿಸ್ನೇಹಾದಭಿಷೇಕ
ಮಕಾರಯತ್ ... ... ॥೧೭॥

ಟೀ॥ ಲಕ್ಷ್ಮಣೇನ-ಲಕ್ಷ್ಮಣಸ್ವಾಮಿಯಿಂದ, ಅಭಿಷೇಚನೇ-ಅಭಿಷೇಕವಿಷಯವಾಗಿ, ಸುಸಂಭಾರಾನ್-ಬೇಕಾದಪದಾರ್ಥಗಳನ್ನು, ಆನಾಯ್ಯ-ತರಿಸಿ, ಅನಿಚ್ಛಂತಮಪಿ-ಇಚ್ಛೆಸದಿರುವನಾದರೂ, ಸ್ನೇಹಾತ್-ಸ್ನೇಹದದೆಸೆಯಿಂದ, ಅಭಿಷೇಕಂ-ಅಭಿಷೇಕವನ್ನು, ಅಕಾರಯತ್-ಮಾಡಿಸಿದನು. ॥೧೭॥

ಮೂ|| ದತ್ವಾತಸ್ಮೈಶರಂದಿವ್ಯಂರಾಮಶ್ಶತ್ರುಘ್ನಮಬ್ರವೀತ್ । ಅನೇನಜಹಿಬಾಣೇನಲವಣಂ ಲೊಕಕಂಟಕಂ ... ... ||೧೮||

ಟೀ|| ರಾಮಃ-ಶ್ರೀರಾಮನು, ತಸ್ಮೈ-ಆ ಶತ್ರುಘ್ನನಿಗೆ, ದಿವ್ಯಂ-ಉತ್ತಮವಾದ, ಶರಂ-ಬಾಣವನ್ನು, ದತ್ವಾ-ಕೊಟ್ಟು, ಶತ್ರುಘ್ನಂ-ಶತ್ರುಘ್ನನಂಕುರಿತು, ಅನೇನ ಬಾಣೇನ-ಈ ನಿಡಿಗೋಲಿಂದ, ಲೊಕಕಂಟಕಂ-ಜಗತ್ತಿಗೆ ವೈರಿಯಾದ, ಲವಣಂ-ಲವಣಾಸುರನನ್ನು, ಜಹಿ-ಹೊಡಿ, (ಇತಿ-ಇತೆಂದು) ಅಬ್ರವೀತ್-ನುಡಿದನು ||೧೮||

ಮೂ|| ಸತುಸಂಪೂಜ್ಯತಚ್ಛೂಲಂಗೆಹೆಗಚ್ಛತಿಕಾನನಂ । ಭಕ್ಷಣಾರ್ಥಂತುಜಂತೂನಾಂನಾನಾಪ್ರಾಣಿವಧಾಯಚ ||೧೯|| ಸತುನಾಯಾತಿಸದನಂಯಾವದ್ವನಚರೋಭವೇತ್। ತಾವದೇವಪುರದ್ವಾರಿತಿಷ್ಠತ್ವಂಧೃತಕಾರ್ಮುಕಃ ||೨೦|| ಯೊತ್ಸ್ಯತೆಸತ್ವಯಾಕ್ರುದ್ಧಸ್ತದಾವಧ್ಯೋಭವಿಷ್ಯತಿ । ತಂ ಹತ್ವಾಲವಣಂಕ್ರೂರಂತದ್ವನಂಮಧುಸಂಜ್ಞಿತಃ ||೨೧|| ನಿವೇಶ್ಯನಗರಂತತ್ರತಿಷ್ಠತ್ವಂಮೆನುಶಾಸನಾತ್ । ಅಶ್ವಾನಾಂಪಂಚಸಾಹಸ್ರಂರಥಾನಾಂಚತದರ್ಧಕಂ ||೨೨|| ಗಜಾನಾಂಷಟ್ಶತಾನೀಹ ಪತ್ತೀನಾಮಯುತತ್ರಯಂ । ಆಗಮಿಷ್ಯತಿಪಶ್ಚಾತ್ತ್ವಾಮಗ್ರೇಸಾಧಯರಾಕ್ಷಸಂ ||೨೩||

ಟೀ|| ಸತು-ಆ ಲವಣಾಸುರನಾದರೆ, ಗೆಹೆ-ಮನೆಯಲ್ಲಿ, ತಚ್ಛೂಲಂ-ಆ ಶೂಲವನ್ನು, ಸಂಪೂಜ್ಯ-ಪೂಜಿಸಿ, ಜಂತೂನಾಂ-ಜೀವರಾಶಿಗಳ, ಭಕ್ಷಣಾರ್ಥಂ- ತಿನ್ನುವದಕ್ಕೋಸ್ಕರವೂ, ನಾನಾಪ್ರಾಣಿವಧಾಯಚ-ನಾನಾ-ಅನೇಕವಿಧವಾದ, ಪ್ರಾಣಿ-ಜಂತುಗಳ, ವಧಾಯಚ-ಸಂಹಾರಕ್ಕೋಸ್ಕರವೂ, ಕಾನನಂ-ಕಾಡನ್ನುಕುರಿತು, ಗಚ್ಛತಿ-ಹೋಗುತ್ತಾನೆ ||೧೯|| ಸತು-ಆ ರಾಕ್ಷಸನಾದರೆ, ಯಾವತ್-ಎಷ್ಟುವರಿಗೂ, ವನಚರಃ-ವನದಲ್ಲಿ ತಿರುಗುತ್ತಿರುವನು, ಭವೇತ್-ಆಗುತ್ತಾನೊ, ಸದನಂ- ಮನೆಯನ್ನುಕುರಿತು, ನಾಯಾತಿ-ಬರುವದಿಲ್ಲವೋ, ತಾವದೇವ-ಅಷ್ಟರೊಳಗಾಗಿ, ತ್ವಂ-ನೀನು, ಧೃತಕಾರ್ಮುಕಃ-ಧರಿಸಲ್ಪಟ್ಟ ಧನುಸ್ಸುಳ್ಳವನಾಗಿ, ಪುರದ್ವಾರಿ- ಊರುಬಾಗಿಲಲ್ಲಿ, ತಿಷ್ಠ- ನಿಲ್ಲು ||೨೦|| ಸಃ-ಆ ರಾಕ್ಷಸನು, ಕ್ರುದ್ಧಃ-ಕುಪಿತನಾಗಿ, ತ್ವಯಾ-ನಿನ್ನಸಂಗಡೆ, ಶೂಲಂವಿನಾ-ಶೂಲಾಯುಧವಿಲ್ಲದೆ, ಯೊತ್ಸ್ಯತೆ-ಯುದ್ಧಮಾಡುವನು, ತದಾ-ಆಗ, ವಧ್ಯಃ - ಸಂಹರಿಸತಕ್ಕವನು, ಭವಿಷ್ಯತಿ-ಆಗುವನು, ಕ್ರೂರಂ-ದಾರುಣನಾದ, ಮಧುಸಂಜ್ಞಿತಂ-ಮಧುವೆಂದು ಪೆಸರುಳ್ಳ, ತದ್ವನಂ-ಆ ವನದಲ್ಲಿ, ತಂಲವಣಂ-ಆ ಲವಣಾಸುರನನ್ನು, ಹತ್ವಾ-ಸಂಹರಿಸಿ, ತತ್ರ-ಅಲ್ಲಿ, ನಗರಂ-ಪಟ್ಟಣವನ್ನು, ನಿವೇಶ್ಯ-ಕಟ್ಟಿಸಿ, ಮೆ-ನನ್ನ, ಅನುಶಾಸನಾತ್-ಅಜ್ಞೆಯಡೆಸೆಯಿಂದ, ತ್ವಂ-ನೀನು, ತಿಷ್ಠ-ಇರು, ಅಶ್ವಾನಾಂ-ಕುದುರೆಗಳ, ಪಂಚಸಾಹಸ್ರಂ- ಐದುಸಾಹಸ್ರಗಳು, ರಥಾನಾಂ-ತೇರುಗಳ, ತದರ್ಧಕಂ-ಅದರಲ್ಲಿ ಅರ್ಧವು (ಅಂದರೆ ಎರಡುಸಾವಿರದ ಐನೂರುರಥಗಳು) ಗಜಾನಾಂ-ಆನೆ

ಗಳ, ಷಟ್ಛತಾನಿ-ಆರುನೂರುಗಳು,ಷಷ್ಟಿರ್ನಾಂ-ಕಾಲಾಳುಗಳ, ಅಯುತತ್ರಯಂ-ಮುವ್ವತ್ತುಸಾವಿರಗಳು, ಪಶ್ಚಾತ್-ಬಳಿಕ,ಆಗಮಿಷ್ಯತಿ-ಬರುವದು, ತ್ವಂ-ನೀನು,ಅಗ್ರೇ-ಮೊದಲು, ರಾಕ್ಷಸಂ-ಲವಣಾಸುರನಂ ಕುರಿತು, ಸಾಧಯು-ತೆರಳು,(ಅಥವಾರಾಕ್ಷಸಂ- ರಾಕ್ಷಸನನ್ನು, ಸಾಧಯ- ನಾಶಮಾಡು (ಇತಿ-ಇಂತೆಂದು, ಅಬ್ರವೀತ್-ನುಡಿದನು.)

ಮೂ|| ಇತ್ಯುಕ್ತ್ವಾ ಮೂರ್ಧ್ನ್ಯವಘ್ರಾಯ ಪ್ರೇಷಯಾಮಾಸರಾಘವಃ । ಶತ್ರುಘ್ನಂ ಮುನಿಭಿಸ್ಸಾರ್ಧಮಾಶೀರ್ಭಿರಭಿನಂದ್ಯಚ || ... ||೧೪||

ಟೀ|| ರಾಘವಃ-ಶ್ರೀರಾಮನು, ಇತಿ-ಇಂತೆಂದು, ಉಕ್ತ್ವಾ-ಹೇಳಿ, ಶತ್ರುಘ್ನಂ-ಶತ್ರುಘ್ನನನ್ನು, ಮೂರ್ಧ್ನಿ-ಶಿರದಲ್ಲಿ, ಅವಘ್ರಾಯ-ಮೂಸಿನೋಡಿ, ಆಶೀರ್ಭಿಃ- ಆಶೀರ್ವಾದಗಳಿಂದ, ಅಭಿನಂದ್ಯಚ-ಸಂತೋಷಗೊಳಿಸಿ, ಮುನಿಭಿಸ್ಸಾರ್ಧಂ-ಋಷಿಗಳ ಸಂಗಡ, ಪ್ರೇಷಯಾಮಾಸ-ಕಳುಹಿಸಿದನು. ||೧೪||

ಮೂ|| ಶತ್ರುಘ್ನೋಪಿ ತಥಾ ಚಕ್ರೇ ಯಥಾ ರಾಮೇಣ ಚೋದಿತಃ । ಹತ್ವಾ ಮಧುಸುತಂ ಯುದ್ಧೇ ಮಧುರಾಮಕರೋತ್ಪುರೀಂ|| ... ... ||೧೫||

ಟೀ|| ಶತ್ರುಘ್ನೋಪಿ-ಶತ್ರುಘ್ನನೂ ಕೂಡ, ರಾಮೇಣ-ಶ್ರೀರಾಮನಿಂದ, ಯಥಾ-ಹ್ಯಾಗೆ, ಚೋದಿತಃ-ಹೇಳಲ್ಪಟ್ಟನೋ, ತಥಾ-ಹಾಗೆ, ಚಕ್ರೇ-ಮಾಡಿದನು, ಅದು ಹ್ಯಾಗಂದರೆ) ಮಧುಸುತಂ-ಮಧು-ಮಧ್ವಸುರನ, ಸುತಂ-ಕುಮಾರನಾದ ಲವಣಾಸುರನನ್ನು, ಯುದ್ಧೇ-ಕಾಳಗದಲ್ಲಿ, ಹತ್ವಾ-ಸಂಹರಿಸಿ, ಮಧುರಾಂ-ಮಧುರೆಯೆಂಬ, ಪುರೀಂ-ಪಟ್ಟಣವನ್ನು, ಅಕರೋತ್-ಮಾಡಿದನು. ... ... ... ||೧೫||

ಮೂ|| ಸ್ಫೀತಾಂ ಜನಪದಾಂ ಚಕ್ರೇ ಮಧುರಾಂ ದಾನಮಾನತಃ|| ||೧೫||

ಟೀ|| ಮಧುರಾಂ-ಮಧುರಾಪಟ್ಟಣವನ್ನು, ದಾನಮಾನತಃ-ದಾನಮಾನಗಳ ದೆಸೆಯಿಂದ, ಸ್ಫೀತಾಂ-ಸಮೃದ್ಧವಾದ, ಜನಪದಾಂ-ಜನವಾಸಸ್ಥಾನ ಭೂತವಾದ್ದನ್ನಾಗಿ, ಚಕ್ರೇ-ಮಾಡಿದನು. ... ... ||೧೫

ಮೂ|| ಸೀತಾಪಿ ಸುಷುವೇ ಪುತ್ರೌ ದ್ವೌ ವಾಲ್ಮೀಕೇರಥಾಶ್ರಮೇ|| ||೧೬||

ಟೀ|| ಅಥ-ಬಳಿಕ, ಸೀತಾಪಿ-ಸೀತಾದೇವಿಯೂಸಹ, ವಾಲ್ಮೀಕೇಃ-ವಾಲ್ಮೀಕಿಮುನಿಯ, ಆಶ್ರಮೇ-ಆಶ್ರಮದಲ್ಲಿ, ದ್ವೌ-ಇಬ್ಬರಾದ, ಪುತ್ರೌ- ಅವಳಿ ಜವಳಿ ಮಕ್ಕಳನ್ನು, ಸುಷುವೇ-ಹೆತ್ತಳು. ... ... ||೧೬||

ಮೂ|| ಮುನಿಸ್ತಯೋರ್ನಾಮಚಕ್ರೇಕುಶೋಜ್ಯೇಷ್ಠೋನುಜೋಲವಃ । ಕ್ರಮೇಣವಿದ್ಯಾಸಂಪ
ನ್ನೌಸೀತಾಪುತ್ರೌಬಭೂವತುಃ ... ||೧೭||

ಟೀ|| ಮುನಿಃ-ವಾಲ್ಮೀಕಿಋಷಿಯು,ತಯೋಃ-ಆಮಕ್ಕಳಲ್ಲಿ, ಜ್ಯೇಷ್ಠಃ-ಹಿರಿಯವನು,ಕುಶಃ-ಕುಶನು, ಅನುಜಃ-ಕಿರಿಯುವನು, ಲವಃ-ಲವನು, ಇತಿ-ಇಂತೆಂದು,ನಾಮ-ಹೆಸರನ್ನು, ಚಕ್ರೇ-ಮಾಡಿದನು, ಸೀತಾಪುತ್ರೌ-ಸೀತಾದೇವಿಯ ಮಕ್ಕಳು, ಕ್ರಮೇಣ-ಕ್ರಮವಾಗಿ, ವಿದ್ಯಾಸಂಪನ್ನೌ- ವಿದ್ಯಾವಂತರು, ಬಭೂವತುಃ-ಆದರು. ||೧೭||

ಮೂ|| ಉಪನೀತೌಚಮುನಿನಾವೇದಾಧ್ಯಯನತ್ಪರೌ । ಕೃತ್ಸ್ನಂರಾಮಾಯಣಂಪ್ರಾಹ
ಕಾವ್ಯಂಬಾಲಕಯೋರ್ಮುನಿಃ|| ... ... ||೧೮||

ಟೀ|| ಮುನಿನಾ-ವಾಲ್ಮೀಕಿ ಮಹರ್ಷಿಯಿಂದ, ಉಪನೀತೌ-ಉಪನಯನ ಮಾಡಲ್ಪಟ್ಟರು, ವೇದಾಧ್ಯಯನ ತತ್ಪರೌ-ವೇದಾಧ್ಯಯನದಲ್ಲಿ ಆಸಕ್ತಿಯುಳ್ಳವರು (ಅಭೂತಾಂ-ಆದರು) ಮುನಿಃ-ವಾಲ್ಮೀಕಿಮುನಿಯು, ಕೃತ್ಸ್ನಂ-ಸಮಸ್ತವಾದ, ರಾಮಾಯಣಂ-ರಾಮಾಯಣವೆಂಬ, ಕಾವ್ಯಂ-ಕಾವ್ಯವನ್ನು, ಬಾಲಕಯೋಃ-ಹುಡುಗರಿಗೆ, ಪ್ರಾಹ-ಹೇಳಿದನು. .. .. .. ... ||೧೮||

ಮೂ|| ಶಂಕರೇಣಪುರಾಪ್ರೋಕ್ತಂಪಾರ್ವತ್ಯೈಪುರಹಾರಿಣಾ । ವೇದೋಪಬೃಂಹಣಾರ್ಥಾಯ
ತಾವಗ್ರಾಹಯತಪ್ರಭುಃ || ... ... ||೧೯||

ಟೀ|| ಪುರಾ-ಪೂರ್ವಕಾಲದಲ್ಲಿ, ಯತ್-ಯಾವ ರಾಮಾಯಣವು, ಪುರಹಾರಿಣಾ-ತ್ರಿಪುರಾಸುರ ಸಂಹಾರಕನಾದ, ಶಂಕರೇಣ-ಪರಮೇಶ್ವರನಿಂದ, ಪಾರ್ವತ್ಯೈ-ಪಾರ್ವತೀ ದೇವಿಗೆ, ಪ್ರೋಕ್ತಂ-ಹೇಳಲ್ಪಟ್ಟಿತೋ, ಪ್ರಭುಃ-ತತ್ವಾವಧಾರಣ ಸಮರ್ಥನಾದ ವಾಲ್ಮೀಕಿ ಮಹರ್ಷಿಯು, ವೇದೋಪಬೃಂಹಣಾರ್ಥಾಯ-ವೇದ- ವೇದ, ಉಪಬೃಂಹಣಾರ್ಥಾಯ-ತಾತ್ಪರ್ಯಾರ್ಥಜ್ಞಾನ ನಿಮಿತ್ತವಾಗಿ, ತೌ-ಆಕುಶಲವರನ್ನು, ಅಗ್ರಾಹಯತ-ಶಬ್ದವನ್ನು ಅರ್ಥವನ್ನು ಗ್ರಹಿಸಿದವರನ್ನಾಗಿಮಾಡಿದನು (ಅಂದರೆ ಈ ರಾಮಾಯಣವನ್ನು ಅರ್ಥವತ್ತಾಗಿ ಆ ವರೀರ್ವರಿಗೆ ಬೋಧಿಸಿದನು.) ... ... ||೧೯||

ಮೂ|| ಕುಮಾರೌಸ್ವರಸಂಪನ್ನೌಸುಂದರಾವಶ್ವಿನಾವಿವ । ತಂತ್ರೀತಾಳಸಮಾಯುಕ್ತೌ
ಗಾಯಂತೌಚೇರತುರ್ವನೇ || ... ... ||೨೦||

ಟೀ॥ ಅಶ್ವಿನಾವಿವ-ಅಶ್ವಿನೀ ದೇವತೆಗಳಂತೆ, ಸುಂದರೌ-ಸೊಬಗಾಗಿರುವ, ಸ್ವರಸಂಪನ್ನೌ-ಸ್ವರದಿಂದ ಕೂಡಿದ,ಕುಮಾರೌ-ಬಾಲಕರೀರ್ವರು, ತಂತ್ರೀತಾಳಸಮಾಯುಕ್ತೌ-ತಂತ್ರೀ-ವೀಣಾಧ್ವನಿಯಿಂದಲೂ, ತಾಳ-ತಾಳಧ್ವನಿಯಿಂದಲೂ, ಸಮಾಯುಕ್ತೌ-ಕೂಡಿದವರಾಗಿ, ಗಾಯಂತೌ-ಗಾನಮಾಡುತ್ತಿರುವರಾಗಿ, ವನೇ-ಅರಣ್ಯದಲ್ಲಿ,ಚೇರತುಃ-ಸಂಚರಿಸಿದರು. .. .. .. .. ॥೨೦॥

ಮೂ॥ ತತ್ರತತ್ರಮುನೀನಾಂತೌ ಸಮಾಜೇಸುರರೂಪಿಣೌ । ಗಾಯಂತಾವಭಿತೋದೃಷ್ಟ್ವಾ
ವಿಸ್ಮಿತಾಮುನಯೋಬ್ರುವನ್ ॥ ... ... ॥೨೧॥

ಟೀ॥ ತತ್ರತತ್ರ-ಅಲ್ಲಿಅಲ್ಲಿ, ಮುನೀನಾಂ-ಋಷಿಗಳ, ಸಮಾಜೇ-ಸಂಘಗಳಲ್ಲಿ, ಗಾಯಂತೌ-ಗಾನಮಾಡುತ್ತಿರುವ, ಸುರರೂಪಿಣೌ-ದೇವತಾ ರೂಪವುಳ್ಳ, ತೌ-ಆ ಕುಶಲವರನ್ನು, ಮುನಯಃ-ಋಷಿಗಳು, ದೃಷ್ಟ್ವಾ-ಕಂಡು, ಅಭಿತಃ-ಎಲ್ಲಾ ಕಡೆಯಲ್ಲಿಯೂ, ವಿಸ್ಮಿತಾಃ-ಆಶ್ಚರ್ಯಯುಕ್ತರಾಗಿ, ಅಬ್ರುವನ್-ನುಡಿದರು. ॥೨೧॥

ಮೂ॥ ಗಂಧರ್ವೇಷ್ವಿಹಕಿನ್ನರೇಷುಭುವಿವಾದೇವೇಷುದೇವಾಲಯೇಪಾತಾಳೇಪ್ಯಥವಾಚತುರ್ಮುಖ
ಗೃಹೇಲೋಕೇಷುಸರ್ವೇಷುಚ। ಅಸ್ಮಾಭಿಶ್ಚಿರಜೀವಿಭಿಶ್ಚಿರತರಂದೃಷ್ಟಾದಿಶಸ್ಸರ್ವತೋನಾಜ್ಞಾಯೀ
ದೃಶಗೀತವಾದ್ಯಗರಿಮಾನಾದರ್ಶಿನಾಶ್ರಾವಿಚ ॥ ॥೨೨॥

ಟೀ॥ಚಿರಜೀವಿಭಿಃ-ಬಹುಕಾಲದಿಂದ ಬದುಕುತಿರುವ, ಅಸ್ಮಾಭಿಃ-ನಮ್ಮಗಳಿಂದ, ಚಿರತರಂ-ಬಹುಕಾಲದಿಂದ, ದಿಶಃ-ದಿಕ್ಕುಗಳು, ದೃಷ್ಟಾಃ-ನೋಡಲ್ಪಟ್ಟವು, ಈದೃಶಗೀತವಾದ್ಯಗರಿಮಾ-ಈದೃಶ-ಇಂಥಾದ್ದಾದ, ಗೀತ-ಗಾನದ, ವಾದ್ಯ-ವಾದ್ಯಗಳ, ಗರಿಮಾ-ಅತಿಶಯವು, ಗಂಧರ್ವೇಷು-ದೇವತೆಗಳಲ್ಲಿಯೂ,ಕಿನ್ನರೇಷು-ಕಿನ್ನರರಲ್ಲಿಯೂ, ದೇವೇಷು-ದೇವತೆಗಳಲ್ಲಿಯೂ, ದೇವಾಲಯೇ-ಸ್ವರ್ಗಲೋಕದಲ್ಲಿಯೂ, ಪಾತಾಳೇಪಿ - ಪಾತಾಳಲೋಕದಲ್ಲಿಯೂ, ಅಥವಾ-ಹಾಗಲ್ಲವಿದ್ದರೆ, ಚತುರ್ಮುಖಗೃಹೇ - ಬ್ರಹ್ಮಲೋಕದಲ್ಲಿಯೂ, ಸರ್ವೇಷು-ಸಮಸ್ತವಾದ, ಲೋಕೇಷುಚ-ಲೋಕಗಳಲ್ಲಿಯೂ, ಸರ್ವತಃ-ಎಲ್ಲಿಯೂ ಕೂಡ, ನಾಜ್ಞಾಯಿ-ತಿಳಿಯಲ್ಪಡಲಿಲ್ಲ,ನಾದರ್ಶಿ-ನೋಡಲ್ಪಡಲಿಲ್ಲ,ನಾಶ್ರಾವಿಚ-ಕೇಳಲ್ಪಡಲೂ ಇಲ್ಲ. .. .. .. .. ॥೨೨॥

ಮೂ॥ ಏವಂಸ್ತುವದ್ಭಿರಖಿಲೈರ್ಮುನಿಭಿಃಪ್ರತಿವಾಸರಂ । ಆಸಾತೇಸುಖಮೇಕಾಂತೇವಾಲ್ಮೀಕೇ
ರಾಶ್ರಮೇಚಿರಂ ... ... ॥೨೩॥

ಟೀ॥ ಏವಂ-ಈಪರಿಯಾಗಿ, ಪ್ರತಿವಾಸರಂ-ಪ್ರತಿದಿನದಲ್ಲಿಯೂ, ಸ್ತುವದ್ಭಿಃ-ಶ್ಲಾಘಿಸುತ್ತಿರುವ, ಅಖಿಲೈಃ-ಸಮಸ್ತರಾದ, ಮುನಿಭಿಸ್ಸಹ-ಋಷಿಗಳ ಸಂಗಡ, ವಾಲ್ಮೀಕಿಃ-ವಾಲ್ಮೀಕಿಮುನಿಯು, ಆಶ್ರಮೇ-ಆಶ್ರಮದಲ್ಲಿ, ಏಕಾಂತೇ-ರಹಸ್ಯದಲ್ಲಿ, ಸುಖಂ-ಸುಖವಾಗಿ, ಚಿರಂ-ಬಹುಕಾಲವು, ಆಸಾತೇ-ಇದ್ದರು. ॥೨೩॥

ಮೂ॥ ಅಥರಾಮೋಶ್ವಮೇಧಾದೀಂಶ್ಚ ಕಾರಬಹುದಕ್ಷಿಣಾನ್ । ಯಜ್ಞಾನ್ಸ್ವರ್ಣಮಯೀಂ
ಸೀತಾಂವಿಧಾಯವಿಪುಲದ್ಯುತಿಃ ॥ ... ॥೨೪॥

ಟೀ॥ ಅಥ-ಬಳಿಕ, ವಿಪುಲದ್ಯುತಿಃ-ಬಹು ಕಾಂತಿಯುಳ್ಳ, ರಾಮಃ-ಶ್ರೀರಾಮನು, ಸ್ವರ್ಣಮಯೀಂ-ಸುವರ್ಣವಿಕಾರವಾದ, ಸೀತಾಂ-ಸೀತಾದೇವಿಯನ್ನು, ವಿಧಾಯ-ಮಾಡಿಕೊಂಡು, ಬಹುದಕ್ಷಿಣಾನ್-ಬಹಳ ದಕ್ಷಿಣಾಭಾಗವುಳ್ಳ, ಅಶ್ವಮೇಧಾದೀನ್-ಅಶ್ವಮೇಧವೇ ಮೊದಲಾಗಿ ಉಳ್ಳ, ಯಜ್ಞಾನ್-ಯಾಗಂಗಳನ್ನು, ಚಕ್ರೇ-ಮಾಡಿದನು. ॥೨೪॥

ಮೂ॥ ತಸ್ಮಿನ್ವಿತಾನೇಋಷಯಸ್ಸರ್ವರಾಜರ್ಷಯಸ್ತಥಾ । ಬ್ರಾಹ್ಮಣಾಃಕ್ಷತ್ರಿಯಾವೈ
ಶ್ಯಾಸ್ಸಮಾಜಗ್ಮುರ್ದಿದೃಕ್ಷವಃ ॥ ... ... ॥೨೫॥

ಟೀ॥ ತಸ್ಮಿನ್ವಿತಾನೇ-ಆ ರಾಜಸದಸ್ಸಿನಲ್ಲಿ, ಋಷಯಃ-ಮುನಿಗಳು, ರಾಜರ್ಷಯಃ-ರಾಜರ್ಷಿಗಳು, ತಥಾ-ಹಾಗೆ, ಬ್ರಾಹ್ಮಣಾಃ-ಬ್ರಾಹ್ಮಣರು, ಕ್ಷತ್ರಿಯಾಃ- ಕ್ಷತ್ರಿಯರು, ವೈಶ್ಯಾಃ-ವೈಶ್ಯರು (ಯಜ್ಞಂ-ಯಾಗವನ್ನು,) ದಿದೃಕ್ಷವಃ-ನೋಡಲಿಚ್ಛೆಯುಳ್ಳವರಾಗಿ, ಸಮಾಜಗ್ಮುಃ-ಬಂದರು. ॥೨೫॥

ಮೂ॥ ವಾಲ್ಮೀಕಿರಪಿಸಂಗೃಹ್ಯಗಾಯಂತೌತೌಕುಶೀಲವೌ । ಜಗಾಮಋಷಿವಾಟಸ್ಯಸ
ಮೀಪಂಮುನಿಪುಂಗವಃ॥ ... ... ॥೨೬॥

ಟೀ॥ ಮುನಿಪುಂಗವಃ-ಋಷಿಶ್ರೇಷ್ಠನಾದ, ವಾಲ್ಮೀಕಿರಪಿ-ವಾಲ್ಮೀಕಿಮುನಿಯೂ ಕೂಡಾ, ಗಾಯಂತೌ-ಗಾನಮಾಡುತ್ತಿರುವ, ತೌಕುಶೀಲವೌ-ಆಗಾಯಕರಾದ ಕುಶಲವರನ್ನು, ಸಂಗೃಹ್ಯ-ಕರೆದುಕೊಂಡು, ಋಷಿವಾಟಸ್ಯ-ಯಾಗಶಾಲೆಯ-ಸಮೀಪಂ-ಸಮೀಪದಲ್ಲಿ, ಜಗಾಮ-ಬಂದನು. ॥೨೬॥

ಮೂ॥ ತತ್ರೈಕಾಂತಸ್ಥಿತಂಶಾಂತಂಸಮಾಧಿವಿರಮೇಮುನಿಂ । ಕುಶಃಪಪ್ರಚ್ಛವಾಲ್ಮೀಕಿಂಜ್ಞಾ
ನಶಾಸ್ತ್ರಂಕಥಾಂತರೇ ॥ ... ... ॥೨೭॥

ಟೀ॥ ಸಮಾಧಿವಿರಮೇ-ಸಮಾಧಿಯೋಗವು ಪೂರ್ತಿಯಾಗುತಿರಲಿಕಾಗಿ, ತತ್ರ-ಆ ಪ್ರದೇಶದಲ್ಲಿ, ಏಕಾಂತೇಸ್ಥಿತಂ-ಏಕಾಂತ-ವಿಜನವಾದ ಪ್ರದೇಶದಲ್ಲಿ, ಸ್ಥಿತಂ-ಇರುವ, ಶಾಂತಂ-ಶಾಂತಮನಸ್ಕನಾದ, ಮುನಿಂ-ಮನನಶೀಲನಾದ, ವಾಲ್ಮೀಕಿಂ-ವಾಲ್ಮೀಕಿಮುನಿಯನ್ನು, ಕುಶಃ-ಕುಶನು, ಕಥಾಂತರೇ-ಪ್ರಸ್ತಾವದಮಧ್ಯೆ-ಜ್ಞಾನಶಾಸ್ತ್ರಂ-ಜ್ಞಾನ-ತತ್ವಜ್ಞಾನ ಕಾರಣವಾದ,ಶಾಸ್ತ್ರಂ-ಶಾಸ್ತ್ರವನ್ನು,ಪಪ್ರಚ್ಛ-ಕೇಳಿದನು. .. ... .. ॥೩೭॥

ಮೂ॥ ಭಗವಚ್ಛ್ರೋತುಮಿಚ್ಛಾಮಿಸಂಕ್ಷೇಪಾದ್ಭವತೋಖಿಲಂ । ದೇಹಿನಸ್ಸಂಸ್ಕೃತಿರ್ಬಂಧಃಕ
ಥಮುತ್ಪದ್ಯತೇದೃಢಃ ॥ ... ... ॥೩೮॥

ಟೀ॥ ಹೆ ಭಗವನ್-ಎಲೈ-ಪೂಜ್ಯನೆ, ದೇಹಿನಃ-ಶರೀರಧಾರಿಗೆ, ಸಂಸೃತಿಃ-ಸಂಸಾರರೂಪವಾದ, ದೃಢಃ-ದೃಢವಾದ, ಬಂಧಃ-ಬಂಧವು, ಕಥಂ-ಹ್ಯಾಗೆ, ಉತ್ಪದ್ಯತೆ-ಹುಟ್ಟುತ್ತದೆ, ಭವತಃ-ನಿನ್ನ, ಸಕಾಶಾತ್-ಸನ್ನಿಧಾನದಿಂದ, ಸಂಕ್ಷೇಪಾತ್-ಕೊಂಚವಾಗಿ, ಅಖಿಲಂ-ಸಮಸ್ತವನ್ನು, ಶ್ರೋತುಂ-ಕೇಳುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ. ॥೩೮॥

ಮೂ॥ ಕಥಂವಿಮುಚ್ಯತೇದೇಹೀದೃಢಬಂಧಾದ್ಭವಾಭಿಧಾತ।ವಕ್ತುಮರ್ಹಸಿಸರ್ವಜ್ಞಮಹ್ಯಂ
ಶಿಷ್ಯಾಯತೇಮುನೆ ॥ ... ... ॥೩೯॥

ಟೀ॥ ಹೆ ಸರ್ವಜ್ಞ-ಎಲೈ ಸಮಸ್ತವನ್ನು ತಿಳಿದವನೆ, ದೇಹೀ-ಶರೀರಿಯು, ಭವಾಭಿಧಾತ್-ಸಂಸಾರವೆಂಬ ಹೆಸರುಳ್ಳ, ದೃಢಬಂಧಾತ್-ದೃಢವಾದ ಬಂಧನದ ದೆಸೆಯಿಂದ, ಕಥಂ-ಹ್ಯಾಗೆ, ವಿಮುಚ್ಯತೆ-ಬಿಡೆಗಡೆಯಾಗುವನು, ಹೇ ಮುನೆ-ಎಲೈ ಮನನಶೀಲನಾದವನೆ, ತೆ-ನಿನಿಗೆ, ಶಿಷ್ಯಾಯ-ಶಿಷ್ಯನಾದ, ಮಹ್ಯಂ-ನನಿಗೆ, ವಕ್ತುಂ- ಹೇಳುವದಕ್ಕೆ, ಅರ್ಹಸಿ-ಯೋಗ್ಯನಾಗಿದ್ದೀ, .. .. .. ॥೩೯॥

ವಾಲ್ಮೀಕಿಮುನಿಯು ಹೇಳುವನು.

ಮೂ॥ ವಾಲ್ಮೀಕಿ ರುವಾಚ—ಶೃಣುವಕ್ಷ್ಯಾಮಿತೇಸರ್ವಂಸಂಕ್ಷೇಪಾದ್ಬಂಧಮೋಕ್ಷಯೋಃ ।
ಸ್ವರೂಪಂಸಾಧನಂಚಾಪಿಮತ್ತಶ್ಶೃಣುತ್ವಾಯಥೋದಿತಂ ॥೪೦॥ ತಥೈವಾಚರಭದ್ರಂತೇಜೀವನ್ಮು
ಕ್ತೋಭವಿಷ್ಯಸಿ ॥ ... ... ... ॥೪೦½॥

ಟೀ॥ ತೆ-ನಿನಿಗೆ, ಸಂಕ್ಷೇಪಾತ್-ಶಬ್ದಸಂಕೋಚದ ದೆಶೆಯಿಂದ, ಬಂಧಮೋಕ್ಷಯೋಃ- ಬಂಧಮೋಕ್ಷಂಗಳ, ಸ್ವರೂಪಂ-ಸ್ವರೂಪವನ್ನು, ಸಾಧನಂಚಾಪಿ - ಬಂಧಮೋಕ್ಷಗಳ ಸಾಧನವನ್ನು, ಸರ್ವಂ-ಸಮಸ್ತವನ್ನು, ತೆ-ನಿನಿಗೆ, ವಕ್ಷ್ಯಾಮಿ-ಪೇಳುವೆನು, ಶೃಣು-ಕೇಳು, ಮತ್ತಃ-ನನ್ನ ದೆಶೆಯಿಂದ, ಯಥಾ-ಹ್ಯಾಗೆ, ಉದಿತಂ-ಹೇಳಲ್ಪಡುತ್ತೋ, ತಥೈವ-ಹಾಗೆಯೆ, ಶ್ರುತ್ವಾ-ಕೇಳಿ, ಆಚರ-ಅನುಷ್ಠಾನಮಾಡು, ತೆ-ನಿನಿಗೆ, ಭದ್ರಂ-ಶುಭವು, ಅಸ್ತು-ಆಗಲಿ, ಜೀವನ್ಮುಕ್ತಃ-ಜೀವನ್ಮುಕ್ತನು, ( ದೇಹಾಭಿಮಾನವರ್ಜಿತನಾಗಿ ಜ್ಞಾನಿಯಾದವನು) ಭವಿಷ್ಯಸಿ-ಆಗುವಿ. ॥೪೦॥

ಮೂ॥ ದೇಹಏವಮಹಾಗೇಹಮದೇಹಸ್ಯಚಿದಾತ್ಮನಃ। ತಸ್ಯಾಹಂಕಾರಏವಾಸ್ಮಿನ್ಮಂತ್ರೀತೇನೈವಕ

ಲ್ಪಿತಃ । ದೇಹಗೇಹಾಭಿಮಾನಂಸ್ವಂಸಮಾರೋಪ್ಯಚಿದಾತ್ಮನಿ ॥ ತೇನತಾದಾತ್ಮ್ಯಮಾಪನ್ನಸ್ಸ್ವ

ಚೆಷ್ಟಿತಮಶೇಷತಃ । ವಿದಧಾತಿಚಿದಾನಂದೇತದ್ಭಾಸಿತವಪುಸ್ಸ್ವಯಂ ॥ ॥೪೩॥

ಟೀ॥ ಅದೇಹಸ್ಯ-ವಸ್ತುತಃದೇಹಸಂಬಂಧ ರಹಿತನಾದ, ಚಿದಾತ್ಮನಃ-ಚೈತನ್ಯರೂಪನಾದ ಆತ್ಮನಿಗೆ, ದೆಹಏವ- ಶರೀರವೆ, ಮಹಾಗೆಹಂ-ದೊಡ್ಡಮನೆಯು, ತಸ್ಯ-ಆ ಚಿದಾತ್ಮನಿಗೆ, ಅಸ್ಮಿನ್-ಈ ದೇಹದಲ್ಲಿ, ಅಹಂಕಾರಏವ-ಅಹಂಕಾರವೆ, ಮಂತ್ರೀ-ಮಂತ್ರಿಯಾಗಿ, ತೆನೈವ-ಆ ಆತ್ಮನಿಂದಲೆ, ಕಲ್ಪಿತಃ-ಆರೋಪಿಸಲ್ಪಟ್ಟಿತು, (ಅಂದರೆ ಆತ್ಮಸಾನ್ನಿಧ್ಯಮಾತ್ರದಿಂದ ಮಾಯಾಪರಿಣಾಮ ರೂಪವಾದ ಅಹಂಕಾರವು ಕಲ್ಪಿತವಾಯಿತು) (ಸಃ-ಆ ಅಹಂಕಾರವು) ಸ್ವಂ-ಸ್ವಕೀಯವಾದ, ದೆಹಗೆಹಾಭಿಮಾನಂ-ದೇಹ - ಶರೀರವೆಂಬ, ಗೆಹ -ಮನೆಯು ವಿಷಯವಾದ, ಅಭಿಮಾನಂ-ಅಭಿಮಾನವನ್ನು, (ಅಂದರೆ ನನ್ನದೆಂಬ ಅಭಿಮಾನವನ್ನು) ಚಿದಾತ್ಮನಿ-ಶುದ್ಧ ಚೈತನ್ಯ ರೂಪನಾದ ಆತ್ಮನಲ್ಲಿ, ಸಮಾರೋಪ್ಯ-ಆರೋಪಿಸಿ, ತೆನ-ಆ ಶುದ್ಧ ಚೈತನ್ಯನಿಂದ, ತಾದಾತ್ಮ್ಯಂ-ಅಭೇದವನ್ನು, ಆಪನ್ನಃ-ಹೊಂದಿದವನಾಗಿ, ಸ್ವಚೆಷ್ಟಿತಂ-ತನ್ನ ಮಂತ್ರಿತ್ವಯುಕ್ತವಾದ ವ್ಯಾಪಾರವನ್ನು, ಅಶೇಷತಃ-ಸಮಸ್ತವನ್ನು, ಚಿದಾನಂದೆ-ಸಚ್ಚಿದಾನಂದ ಸ್ವರೂಪನಾದ ಆತ್ಮನಲ್ಲಿ, ವಿದಧಾತಿ-ಆರೋಪಿತವಾಗಿ ಮಾಡುತ್ತಾನೆ, ಸ್ವಯಂ-ತಾನು, ತದ್ಭಾಸಿತವಪುಃ-ತತ್-ಆ ಚಿದಾನಂದಾತ್ಮನಿಂದ, ಭಾಸಿತ-ಪ್ರಕಾಶಿಸಲ್ಪಟ್ಟ, ವಪುಃ-ಶರೀರವುಳ್ಳವನಾದನು. ॥೩೪॥

ಮೂ॥ ತೇನಸಂಕಲ್ಪಿತೋದೇಹೀಸಂಕಲ್ಪನಿಗಳಾವೃತಃ । ಪುತ್ರದಾರಗೃಹಾದೀನಿಸಂಕಲ್ಪಯ

ತಿಚಾನಿಶಂ ... ... ... ॥೪೪॥

ಟೀ॥ ತೆನ-ಆ ಅಹಂಕಾರದಿಂದ, ಸಂಕಲ್ಪಿತಃ-ಸಂಕಲ್ಪಗಳಂಮಾಡಲೆಂದು ಸಂಕಲ್ಪಕ್ಕೆ ವಿಷಯವಾಗಿ ಮಾಡಲ್ಪಟ್ಟ, ದೆಹೀ-ದೇಹಾಭಿಮಾನಿಯು (ಅಂದರೆ ಜೀವಭಾವಾಪ

ನ್ನನ್ನು, ಸಂಕಲ್ಪನಿಗಳಾವೃತಃ-ಸಂಕಲ್ಪ-ಸಂಕಲ್ಪವೆಂಬ, ನಿಗಳ-ಬಂಧನನಿಂದ, ಆವೃತಃ-ಬದ್ಧನಾದವನಾಗಿ, ಅನಿಶಂ-ನಿರಂತರವು, ಪುತ್ರದಾರಗೃಹಾಜೀನಿ-ಪುತ್ರ- ಮಗನು, ದಾರ-ಹೆಂಡತಿಯು, ಗೃಹ-ಮನೆಯು, ಆಜೀನಿ-ಮೊದಲಾಗಿಉಳ್ಳಉಪಕರಣ ಸಾಮಗ್ರಿಗಳನ್ನು, ಸಂಕಲ್ಪಯತಿ-ಅಪೇಕ್ಷಿಸುತ್ತಾನೇ ||೪೪||

ಮೂ॥ ಸಂಕಲ್ಪಯನ್ಸ್ವಯಂದೇಹೀಪರಿಶೋಚತಿಸರ್ವದಾ । ತ್ರಯಸ್ತಸ್ಯಾಹವೋದೇಹಾ
ಅಧಮೋತ್ತಮಮಧ್ಯಮಾಃ।ತಮಸ್ಸತ್ವರಜಸ್ಸಂಜ್ಞಾ ಜಗತಃಕಾರಣಂಸ್ಥಿತೇಃ ||೪೫||

ಟೀ॥ ದೇಹೀ-ದೇಹಾಭಿಮಾನಿಯಾದ ಜೀವನು, ಸ್ವಯಂ-ತಾನು, ಸಂಕಲ್ಪಯನ್-ಕೋರುವಂಥಾವನಾಗಿ, ಸರ್ವದಾ-ಸರ್ವಕಾಲದಲ್ಲಿಯೂ, ಪರಿಶೋಚತಿ-ದುಃಖಿಸುತ್ತಾನೆ, ತಸ್ಯಾಹಮಃ- ಆ ಅಹಂಕಾರಕ್ಕೆ, ತ್ರಯಃ-ಮೂರಾದ, ತಮಸ್ಸತ್ವರಜಸ್ಸಂಜ್ಞಾಃ-ತಮಸ್ಸತ್ವರಜಸ್ಸುಗಳೆಂಬ ಹೆಸರುಗಳುಳ್ಳ, ಅಧಮೋತ್ತಮಮಧ್ಯಮಾಃ-ನಿಕೃಷ್ಟವಾಗಿ ಉತ್ತಮವಾಗಿಯೂ, ಮಧ್ಯಮವಾಗಿಯೂ ಇರುವ, ದೇಹಾಃ-ಶರೀರಗಳೂ ಜಗತಃ-ಜಗತ್ತಿನ, ಸ್ಥಿತೇಃ-ಇರುವದಕ್ಕೆ, ಕಾರಣಂ-ಕಾರಣವು ||೪೫||

ಮೂ॥ ತಮೋರೂಪಾದ್ಧಿಸಂಕಲ್ಪಾನ್ನಿತ್ಯಂತಾಮಸಚೇಷ್ಟಯಾ।ಅತ್ಯಂತಂತಾಮಸೋಭೂತ್ವಾ
ಕ್ರಿಮಿಕೀಟತ್ವಮಾಪ್ನುಯಾತ್ ... ... ||೪೬||

ಟೀ॥ ತಮೋರೂಪಾತ್-ತಮೋಗುಣ ಪ್ರಾಧಾನ್ಯದಿಂದ ಮಾಡಲ್ಪಟ್ಟ ಸಂಕಲ್ಪದವೇಳೆಯಿಂದ, ನಿತ್ಯಂ-ನಿರಂತರವು, ತಾಮಸಚೇಷ್ಟಯಾ-ತಮೋಗುಣಕಾರ್ಯಾನುಕೂಲವಾದ ಚೇಷ್ಟೆಯಿಂದ, ಅತ್ಯಂತಂ-ಬಹಳವಾಗಿ, ತಾಮಸಃ-ತಮೋಗುಣಪ್ರಧಾನನು, ಭೂತ್ವಾ-ಆಗಿ, ಕ್ರಿಮಿಕೀಟತ್ವಂ - ಕ್ರಿಮಿಕೀಟಾದಿಗಳಲ್ಲಿ ಜನ್ಮವನ್ನು, ಆಪ್ನುಯಾತ್-ಹೊಂದುವನು ... ... ||೪೬||

ಮೂ॥ ಸತ್ವರೂಪೋಹಿಸಂಕಲ್ಪೋಧರ್ಮಜ್ಞಾನಪರಾಯಣಃ । ಅದೂರಮೋಕ್ಷಸಾಂಮ್ರಾ
ಜ್ಯಸ್ಸುಖರೂಪೋಹಿತಿಷ್ಠತಿ ... ... ||೪೭||

ಟೀ ॥ (ಯಸ್ಯ-ಯಾವಪುರುಷನಿಗೆ), ಸತ್ವರೂಪಃ-ಸತ್ವಗುಣಪ್ರಧಾನ ರೂಪವಾದ, ಸಂಕಲ್ಪಃ-ಇಚ್ಛೆಯು, ಜಾಯತೇ-ಹುಟ್ಟುವದೋ,ಸಃ-ಆಪುರುಷನು, ಧರ್ಮಜ್ಞಾನಪರಾಯಣಃ-ಧರ್ಮದಲ್ಲಿಯೂ ಜ್ಞಾನದಲ್ಲಿಯೂ ಆಸಕ್ತಿಯುಳ್ಳವನಾಗಿ, ಅದೂರಮೋಕ್ಷಸಾಮ್ರಾಜ್ಯಃ-ಅದೂರ-ಸಮೀಪವರ್ತಿಯಾದ, ಮೋಕ್ಷಸಂಪತ್ತುಳ್ಳವನಾಗಿ, ಸುಖರೂಪಃ-ಸುಖವಂತನಾಗಿ, ತಿಷ್ಠತಿಹಿ-ಇರುತ್ತಾನಷ್ಟೆ ... ||೪೭||

ಮೂ॥ ರಜೋರೂಪೋಹಿಸಂಕಲ್ಪೋಲೋಕೇಸವ್ಯವಹಾರವಾನ್॥ ಪರಿತಿಷ್ಠತಿಸಂಸಾರೇಪುತ್ರ
ದಾರಾನುರಂಜಿತಃ ॥೪೮॥ ತ್ರಿವಿಧಂತುಪರಿತ್ಯಜ್ಯರೂಪಮೇತನ್ಮಹಾಮತೇ ॥೪೯॥

ಟೀ॥ ಯಸ್ಯ-ಯಾವಪುರುಷನಿಗೆ, ರಜೋರೂಪಃ-ರಜೋಗುಣ ಪ್ರಧಾನವಾದ, ಸಂಕಲ್ಪಃ-ಅಭಿಲಾಷೆಯು, (ಹುಟ್ಟುತದೋ) ಸಃ-ಅವನು, ಲೋಕೇ-ಲೋಕದಲ್ಲಿ, ವ್ಯವಹಾರವಾನ್-ವ್ಯಾವಹಾರಿಕಪ್ರಪಂಚದಲ್ಲಿ ದೃಷ್ಟಿಯುಳ್ಳವನಾಗಿ, ಸಂಸಾರೇ - ಸಂಸಾರದಲ್ಲಿ, ಪುತ್ರದಾರಾನುರಂಜಿತಃ-ಮಕ್ಕಳಿಂದಲು ಹೆಂಡತಿಗಳಿಂದಲೂ ಸಂತೋಷಗೊಂಡವನಾಗಿ, ಪರಿತಿಷ್ಠತಿ-ಇರುತ್ತಾನೆ ॥ ೪೮ ॥ ಹೇಮಹಾಮತೇ-ಎಲೈ ಮಹಾಬುದ್ಧಿಶಾಲಿಯೆ, -ತ್ರಿವಿಧಂ-ಮೂರುಬಗೆಯುಳ್ಳ, ಎತತ್‌ರೂಪಂ-ಸಾತ್ವಿಕರಾಜಸತಾಮಸಗಳೆಂಬ ಮೂರು ಬಗೆಗಳುಳ್ಳ ಸಂಕಲ್ಪವನ್ನು, ಪರಿತ್ಯಜ್ಯ-ತ್ಯಾಗಮಾಡಿ (ಶಾಮ್ಯತಿ-ಶಮನವನ್ನು ಬಹೊಂದುತ್ತಾನೆ,) .. ॥೪೯॥

ಮೂ॥ ಸಂಕಲ್ಪಃಪರಮಾಪ್ನೋತಿಪದಮಾತ್ಮಪರಿಕ್ಷಯೆ । ದೃಷ್ಟೀಸ್ಸರ್ವಾಃಪರಿತ್ಯಜ್ಯನಿಯ
ಮ್ಯಮನಸಾಮನಃ ... ... ॥೫೦॥

ಟೀ॥ ಆತ್ಮಪರಿಕ್ಷಯೆಸತಿ-ಆತ್ಮ-ಸಂಕಲ್ಪಮಾದ ಪರಿಕ್ಷಯೆಸತಿ-ನಾಶಮಾಗುತಿರಲೀಕಾಗಿ,ಮನಸಾ-ಮನದಿಂದ,ಮನಃ-ಮನಸ್ಸನ್ನು,ನಿಯಮ್ಯ-ನಿಗ್ರಹಿಸಿ, ಸರ್ವಾಃ-ಸಮಸ್ತವಾದ,ದೃಷ್ಟೀಃ-ಬಾಹ್ಯದೃಷ್ಟಿಯನ್ನು, ಪರಿತ್ಯಜ್ಯ-ಬಿಟ್ಟು, ಸಂಕಲ್ಪಃ-ಸತ್ವರೂಪಮಾದ ಸಂಕಲ್ಪಮುಳ್ಳನಾಗಿ, ಪರಮಪದಂ-ಮೋಕ್ಷವನ್ನು, ಆಪ್ನೋತಿ-ಹೊಂದುತ್ತಾನೆ ( ಅಂದರೆ )ಮನವನ್ನು ಶಬ್ದಾದಿಸ್ಪರ್ಶವಿಷಯಂಗಳಲ್ಲಿ, ಪ್ರವರ್ತಿಸಿದಂತೆ ನಿಗ್ರಹಿಸಿ, ಸಂಕಲ್ಪ ಪರಿತ್ಯಾಗವಂ ಗೈಯುವನಾದರೆ ಪರಮ ಪದರೂಪಮಾದ ಮುಕ್ತಿಯಂ ಪೊಂದುತ್ತಾನೆಂದು ಭಾವವು .. ... ॥೫೦॥

ಮೂ॥ ಸಬಾಹ್ಯಾಂಭ್ಯಂತರಾರ್ಥಸ್ಯಸಂಕಲ್ಪಸ್ಯಕ್ಷಯಂಕುರು। ಯದಿವರ್ಷಸಹಸ್ರಾಣಿತಪ್ತ
ಶಿರಸಿದಾರುಣಂ ॥ ಪಾತಾಳಸ್ಥಸ್ಯಭೂಸ್ಥಸ್ಯಸ್ವರ್ಗಸ್ಥಸ್ಯಾಪಿತೇನಘ । ನಾನ್ಯಃಕಶ್ಚಿದುಪಾಯೋಸ್ತಿ
ಸಂಕಲ್ಪೋಪಶಮಾದ್ಯತೇ ॥ ॥೫೨॥

ಟೀ॥ ಸಬ್ಯಾಹ್ಯಾಂಭ್ಯಂತರಾರ್ಥಸ್ಯ-ಸಬಾಹ್ಯ-ಬಹಿರಿಂದ್ರಿಯಗಳಾದ ತ್ವಕ್ ಚಕ್ಷುಶ್ಶ್ರೋತ್ರಜಿಹ್ವಾಘ್ರಾಣಗಳೆಂಬ ಪಂಚೇಂದ್ರಿಯಗಳಿಂದೊಡಗೂಡಿದ, ಅಭ್ಯಂತರ -ಅಂತರಿಂದ್ರಿಯಕ್ಕೆ ವಿಷಯಮ, ಅರ್ಥಸ್ಯ-ಗೋಚರವಾಗಿ ಉಳ್ಳ, ಸಂಕಲ್ಪಸ್ಯ-ವಿಷಯೆಚ್ಛದ, ಕ್ಷಯಂ-ನಾಶನವನ್ನು, ಕುರು-ಮಾಡು, (ಅಂದರೆ ನನಿಗೆ ಇಂಥಾಪದಾರ್ಥವಾಗಬೇ

ಕೆಂಬ ಬಯಸುವಿಕೆಯನ್ನು ಬಿಡುಎಂದು ಭಾವವು) ಹೆ ಅನಘ-ಎಲೈ ನಿರ್ದೋಷನೆ; ಸಂಕಲ್ಪೋಪಶಮಾದೃತೇ-ಸಂಕಲ್ಪ-ವಿಷಯಾಭಿಲಾಷೆಗಳ, ಉಪರಮಾದೃತೇ-ತ್ಯಾಗವಿನಹ, ವರ್ಷಸಹಸ್ರಾಣಿ-ಅನೇಕ ಸಂವತ್ಸರಗಳು, ದಾರುಣಂ-ಕ್ರೂರವಾದ, ತಪಃ-ತಪವನ್ನು, ಚರಸಿಯದಿ-ಮಾಡುವವನಾದರೂ, ಪಾತಾಳಸ್ಥಸ್ಯ-ಪಾತಾಳಲೋಕವಾಸಿಯಾದರೂ, ಭೂಸ್ಥಸ್ಯ-ಭೂಲೋಕವಾಸಿಯಾದರೂ, ಸ್ವರ್ಗಸ್ಥಸ್ಯಾಪಿ-ಸ್ವರ್ಗಲೋಕದಲ್ಲಿರುವನಾದರೂ, ತೇ-ನಿನಿಗೆ, ಅನ್ಯಃ-ಮತ್ತೊಂದಾದ, ಕಶ್ಚಿದುಪಾಯಃ-ಯಾವ ಪ್ರಕಾರವು, ನಾಸ್ತಿ-ಯಿಲ್ಲ, (ಅಂದರೆ ವಿಷಯೇಚ್ಛಾ ರೂಪವಾದ ಸಂಕಲ್ಪವಂ ಪರಿತ್ಯಜಿಸದ ಸ್ವರ್ಗ ಮರ್ತ್ಯ ಪಾತಾಳ ಲೋಕಂಗಳಲ್ಲಿಯೂ ಮಹಾ ಕ್ಷೇತ್ರದಲ್ಲಿಯೂ, ಇರುವನಾಗಿ ಎಷ್ಟು ವರುಷಗಳು ತಪವಂಗೈಯುತ್ತಿದ್ದರೂ ಮುಕ್ತಿ ಯುಂಟಾಗುವದಿಲ್ಲೆಂದು ಭಾವವು. .. .. ॥೫೧॥

ಮೂ॥ ಅನಾಬಾಧೆವಿಕಾರೆಸ್ವೆ ಸುಖೆಪರಮಪಾವನೆ । ಸಂಕಲ್ಪೋಪಶಮೆಯತ್ನಂಪೌರುಷೆ
ಣಪರಂಕುರು॥ ... ... ॥೫೨॥

ಟೀ॥ ಅನಾಬಾಧೆ-ದುಃಖಮಿಶ್ರವಾಗದಿರುವ, ಅಧಿಕಾರೆ-ವಿಷಯಸಂಬಂಧರೂಪವಾದ, ವಿಕಾರವಿಲ್ಲದಿರುವ, ಪರಮಪಾವನೆ-ಬಹಳ ಪರಿಶುದ್ಧವಾದ, ಸ್ವೇ-ಸ್ವಾತ್ಮಸ್ವರೂಪವಾದ ಸುಖೇ-ಸುಖಪ್ರಾಪ್ತಿ ವಿಷಯದಲ್ಲಿ, ಪೌರುಷೇಣ-ಪುರುಷಪ್ರಯತ್ನದಿಂದ, ಸಂಕಲ್ಪೋಪಶಮೇ-ಬ್ರಹ್ಮವ್ಯತಿರಿಕ್ತ ವಸ್ತ್ವಂತರ ವಿಷಯವಾದ ಸಂಕಲ್ಪದ ತ್ಯಾಗದಲ್ಲಿ, ಯತ್ನಂ-ಪ್ರಯತ್ನವನ್ನು, ಕುರು-ಮಾಡು, (ಅಂದರೆ ವಿಷಯೇಚ್ಛಾ ಪರಿತ್ಯಾಗದೊಳು ಯತ್ನಿಸಿ ವಿರಕ್ತನಾದರೆ ಸ್ವತಃವೆ-ಮುಕ್ತಿಯುಂಟಾಗುವದೆಂದು ತಾತ್ಪರ್ಯವು. ॥೫೩॥

ಮೂ॥ ಸಂಕಲ್ಪತಂತೌನಿಖಿಲಾಭಾವಾಃಪ್ರೋತಾಃಕಿಲಾನಘ । ಛಿನ್ನೆತಂತೌನಜಾನೀಮಃಕ್ವ
ಯಾಂತಿವಿಭವಾಃಪರಾಃ ॥ ... ॥೫೪॥

ಟೀ॥ ಅನಘ-ಎಲೈ ಪಾಪರಹಿತನೆ, ಸಂಕಲ್ಪತಂತೌ-ಸಂಕಲ್ಪ-ವಿಷಯಾಭಿಲಾಷೆಯೆಂಬ, ತಂತೌ-ಸೂತ್ರದಲ್ಲಿ, ನಿಖಿಲಾಃ-ಸಮಸ್ತವಾದ, ವಿಭವಾಃ- ಸಂಸಾರೋತ್ಪಾದಕಂಗಳಾದ, ಪರಾಃ-ಉತ್ತಮವಾದ, ಭಾವಾಃ-ವಿಷಯಗಳು, ಪ್ರೋತಾಃಕಿಲ-ಪಾಲಿಸಲ್ಪಟ್ಟಿವೆಯಷ್ಟೆ, ತಂತೌ-ದಾರವು, ಛಿನ್ನೇಸತಿ- ಕಿತ್ತುಹೋಗುತ್ತಿರಲಿಕಾಗಿ, (ಭಾವಾಃ-ವಿಷಯಗಳು, ಕ್ವ-ಎಲ್ಲಿ, ಯಾಂತಿ-ಹೋಗುತವೊ, ನಜಾನೀಮಃ-ತಿಳಿಯಲಾರೆವು,) (ಅಂದರೆ, ಸಂಕಲ್ಪವೆ ಸಕಲ ವಿಷಯಗಳಿಗು ಮೂಲಕಾರಣವಾದ್ದರಿಂದ, ಅದುನಾಶಮಾದೊಡೆ ಎಲ್ಲಾ ವಿಷಯಂಗಳು ಲಯವಾಗುವವೆಂದು ಭಾವವು. .. .. ॥೫೪॥

ಮೂ॥ ನಿಸ್ಸಂಕಲ್ಪೋಯಥಾಪ್ರಾಪ್ತವ್ಯವಹಾರಪರೋಭವ । ಕ್ಷಯೆಸಂಕಲ್ಪಜಾಲಸ್ಯಜೀ
ವೋಬ್ರಹ್ಮತ್ವಮಾಪ್ನುಯಾತ್ ॥ ... ... ॥೫೫॥

ಟೀ॥ ನಿಸ್ಸಂಕಲ್ಪಃ-ಸಂಕಲ್ಪ ವಿಲ್ಲಿಸಿರುವನಾಗಿ, ಯಥಾಪ್ರಾಪ್ತವ್ಯವಹಾರಪರಃ-ಯಥಾಪ್ರಾಪ್ತ-ಇದ್ದ ಹಾಗೆ, ವ್ಯವಹಾರ-ವಿವಾದದಲ್ಲಿ, (ಹೇಳುವದರಲ್ಲಿ) ಪರಃ-ಆಸಕ್ತಿಯುಳ್ಳವನು, ಭವ-ಆಗು,ಸಂಕಲ್ಪಜಾಲಸ್ಯ-ಸಂಕಲ್ಪಸಮೂಹದ, ಕ್ಷಯೇ-ನಾಶವಾಗುತಿರಲೀಕಾಗಿ, ಜೀವಃ-ಜೀವನು, ಬ್ರಹ್ಮತ್ವಂ-ಬ್ರಹ್ಮಭಾವವನ್ನು,ಆಪ್ನೋಯಾತ್- ಹೊಂದುವನು.

ಮೂ॥ ಅಧಿಗತಪರಮಾರ್ಥತಾಮುಪೇತ್ಯಪ್ರಸಭಮಪಾಸ್ಯವಿಕಲ್ಪಜಾಲಮುಚ್ಚೈಃ । ಅಧಿಗ
ಮಯಪದಂತದದ್ವಿತೀಯಂವಿತತಸುಖಾಯಸುಷುಪ್ತಚಿತ್ತವೃತ್ತಿಃ॥ ॥೫೬॥

ಟೀ॥ ಪ್ರಸಭಂ-ಹಟಾತ್ಕಾರದಿಂದ, ವಿಕಲ್ಪಜಾಲಂ-ಸಂಕಲ್ಪಗಳ ಸಮೂಹವನ್ನು, ಅಪಾಸ್ಯ-ಬಿಟ್ಟು, ಅಧಿಗತಪರಮಾರ್ಥತಾಂ- ಅಧಿಗತ-ಹೊಂದಲ್ಪಟ್ಟ, ಪರಮಾರ್ಥತಾಂ-ಪರಮಾರ್ಥಭೂತವಾದ ಬ್ರಹ್ಮತತ್ವ ಭಾವವನ್ನು, ಉಪೇತ್ಯ-ಹೊಂದಿ, ವಿತತಸುಖಾಯ-ಅಪರಿಚ್ಛೇದವಾಗಿರುವ ಸುಖಕ್ಕೋಸುಗ, ಸುಷುಪ್ತಚಿತ್ತವೃತ್ತಿಃ- ಸುಷುಪ್ತಿ ಕಾಲದಲ್ಲಿರುವ, ಮನೋವೃತ್ತಿಯುಳ್ಳವನಾಗಿ, ತತ್-ಅಂಥಾ, ಅದ್ವಿತೀಯಂ-ಎರಡನೆಯ ದಿಲ್ಲದಿರುವ, ಪದಂ-ಸ್ಥಾನವನ್ನು, ಅಧಿಗಮಯ-ಹೊಂದು, ( ಅಂದರೆ ಸುಷುಪ್ತಿಕಾಲದಲ್ಲಿರುವ ಮನೋಭಾವವು ಸಮಸ್ತ ವಿಷಯಗಳಲ್ಲಿಯೂ ಅಭಿಲಾಷೆ ಯಿಲ್ಲದಿರುವದು, ಆದಕಾರಣ ಅದೇ ಬ್ರಹ್ಮಾಕಾರ ಚಿತ್ತವೃತ್ತಿಯೆಂದೆನ್ನಲ್ಪಡುವದು, ನೀನು ಅಭಾವನ ಹೊಂದುವಂಥಾವನಾಗೆಂದು ವಾಲ್ಮೀಕಿ ಮುನಿಯು ಕುಶನಿಗೆ ಉಪದೇಶವಂ ಗೈದಂಥಾವನಾದನು. .. .. ॥೫೬॥

ಇತಿ ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರ ಸಂವಾದೇ ಉತ್ತರಕಾಂಡೆ ಷಷ್ಠಸ್ಸರ್ಗಃ.

---

ಮೂ॥ ವಾಲ್ಮೀಕಿನಾಬೋಧಿತೋಸೌಕುಶಸ್ಸದ್ಯೋಗತಭ್ರಮಃ । ಅಂತರ್ಮುಖೋಬಹಿಸ್ಸ
ರ್ವಮನುಕುರ್ವಂಶ್ಚಚಾರಸಃ॥ ... ... ॥೧॥

ವಾಲ್ಮೀಕಿನಾ-ವಾಲ್ಮೀಕಿಮುನಿಯಿಂದ, ಬೋಧಿತಃ-ಉಪದೇಶ ಮಾಡಲ್ಪಟ್ಟ, ಸಃ-ಅಂಥಾ, ಅಸೌಕುಶಃ-ಈ ಕುಶನು, ಸದ್ಯಃ-ತತ್ಕ್ಷಣದಲ್ಲಿಯೆ, ಗತಭ್ರಮಃ-ಗತ- ಹೋದಂಥ, ಭ್ರಮಃ-ಜಗತ್ಸತ್ಯತ್ವೇ ಭ್ರಾಂತಿಯುಳ್ಳವನಾಗಿ, ಅಂತರ್ಮುಖಃ-ಅಂತರ್ಮುಖನಾಗಿ, ಸರ್ವಂ-ಸಮಸ್ತವನ್ನು, ಅನುಕುರ್ವನ್-ಅನುಸರಿಸಿ ಮಾಡುತ್ತಿರುವನಾಗಿ, ಬಹಿಃ-ಹೊರಗಡೆ, ಚಚಾರ-ಸಂಚರಿಸಿದನು. .. .. .. ॥೧॥

ಮೂ॥ ವಾಲ್ಮೀಕಿರಪಿತೌಪ್ರಾಹಸೀತಾಪುತ್ರೌಮಹಾಧಿಯೌ । ತತ್ರತತ್ರಜಗಾಯಂತೌಪ್ರ

ರೇವೀಥಿಷುಸರ್ವತಃ ||೧|| ರಾಮಸ್ಯಾಗ್ರೇಪ್ರಗಾಯೇತಾಂಶುಶ್ರೂಷುರ್ಯದಿರಾಘವಃ । ನಗ್ರಾಹ್ಯಂ ವೈಯುವಾಭ್ಯಾಂತದ್ಯದಿಕಿಂಚಿತ್ಪ್ರದಾಸ್ಯತಿ ॥ ||೩||

ಟೀ|| ವಾಲ್ಮೀಕಿರಪಿ-ವಾಲ್ಮೀಕಿಮುನಿಯು ಕೂಡಾ, ಮಹಾಧಿಯಾ-ಬಹು ಬುದ್ಧಿಯುಳ್ಳ, ತೌಸೀತಾಪುತ್ರೌ-ಆ ಸೀತಾದೇವಿಯ ಮಕ್ಕಳಂ ಕುರಿತು, ಪ್ರಾಹ-ಹೇಳಿದನು, ಪುರೇ ಪಟ್ಟಣದಲ್ಲಿ, ವೀಥೀಷು-ಬೀದಿಗಳಲ್ಲಿಯೂ, ತತ್ರತತ್ರ-ಅಲ್ಲಲ್ಲಿ, ಸರ್ವತಃ-ಎಲ್ಲಾಕಡೆಯಲ್ಲಿಯು, ಪ್ರಗಾಯಂತೌ ಗಾನಮಂಗೈಯುತ್ತಿರಿ, ರಾಘವಃ-ಶ್ರೀರಾಮನು, ಶುಶ್ರೂಷುರ್ಯದಿ-ಕೇಳುವನಾದರೆ, ರಾಮಸ್ಯ-ಶ್ರೀರಾಮನ, ಅಗ್ರೇ-ಮುಂದೆ, ಪ್ರಗಾಯೇತಾಂ-ಗಾನಮಾಡಿರಿ (ರಾಘವಃ-ಶ್ರೀರಾಮನು, ಕಿಂಚಿತ್-ಸ್ವಲ್ಪವಾದರೂ (ಧನಂ-ದ್ರವ್ಯವನ್ನು) ಪ್ರದಾಸ್ಯತಿಯದಿ-ಕೊಡುವನಾದರೆ, ಯುವಾಭ್ಯಾಂವೈ-ನಿಮ್ಮಿಂದಾದರೆ, ನಗ್ರಾಹ್ಯಂ-ತೆಗೆದುಕೊಳ್ಳತಕ್ಕದ್ದಲ್ಲ (ಅಂದರೆ ಅಲ್ಲಲ್ಲಿ ನೀವುಗಳು ಗಾನಮಂಗೈಯುತ್ತಿರುವಾಗ ಶ್ರೀರಾಮನು ಕರೆಯಿಸಿದವನಾದರೆ ಅಲ್ಲಿಗೆ ಹೋಗಿ, ಆತನ ಬಳಿಯಲ್ಲಿ, ಹಾಡುವಂಥಾವರಾಗಿ, ಆಗ ಶ್ರೀರಾಮನು ನಿಮಗೆ ಯಾವದನ್ನಾದರೂ ಕೊಟ್ಟರೆ ಅದಂ ತೆಗದು ಕೊಳ್ಳಬ್ಯಾಡಿರೆಂದು ಭಾವವು.) ||೩||

ಮೂ|| ಇತಿತೌಚೋದಿತೌತತ್ರಗಾಯಮಾನೌವಿಚೇರತುಃ । ಯಥೋಕ್ತಮೃಷಿಣಾಪೂರ್ವಂತತ್ರತತ್ರಾಭ್ಯಗಾಯತಾಂ ... ... ||೪||

ಟೀ|| ಇತಿ-ಈಪರಿಯಾಗಿ, ತತ್ರ-ಆ ಯಾಗಶಾಲೆಯಸಮೀಪದಲ್ಲಿ, ಚೋದಿತೌ-ಹೇಳ ಕಳುಹಿಸಲ್ಪಟ್ಟ, ತೌ-ಆಸೀತಾಪುತ್ರರೀರ್ವರು, ಗಾಯಮಾನೌ-ಗಾನಮಾಡುತ್ತಿರುವರಾಗಿ, ವಿಚೇರತುಃ-ಸಂಚರಿಸಿದರು, ಋಷಿಣಾ-ವಾಲ್ಮೀಕಿಮುನಿಯಿಂದ, ಪೂರ್ವಂ-ಮೊದಲು, ಯಥೋಕ್ತಂ-ಹೇಳಲ್ಪಟ್ಟಂತೆ, ತತ್ರತತ್ರ-ಅಲ್ಲಲ್ಲಿ, ಅಭ್ಯಗಾಯತಾಂ-ಗಾನಮಾಡಿದರು ... ... ... ||೪||

ಮೂ|| ತಾಂಸಶುಶ್ರಾವಕಾಕುತ್ಸ್ಥಃಪೂರ್ವಚರ್ಯಾಂತತಸ್ತತಃ । ಅಪೂರ್ವಪಾಠಜಾತಿಂಚಗೇಯೇನಸಮಭಿಪ್ಲುತಾಂ ... ... ||೫||

ಟೀ|| ಸಕಾಕುತ್ಸ್ಥಃ-ಆ ಶ್ರೀರಾಮನು, ಅಪೂರ್ವಪಾಠಜಾತಿಂ-ಪೂರ್ವದಲ್ಲಿ ಇಲ್ಲದಿರುವ ಪಠನಕ್ರಮವುಳ್ಳ, ಗೇಯೇನಚ-ಗಾನದಿಂದಲೂ, ಸಮಭಿಪ್ಲುತಾಂ-ವ್ಯಾಪ್ತವಾಗಿರುವ, ತಾಂಪೂರ್ವಚರ್ಯಾಂ-ಆ ಪುರಾತನನಡತೆಯನ್ನು, ತತಸ್ತತಃ-ಅಲ್ಲಲ್ಲಿ, ಶುಶ್ರಾವ-ಕೇಳಿದನು ... ... ||೫||

ಮೂ|| ಬಾಲಯೋರಾಘವಃಶ್ರುತ್ವಾಕೌತೂಹಲಮುಪೇಯಿವಾನ್ ||೫||

ಟೀ|| ರಾಘವಃ-ಶ್ರೀರಾಮನು, ಬಾಲಯೋಃ-ಹುಡುಗರ, (ಗಾನಂ-ಹಾಡುಗಾರಿಕೆಯನ್ನು) ಶ್ರುತ್ವಾ-ಕೇಳಿ, ಕೌತೂಹಲಂ-ಇನ್ನೂ ಕೇಳಬೇಕೆಂಬ ಬುದ್ಧಿಯನ್ನು, ಉಪೇಯಿವಾನ್-ಹೊಂದಿದನು ... ... ... ||೪೫||

ಮೂ|| ಅಥಕರ್ಮಾಂತರೇರಾಜಾಸಮಾಹೂಯಮಹಾಮುನೀನ್ । ರಾಜ್ಞಶ್ಚೈವನರವ್ಯಾಘ್ರಃ
ಪಂಡಿತಾಂಶ್ಚೈವನೈಗಮಾನ್ ॥ ಪೌರಾಣಿಕಾನ್ಶಬ್ದವಿದೋಯೇಚವೃದ್ಧಾದ್ವಿಜಾತಯಃ । ಏತಾನ್ಸ
ರ್ವಾನ್ಸಮಾಹೂಯಗಾಯಕೌಸಂಪ್ರವೇಶಯತ್ ... ||೭೫||

ಟೀ|| ಅಥ-ಬಳಿಕ, ಕರ್ಮಾಂತರೇ-ಯಾಗಕರ್ಮದ ಮಧ್ಯಭಾಗದಲ್ಲಿ, ನರವ್ಯಾಘ್ರಃ-ಪುರುಷೋತ್ತಮನಾದ, ರಾಜಾ-ಅರಸಾದ ಶ್ರೀರಾಮನು, ಮಹಾಮುನೀನ್-ಮಹರ್ಷಿಗಳನ್ನೂ, ರಾಜ್ಞಶ್ಚೈವ-ರಾಜರುಗಳನ್ನೂ, ಪಂಡಿತಾಂಶ್ಚೈವ-ವಿದ್ವಾಂಸರುಗಳನ್ನೂ, ನೈಗಮಾನ್-ವೇದಜ್ಞರನ್ನೂ (ಅಥವಾ ಪಟ್ಟಣಸ್ಥರನ್ನೂ) ಸಮಾಹೂಯ-ಕರೆಯಿಸಿ, ಪೌರಾಣಿಕಾನ್-ಅಷ್ಟಾದಶ ಪುರಾಣಗಳನ್ನರಿತವರನ್ನೂ, ಶಬ್ದವಿದಃ-ತರ್ಕಶಾಸ್ತ್ರಜ್ಞರನ್ನೂ, ವೃದ್ಧಾಃ-ಮುದುಕರಾದ, ದ್ವಿಜಾತಯಃ-ಬ್ರಾಹ್ಮಣರು, ಯೇ-ಯಾರೋ, ತಾನ್-ಅವರುಗಳನ್ನು, ಏತಾನ್ಸರ್ವಾನ್-ಇವರೆಲ್ಲರನ್ನು, ಸಮಾಹೂಯ-ಕರೆಯಿಸಿ, ಗಾಯಕೌ-ಹಾಡುಗಾರಿಕೆಯವರಾದ ಕುಶಲವರನ್ನು, ಸಂಪ್ರವೇಶಯತ್-ಒಳಗೆ ಬಿಡಿಸಿಕೊಂಡನು ... ... ... ||೭೫||

ಮೂ|| ತೇಸರ್ವೇಹೃಷ್ಟಮನಸೋರಾಜಾನೋಬ್ರಾಹ್ಮಣಾದಯಃ । ರಾಮಂತೌದಾರಕೌದೃ
ಷ್ಟ್ವಾವಿಸ್ಮಿತಾಸ್ತ್ವನಿಮಿಷಾಃ ॥ ಅವೋಚನ್ಸರ್ವಏವೈತೇಪರಸ್ಪರಮಥಾಗತಾಃ ||೯|| ಇಮೌ
ರಾಮಸ್ಯಸದೃಶೌಬಿಂಬಾದ್ಬಿಂಬಮಿವೋದಿತೌ।ಜಟಿಲೌಯದಿನಸ್ಯಾತಾಂನಚವಲ್ಕಲಧಾರಿಣೌ॥೧೦॥
ವಿಶೇಷಂನಾಧಿಗಚ್ಛಾಮೋರಾಘವಸ್ಯಾನಯೋಸ್ತದಾ । ಏವಂಸಂವದತಾಂತೇಷಾಂವಿಸ್ಮಿತಾನಾಂಪರ
ಸ್ಪರಂ ||೧೧|| ಉಪಚಕ್ರಮತುರ್ಗಾತುಂತಾವುಭೌಮುನಿದಾರಕೌ ... ||೧೧೫||

ಟೀ|| ರಾಜಾನಃ-ಅರಸುಗಳು, ಬ್ರಾಹ್ಮಣಾದಯಃ-ಬ್ರಾಹ್ಮಣರೇ ಮುಂತಾದವರಾದ, ತೇಸರ್ವೇ-ಅವರೆಲ್ಲರು, ಹೃಷ್ಟಮನಸಃ-ಸಂತೋಷಚಿತ್ತರಾಗಿ, ರಾಮಂ-ಶ್ರೀರಾಮನನ್ನು, ತೌದಾರಕೌ-ಆ ಹುಡುಗರನ್ನೂ ಕೂಡ, ದೃಷ್ಟ್ವಾ-ಕಂಡು, ವಿಸ್ಮಿತಾಃ-ಆಶ್ಚರ್ಯಯುಕ್ತರಾಗಿ, ಅನಿಮಿಷಾಃ-ಕಣ್ಣುರೆಪ್ಪೆಗಳನ್ನು ಮುಚ್ಚದಿರುವರಾಗಿ, ಅಪಶ್ಯನ್-ಕಂಡರು, ತೇಸರ್ವೇ-ಅವರೆಲ್ಲರು, ಪರಸ್ಪರಂ-ಅನ್ಯೋನ್ಯವಾಗಿ, ಆಗತಾಃ-ಸೇರಿದವರಾಗಿ, ಅವೋಚನ್-ಮಾತನಾಡಿಕೊಂಡರು ||೯|| ಇಮೌ-ಈ ಹುಡುಗರೀರ್ವರೂ, ರಾಮ

ಸ್ಯ-ಶ್ರೀರಾಮನಿಗೆ, ಸದೃಶೌ-ಸಮಾನರಾಗಿ, ಬಿಂಬಾತ್-ಬಿಂಬದದೆಸೆಯಿಂದ, ಬಿಂಬಮಿವ-ಪ್ರತಿಬಿಂಬದಂತೆ-ಉದಿತೌ-ಪುಟ್ಟಿದ್ದಾರೇ, ಜಟಿಲೌ-ಜಡೆಗಳನ್ನು ಧರಿಸಿಕೊಂಡವರು, ನಸ್ಯಾತ್ತಾಂಯದಿ-ಆಗದಿದ್ದರೂ ಸರಿಯೇ, ವಲ್ಕಲಧಾರಿಣೌ-ನಾರುಮಡಿಗಳನ್ನುಟ್ಟವರು, ನಸ್ಯಾತಾಂಯದಿ-ಆಗದಿದ್ದರೂಸರಿಯೇ, ತದಾ-ಆಗ, ರಾಘವಸ್ಯ-ಶ್ರೀರಾಮನಿಗೂ, ಅನಯೋಃ-ಈ ಮಕ್ಕಳಿಗೂ, ವಿಶೇಷಂ-ತಾರತಮ್ಯವನ್ನು, ನಾಧಿಗಚ್ಛಾಮಃ-ತಿಳಿಯದಿದ್ದೆವು ॥೧೦॥ ಏವಂ-ಈಪರಿಯಾಗಿ, ವಿಸ್ಮಿತಾನಾಂ-ಆಶ್ಚರ್ಯಯುಕ್ತರಾದ, ತೇಷಾಂ-ಅವರುಗಳು, ಪರಸ್ಪರಂ-ಅನ್ಯೋನ್ಯವಾಗಿ, ಸಂವದತಾಂಸತಾಂ-ಮಾತನಾಡಿಗೊಳ್ಳುತಿರುವರಾಗಲಾಗಿ, ಮುನಿದಾರಕೌ-ಋಷಿಪುತ್ರರಾದ, ತಾವುಭೌ-ಅವರೀರ್ವರೂ, ಗಾತುಂ-ಗಾನಮಾಡುವದಕ್ಕೆ, ಉಪಚಕ್ರಮತುಃ-ಪ್ರಾರಂಭಿಸಿದರು ॥೧೧॥

ಮೂ॥ ತತಃಪ್ರವೃತ್ತಂಮಧುರಂಗಾಂಧರ್ವಮತಿಮಾನುಷಂ । ಶ್ರುತ್ವಾತನ್ಮಧುರಂಗೀತಮಪ
ರಾಹ್ಣೇರಘೂತ್ತಮಃ ॥೧೨॥ ಉವಾಚಭರತಂಚಾಭ್ಯಾಂದೀಯತಾಮಯುತಂವಸು ॥೧೩॥

ಟೀ॥ ತತಃ-ಬಳಿಕ, ಅತಿಮಾನುಷಂ-ಮನುಷ್ಯಲೋಕದಗಾನವನ್ನತಿಕ್ರಮಿಸಿದ, ಮಧುರಂ-ಮನೋಹರವಾದ, ಗಾಂಧರ್ವಂ-ಗಾನವು, ಪ್ರವೃತ್ತಂ-ಸಂಭವಿಸಿತು, ರಘೂತ್ತಮಃ-ರಘುಶ್ರೇಷ್ಠನಾದ ಶ್ರೀರಾಮನು, ಮಧುರಂ-ಕಿವಿಗಳಿಗಿಂಪಾಗಿರುವ. ತದ್ಗೀತಂ-ಆ ಗಾನವನ್ನು, ಶ್ರುತ್ವಾ-ಕೇಳಿ, ಅಪರಾಹ್ಣೇ-ಮಧ್ಯಾಹ್ನಾತೀತಕಾಲದಲ್ಲಿ, ಭರತಂ-ಭರತನನ್ನು ಕುರಿತು, ಆಭ್ಯಾಂ-ಇವರಗಳಿಗೆ, ಅಯುತಂ-ಹತ್ತುಸಾವಿರವಾದ, ವಸು-ರಾಮಟಂಕೇವರಹಗಳನ್ನು, ದೀಯತಾಂ-ಕೊಡಲ್ಪಡಲೀ, ಇತಿ-ಇಂತೆಂದು, ಉವಾಚ-ಪೇಳಿದನು ... ... ॥೧೩॥

ಮೂ॥ ದೀಯಮಾನಂಸುವರ್ಣಂತುನತಜ್ಜಗೃಹತುಸ್ತದಾ । ಕಿಮನೇನಸುವರ್ಣೇನರಾಜ
ನ್ವಾವನ್ಯಭೋಜನೌ ॥೧೪॥ ಇತಿಸಂತ್ಯಜ್ಯಸಂದತ್ತಂಜಗ್ಮತುರ್ಮುನಿಸನ್ನಿಧಿಂ ॥೧೫॥

ಟೀ॥ ತದಾ-ಆಕಾಲದಲ್ಲಿ, ದೀಯಮಾನಂ-ಕೊಡಲ್ಪಡುತಿರುವ, ತತ್ಸುವರ್ಣಂತು-ಆ ಭಂಗಾರವನ್ನಾದರೇ, ನಜಗೃಹತುಃ-ಗ್ರಹಿಸಲಿಲ್ಲಾ, ಹೇ ರಾಜನ್-ಎಲೈ ಅರಸೇ, ಅನೇನಸುವರ್ಣೇನ, ಈ ಭಂಗಾರದಿಂದ, ಕಿಂ-ಏನುಪ್ರಯೋಜನವು, ನೌ-ನಾವುಗಳು, ವನ್ಯಭೋಜನೌ-ವನ್ಯ-ವನದಲ್ಲಿಹುಟ್ಟಿದ ಪದಾರ್ಥವನ್ನು, ಭೋಜನೌ-ಭುಂಜಿಸುತ್ತಿರುವರು, ಇತಿ-ಇಂತೆಂದು ಪೇಳಿ, ಸಂದತ್ತಂ-ಕೊಡಲ್ಪಟ್ಟ ದ್ರವ್ಯವನ್ನು, ಸಂತ್ಯಜ್ಯ-ಬಿಟ್ಟು, ಮುನಿಸನ್ನಿಧಿಂ-ಋಷಿಸಮೀಪವಂಕುರಿತು, ಜಗ್ಮತುಃ-ತೆರಳಿದರು ॥೧೫॥

ಏವಂಶ್ರುತ್ವಾತುಚರಿತಂರಾಮಸ್ಸವಿಸ್ಮಯವಿಸ್ಮಿತಃ ॥ ಜ್ಞಾತ್ವಾಸೀತಾಕುಮಾರೌತೌಶತ್ರುಘ್ನಂ

ಚೇದಮಬ್ರವೀತ । ಹನೂಮಂತಂಸುಷೇಣಂಚವಿಭೀಷಣಮಥಾಂಗದಂ ॥ ಭಗವಂತಂಮಹಾತ್ಮಾ

ನಂವಾಲ್ಮೀಕಿಂಮುನಿಸತ್ತಮಂ ॥ ಆನಯಧ್ವಂಮುನಿವರಂಸಸೀತಂದೇವಸಮ್ಮಿತಂ ||೧೭||

ಟೀ|| ರಾಮಃ-ಶ್ರೀರಾಮನು, ಏವಂ-ಈಪರಿಯಾಗಿ, ಸ್ವಸ್ಯೈವ-ತನ್ನ ಸಂಬಂಧವಾದ, ಚರಿತಂತು-ಚರಿತ್ರೆಯನ್ನಾದರೆ, ಶ್ರುತ್ವಾ-ಕೇಳಿ, ವಿಸ್ಮಿತಃ-ಆಶ್ಚರ್ಯಯುಕ್ತ ನಾಗಿ, ತೌ-ಆ ಬಾಲಕರನ್ನು, ಸೀತಾಕುಮಾರೌ-ಸೀತಾದೇವಿಯ ಮಕ್ಕಳನ್ನಾಗಿ, ಜ್ಞಾತ್ವಾ-ಅರಿತು, ಹನೂಮಂತಂ-ಆಂಜನೇಯನನ್ನು. ಸುಷೇಣಂಚ-ಸುಷೇಣನನ್ನು, ವಿಭೀಷಣಂಚ-ವಿಭೀಷಣನನ್ನು, ಅಥ-ಬಳಿಕ, ಅಂಗದಂ-ಅಂಗದನನ್ನು, ಶತ್ರುಘ್ನಂ-ಶತ್ರುಘ್ನನನ್ನು ಕುರಿತು, ಭಗವಂತಂ-ಪೂಜ್ಯನಾದ, ಮಹಾತ್ಮಾನಂ-ಮಹಾಮನಸ್ವಿ ಯಾದ, ಮುನಿಸತ್ತಮಂ-ಮನನಶೀಲಮುಖ್ಯರೊಳಗೆ ಶ್ರೇಷ್ಠನಾದ, ದೇವಸಮ್ಮಿತಂ-ದೇವತೆಗಳಿಂದ ಕೊಂಡಾಡಲ್ಪಡುತ್ತಿರುವ, ಮುನಿವರಂ-ಋಷಿಶ್ರೇಷ್ಠನಾದ, ವಾಲ್ಮೀಕಿಂ-ವಾ ಲ್ಮೀಕಿಮುನಿಯನ್ನು, ಸಸೀತಂ-ಸೀತಾಸಹಿತನನ್ನಾಗಿ, ಆನಯಧ್ವಂ-ಕರೆಯಿಸಿರಿ, ಇತಿ-ಇಂತೆಂದು, ಅಬ್ರವೀತ್-ನುಡಿದನು ... ... ||೧೭||

ಮೂ|| ಅಸ್ಯಾಃಪರಿಷದೋಮಧ್ಯೇಪ್ರತ್ಯಯಂಜನಕಾತ್ಮಜಾ । ಕರೋತುಶಪಥಂಸರ್ವೇಜಾನಂ

ತುಗತಕಲ್ಮಷಾಂ ॥ ಸೀತಾಂತದ್ವಚನಂಶ್ರುತ್ವಾಗತಾಸ್ಸರ್ವೇತಿವಿಸ್ಮಿತಾಃ|| ||೧೮||

ಟೀ|| ಅಸ್ಯಾಃಪರಿಷದಃ-ಈ ಸಭೆಯ, ಮಧ್ಯೇ-ಮಧ್ಯಪ್ರದೇಶದಲ್ಲಿ, ಜನಕಾತ್ಮಜಾ-ಜನಕಪುತ್ರಿಯಾದ ಸೀತಾದೇವಿಯು, ಪ್ರತ್ಯಯಂ-ಸರ್ವಜನರಿಗೂ ಸೀತಾದೇವಿಯು ಪರಿ ಶುದ್ಧಳೆಂಬ ನಂಬಿಕೆಯನ್ನುಂಟುಮಾಡುತ್ತಿರುವ, ಶಪಥಂ-ಪ್ರತಿಜ್ಞೆಯನ್ನು, ಕರೋತು-ಮಾಡಲಿ, ಸರ್ವೇ-ಯೆಲ್ಲರು, ಸೀತಾಂ-ಸೀತಾದೇವಿಯನ್ನು, ಗತಕಲ್ಮಷಾಂ-ಹೋದಂ ಥಾ ಪಾಪವುಳ್ಳವಳನ್ನಾಗಿ, ಜಾನಂತು-ತಿಳಿದುಕೊಳ್ಳಲಿ, ಸರ್ವೇ-ಯೆಲ್ಲರೂ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಅತಿವಿಸ್ಮಿತಾಃ-ಬಹಳ ಆಶ್ಚರ್ಯಗೊಂಡವರಾಗಿ, ಗತಾಃ- ವಾಲ್ಮೀಕಿಮುನಿಯ ಸನ್ನಿಧಿಗೆ ಹೋದರೂ. .. .. ||೧೮||

ಮೂ|| ಊಚುರ್ಯಥೋಕ್ತಂರಾಮೇಣವಾಲ್ಮೀಕಿಂರಾಮಪಾರ್ಷದಾಃ ||೧೯||

ಟೀ|| ರಾಮಪಾರ್ಷದಾಃ-ಶ್ರೀರಾಮನ ಸಭೆಯಲ್ಲಿದ್ದವರು, ರಾಮೇಣ-ಶ್ರೀರಾಮನಿಂದ, ಯಥೋಕ್ತಂ-ಹೇಳಲ್ಪಟ್ಟಂತೆ, ವಾಲ್ಮೀಕಿಂ-ವಾಲ್ಮೀಕಿ ಮುನಿಯಂ ಕುರಿತು, ಊಚುಃ-ಹೇಳಿದರು. ||೧೯||

ಮೂ||  ರಾಮಸ್ಯಹೃದ್ಗತಂಸರ್ವಂಜ್ಞಾತ್ವಾವಾಲ್ಮೀಕಿರಬ್ರವೀತ್|| ಶ್ವಃಕರಿಷ್ಯತಿವೈಸೀತಾಶ
ಪಥಂಜನಸಂಸದಿ || ಯೋಷಿತಾಂಪರಮಂದೈವಂಪತಿರೇವನಸಂಶಯಃ|| ||೨೦||

ಟೀ||  ವಾಲ್ಮೀಕಿಃ-ವಾಲ್ಮೀಕಿಋಷಿಯು, ರಾಮಸ್ಯ-ಶ್ರೀರಾಮನ, ಹೃದ್ಗತಂ-ಮನಸ್ಸಿನಲ್ಲಿರುವ, ಸರ್ವಂ-ಸಮಸ್ತವನ್ನು, ಜ್ಞಾತ್ವಾ-ತಿಳಿದು,ಸೀತಾವೈ-ಸೀತಾದೇವಿಯಾದರೆ, ಶ್ವಃ-ನಾಳೆ, ಜನಸಂಸದಿ-ಜನಗಳ ಸಭೆಯಲ್ಲಿ, ಶಪಥಂ-ಪ್ರತಿಜ್ಞೆಯನ್ನು, ಕರಿಷ್ಯತಿ-ಮಾಡುವಳು, ಯೋಷಿತಾಂ-ಹೆಂಗಸಿಗೆ, ಪತಿರೇವ-ಗಂಡನೇ, ಪರಮಂ-ಉತ್ಕೃಷ್ಟವಾದ, ದೈವಂ-ದೈವವು, ನಸಂಶಯಃ-ಸಂದೇಹವಿಲ್ಲ, (ಇತಿ-ಇಂತೆಂದು, ಅಬ್ರವೀತ್-ನುಡಿದನು) .. ||೨೦||

ಮೂ ||  ತಚ್ಛ್ರುತ್ವಾಸಹಸಾಗತ್ವಾ ಸರ್ವೇಪ್ರೋಚುರ್ಮನೇರ್ವಚಃ || ರಾಘವಸ್ಯಾಪಿರಾಮೋಪಿ
ಶ್ರುತ್ವಾಮುನಿವಚಸ್ತಥಾ || ರಾಜಾನೋಮುನಯಸ್ಸರ್ವೇಶೃಣುಧ್ವಮಿತಿಚಾಬ್ರವೀತ್ ||೨೧||

ಟೀ||  ಸರ್ವೇ-ಯೆಲ್ಲರೂ, ಮುನೇಃ-ವಾಲ್ಮೀಕಿಋಷಿಯ, ತದ್ವಚಃ-ಆ ಮಾತನ್ನು, ಶ್ರುತ್ವಾ-ಕೇಳಿ, ಸಹಸಾ-ಜಾಗ್ರತೆಯಾಗಿ, ರಾಘವಸ್ಯ-ಶ್ರೀರಾಮನ, ಸನ್ನಿಧಿಮಪಿ-ಸಮೀಪವನ್ನೂ ಕುರಿತು, ಗತ್ವಾ-ಹೋಗಿ, ಪ್ರೋಚತುಃ-ಹೇಳಿದರು, ರಾಮೋಪಿ-ಶ್ರೀರಾಮನೂಕೂಡ, ತಥಾ-ಆಪರಿಯಾಗಿ, ಮುನಿವಚಃ-ಋಷಿಯ ಮಾತನ್ನು, ಶ್ರುತ್ವಾ-ಕೇಳಿ, ರಾಜಾನಃ-ಎಲೈ ಅರಸರುಗಳಿರ್ರಾ, ಹೆ ಮುನಯಃ-ಎಲೈ ಋಷಿಗಳಿರ್ರಾ, ಸರ್ವೇ-ಯೆಲ್ಲರೂ, ಶೃಣುಧ್ವಂ-ಕೇಳಿರಿ, ಇತಿ-ಇಂತೆಂದು, ಅಬ್ರವೀತ್-ನುಡಿದನು. ||೨೧||

ಮೂ||  ಸೀತಾಯಾಶ್ಶಪಥಂಲೋಕಾವಿಜಾನಂತುಶುಭಾಶುಭಂ | ಇತ್ಯುಕ್ತಾರಾಘವೇಣಾಥ
ಲೋಕಾಸ್ಸರ್ವೇದಿದೃಕ್ಷವಃ || ಬ್ರಾಹ್ಮಣಾಃಕ್ಷತ್ರಿಯಾವೈಶ್ಯಾಃಶೂದ್ರಾಶ್ಚೈವಮಹರ್ಷಯಃ|| ವಾನ
ರಾಶ್ಚ ಸಮಾಜಗ್ಮುಃಕೌತೂಹಲಸಮನ್ವಿತಾಃ ... ||೨೪||

ಟೀ||  ಸೀತಾಯಾಃ-ಸೀತಾದೇವಿಯ, ಶಪಥಂ-ಪ್ರತಿಜ್ಞೆಯನ್ನು, ಲೋಕಾಃ-ಜನರು, (ದೃಷ್ಟ್ವಾ-ಕಂಡು,) ತಸ್ಯಾಃ-ಆಕೆಯ, ಶುಭಾಶುಭಂ- ಧರ್ಮಾಧರ್ಮಗಳನ್ನು, ವಿಜಾನಂತು-ನಿಶ್ಚೈಸಲಿ, ಇತಿ-ಇಂತೆಂದು, ರಾಘವೇಣ-ಶ್ರೀರಾಮನಿಂದ, ಉಕ್ತಾಃ-ಹೇಳಲ್ಪಟ್ಟವರಾದ, ಸರ್ವೇ-ಸಮಸ್ತರಾದ, ದಿದೃಕ್ಷವಃ-ನೋಡಲಿಚ್ಛೆಯುಳ್ಳ, ಲೋಕಾಃ- ಜನರು, ಬ್ರಾಹ್ಮಣಾಃ-ಬ್ರಾಹ್ಮಣರೂ, ಕ್ಷತ್ರಿಯಾಃ-ಕ್ಷತ್ರಿಯರೂ, ವೈಶ್ಯಾಃ-ವರ್ತಕರೂ, ಶೂದ್ರಾಶ್ಚೈವ-ಶೂದ್ರರೂ, ಮಹರ್ಷಯಶ್ಚ-ಮಹಾಮುನಿಗಳೂ, ವಾನರಾಶ್ಚ-ಕಪಿಗಳೂ ಕೂಡ, ಕೌತೂಹಲಸಮನ್ವಿತಾಃ-ಕುತೂಹಲಯುಕ್ತರಾಗಿ, ಸಮಾಜಗ್ಮುಃ-ಬಂದರು. ... ||೨೪||

ಮೂ॥ ತತೋಮುನಿವರಸ್ತೂರ್ಣಂಸಸೀತಸ್ಸಮುಪಾಗಮತ್ ॥ ॥೨೪॥

ಟೀ॥ ತತಃ-ಬಳಿಕ, ಮುನಿವರಃ-ಋಷಿಶ್ರೇಷ್ಠನಾದ ವಾಲ್ಮೀಕಿಮಹರ್ಷಿಯು, ಸಸೀತಃ-ಸೀತಾಸಹಿತನಾಗಿ, ತೂರ್ಣಂ-ಜಾಗ್ರತೆಯಾಗಿ, ಸಮುಪಾಗಮತ್-ಬಂದನು॥೨೪॥

ಮೂ॥ ಅಗ್ರತಸ್ತಮೃಷಿಂಕೃತ್ವಾಯಾಂತೀಕಿಂಚಿದವಾಙ್ಮುಖೀ । ಕೃತಾಂಜಲಿರ್ಬಾಷ್ಪಕಂ
ಠೀಸೀತಾಯಜ್ಞಂವಿವೇಶತಂ ॥ ... ... ॥೨೫॥

ಟೀ॥ ಅಗ್ರತಃ-ಮುಂದುಗಡೆ, ತಮೃಷಿಂ-ಆ ಮುನಿಯನ್ನು, ಕೃತ್ವಾ-ಮಾಡಿ,ಕಿಂಚಿತ್-ಸ್ವಲ್ಪವಾಗಿ, ಅವಾಙ್ಮುಖೀ-ತಲೆಬೊಗ್ಗಿಸಿಕೊಂಡವಳಾಗಿ, ಆಯಾಂತೀ-ಬರುತ್ತಿರುವ, ಕೃತಾಂಜಲಿಃ-ಅಂಜಲಿಬದ್ಧಳಾದ, ಬಾಷ್ಪಕಂಠಾ-ಕಂಬನಿಗಳಿಂದೊಡಗೂಡಿದ ಕೊರಳುಳ್ಳ,ಸೀತಾ-ಸೀತಾದೇವಿಯು, ತಂಯಜ್ಞಂ-ಆಯಾಗಶಾಲೆಯನ್ನು,ವಿವೇಶ-ಹೊಕ್ಕಳು ॥

ಮೂ॥ ದೃಷ್ಟ್ವಾಲಕ್ಷ್ಮೀಮಿವಾಯಾಂತೀಂಬ್ರಹ್ಮಾಣಮನುಯಾಯಿನೀಂ । ವಾಲ್ಮೀಕೇಃ
ಪೃಷ್ಠತಸ್ಸೀತಾಂಸಾಧುವಾದೋಮಹಾನಭೂತ್ ॥ ॥೨೬॥

ಟೀ॥ ಲಕ್ಷ್ಮೀಮಿವ-ಲಕ್ಷ್ಮೀದೇವಿ ಯನ್ನಂತೆ, ಆಯಾಂತೀಂ-ಬರುತ್ತಿರುವ, ಬ್ರಹ್ಮಾಣಂ-ಬ್ರಹ್ಮನನ್ನು, ಅನುಯಾಯಿನೀಂ-ಅನುಸರಿಸಿಪೋಗುತ್ತಿರುವ, ವಾಲ್ಮೀಕೇಃ-ವಾಲ್ಮೀಕಿಮುನಿಯ, ಪೃಷ್ಠತಃ-ಹಿಂದುಗಡೆ, ಸೀತಾಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು, ಮಹಾನ್-ಮಹತ್ತರವಾದ, ಸಾಧುವಾದಃ-ಒಳ್ಳೆದೆಂಬಮಾತು, ಅಭೂತ್-ಆಯಿತು.

ಮೂ॥ ತದಾಮಧ್ಯೇಜನೌಘಸ್ಯಪ್ರವಿಶ್ಯಮುನಿಪುಂಗವಃ ॥ ಸೀತಾಸಹಾಯೋವಾಲ್ಮೀಕಿರಿತಿ
ಪ್ರಾಹಚರಾಘವಂ ।ಇಯಂದಾಶರಥೇಸೀತಾಸುವ್ರತಾಧರ್ಮಚಾರಿಣೀ ॥ ಅಪಾಪಾತೇಪುರಾತ್ಯಕ್ತಾ
ಮಮಾಶ್ರಮಸಮೀಪತಃ । ಲೋಕಾಪವಾದಭೀತೇನತಯಾರಾಮಮಹಾವನೇ ॥೨೯॥ ಪ್ರತ್ಯಯಂ
ದಾಸ್ಯತೆಸೀತಾತದನುಜ್ಞಾತುಮರ್ಹಸಿ । ಇಮೌತುಸೀತಾತನಯಾವಿಮೌಯಮಳಜಾತಕೌ ॥
ಸುತೌತುತವದುರ್ಧರ್ಷೌತಥ್ಯಮೇತತ್ಬ್ರವೀಮಿತೇ।ಪ್ರಚೇತಸೋಹಂದಶಮಃಪುತ್ರೋರಘುಕುಲೋ
ದ್ವಹ ॥೩೧॥ ಅನೃತಂನಸ್ಮರಾಮ್ಯುಕ್ತಂಯಥೇಮೌತವಪುತ್ರಕೌ । ಬಹೂನ್ವರ್ಷಗಣಾನ್ಸಮ್ಯ
ಕ್ತಪಶ್ಚರ್ಯಾಮಯಾಕೃತಾ॥೩೨॥ನೋಪಾಶ್ನೀಯಾಂಫಲಂಪಸ್ಯದುಷ್ಟೇಯಂಯದಿಮೈಥಿಲೀ ॥೩೨॥

ಟೀ॥ ತದಾ-ಆಕಾಲದಲ್ಲಿ, ಸೀತಾಸಹಾಯಃ-ಸೀತಾದೇವಿಗೆ ಸಹಾಯಭೂತನಾದ, ಮುನಿಪುಂಗವಃ-ಋಷಿಶ್ರೇಷ್ಠನಾದ, ವಾಲ್ಮೀಕಿಃ-ವಾಲ್ಮೀಕಿಋಷಿಯು, ಜನೌಘಸ್ಯ-ಜನಸಂಘದ, ಮಧ್ಯೇ-ಮಧ್ಯಪ್ರದೇಶದಲ್ಲಿ, ಪ್ರವಿಶ್ಯ-ಹೊಕ್ಕು, ರಾಘವಂ-ಶ್ರೀರಾಮನಂ ಕುರಿತು, ಹೇ ದಾಶರಥೇ-ಎಲೈ ದಶರಥಪುತ್ರನೆ, ಹೇರಾಮ- ಎಲೈ ಶ್ರೀರಾಮನೆ, ಸುವ್ರತಾ-ಸಮೀಚೀನವ್ರತಯುಕ್ತ, ಧರ್ಮಚಾರಿಣೀ-ಧರ್ಮವನ್ನು ಅನುಸರಿಸುತ್ತಿರುವ, ಅಪಾಪಾ-ಪಾಪವಿಲ್ಲದಿರುವ, ತೇ-ನಿನ್ನ ಸಂಬಂಧಳಾದ, ಇಯಂಸೀತಾ- ಈ ಸೀತಾದೇವಿಯು,ಲೋಕಪರಾದಭೀತೇನ- ಜನಾಪವಾದದಿಂದ ಹೆದರಿದ, ತ್ವಯಾ-ನಿನ್ನಿಂದ, ಮಹಾವನೇ-ದೊಡ್ಡ ಅರಣ್ಯದಲ್ಲಿ, ಮಮ-ನನ್ನ, ಆಶ್ರಮಸಮೀಪತಃ-ಆಶ್ರಮದ ಸಮೀಪದಲ್ಲಿ, ಪುರಾ-ಪೂರ್ವಕಾಲದಲ್ಲಿ, ತ್ಯಕ್ತಾ-ಬಿಡಲ್ಪಟ್ಟಳು ॥೧೯॥ ಸೀತಾ-ಸೀತಾದೇವಿಯು, ಪ್ರತ್ಯಯಂ-ನಂಬಿಕೆಯನ್ನು, ದಾಸ್ಯತೇ-ಕೊಡುವಳು, ತತ್-ಅದನ್ನು ಕುರಿತು, ಅನುಜ್ಞಾತುಂ - ಅಪ್ಪಣೆಕೊಡುವದಕ್ಕೆ,ಅರ್ಹಸಿ-ಯೋಗ್ಯನಾಗು, ಇಮೌತು- ಈ ಹುಡುಗರಾದರೆ,ಸೀತಾತನಯೌ-ಸೀತಾದೇವಿಯಮಕ್ಕಳು, ಇಮೌ-ಇವರು, ಯಮಳಜಾತಕೌ- ಅವಳಜವಳ ಮಕ್ಕಳಾಗಿಹುಟ್ಟಿದವರು, ತವ-ನಿನ್ನ, ದುರಾಧರ್ಷೌ-ಹೊಂದಲಸಾಧ್ಯರಾದ, ಸುತೌ-ಕುಮಾರರು, ತಥ್ಯಂ- ಯಥಾರ್ಥವಾದ, ಏತತ್- ಈ ಮಾತನ್ನು, ತೇ-ನಿನಗೆ, ಬ್ರವೀಮಿ-ಹೇಳುತ್ತೇನೆ, ಹೆ ರಘುಕುಲೋದ್ವಹ-ಎಲೈ ರಘುವಂಶದಲ್ಲಿ ಪುಟ್ಟಿದವನೆ, ಅಹಂ-ನಾನು, ಪ್ರಚೇತಸಃ-ವರುಣನ, ದಶಮಃ-ಹತ್ತನೇಯವನಾದ, ಪುತ್ರಃ-ಮಗನು ॥೨೦॥ ಉಕ್ತಂ-ಹೇಳಿದಮಾತನ್ನು, ಯಥಾ-ಹ್ಯಾಗೆ, ಅನೃತಂ-ಸುಳ್ಳನ್ನಾಗಿ, ನಸ್ಮರಾಮಿ-ಸ್ಮರಿಸುವದಿಲ್ಲವೋ, ತಥಾ-ಹಾಗೆ, ಇಮೌ-ಇವರುಗಳು, ತವ-ನಿನ್ನ, ಪುತ್ರಕೌ-ಮಕ್ಕಳು, (ಅಂದರೆ ನಾನುಹ್ಯಾಗೆ ನಿಜ ಯವಂಪೇಳಿದೆನೋ ಹಾಗೆ ಇವರೀರ್ವರು ನಿನ್ನ ಮಕ್ಕಳೇಸರಿ ಎಂಬ ಭಾವವು.) ಬಹೂನ್-ಅನೇಕವಾದ, ವರ್ಷಗಣಾನ್- ಸಂವತ್ಸರಗಳಲ್ಲಿ, ಸಮೂಹಗಮಯಾ-ನನ್ನಿಂದ, ತಪಶ್ಚರ್ಯಾ-ತಪಶ್ಚರಣೆಯು, ಸಮ್ಯಕ್-ಚನ್ನಾಗಿ, ಕೃತಾ - ಮಾಡಲ್ಪಟ್ಟಿತು, ಇಯಂಮೈಥಿಲೀ-ಈ ಸೀತಾದೇವಿಯು, ದುಷ್ಟಾಯದಿ- ದುಡುಕುತನವಂ ಮಾಡುವಳಾದರೆ, ತಸ್ಯ-ಆನಾನುಮಾಡಿದ ತಪಸ್ಸಿನ, ಫಲಂ-ಪ್ರಯೋಜನವನ್ನು, ನೋಪಾಶ್ನೀಯಾಂ-ಅನುಭವಿಸಲಾರೆನು, ಇತಿ-ಇಂತೆಂದು, ಪ್ರಾಹ-ಪೇಳಿದನು ॥೨೦॥

ಮೂ॥ ವಾಲ್ಮೀಕಿನೈವಮುಕ್ತಸ್ತು ರಾಘವಃಪ್ರತ್ಯಭಾಷತ ॥ ಏವಮೇತನ್ಮಹಾಪ್ರಾಜ್ಞ ಯ
ಥಾವದಸಿಸುವ್ರತ ॥ ಪ್ರತ್ಯಯೋಜನಿತೋಮಹ್ಯಂತವವಾಕ್ಯೈರಕಿಲ್ಬಿಷೈಃ ॥೨೪॥

ಟೀ॥ ವಾಲ್ಮೀಕಿನಾ-ವಾಲ್ಮೀಕಿಮುನಿಯಿಂದ, ಏವಂ-ಈ ಪರಿಯಾಗಿ, ಉಕ್ತಃ-ಪೇಳಲ್ಪಟ್ಟ, ರಾಘವಸ್ತು-ಶ್ರೀರಾಮನಾದರೆ, ಹೆ ಮಹಾಪ್ರಾಜ್ಞ - ಎಲೈ ಮಹಾ ತಿಳುವಳಿಕೆಯುಳ್ಳವನೆ, ಹೆಸುವ್ರತ-ಎಲೈ ಸಮೀಚೀನವಾದ ನಿಯಮವುಳ್ಳವನೆ, ಯಥಾ-ಹ್ಯಾಗೆ, ವದಸಿ-ಹೇಳುತ್ತೀಯೋ, ತಥಾ-ಹಾಗೆ, ಏತತ್-ಇದು, ಏವಂ-ಹೀಗೆಯೇ ನಿಶ್ಚಯವು, ಅಕಿಲ್ಬಿಷೈಃ-ಪಾಪವಿಲ್ಲದಿರುವ, ತವ-ನಿನ್ನ, ವಾಕ್ಯೈಃ-ಮಾತುಗಳಿಂದ, ಮಹ್ಯಂ-ನನಗೆ, ಪ್ರತ್ಯಯಃ-ನಂಬಿಕೆಯು, ಜನಿತಃ-ಹುಟ್ಟಿಸಲ್ಪಟ್ಟಿತು, ( ಇತಿ-ಇಂತೆಂದು) ಪ್ರತ್ಯಭಾಷತ-ಉತ್ತರಕೊಟ್ಟನು. ॥೨೪॥

ಮೂ॥ ಲಂಕಾಯಾಮಪಿದತ್ತೋ ಮೆವೈದೇಹ್ಯಾಪ್ರತ್ಯಯೋಮಹಾನ್ । ದವಾಸಾಂಪ್ರರತೇಸ್ತೇನ ಮಂದಿರೇಸಂಪ್ರವೇಶಿತಾ॥ ಸೇಯಂಲೋಕಭಯಾದ್ಬ್ರಹ್ಮನ್ನಪಾಪಾಪಿಸತೀಪುರಾ।ಸೀತಾಮಯಾಪರಿತ್ಯಕ್ತಾಭವಾಂಸ್ತುಕ್ಷಂತುಮರ್ಹತಿ ॥ ಮಮೈವಜಾತೌಜಾನಾಮಿಪುತ್ರಾವೇತೌಕುಶೀಲವೌ। ಶುದ್ಧಾಯಾಂಜಗತೀಮಧ್ಯೇಸೀತಾಯಾಂಪ್ರೀತಿರಸ್ತುಮೆ ॥೩೭॥

ಟೀ॥ ಹೆ ಬ್ರಹ್ಮನ್-ಎಲೈ ಬ್ರಾಹ್ಮಣನೆ, ದೇವಾನಾಂ-ದೇವತೆಗಳ, ಪುರತಃ-ಮುಂದೆ, ಲಂಕಾಯಾಮಪಿ-ಲಂಕಾಪಟ್ಟಣದಲ್ಲಿಯೂ ಕೂಡಾ, ವೈದೇಹ್ಯಾ- ಸೀತಾದೇವಿಯಿಂದ, ಮೆ-ನನಗೆ, ಪ್ರತ್ಯಯಃ-ನಂಬಿಕೆಯು, ದತ್ತಃ-ಕೊಡಲ್ಪಟ್ಟಿತು, ತೇನ-ಅದರಿಂದ, ಮಂದಿರೇ-ಮನೆಯಲ್ಲಿ, ಸಂಪ್ರವೇಶಿತಾ-ಪ್ರವೇಶಮಾಡಲ್ಪಟ್ಟಳು, ಸೇಯಂಸೀತಾ-ಅಂಥಾ ಈ ಸೀತಾದೇವಿಯು, ಅಪಾಪಾಪಿ-ಪಾಪರಹಿತಳಾದರೂ, ಸತೀ-ಪತಿವ್ರತೆಯಾದರೂ, ಲೋಕಭಯಾತ್-ಲೋಕಾಪವಾದದ ಭಯದಿಂದ, ಪುರಾ-ಪೂರ್ವದಲ್ಲಿ, ಮಯಾ-ನಿನ್ನಿಂದ, ಪರಿತ್ಯಕ್ತಾ-ಬಿಡಲ್ಪಟ್ಟಳು, ಭವಾನ್-ನೀನು, ತತ್-ಅದನ್ನು, ಕ್ಷಂತುಂ-ಕ್ಷಮಿಸುವದಕ್ಕೆ, ಅರ್ಹತಿ-ಯೋಗ್ಯನಾಗು, ಪುತ್ರೌ-ಮಕ್ಕಳಾದ, ಏತೌಕುಶೀಲವೌ-ಈ ಗಾಯಕರನ್ನು, ಮಮೈವ-ನನಗೇನೆ, ಜಾತೌ-ಹುಟ್ಟಿದವರನ್ನಾಗಿ, ಜಾನಾಮಿ-ತಿಳಿಯುತ್ತೇನೆ, ಜಗತೀಮಧ್ಯೇ-ಭೂಮಧ್ಯದಲ್ಲಿ, ಶುದ್ಧಾಯಾಂ-ಪರಿಶುದ್ಧಳಾದ, ವೈದೇಹ್ಯಾಂ-ಸೀತಾದೇವಿಯಲ್ಲಿ, ಮೆ-ನನಗೆ, ಪ್ರೀತಿಃ-ವಿಶ್ವಾಸವು, ಅಸ್ತು-ಆಗಲಿ ... ... ॥೩೭॥

ಮೂ॥ ದೇವಸ್ಸರ್ವೇಪರಿಜ್ಞಾಯರಾಮಾಭಿಪ್ರಾಯಮುತ್ಸುಕಾಃ । ಬ್ರಹ್ಮಾಣಮಗ್ರತಃಕೃತ್ವಾಸಮಾಜಗ್ಮುಸ್ಸಹಸ್ರಶಃ ... ... ॥೩೮॥

ಟೀ॥ ಸರ್ವೇ-ಸಮಸ್ತರಾದ, ಸಹಸ್ರಶಃ-ಅನೇಕರಾದ, ದೇವಾಃ-ದೇವತೆಗಳು, ರಾಮಾಭಿಪ್ರಾಯಂ-ಶ್ರೀರಾಮನ ಆಶಯವನ್ನು, ಪರಿಜ್ಞಾಯ-ತಿಳಿದುಕೊಂಡು, ಉತ್ಸುಕಾಃ-ಉತ್ಕಂಠೆಯುಳ್ಳವರಾಗಿ, ಬ್ರಹ್ಮಾಣಂ-ಬ್ರಹ್ಮನನ್ನು, ಅಗ್ರತಃ-ಮುಂದುಗಡೆ, ಕೃತ್ವಾ-ಮಾಡಿ, ಸಮಾಜಗ್ಮುಃ-ಬಂದರು. ॥೩೮॥

ಮೂ॥ ಪ್ರಜಾಸ್ಸಮಾಗಮನ್ಹೃಷ್ಟಾಸ್ಸೀತಾಕೌಶೇಯವಾಸಿನೀ । ಉದಙ್ಮುಖೀಕ್ಷ್ಯಧೋದೃಷ್ಟಿಃಪ್ರಾಂಜಲಿರ್ವಾಕ್ಯಮಬ್ರವೀತ ... ... ॥೩೯॥

ಟೀ॥ ಪ್ರಜಾಃ-ಜನಗಳು, ಹೃಷ್ಟಾಃ-ಸಂತೋಷಪಟ್ಟವರಾಗಿ, ಸಮಾಗಮನ್-ಬಂದರು, ಕೌಶೇಯವಾಸಿನೀ-ಪಟ್ಟೆಸೀರೆಯನ್ನುಟ್ಟಿರುವ, ಸೀತಾ-ಸೀತಾದೇವಿಯು,

ಉದಙ್ಮುಖೀ- ಉತ್ತರಾಭಿಮುಖಳಾಗಿ, ಅಧೋದೃಷ್ಟಿಃ-ಕೆಳಭಾಗದಲ್ಲಿ ಮಾಡಲ್ಪಟ್ಟ ದೃಷ್ಟಿಯುಳ್ಳವಳಾಗಿ, ಪ್ರಾಂಜಲಿಃ-ಅಂಜಲಿಬದ್ಧಳಾಗಿ, ವಾಕ್ಯಂ- ಮಾತನ್ನು, ಅಬ್ರವೀತ್-ನುಡಿದಳು. ... ... ... ||೩೯||

ಮೂ ॥ ರಾಮಾದನ್ಯಂಯಥಾಹಂನ್ವೈಮನಸಾಪಿನಚಿಂತಯೇ । ತಥಾಮೇಧರಣೀದೇವೀವಿವರಂ
ದಾತುಮರ್ಹತಿ ... ... ... ||೪೦||

ಟೀ॥ ರಾಮಾತ್-ಶ್ರೀರಾಮನಿಗಿಂತಲೂ, ಅನ್ಯಂ-ಮತ್ತೊಬ್ಬ ಪುರುಷನನ್ನು, ಯಥಾ-ಹ್ಯಾಗೆ, ಅಹಂವೈ-ನಾನಾದರೆ, ಮನಸಾ-ಮನಸ್ಸಿನಿಂದಲೂ, ನಚಿಂತಯೇ-ಯೋಚಿಸುವದಿಲ್ಲವೋ, ಧರಣೀದೇವೀ-ಭೂದೇವಿಯು, ತಥಾ-ಹಾಗೆ, ಮೇ-ನನಗೆ, ವಿವರಂ-ಮಾರ್ಗವನ್ನು, ದಾತುಂ-ಕೊಡುವದಕ್ಕೆ, ಅರ್ಹತಿ-ಯೋಗ್ಯಳಾಗಿಧಾಳೆ ||೪೦||

ಮೂ॥ ತಥಾಶ್ಶಪಂತ್ಯಾಸ್ಸೀತಾಯಾಃಪ್ರಾದುರಾಸೀನ್ಮಹಾದ್ಭುತಂ । ಭೂತಲಾದ್ದಿವ್ಯಮತ್ಯ
ರ್ಥಂಸಿಂಹಾಸನಮನುತ್ತಮಂ ... ... ||೪೧||

ಟೀ ॥ ತಥಾ-ಆ ಪರಿಯಾಗಿ, ಸೀತಾಯಾಃ-ಸೀತಾದೇವಿಯು, ಶಪಂತ್ಯಾಸ್ಸತ್ಯಾಃ- ಶಪಥಮಾಡಿದವಳಾಗುತಿರಲಿಕಾಗಿ, ಮಹಾದ್ಭುತಂ-ಅತ್ಯಾಶ್ಚರ್ಯಕರವಾದ, ದಿವ್ಯಂ-ದೇವತಾಸಂಬಂಧವಾದ, ಅತ್ಯರ್ಥಂ-ಬಹಳವಾಗಿ, ಅನುತ್ತಮಂ - ಸರ್ವೋತ್ತಮವಾದ, ಸಿಂಹಾಸನಂ-ಪೀಠವು, ಭೂತಲಾತ್ - ಭೂಪ್ರದೇಶದ ದೆಸೆಯಿಂದ, ಪ್ರಾದುರಾಸೀತ್-ಹುಟ್ಟಿತು. ... ... ... ||೪೧||

ಮೂ॥ ನಾಗೇಂದ್ರೈರ್ಧ್ರಿಯಮಾಣಂಚದಿವ್ಯದೇಹೈರವಿಪ್ರಭಂ।ಭೂದೇವಿಜಾನಕೀಂದೋರ್ಭ್ಯಾಂ
ಗೃಹೀತ್ವಾಸ್ನೇಹಸಂಯುತಾ ॥೪೨॥ ಸ್ವಾಗತಂತಾಮುವಾಚೈನಾಮಾಸನೇಸನ್ನವೇಶಯತ ।ಸಿಂಹಾ
ಸನಸ್ಥಾಂವೈದೇಹೀಂಪ್ರವಿಶಂತೀಂರಸಾತಲಂ ... ... ||೪೩||

ಟೀ॥ ನಾಗೇಂದ್ರೈಃ-ಸರ್ಪಶ್ರೇಷ್ಠಗಳಿಂದ, ಧ್ರಿಯಮಾಣಂ-ಧರಿಸಲ್ಪಡುತ್ತಿರುವ, ದಿವ್ಯದೇಹೈಃ-ಉತ್ತಮವಾದ ಆಕಾರಗಳಿಂದ, ರವಿಪ್ರಭಂ- ಸೂರ್ಯನಕಾಂತಿಯಂತೆ ಕಾಂತಿಯುಳ್ಳ ಸಿಂಹಾಸನವು, (ಅಲಕ್ಷ್ಯತ-ಕಾಣಲ್ಪಟ್ಟಿತು) ಭೂದೇವಿ-ಭೂಮಿದೇವಿಯು, ಸ್ನೇಹಸಂಯುತಾ- ವಿಶ್ವಾಸಯುಕ್ತಳಾಗಿ, ಜಾನಕೀಂ - ಸೀತಾದೇವಿಯನ್ನು, ದೋರ್ಭ್ಯಾಂ-ಭುಜಗಳಿಂದ, ಗೃಹೀತ್ವಾ-ಹಿಡಿದುಕೊಂಡು, ಸ್ವಾಗತಂ-ಸುಖವೇಯೆಂದು, ತಾಂ-ಆ ಸೀತಾದೇವಿಯನ್ನು, ಕುರಿತು, ಉವಾಚ-ಹೇಳಿದನು, ಏನಾಂ-ಈ ಸೀತಾ

ದೇವಿಯನ್ನು, ಆಸನೇನ-ಸಿಂಹಾಸನದಲ್ಲಿ, ನ್ಯವೇಶಯತ್- ಕುಳ್ಳಿರಿಸಿಕೊಂಡಳು, ಸಿಂಹಾಸನಸ್ಥಾಂ-ಪೀಠದಲ್ಲಿರುವ, ರಸಾತಲಂ-ಪಾತಾಳಲೋಕವನ್ನು, ಪ್ರವಿಶಂತೀಂ-ಪ್ರವೇಶಿಸುತ್ತಿರುವ, ವೈದೇಹೀಂ-ಸೀತಾದೇವಿಯನ್ನು, ದೃಷ್ಟ್ವಾ-ಕಂಡು. ... ||೪೩||

ಮೂ|| ನಿರಂತರಾಪುಷ್ಪವೃಷ್ಟಿರ್ದಿವ್ಯಾಸೀತಾಮವಾಕಿರತ । ಸಾಧುವಾದಶ್ಚ ಸುಮಹಾನ್ದೇವಾನಾಂಪರಮಾದ್ಭುತಃ ... ... ||೪೪||

ಟೀ|| ನಿರಂತರಾ-ಸಮ್ಮರ್ದವಾದ, ದಿವ್ಯಾ-ದೇವತಾಸಂಬಂಧವಾದ, ಪುಷ್ಪವೃಷ್ಟಿಃ-ಪುಷ್ಪವರ್ಷವು, ಸೀತಾಂ-ಸೀತಾದೇವಿಯನ್ನು ಕುರಿತು, ಅವಾಕಿರತ್- ಬಿದ್ದಂಥಾದ್ದಾಯಿತು, ಪರಮಾದ್ಭುತಂ-ಬಹಳ ಆಶ್ಚರ್ಯಕರವಾದ, ದೇವಾನಾಂ-ದೇವತೆಗಳ,ಸುಮಹಾನ್-ಮಹತ್ತರವಾದ,ಸಾಧುವಾದಶ್ಚ-ಶ್ಲಾಘನೆಮಾತೂ ಕೂಡ(ಅಭೂತ್-ಆಯಿತು

ಮೂ|| ಊಚುಶ್ಚ ಬಹುಧಾವಾಚೋಅಂತರಿಕ್ಷಗತಾಸ್ಸುರಾಃ। ಅಂತರಿಕ್ಷೇಚಭೂಮೌಚ ಸರ್ವೇಸ್ಥಾವರಜಂಗಮಾಃ || ... ... ||೪೫||

ಟೀ|| ಅಂತರಿಕ್ಷಗತಾಃ-ಗಗನವನ್ನು ಹೊಂದಿದ, ಸುರಾಃ-ದೇವತೆಗಳು, ಬಹುವಿಧಾಃ-ನಾನಾಬಗೆಗಳಾದ, ವಾಚಃ-ಮಾತುಗಳನ್ನು, ಊಚುಃ-ಹೇಳಿದರು, ಅಂತರಿಕ್ಷೇಚ-ಗಗನದಲ್ಲಿಯೂ, ಭೂಮೌಚ-ಭೂಮಿಯಲ್ಲಿಯೂ, ಸರ್ವೇ-ಸಮಸ್ತವಾದ, ಸ್ಥಾವರಜಂಗಮಾಃ-ಸ್ಥಾವರ ಜಂಗಮಗಳು, ಬಹುವಿಧಾವಾಚಃ-ನಾನಾ ಬಗೆಗಳಾದ ಮಾತುಗಳನ್ನು, ಊಚುಃ-ಹೇಳಿದರು. .. .. .. ||೪೫||

ಮೂ|| ವಾನರಾಶ್ಚ ಮಹಾಕಾಯಾಃಸೀತಾಶಪಥಕಾರಣಾತ್ । ಕೇಚಿಚ್ಚಿಂತಾಪರಾಸ್ತಸ್ಯಾಃ ಕೇಚಿಧ್ಯಾನಪರಾಯಣಾಃ ||೪೬|| ಕೇಚಿದ್ರಾಮಂನಿರೀಕ್ಷಂತಃಕೇಚಿತ್ಸೀತಾಮಚೇತಸಃ ||೪೭||

ಟೀ|| ಮಹಾಕಾಯಾಃ-ಮಹಾ ಶರೀರಗಳುಳ್ಳ, ವಾನರಾಶ್ಚ-ಕಪಿಗಳೂ ಕೂಡ, ಸೀತಾಶಪಥಕಾರಣಾತ್-ಸೀತಾದೇವಿಯ ಪ್ರತಿಜ್ಞೆಯ ಹೇತುವಿನಿಂದ, (ಊಚುಃ-ಹೇಳಿದರು,) ಕೇಚಿತ್-ಕೆಲವರು, ತಸ್ಯಾಃ-ಆ ಸೀತಾದೇವಿಯ, ಚಿಂತಾಪರಾಃ-ಆಲೋಚನೆಯಲ್ಲಿ ಆಸಕ್ತರಾದರು, ಕೇಚಿತ್-ಕೆಲವರು, ಧ್ಯಾನಪರಾಯಣಾಃ- ಆಕೆಯ ಧ್ಯಾನದಲ್ಲಿಯೇ ಆಸಕ್ತಿಯುಳ್ಳವರಾದರು ||೪೬|| ಕೇಚಿತ್-ಕೆಲವರು, ರಾಮಂ-ಶ್ರೀರಾಮನನ್ನು, ನಿರೀಕ್ಷಂತಃ-ನೋಡುತ್ತಿದ್ದರು, ಕೇಚಿತ್-ಕೆಲವರು, ಅಚೇತಸಃ-ಪ್ರಜ್ಞೆಯಿಲ್ಲದವರಾಗಿ, ಸೀತಾಂ-ಸೀತಾದೇವಿಯನ್ನು, ನಿರೀಕ್ಷಂತಃ-ನೋಡುತ್ತಿರುವರು,(ಅಭವನ್-ಆದರು. ... ... ||೪೭||

ಮೂ॥ ಮುಹೂರ್ತಮಾತ್ರಂತತ್ಸರ್ವಂತೂಷ್ಣೀಂಭೂತಮಚೇತನಂ ॥೪೭॥

ಟೀ॥ ಮುಹೂರ್ತಮಾತ್ರಂ-ಸ್ವಲ್ಪಹೊತ್ತು, ತತ್ಸರ್ವಂ-ಅದೆಲ್ಲಾ, ತೂಷ್ಣೀಂಭೂತಂ-ಸುಮ್ಮನೆ ಯಿರುವಂಥಾದ್ದಾಗಿಯೂ, ಅಚೇತನಂ - ಪ್ರಜ್ಞೆಯಿಲ್ಲದಂತಾದ್ದಾಗಿಯೂ (ಆಸೀತ್-ಆಯಿತು.) .. .. .. ॥೪೭॥

ಮೂ॥ ಸೀತಾಪ್ರವೇಶನಂದೃಷ್ಟ್ವಾಸರ್ವಂಸಮ್ಮೋಹಿತಂಜಗತ್। ರಾಮಸ್ತು ಸರ್ವಂಜ್ಞಾತ್ವೈವ
ಭವಿಷ್ಯತ್ಕಾರ್ಯಗೌರವಂ ॥೪೮॥ ಅಜಾನನ್ನಿವದುಃಖೇನಶುಶೋಚಜನಕಾತ್ಮಜಾಂ ॥೪೮-೨॥

ಟೀ॥ ಸೀತಾಪ್ರವೇಶನಂ-ಸೀತಾದೇವಿಯ ಭೂಪ್ರವೇಶವನ್ನು, ದೃಷ್ಟ್ವಾ-ಕಂಡು, ಸರ್ವಂ-ಸಮಸ್ತವಾದ, ಜಗತ್-ಜಗತ್ತು, ಸಮ್ಮೋಹಿತಂ-ಮೋಹಿಸಲ್ಪಟ್ಟಿತು, ರಾಮಸ್ತು-ಶ್ರೀರಾಮನಾದರೋ, ಸರ್ವಂ-ಸಮಸ್ತವಾದ, ಭವಿಷ್ಯತ್ಕಾರ್ಯಗೌರವಂ-ಮುಂದಾಗತಕ್ಕ ಕಾರ್ಯಗುರುತ್ವವನ್ನು, ಜ್ಞಾತ್ವೈವ-ತಿಳಿದಿದ್ದರೂ, ಅಜಾನನ್ನಿವ-ಅರಿಯದವನಂತೆ, ದುಃಖೇನ-ವ್ಯಸನದಿಂದ ಕೂಡಿದವನಾಗಿ, ಜನಕಾತ್ಮಜಾಂ-ಸೀತಾದೇವಿಯಂಕುರಿತು, ಶುಶೋಚ-ದುಃಖಿಸಿದನು. ... ॥೪೮॥

ಮೂ॥ ಬ್ರಹ್ಮಣಾಋಷಿಭಿಸ್ಸಾರ್ಧಂಬೋಧಿತೋರಘುನಂದನಃ। ಪ್ರತಿಬುದ್ಧ ಇವಸ್ವಪ್ನಾಚ್ಚ
ಕಾರಾನಂತರಾಃಕ್ರಿಯಾಃ॥ ವಿಸಸರ್ಜ ಋಷೀನ್ ಸರ್ವಾನೃತ್ವಿಜೋಯೇಸಮಾಗತಾಃ ॥೫೦॥

ಟೀ॥ ಋಷಿಭಿಸ್ಸಾರ್ಧಂ-ಮುನಿಗಳಸಂಗಡ, ಬ್ರಹ್ಮಣಾ-ಬ್ರಹ್ಮನಿಂದ, ರಘುನಂದನಃ-ಶ್ರೀರಾಮನು, ಬೋಧಿತಃ-ಬೋಧಿಸಲ್ಪಟ್ಟವನಾಗಿ, ಸ್ವಪ್ನಾತ್-ಕನಸಿನದೆಸೆಯಿಂದ, ಪ್ರತಿಬುದ್ಧ ಇವ, ಎಚ್ಚತ್ತವನಂತೆ, ಅನಂತರಾಃ-ಮುಂದೆಮಾಡತಕ್ಕ, ಕ್ರಿಯಾಃ-ಕರ್ಮಗಳನ್ನು, ಚಕಾರ-ಮಾಡಿದನು, ಋತ್ವಿಜಃ-ಋತ್ವಿಕ್ಕುಗಳಾಗಿ, ಯೇ-ಯಾರು, ಸಮಾಗತಾಃ-ಬಂದಿದ್ದರೋ, ಸರ್ವಾನ್-ಸಮಸ್ತರಾದ, ತಾನೃಷೀನ್-ಆ ಮುನಿಗಳನ್ನು, ವಿಸಸರ್ಜ-ಕಳುಹಿಸಿಕೊಟ್ಟನು ... ॥೫೦॥

ಮೂ॥ ತಾನ್ ಸರ್ವಾನ್ಧನರತ್ನಾದ್ಯೈಸ್ತೋಷಯಾಮಾಸಭೂರಿಶಃ। ಉಪಾದಾಯಕುಮಾರೌತಾ
ವಯೋಧ್ಯಾಮಗಮತ್ಪ್ರಭುಃ ... ॥೫೧॥

ಟೀ॥ ಪ್ರಭುಃ-ಅರಸಾದ ಶ್ರೀರಾಮನು, ತಾನ್ ಸರ್ವಾನ್-ಅವರೆಲ್ಲರನ್ನೂ, ಭೂರಿಶಃ-ಅಧಿಕವಾಗಿ, ಧನರತ್ನಾದ್ಯೈಃ-ದ್ರವ್ಯರತ್ನಗಳೇ ಮುಂತಾದವುಗಳಿಂದ, ತೋಷ

ಯಾವೊಸ-ಸಂತೋಷಗೊಳಿಸಿದನು, ತೌಕುಮಾರೌ-ಆ ಕುಶಲವರೆಂಬ ಮಕ್ಕಳನ್ನು, ಉಪಾದಾಯ-ಕರೆದುಕೊಂಡು, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು ಕುರಿತು, ಉಪಾಗಮತ್-ಬಂದನು. ... ... ... ||೫೧||

ಮೂ|| ತದಾದಿನಿಸ್ಪೃಹೋರಾಮಃಸರ್ವಭೋಗೇಷುಸರ್ವದಾ।ಆತ್ಮಚಿಂತಾಪರೋನಿತ್ಯಮೇಕಾಂ
ತೇಸಮುಪಸ್ಥಿತಃ ... ... ... ||೫೨||

ಟೀ|| ತದಾದಿ-ಅದುಮೊದಲುಗೊಂಡು, ಸರ್ವದಾ-ಯಾವಾಗಲೂ, ಸರ್ವಭೋಗೇಷು-ಸಮಸ್ತವಾದ ಸುಖಗಳಲ್ಲಿ, ನಿಸ್ಪೃಹಃ-ಇಚ್ಛೆಯಿಲ್ಲದಿರುವ, ರಾಮಃ-ಶ್ರೀರಾಮನು, ನಿತ್ಯಂ-ನಿರಂತರವೂ, ಏಕಾಂತೇ-ವಿಜನಪ್ರದೇಶದಲ್ಲಿ, ಸಮುಪಸ್ಥಿತಃ-ಇರುವನಾಗಿ, ಆತ್ಮಚಿಂತಾಪರಃ-ಆ ಬ್ರಹ್ಮನಿಷ್ಠಾಪರನು, ಆಸೀತ್-ಆದನು. ||೫೨||

ಮೂ|| ಏಕಾಂತೇಧ್ಯಾನನಿರತೇಏಕದಾರಾಘವೇಸತಿ । ಜ್ಞಾತ್ವಾನಾರಾಯಣಂಸಾಕ್ಷಾತ್ಕೌಸ
ಲ್ಯಾಪ್ರಿಯವಾದಿನೀ ... ... ... ||೫೩||

ಟೀ|| ಏಕದಾ-ಒಂದಾನೊಂದು ಕಾಲದಲ್ಲಿ, ರಾಘವೇ-ಶ್ರೀರಾಮನು, ಏಕಾಂತೇ-ರಹಸ್ಯಸ್ಥಳದಲ್ಲಿ, ಧ್ಯಾನನಿರತೇಸತಿ-ಧ್ಯಾನನಿಷ್ಠನಾಗುತಿರಲೀಕಾಗಿ, ಪ್ರಿಯವಾದಿನೀ-ಇಷ್ಟವಾದ ಮಾತುಗಳಂ ಪೇಳುತ್ತಿರುವ, ಕೌಸಲ್ಯಾ-ಕೌಸಲ್ಯಾದೇವಿಯು, ಸಾಕ್ಷಾತ್-ಪ್ರತ್ಯಕ್ಷರೂಪವಾಗಿ, ನಾರಾಯಣಂ-ಶ್ರೀ ಮಹಾವಿಷ್ಣುವಿನನ್ನಾಗಿ, ಜ್ಞಾತ್ವಾ-ತಿಳಿದು. ... ... ... ||೫೩||

ಮೂ|| ಭಕ್ತ್ಯಾಗತಪ್ರಸನ್ನಂತಂಪ್ರಣತಾಃಪ್ರಾಹಹೃಷ್ಟಧೀಃ।ರಾಮತ್ವಂಜಗತಾಮಾದಿರಾ
ದಿಮಧ್ಯಾಂತವರ್ಜಿತಃ ... ... ||೫೪||

ಟೀ|| ಹೃಷ್ಟಧೀಃ-ಸಂತುಷ್ಟವಾದ ಮನವುಳ್ಳ ಕೌಸಲ್ಯಾದೇವಿಯು, ಪ್ರಣತಾ-ನಮ್ರಳಾಗಿ, ಆಗತಪ್ರಸನ್ನಂ-ಆಗತ-ಬಂದ, ಪ್ರಸನ್ನಂ-ಪ್ರಸನ್ನನಾದ, ತಂ-ಆ ಶ್ರೀರಾಮನನ್ನು ಕುರಿತು, ಹೆ ರಾಮ-ಎಲೈ ಶ್ರೀರಾಮನೇ, ತ್ವಂ-ನೀನು, ಜಗತಾಂ-ಜಗತ್ತುಗಳಿಗೆ, ಆದಿಃ-ಮೂಲವು, ಆದಿಮಧ್ಯಾಂತವರ್ಜಿತಃ- ಉತ್ಪತ್ತಿನಾಶರಹಿತನಾದಂಥಾವನು, ಇತಿ-ಇಂತೆಂದು, ಭಕ್ತ್ಯಾ-ಭಕ್ತಿಯಿಂದ, ಪ್ರಾಹ-ಪೇಳಿದಳು ... ... ||೫೪||

ಮೂ॥ ಪರಮಾತ್ಮಾ ಪರಾನಂದಃಪೂರ್ಣಃಪುರುಷಈಶ್ವರಃ । ಜಾತೋಸಿಮೇಗರ್ಭಗೃಹೇಮೇ
ಮಪುಣ್ಯಾತಿರೇಕತಃ ... ... ... ॥೫೫॥

ಟೀ॥ ಪರಮಾತ್ಮಾ-ಪರಮ-ಉತ್ಕೃಷ್ಟನಾದ, ಆತ್ಮಾ-ಅಂತರ್ವ್ಯಾಪ್ತನಾದ, ಪೂರ್ಣಃ-ಸಕಲಕಾಮಗಳಿಂದ ಸಂಪೂರ್ಣನಾದ, ಪರಾನಂದಃ-ಚತುರ್ಮುಖಬ್ರಹ್ಮಾನಂದಾಪೇಕ್ಷೆಯಾಉತ್ಕೃಷ್ಟವಾದ ಆನಂದಸ್ವರೂಪನಾದ, ಈಶ್ವರಃ-ಸರ್ವನಿಯಾಮಕನಾದ, ಪುರುಷಃ-ಪುರುಷನಾದನೀನು, ಮೇ-ನನ್ನ, ಗರ್ಭಗೃಹೇ-ಗರ್ಭವೆಂಬ ಮನೆಯಲ್ಲಿ, ಮಮ-ನನ್ನ, ಪುಣ್ಯಾತಿರೇಕತಃ-ಪುಣ್ಯಾತಿಶಯದಿಂದ, ಜಾತಃ-ಹುಟ್ಟಿದವನಂತೆ, ಅಸಿ-ಆದೆ ... ... ॥೫೫॥

ಮೂ॥ ಅವಸಾನೇಮಮಾಪ್ಯದ್ಯಸಮಯೋಭೂದ್ರಘೂತ್ತಮ । ನಾದ್ಯಾಪ್ಯಬೋಧತಃಕೃ
ತ್ಸ್ನಃಭವಬಂಧೋನಿವರ್ತತೇ ... ... ॥೫೬॥

ಟೀ॥ ಹೆ ರಘೂತ್ತಮ-ಎಲೈ ರಘುಶ್ರೇಷ್ಠನೆ, ಮಮ-ನನ್ನ, ಅವಸಾನೇ-ವಾರ್ಧಿಕಾವಸ್ಥೆಯಲ್ಲಿ, ಅದ್ಯ-ಈಗ, ಸಮಯಃ-ಪ್ರಶ್ನಸಮಯವು, ಅಭೂತ್-ಆಯಿತು, ಅದ್ಯಾಪಿ-ಈಗಲೂಕೂಡ, ಅಬೋಧತಃ-ಅಜ್ಞಾನದದೆಸೆಯಿಂದ, ಕೃತ್ಸ್ನಃ-ಸಮಸ್ತವಾದ, ಭವಬಂಧಃ-ಭವ-ಸಂಸಾರವೆಂಬ, ಬಂಧಃ-ಬಂಧನವು, ನನಿವರ್ತತೇ-ನಿವರ್ತಿಯಾಗುವದಿಲ್ಲವಷ್ಟೇ ... ... ... ॥೫೬॥

ಮೂ॥ ಇದಾನೀಮಪಿಮೇಜ್ಞಾನಂಭವಬಂಧನಿವರ್ತಕಂ । ಯಥಾಸಂಕ್ಷೇಪತೋಭೂಯಾತ್ತ
ಥಾಬೋಧಯಮಾಂವಿಭೋ ... ... ... ॥೫೭॥

ಟೀ॥ ಹೆ-ವಿಭೊ-ಎಲೈ ಸ್ವಾಮಿಯೆ, ಇದಾನೀಮಪಿ-ಈಗಲಾದರೂ,ಮೇ-ನನಿಗೆ, ಸಂಕ್ಷೇಪತಃ-ಸಂಕ್ಷೇಪದದೆಸೆಯಿಂದ, ಭವಬಂಧನಿವರ್ತಕಂ-ಭವ-ಸಂಸಾರವೆಂಬ,ಬಂಧ-ಬಂಧನಕ್ಕೆ, ನಿವರ್ತಕಂ-ಪರಿಹಾರಕವಾದ, ಜ್ಞಾನಂ-ತತ್ವಜ್ಞಾನವು, ಯಥಾ-ಹ್ಯಾಗೆ, ಭೂಯಾತ್-ಆಗುವದೋ, ತಥಾ-ಹಾಗೆಯೆ, ಮಾಂ-ನನ್ನನ್ನು ಕುರಿತು, ಬೋಧಯ-ಉಪದೇಶಿಸು (ಅಂದರೆ ಬೋಧಿಸು ಎಂಬ ತಾತ್ಪರ್ಯವು) ... ... ॥೫೭॥

ಮೂ॥ ನಿರ್ವೇದವಾದಿನೀಮೇವಂಮಾತರಂಪುತ್ರವತ್ಸಲಃ । ದಯಾಳುಃಸಾಹಧರ್ಮಾತ್ಮಾಜ
ರಾಜರ್ಜರಿತಾಂಶುಭಾಂ ... ... ॥೫೮॥

ಟೀ॥ ಏವಂ-ಈಪರಿಯಾಗಿ, ನಿರ್ವಿದನಾಪಿನೀಂ-ನಿರ್ವೇದ-ವಿಷಯಲಂಪಟಬುದ್ಧಿಯಿಂದ, ವಾದಿನೀಂ-ಮಾತನಾಡುತಿರುವ, ಜರಾಜರ್ಝರಿತಾಂ- ಜರಾ-ವಾರ್ಧಿಕಾವಸ್ಥೆಯಿಂದ, ಜರ್ಝರಿತಾಂ-ಶಿಥಿಲವಾದ ಶರೀರವುಳ್ಳ,ಶುಭಾಂ-ಶುಭಕರಳಾದ, ಮಾತರಂ-ತಾಯಿಯನ್ನು ಕುರಿತು, ಮಾತೃವತ್ಸಲಃ-ತಾಯಿಯಲ್ಲಿವಾತ್ಸಲ್ಯವುಳ್ಳ, ದಯಾಳುಃ-ಸರ್ವಭೂತದಯಾಪರನಾದ, ಧರ್ಮಾತ್ಮಾ-ಧರ್ಮಿಷ್ಠನಾದ ಶ್ರೀರಾಮನು, ಪ್ರಾಹ-ಹೇಳಿದನು. ... ... ॥೪೮॥

ಮೂ॥ ಮಾರ್ಗಾಸ್ತ್ರಯೋಮಯಾಪ್ರೋಕ್ತಾಃಪುರಾಮೋಕ್ಷಾಪ್ತಿಸಾಧಕಾಃ। ಕರ್ಮಯೋಗೋ.
ಜ್ಞಾನಯೋಗೋಭಕ್ತಿಯೋಗಶ್ಚ ಶಾಶ್ವತಃ ... ... ॥೪೯॥

ಟೀ॥ ಮಯಾ-ನನ್ನಿಂದ, ಪುರಾ-ಪೂರ್ವದಲ್ಲಿ, ಮೋಕ್ಷಾಪ್ತಿಸಾಧಕಾಃ-ಮೋಕ್ಷಪ್ರಾಪ್ತಿಗೆ ಸಾಧಕವಾದ, ಕರ್ಮಯೋಗಃ-ಕರ್ಮಯೋಗವು, ಜ್ಞಾನಯೋಗಃ-ಜ್ಞಾನಯೋಗವು. ಶಾಶ್ವತಃ-ಶಾಶ್ವತವಾದ, ಭಕ್ತಿಯೋಗಶ್ಚ-ಭಕ್ತಿಯೋಗವೂ ಎಂಬತ್ರಯಃ-ಮೂರಾದ, ಮಾರ್ಗಾಃ-ಮಾರ್ಗಗಳು, ಪ್ರೋಕ್ತಾಃ-ಹೇಳಲ್ಪಟ್ಟವು. ॥೪೯॥

ಮೂ॥ ಭಕ್ತಿರ್ವಿಭಿದ್ಯತೆಮಾತಃತ್ರಿವಿಧಾಗುಣಭೇದತಃ । ಸ್ವಭಾವೋಯಸ್ಯಯಸ್ತೇನತಸ್ಯಭ
ಕ್ತಿರ್ವಿಭಿದ್ಯತೆ ... ... ... ॥೫೦॥

ಟೀ॥ ಹೆಮಾತಃ-ಎಲೈ ತಾಯಿಯೆ, ಭಕ್ತಿಃ-ಭಕ್ತಿಯೋಗವು, ಗುಣಭೇದತಃ-ಗುಣ-ಸತ್ವ ರಜಸ್ತಮೋಗುಣಗಳ, ಭೇದತಃ-ಭೇದದದೆಸೆಯಿಂದ, ತ್ರಿವಿಧಾ-ಮೂರುಬಗೆಗಳುಳ್ಳದ್ದಾಗಿ, ವಿಭಿದ್ಯತೆ-ವಿಭಾಗಮಾಡಲ್ಪಡುತ್ತೆ, ಯಸ್ಯ-ಯಾವಪುರುಷನ, ಸ್ವಭಾವಃ-ಸ್ವಭಾವವು, ಯಃ-ಯಂಥಾವದೋ, ತೇನ-ಆ ಸ್ವಭಾವದಿಂದ, ಅಸ್ಯ-ಈ ಪುರುಷನಿಗೆ, ಭಕ್ತಿಃ-ಭಕ್ತಿಯು, ವಿಭಿದ್ಯತೆ-ಭೇದಿಸಲ್ಪಡುತ್ತದೆ. (ಅಂದರೆ ಸಾತ್ವಿಕ, ರಾಜಸತಾಮಸವೆಂಬ ಮೂರುಸ್ವಭಾವಗಳು ಪುರುಷರಿಗೆ ಉಂಟಾಗುತ್ತವೆ, ಯಾವಯಾವಪುರುಷನಿಗೆ ಯಂಥಾ ಸ್ವಭಾವವಾಗುತದೊ ಅದರಂತೆ ಭಕ್ತಿಯೋಗವೂ ಮೂರುಬಗೆಗಳಾಗುತವೆ ತಾಮಸಭಕ್ತಿ,ರಾಜಸಭಕ್ತಿ, ಸಾತ್ವಿಕಭಕ್ತಿ ಎಂಬದಾಗಿ ಮೂರುಬಗೆಗಳಾಗುತ್ತವೆ) ಅವುಗಳಲ್ಲಿ ಈ ಜನ್ಮದಲ್ಲಿ, ಮಾಡಿದ ಕರ್ಮಯೋಗದಿಂ ಚಿತ್ತಶುದ್ಧಿಯುಂಟಾಗಿ ಈ ಜನ್ಮದಲ್ಲಿ, ಮಾಡಲ್ಪಟ್ಟ ಭಕ್ತಿಯೋಗದಿಂದಲೂ ಚಿತ್ತಶುದ್ಧಿಯುಂಟಾಗಿ ಇದರಿಂದ ಜ್ಞಾನಶುದ್ಧಿಯಾಗಿ ಅಜ್ಞಾನಯೋಗವೆ ಮುಕ್ತಿಸಾಧಕವಾಗುತದೆಂದು ತಾತ್ಪರ್ಯವು ॥ ಇದರಲ್ಲಿ, ಸಾಕ್ಷಾನ್ಮೋಕ್ಷಸಾಧಕವಾದಜ್ಞಾನಯೋಗವು ಭಕ್ತಿಯೋಗ ಕರ್ಮಯೋಗಸಹ ಜ್ಞಾನದ್ವಾರಾಮೋಕ್ಷಸಾಧಕವಾಗುತವೆಂದಭಿಪ್ರಾಯವು. .. ... ॥೫೦॥

ಮೂ॥ ಯಸ್ತುಹಿಂಸಾಂಸಮುತ್ಪ್ರೇಕ್ಷ್ಯದಂಭಂಮಾತ್ಸರ್ಯಮೇವವಾ॥ ಭೇದದೃಷ್ಟಿಶ್ಚ ಸಂರಂಭೀಭಕ್ತೋ
ಮೇತಾಮಸಸ್ಸ್ಮೃತಃ ... ... ॥೫೧॥

ಟೀ॥ ಯಸ್ತು-ಯಾವಪುರುಷನಾದರೆ, ಹಿಂಸಾಂ-ಶತ್ರುವಿನಹಿಂಸೆಯನ್ನು, ಸಮುದ್ದಿಶ್ಯ - ಉದ್ದೇಶಿಸಿ, ದಂಭಂ-ಪೂಜ್ಯತ್ವಲಾಭಕವಾದ ಫಲವನ್ನು ದ್ದೇಶಿಸಿ, ಮಾತ್ಸರ್ಯಮೇವವಾ-ಪರಗುಣ ದ್ವೇಷವನ್ನಾಗಲೀ, ಸಮುದ್ದಿಶ್ಯ-ಉದ್ದೇಶಮಾಡಿ, ಭಿನ್ನದೃಷ್ಟಿಃ-ಶತ್ರುಮಿತ್ರ ಉದಾಸೀನಾದಿ ಭೇದಬುದ್ಧಿಯುಳ್ಳವನಾಗಿ, ಸಂರಂಭೀ-ಆಗ್ರಹ ವಂತನಾಗಿರುವನೊ, ಸಃ-ಅಂಥಾ, ಮೇ-ನನ್ನ, ತಾಮಸಃ-ತಾಮಸಗುಣಪ್ರಧಾನನಾದ, ಭಕ್ತಃ-ಭಕ್ತನು, ಎಂಬದಾಗಿ, ಉಕ್ತಃ-ಹೇಳಲ್ಪಡುತ್ತಾನೆ. ||೬೧||

ಮೂ॥ ಫಲಾಭಿಸಂಧಿಃಭೋಗಾರ್ಥೀಧನಕಾಮೋಯಶಸ್ತಥಾ। ಅರ್ಚಾದೌಭೇದಬುಧ್ಯಾಮಾಂ
ಪೂಜಯೇತ್ಸತುರಾಜಸಃ ... ... ||೬೨||

ಟೀ॥ ಫಲಾಭಿಸಂಧಿಃ-ಫಲೇಚ್ಛೆಯುಳ್ಳವನಾಗಿ, ಭೋಗಾರ್ಥೀ-ಇಹಲೋಕಭೋಗಗಳನ್ನೇ ಅಪೇಕ್ಷಿಸುತ್ತಿರುವನಾಗಿ, ಧನಕಾಮಃ-ಧನೇಚ್ಛೆಯುಳ್ಳವನಾಗಿ, ತಥಾ-ಹಾಗೆಯೆ, ಯಶಃ-ಯಶಸ್ಕಾಮನಾಗಿ, ಯಃ-ಯಾವಪುರುಷನು, ಭೇದಬುಧ್ಯಾ-ಭೇದಬುದ್ಧಿಯಿಂದ, ಅರ್ಚಾದೌ-ಪ್ರತಿಮಾದಿಗಳಲ್ಲಿ, ಮಾಂ-ನನ್ನನ್ನು, ಪೂಜಯೇತ್-ಪೂಜೆ ಮಾಡುವನೊ, ಸತು-ಆ ಪುರುಷನಾದರೆ, ರಾಜಸಃ-ರಾಜಸಭಕ್ತನು ... ... ||೬೨||

ಮೂ॥ ಪರಸ್ಮಿನ್ನರ್ಪಿತಂಯಸ್ತು ಕರ್ಮನಿರ್ಹರಣಾಯವಾ। ಕರ್ತವ್ಯಮಿತಿವಾಕುರ್ಯಾದ್ಭೇ
ದಬುದ್ಧ್ಯಾಸಸಾತ್ವಿಕಃ ... ... ||೬೩||

ಟೀ॥ ಯಃ-ಯಾವಪುರುಷನಾದರೆ, ಭೇದಬುದ್ಧ್ಯಾ-ಕರ್ತೃಕರ್ಮಫಲಪ್ರದಾತೃಗಳ ಭೇದಬುದ್ಧಿಯಿಂದ, ನಿರ್ಹರಣಾಯವಾ-ಪಾಪ ನಿವೃತ್ತಿಗೋಸ್ಕರವೆ ಆಗಲಿ, ಕರ್ತವ್ಯಮಿತಿವಾ-ವಿಧಿವಾಕ್ಯಗಳಿಂದ ಅವಶ್ಯಕರ್ತವ್ಯವಾಗಿದೆ ಎಂಬ ತಾತ್ಪರ್ಯದಿಂದಲಾದರೂ, ಕರ್ಮ-ಕರ್ಮವನ್ನು, ಪರಸ್ಮಿನ್-ಪರಮಪುರುಷನಾದ ನನ್ನಲ್ಲಿ, ಅರ್ಪಿತಂ- ಸಮರ್ಪಿತವನ್ನಾಗಿ, ಕುರ್ಯಾತ್-ಮಾಡುವನೊ, ಸಃ-ಆಪುರುಷನು, ಸಾತ್ವಿಕಃ-ಸತ್ವಗುಣ ಪ್ರಧಾನನಾದಭಕ್ತನು (ಅಂದರೆ ಯಾವಪುರುಷನು ತಾನುಮಾಡಿದ ಕರ್ಮವನ್ನು ಭಗವದರ್ಪಿತವನ್ನಾಗಿ ಮಾಡಿ ಫಲದಲ್ಲಿ ಇಚ್ಛಾ ರಹಿತನಾಗಿರುವನೊ, ಅಥವಾ-ನಾನು ಅಸ್ವತಂತ್ರನು, ಭಗವಂತನು ಸ್ವತಂತ್ರನುಸರ್ವಾಂತರ್ಯಾಮಿಯು, ಅವನಪ್ರೇರಣೆಯಿಂದ ಅಸ್ವತಂತ್ರನಾದ ನನ್ನಿಂದ ಮಾಡಲ್ಪಟ್ಟಕರ್ಮದಿಂದ ಅವನೇ ಸಂತುಷ್ಟನಾಗಲೆಂದು ಕರ್ಮವನ್ನು ಯಾವನು ಮಾಡುವನೊಯದ್ವಾ-ವಿಧಿವಾಕ್ಯದಲ್ಲಿ ಅವಶ್ಯಂ ಕರ್ತವ್ಯಂ ಎಂದು ಹೇಳಿಯಿರುವದ್ದರಿಂದನಾನುಕರ್ಮವನ್ನು ಮಾಡುವೆನು· ಅದರಫಲವಂ ನನಗೆ ಬೇಡವೆಂದು ಹೇಳಿರುವದರಿಂದ ಕರ್ಮವನ್ನು ಮಾಡುತ್ತೇನೆಂದು ತಾತ್ಪರ್ಯವು. ||೬೩||

ಮೂ॥ ಮದ್ಗುಣಾಶ್ರಯಣಾದೇವಮಯ್ಯನಂತಗುಣಾಲಯೆ। ಅವಿಛಿನ್ನಾಮನೋವೃತ್ತಿಃಯಥಾ
ಗಂಗಾಂಬುನೋಂಬುಧೌ॥ ತದೇವಭಕ್ತಿಯೋಗಸ್ಯಲಕ್ಷಣಂನಿರ್ಗುಣಸ್ಯಹಿ ||೬೪||

ಟೀ|| ಮದ್ಗುಣಶ್ರುತಿಮಾತ್ರೇಣ-ಮತ್-ನನ್ನ, ಗುಣ-ವಾತ್ಸಲ್ಯಾದಿಗುಣಗಳ, ಆಶ್ರಯಣಾದೇವ-ಆಶ್ರಯಿಸುವಿಕೆದೆಸೆಯಿಂದ, ಅನಂತಗುಣಾಲಯೇ-ಅನಂತವಾದ ಅಪರಿಮಿತವಾದ, ಗುಣ-ಅನಿರ್ವಾಚ್ಯ ಕಲ್ಯಾಣಗುಣಗಳಿಗೆ, ಆಲಯೆ-ಅಧಿಷ್ಠಾನವಾದ, ಮಯಿ-ನನ್ನಲ್ಲಿ, ಗಂಗಾಂಬುನಃ-ಗಂಗೋದಕಕ್ಕೆ ಅಂಬುಧೌಯಥಾ-ಕಡಲಿನಂತೆ,-ಸರ್ವವಿಚ್ಛಿನ್ನಾ-ವಿಚ್ಛೇದರಹಿತವಾದ, ಮನೋವೃತ್ತಿಃ-ಮನಃಪರಿಣಾಮವು, ಯಾ-ಯಾವದೊ, ತದೇವ-ಅದೆ, ಭಕ್ತಿಯೋಗಸ್ಯ-ಭಕ್ತಿಯೋಗಕ್ಕೆ, ಲಕ್ಷಣಂ-ಲಕ್ಷಣವು,ನಿರ್ಗುಣಸ್ಯ-ನಿರ್ಗುಣಧ್ಯಾನಕ್ಕೆ, ಪ್ರಾಪಕಂ-ಪ್ರಾಪ್ತಿಸಾಧಕವಾಗುವವಷ್ಟೆ ... ... ||೬೪||

ಮೂ|| ಅಹೈತುಕ್ಯವ್ಯವಹಿತಾಯಾಭಕ್ತಿರ್ಮಯಿಜಾಯತೇ| ಸಾಮೀಸಾಲೋಕ್ಯಸಾಮೀಪ್ಯಸಾ
ರ್ಷ್ಟಿಸಾಯುಜ್ಯಮೆವವಾ ... ... ||೬೫||

ಟೀ|| ಅಹೈತುಕೀ-ಫಲೋದ್ದೇಶರೂಪವಾದ ಕಾರಣವಿಲ್ಲದಿರುವ, ಅವ್ಯವಹಿತಾ-ವ್ಯವಧಾನವಿಲ್ಲದಿರುವ, ಯಾಭಕ್ತಿಃ-ಯಾವಭಕ್ತಿಯು, ಮಯಿ-ಎನ್ನಲ್ಲಿ, ಜಾಯತೆ-ಹುಟ್ಟುತದೊ, ಸಾ-ಆಭಕ್ತಿಯು, ಮೆ-ನನ್ನ, ಸಾಲೋಕ್ಯಸಾಮೀಪ್ಯಸಾರ್ಷ್ಟಿಸಾಯುಜ್ಯಮೆವವಾ-ಸಾಲೋಕ್ಯ-ಸಮಾನಲೋಕವಾಸವನ್ನು, ಸಾಮೀಪ್ಯ-ಸಮೀಪದಲ್ಲಿರೋಣವನ್ನು, ಸಾರ್ಷ್ಟಿ-ಸಾರೂಪ್ಯವನ್ನು, ಸಾಯುಜ್ಯಮೆವವಾ-ಮುಕ್ತಿಯನ್ನಾದರೂ, (ದದಾತಿ-ಕೊಡುತ್ತೆ) ... .. ||೬೫||

ಮೂ|| ದದಾತ್ಯಪಿನಗೃಹ್ಣಂತಿಭಕ್ತಾಮತ್ಸೇವನಂವಿನಾ | ಸಏವಾತ್ಯಂತಿಕೋಯೋಗೋಭಕ್ತಿಮಾ
ರ್ಗಸ್ಯಭಾಮಿನಿ ... ... ||೬೬||

ಟೀ|| ಹೆಭಾಮಿನಿ-ಎಲೈ ಹೆಂಗಸಾದವಳೆ, ತಥಾಪಿ-ಹಾಗಾದರು, ಭಕ್ತಾಃ-ಭಕ್ತರು, ಮತ್ಸೇವನಂವಿನಾ-ನನ್ನ ಸೇವೆಯನ್ನು ಬಿಟ್ಟು, ನಗೃಹ್ಣಂತಿ-ಈಚತುರ್ವಿಧವಾದ ದಮುಕ್ತಿಗಳಲ್ಲಿಯಾವ ಮುಕ್ತಿಯನ್ನು ಆದರು ಅಂಗೀಕರಿಸುವನಿಲ್ಲ, ಸಏವ-ಆ ನಾಲ್ಕು ವಿಧವಾದ ಮುಕ್ತಿಗಳನ್ನು ತಿರಸ್ಕಾರ ಮಾಡೋಣವೆ, ಭಕ್ತಿಮಾರ್ಗಸ್ಯ-ಭಕ್ತಿಮಾರ್ಗದ, ಅತ್ಯಂತಿಕೋಯೋಗಃ-ಪೂರ್ಣಭಕ್ತಿಯೋಗವೆಂದೆನ್ನಲ್ಪಡುವದು .. || ೬೬ ||

ಮೂ|| ಮದ್ಭಾವಂಪ್ರಾಪ್ನುಯಾತ್ತೇನಅತಿಕ್ರಮ್ಯಗುಣತ್ರಯಂ | ಮಹತಾಕಾಮಹೀನೇನಸ್ವಧ
ರ್ಮಾಚರಣೇನಚ ... ... ||೬೭||

ಟೀ|| ತೆನ-ಅಭಕ್ತಿಯೋಗದಿಂದ, ಗುಣತ್ರಯಂ-ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳನ್ನು, ಅತಿಕ್ರಮ್ಯ-ಮೀರಿ, ಮಹತಾ-ದೊಡ್ಡದಾದ, ಕಾಮಹೀನೇನ-ಫ

ಲಾಪೇಕ್ಷೆಯಿಲ್ಲದಿರುವ, ಸ್ವಧರ್ಮಾಚರಣೇನ-ಚ-ಸ್ವ-ಸ್ವಕೀಯವಾದ, ಧರ್ಮಾಚರಣೇನ-ಧರ್ಮಾನುಷ್ಠಾನದಿಂದಲೂ,(ಅಂದರೆ ನಿತ್ಯನೈಮಿತ್ತಿಕಾದಿ ಕರ್ಮಾಚರಣೆಯಿಂದಲೂ,) ಮದ್ಭಾವಂ-ನನ್ನ ಸ್ವರೂಪವನ್ನು, ಪ್ರಾಪ್ನೋಯಾತ್-ಹೊಂದುತ್ತಾನೆ. ... ॥೬೭॥

ಮೂ॥ ಕರ್ಮಯೋಗೇನ ಶಸ್ತೇನ ವರ್ಜಿತೇನ ವಿಹಿಂಸನಂ। ಮದ್ದರ್ಶನಸ್ತುತಿಮಹಾಪೂಜಾಭಿಸ್ಸ್ಮೃತಿವಂದನೈಃ ॥

ಟೀ॥ ವಿಹಿಂಸನಂ-ಭೂತಮುಂತಾದವುಗಳ ಹಿಂಸೆಯನ್ನು, ವರ್ಜಿತೇನ-ಬಿಟ್ಟು ಇರುವ, ಶಸ್ತೇನ-ಪ್ರಶಸ್ತವಾದ, ಕರ್ಮಯೋಗೇನ-ಕರ್ಮಾನುಷ್ಠಾನರೂಪವಾದ ಯೋಗದಿಂದಲೂ, ಮದ್ದರ್ಶನಸ್ತುತಿಮಹಾಪೂಜಾಭಿಃ-ಮತ್-ನನ್ನ, ದರ್ಶನ-ಬಿಂಬದರ್ಶನದಿಂದಲೂ, ಸ್ತುತಿ-ಸ್ತೋತ್ರದಿಂದಲೂ, ಮಹಾ-ಮಹತ್ತರವಾದ, ಪೂಜಾಭಿಃ-ಪೂಜೆಗಳಿಂದಲೂ, ಸ್ಮೃತಿವಂದನೈಃ-ಸ್ಮೃತಿ-ಸ್ಮರಣೆಯಿಂದಲೂ, ವಂದನೈಃ-ನಮಸ್ಕಾರಗಳಿಂದಲೂ ... ... ॥೬೮॥

ಮೂ॥ ಭೂತೇಷು ಮದ್ಭಾವನಯಾ ಸಂಗೇನಾಸತ್ಯವರ್ಜನೈಃ ॥ ಬಹುಮಾನೇನ ಮಹತಾಂ ದುಃ
ಖಿನಾಮನುಕಂಪಯಾ । ಸ್ವಸಮಾನೇಷು ಮೈತ್ರ್ಯಾ ಚ ಯಮಾದೀನಾಂ ನಿಷೇವಯಾ ॥ ವೇದಾಂತವಾಕ್ಯಶ್ರ
ವಣಾನ್ಮಮ ನಾಮಾನುಕೀರ್ತನಾತ್ । ಸತ್ಸಂಗೇನಾರ್ಜವೇನೈವಾಹಮಃ ಪರಿವರ್ಜನಾತ್ ॥ ಕಾಂ
ಕ್ಷಯಾ ಮಮ ಧರ್ಮಸ್ಯ ಪರಿಶುದ್ಧಾಂತರೋ ಜನಃ । ಮದ್ಗುಣಶ್ರವಣಾದೇವ ಯಾತಿ ಮಾಮಂಜಸಾ ಜ
ನಃ ॥ ಯಥಾ ವಾಯುವಶಾದ್ಗಂಧಸ್ಸ್ವಾಶ್ರಯಾದ್ಘ್ರಾಣಮಾವಿಶೇತ್ । ಯೋಗಾಭ್ಯಾಸರತಂ ಚಿ
ತ್ತಂ ಏವಮಾತ್ಮಾನಮಾವಿಶೇತ್ ॥ ... ... ॥೭೨॥

ಟೀ॥ ಭೂತೇಷು-ಪ್ರಾಣಿಗಳಲ್ಲಿ, ಮದ್ಭಾವನಯಾ-ನನ್ನ ಭಾವನೆಯಿಂದ, ಅಸಂಗೇನ-ದುಷ್ಟಸಂಬಂಧರಾಹಿತ್ಯದಿಂದ, ಅಸತ್ಯವರ್ಜನೈಃ-ದುಷ್ಪ್ರಸಂಗತ್ಯಾಗಗಳಿಂದ, ಮಹತಾಂ-ದೊಡ್ಡವರ, ಬಹುಮಾನೇನ-ಸನ್ಮಾನದಿಂದ, ದುಃಖಿನಾಂ-ವ್ಯಸನಮುಳ್ಳವರ ವಿಷಯದಲ್ಲಿ, ಅನುಕಂಪಯಾ-ದಯೆಯಿಂದಲು, ಸ್ವಸಮಾನೇಷು-ತನಗೆ ಸರಿಯಾದವರಲ್ಲಿ, ಮೈತ್ರ್ಯಾ ಚ-ಮಿತ್ರತ್ವದಿಂದಲೂ, ಯಮಾದೀನಾಂ-ಯಮನಿಯಮಾದಿ ಅಷ್ಟಾಂಗಯೋಗಗಳ, ನಿಷೇವಯಾ-ಸೇವೆಯಿಂದಲು, ವೇದಾಂತವಾಕ್ಯಶ್ರವಣಾತ್-ತತ್ತ್ವಮಸ್ಯಾದಿಮಹಾವಾಕ್ಯಾರ್ಥಂಗಳ ಶ್ರವಣದ ದೆಸೆಯಿಂದಲು, ಮಮ-ನನ್ನ, ನಾಮಾನುಕೀರ್ತನಾತ್-ರಾಮ ಅಚ್ಯುತ ಅನಂತ ಎಂಬದೇ ಮುಂತಾದ ನಾಮಸ್ಮರಣೆಯಿಂದಲೂ, ಸತ್ಸಂಗೇನ-ಸತ್ಸಹವಾಸದಿಂದಲು, ಆರ್ಜವೇನೈವ-ಕಪಟವಿಲ್ಲದೇ ಯಿರೋಣದರಿಂದಲು, ಅಹಮಃ-ಅಹಂಕಾರದ, ಪರಿವರ್ಜನಾತ್-ಬಿಡೋಣವೆರದೆಸೆಯಿಂದಲು, ಮಮ-ನನ್ನ ಉದ್ದೇಶ್ಯಕ

ಮೊದ, ಧರ್ಮಸ್ಯ-ಪೂಜಾರೂಪವಾದ ಧರ್ಮದ, ಕಾಂಕ್ಷಯಾ-ಇಚ್ಛೆಯಿಂದಲು, ಪರಿಶುದ್ಧಾಂತರಃ-ನಿರ್ಮಲವಾದ ಅಂತಃಕರಣೆಯುಳ್ಳ, ಜನಃ-ಜನವು, ಮದ್ಗುಣಶ್ರವಣಾದೆ ವ-ಮತ್-ನನ್ನ, ಗುಣ-ಭಕ್ತರಕ್ಷಣಾದಿಗುಣಗಳ, ಶ್ರವಣಾದೇವ-ಕೇಳೋಣದರ ಮಾತ್ರದಿಂದಲೆ, ಅಂಜಸಾ-ತ್ವರೆಯಾಗಿ, ಅಜನಃ-ಉತ್ಪತ್ತಿರಹಿತವಾಗಿ, ಮಾಂ-ನನ್ನನ್ನು, ಯಾತಿ-ಹೊಂದುತ್ತದೆ ॥೨೨॥ ಗಂಧಃ-ಸುವಾಸನೆಯು, ವಾಯುವಶಾತ್-ಗಾಳಿಯ ದೆಸೆಯಿಂದ, ಸ್ವಾಶ್ರಯಾತ್-ಸ್ವ-ತನ್ನ, ಆಶ್ರಯಾತ್-ಸ್ಥಾನವಾದ ಪುಷ್ಪಾದಿಗಳ ದೆಸೆಯಿಂದ, ಘ್ರಾಣಂ-ಮೂಗನ್ನು, ಆವಿಶೇತ್-ಹೊಕ್ಕುವದೋ, ಏವಂ-ಹೀಗೆ, ಯೋಗಾಭ್ಯಾಸರತಂ-ಯೋಗಾಭ್ಯಾಸದಲ್ಲಿಯೇ ಆಸಕ್ತವಾದ, ಚಿತ್ತಂ-ಮನವು, ಆತ್ಮಾನಂ-ಪರಮಾತ್ಮನಾದ ನನ್ನನ್ನು, ಆವಿಶೇತ್-ಪ್ರವೇಶಿಸುವದು ... ... ... ॥೨೩॥

ಮೂ॥ ಸರ್ವೇಷುಪ್ರಾಣಿಜಾತೇಷುಹ್ಯಹಮಾತ್ಮಾವ್ಯವಸ್ಥಿತಃ । ತಮಜ್ಞಾತ್ವಾವಿಮೂಢಾತ್ಮಾ ಕುರುತೇಕೇವಲಂಬಹಿಃ ॥ ... ... ॥೨೪॥

ಟೀ॥ ಅಹಂ-ನಾನು, ಸರ್ವೇಷು-ಸಮಸ್ತವಾದ, ಪ್ರಾಣಿಜಾತೇಷು-ಜೀವರಾಶಿಗಳಲ್ಲಿ, ಆತ್ಮಾ-ಅಂತರ್ಯಾಮಿರೂಪವಾಗಿ, ವ್ಯವಸ್ಥಿತಃ-ಇಧೇನೆ, ತಂ-ಅಂಥಾ ನನ್ನನ್ನು, ಅಜ್ಞಾತ್ವಾ-ತಿಳಿಯದೆ, ವಿಮೂಢಾತ್ಮಾ-ಭ್ರಾಂತವಾದ ಮನವುಳ್ಳವನಾಗಿ, ಬಹಿಃಕೇವಲಂ-ಬಾಹ್ಯಕರ್ಮವನ್ನು ಮಾತ್ರವೇ, ಕುರುತೇ-ಮಾಡುತ್ತಾನೆ ॥೨೪॥

ಮೂ॥ ಕ್ರಿಯೋತ್ಪನ್ನೈರ್ನೈಕಭೇದೈರ್ದ್ರವ್ಯೈರ್ಮೇನಾಂಬತೋಷಣಂ । ಭೂತಾವಮಾನಿ ನಾರ್ಚಾಯಾಮರ್ಚಿತೋಹಂನಪೂಜಿತಃ ॥ ... ... ॥೨೫॥

ಟೀ॥ ಹೆ ಅಂಬ-ಎಲೈ ತಾಯಿಯೆ, ಕ್ರಿಯೋತ್ಪನ್ನೈಃ-ಕ್ರಿಯಾ-ಕರ್ಮಗಳಿಂದ, ಉತ್ಪನ್ನೈಃ-ಹುಟ್ಟಿದ, ನೈಕಭೇದೈಃ-ಬಹುಭೇದಗಳುಳ್ಳ, ದ್ರವ್ಯೈಃ-ಗಂಧಪುಷ್ಪಾದಿದ್ರವ್ಯಗಳಿಂದ, ಮೆ-ನನಿಗೆ, ತೋಷಣಂ-ಸಂತೋಷವನ್ನು, ನಕುರುತೆ-ಮಾಡಲಾರದು, ಭೂತಾವಮಾನಿನಾ-ಪ್ರಾಣಿಗಳನ್ನು ತಿರಸ್ಕಾರಮಾಡುತ್ತಿರುವ ಪುರುಷನಿಂದ, ಅರ್ಚಾಯಾಂ-ಪ್ರತಿಮಾದಿಗಳಲ್ಲಿ, ಅರ್ಚಿತಃ-ಪೂಜಿಟ್ಟಸಲ್ಪಟ್ಟ, ಅಹಂ-ನಾನು, ನಪೂಜಿತಃ-ಪೂಜಿಸಲ್ಪಡುವದಿಲ್ಲ ... ... ॥೨೫॥

ಮೂ॥ ತಾವನ್ಮಾಮರ್ಚಯೇದ್ದೇವಂಪ್ರತಿಮಾದೌಸ್ವಕರ್ಮಭಿಃ । ಯಾವತ್ಸರ್ವೇಷುಭೂತೇಷುಸ್ಥಿತಂಚಾತ್ಮನಿನಸ್ಮರೇತ ॥ ... ... ॥೨೬॥

ಟೀ॥ ಯಾವತ್-ಎಷ್ಟುಪರ್ಯಂತವು, ಸರ್ವೇಷು-ಸಮಸ್ತವಾದ, ಭೂತೇಷು-ಭೂತಗಳಲ್ಲಿ, ಸ್ಥಿತಂ-ಇರುತಿರುವ, ದೇವಂ-ದೇವನನ್ನು, ಆತ್ಮನಿ-ನನ್ನನ್ನು, ...

ರಣೆಮಾಡುವದಿಲ್ಲವೋ, ತಾವತ್-ಅದುವರಿಗು, ಸ್ವಕರ್ಮಭಿಃ-ತನ್ನ ಕರ್ಮಗಳಿಂದ, ಪ್ರತಿಮಾದೌ-ಪ್ರತಿಮಾದಿಗಳಲ್ಲಿ, ಮಾಂ-ನನ್ನನ್ನು, ಅರ್ಚಯೇತ್-ಪೂಜಿಸಬೇಕು. ॥೭೬॥

ಮೂ॥ ಯಸ್ತುಭೇದಂಪ್ರಕುರುತೇಸ್ವಾತ್ಮನಶ್ಚ ಪರಸ್ಯಚ । ಭಿನ್ನದೃಷ್ಟೇರ್ಭಯಂಮೃತ್ಯುಸ್ತ
ಸ್ಯಕುರ್ಯಾನ್ನಸಂಶಯಃ ॥ ... ... ॥೭೭॥

ಟೀ॥ ಯಸ್ತು-ಯಾವಪುರುಷನಾದರೆ, ಸ್ವಾತ್ಮನಶ್ಚ-ತನ್ನ ಆತ್ಮನಿಗೂ, ಪರಸ್ಯಚ-ಪರಕೀಯವಾದ ಆತ್ಮನಿಗೂ, ಭೇದಂ-ಭೇದಬುದ್ಧಿಯನ್ನು, ಪ್ರಕುರುತೇ-ಮಾಡುತ್ತಾನೋ, ಭಿನ್ನದೃಷ್ಟೇಃ-ಭೇದಬುದ್ಧಿಯುಳ್ಳ, ತಸ್ಯ-ಆ ಪುರುಷನಿಗೆ, ಮೃತ್ಯುಃ-ಮೃತ್ಯುವು, ಭಯಂ-ಭೀತಿಯು, ಕುರ್ಯಾತ್-ಮಾಡುವದು, ಸಂಶಯಃ-ಸಂದೇಹವು, ನ-ಇಲ್ಲ॥೭೭॥

ಮೂ ॥ ಮಾಮತಸ್ಸರ್ವಭೂತೇಷುಪರಿಚ್ಛಿನ್ನೇಷುಸಂಸ್ಥಿತಂ । ಏಕಂಜ್ಞಾನೇನಮಾನೇನಮೈ
ತ್ರ್ಯಾಚಾರ್ಚೇದಭಿನ್ನಧೀಃ ॥ ... ॥೭೮॥

ಟೀ॥ ಅತಃ-ಈ ಕಾರಣದದೆಸೆಯಿಂದ, ಅಭಿನ್ನಧೀಃ-ಭೇದವಿಲ್ಲದಬುದ್ಧಿಯುಳ್ಳವನಾಗಿ, ಪರಿಚ್ಛಿನ್ನೇಷು-ಪರಿಮಿತವಾದ ಆಕಾರವುಳ್ಳ, ಸರ್ವಭೂತೇಷು-ಎಲ್ಲಾ ಪ್ರಾಣಿಗಳಲ್ಲಿ, ಸಂಸ್ಥಿತಂ-ಇರುತಿರುವ, ಏಕಂ-ಒಬ್ಬನಾದ, ಮಾ-ನನ್ನನ್ನು, ಜ್ಞಾನೇನ-ಅಭೇದಜ್ಞಾನದಿಂದ, ಮಾನೇನ-ಸರ್ವಪ್ರಾಣಿಗಳ ಬಹುಮತಿಯಿಂದಲು, ಮೈತ್ರ್ಯಾಚ-ಸರ್ವತ್ರಮಿತ್ರತ್ವಬುದ್ಧಿಯಿಂದಲು, ಅರ್ಚಯೇತ್-ಪೂಜೆಮಾಡತಕ್ಕದ್ದು ... ... ... ॥೭೮॥

ಮೂ॥ ಚೇತಸೈವಾನಿಶಂಸರ್ವಭೂತಾನಿಪ್ರಣಮೇತ್ಸುಧೀಃ । ಜ್ಞಾತ್ವಾಮಾಂಚೇತನಂಶುದ್ಧಂ
ಜೀವರೂಪೇಣಸಂಸ್ಥಿತಂ॥ ತಸ್ಮಾತ್ಕದಾಚಿನ್ನೇಕ್ಷೇತಭೇದಮೀಶ್ವರಜೀವಯೋಃ। ಭಕ್ತಿಯೋಗೋಜ್ಞಾ
ನಯೋಗೋಮಯಾಮಾತರುದೀರಿತಃ ॥ ... ... ॥೮೦॥

ಟೀ॥ ಸುಧೀಃ-ಜ್ಞಾನಿಯಾದವನು, ಶುದ್ಧಂಚೇತನಂ-ಶುದ್ಧಚೈತನ್ಯಸ್ವರೂಪನಾದ, ಮಾಂ-ನನ್ನನ್ನು, ಜೀವರೂಪೇಣ-ಜೀವಸ್ವರೂಪದಿಂದ, ಸಂಸ್ಥಿತಂ-ಇರುತಿರುವನನ್ನಾಗಿ, ಜ್ಞಾತ್ವಾ-ತಿಳಿದು, ಚೇತಸೈವ-ಮನದಿಂದಲೆ, ಅನಿಶಂ-ನಿರಂತರವು, ಸರ್ವಭೂತಾನಿ-ಸಮಸ್ತಪ್ರಾಣಿಗಳಂಕುರಿತು, ಪ್ರಣಮೇತ್-ನಮಸ್ಕಾರಮಾಡಬೇಕು, ತಸ್ಮಾತ್-ಆಕಾರಣದದೆಸೆಯಿಂದ, ಕದಾಚಿತ್-ಒಂದಾನೊಂದುಕಾಲದಲ್ಲಿಯು, ಈಶ್ವರಜೀವಯೋಃ-ಜೀವಾತ್ಮಪರಮಾತ್ಮರಿಗೆ, ಭೇದಂ-ಭೇದವನ್ನು, ನೇಕ್ಷೇತ-ನೋಡಬಾರದು, ಮಾತಃ-ಎಲೈತಾಯಿಯೇ, ಮಯಾ-ನನ್ನಿಂದ, ಭಕ್ತಿಯೋಗಃ-ಭಕ್ತಿಯೋಗವು, ಜ್ಞಾನಯೋಗಃ-ಜ್ಞಾನಯೋಗವು, ಉದೀರಿತಃ-ಹೇಳಲ್ಪಟ್ಟಿತು. ... ॥೮೦॥

ಮೂ॥ ಆಲಂಬ್ಯೈಕತರಂವಾಪಿಪುರುಷಶ್ಶಮಮೃಚ್ಛತಿ । ತತೋಮಾಂಭಕ್ತಿಯೋಗೇನಮಾತ
ಸ್ಸರ್ವಹೃದಿಸ್ಥಿತಂ ... ... ॥೮೧॥

ಟೀ॥ ಹೇಮಾತಃ-ಎಲೈತಾಯಿಯೆ, ಪುರುಷಃ-ಪುರುಷನು, ಏಕತರಂವಾಪಿ-ಭಕ್ತಿಯೋಗ ಜ್ಞಾನಯೋಗಗಳಲ್ಲಿ ಯಾವದರನ್ನಾದರೂ ಒಂದನ್ನು, ಆಲಂಬ್ಯ-ಆಶ್ರಯಿಸಿ, ಶಮಂ-ಶಾಂತಿಯನ್ನು, ಮೃಚ್ಛತಿ-ಹೊಂದುತ್ತಾನೆ, ತತಃ-ಬಳಕ, ಭಕ್ತಿಯೋಗೇನ-ಭಕ್ತಿಯೋಗದಿಂದ, ಸರ್ವಹೃದಿ-ಸರ್ವರಹೃದಯದಲ್ಲಿ, ಸ್ಥಿತಂ-ಇರುತಿರುವ, ಮಾಂ-ನನ್ನನ್ನು, ಮೃಚ್ಛತಿ-ಹೊಂದುತ್ತಾನೆ ... ... ... ... ॥೮೧॥

ಮೂ॥ ಪುತ್ರರೂಪೇಣವಾನಿತ್ಯಂಸ್ಮೃತ್ವಾಶಾಂತಿಮವಾಪ್ಸ್ಯಸಿ ॥ ಶ್ರುತ್ವಾರಾಮಸ್ಯವಚನಂ
ಕೌಸಲ್ಯಾನಂದಸಂಯುತಾ ॥ ರಾಮಂಸದಾಹೃದಿಧ್ಯಾತ್ವಾಛಿತ್ವಾಸಂಸಾರಬಂಧನಂ ॥ ಅತಿಕ್ರ
ಮ್ಯಗತೀಸ್ತಿಸ್ರೋಪ್ಯವಾಪಪರಮಾಂಗತಿಂ ॥ ... ॥೮೨॥

ಟೀ॥ ಪುತ್ರರೂಪೇಣವಾ-ಪುತ್ರರೂಪದಿಂದಲಾದರೂ, ನಿತ್ಯಂ-ನಿರಂತರವು, ಮಾಂ-ನನ್ನನ್ನು, ಸ್ಮೃತ್ವಾ-ಸ್ಮರಿಸಿ, ಶಾಂತಿಂ-ಶಾಂತಿಯನ್ನು, ಅವಾಪ್ಸ್ಯಸಿ-ಹೊಂದುತ್ತೀ, ಕೌಸಲ್ಯಾ-ಕೌಸಲ್ಯಾದೇವಿಯು, ರಾಮಸ್ಯ-ಶ್ರೀರಾಮನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಆನಂದಸಂಯುತಾ-ಸಂತೋಷದಿಂದ ಕೂಡಿದವಳಾಗಿ, ರಾಮಂ-ಶ್ರೀರಾಮನನ್ನು, ಸದಾ-ನಿರಂತರವಲ್ಲಿ, ಹೃದಿ-ಮನಸ್ಸಿನಲ್ಲಿ, ಧ್ಯಾತ್ವಾ-ಧ್ಯಾನಮಾಡಿ, ಸಂಸಾರಬಂಧನಂ-ಸಂಸಾರ-ಸಂಸಾರವೆಂಬ, ಬಂಧನಂ-ಪಾಶವನ್ನು, ಛಿತ್ವಾ-ಛೇದಿಸಿ, ತಿಸ್ರಃ-ಮೂರಾದ, ಗತೀಃ-ಗತಿಗಳನ್ನು, ಅಂದರೆ-ಸಾತ್ವೀಕಗತಿದಪರಾದ್ಯುಪಾಸನೆ ಮಾಡತಕ್ಕವರಿಗೆ ಬರತಕ್ಕ ಅರ್ಚಿರಾದಿಮಾರ್ಗಗತಿ ಒಂದು ರಾಜಸಗತಿ, ಧೂಮಾದಿ ಮಾರ್ಗಗತಿಯು ಕರ್ಮಠರಿಗೆ ಬರತಕ್ಕದ್ದು, ತಾಮಸಗತಿ-ಜನನ ಮರಣಪ್ರವಾಹರೂಪ ಸಂಸಾರವಂತರಿಗೆ ಬರತಕ್ಕ ಗತಿಯು ಈ ಮೂರನ್ನು, ಅತಿಕ್ರಮ್ಯ-ಅತಿಕ್ರಮಿಸಿ, ಪರಮಾಂ-ಸರ್ವೋತ್ತಮರಾದ, ಗತಿಂ-ಕೈವಲ್ಯರೂಪಗತಿಯನ್ನು, ಅವಾಪ-ಹೊಂದಿದಳು. ... ... ... ॥೮೨॥

ಮೂ ॥ ಕೈಕೇಯೀಚಾಪಿಯೋಗಂರಘುಪತಿಗದಿತಂಪೂರ್ವಮೇವಾಧಿಗಮ್ಯ ಶ್ರದ್ಧಾಭಕ್ತಿಃಪ್ರ
ಶಾಂತಾಹೃದಿರಘುತಿಲಕಂಭಾವಯಂತೀಗತಾಸುಃ ॥ ಗತ್ವಾಸ್ವರ್ಗಂಸ್ಫುರಂತೀದಶರಥಸಹಿತಾಮೋ
ದಮಾನಾವತಸ್ಥೇ ಮಾತಾಶ್ರೀಲಕ್ಷ್ಮಣಸ್ಯಾಪ್ಯತಿವಿಮಲಮತಿಃಪ್ರಾಪ ಭರ್ತುಃಸಮೀಪಂ ॥೮೩॥

ಟೀ॥ ಕೈಕೇಯೀಚಾಪಿ-ಕೈಕೇಯೀದೇವಿಯೂನು, ಪೂರ್ವಮೇವ-ಪೂರ್ವದಲ್ಲಿ ಅಂದರೆ ಚಿತ್ರಕೂಟಪರ್ವತದಲ್ಲಿರುವಕಾಲದಲ್ಲಿ, ರಘುಪತಿಗದಿತಂ-ರಘುಪತಿ-ಶ್ರೀರಾಮನಿಂದ, ಗದಿತಂ-ಹೇಳಲ್ಪಟ್ಟ, ಯೋಗಂ-ಯೋಗವನ್ನು, ಅಧಿಗಮ್ಯ-ಹೊಂದಿ, ಶ್ರದ್ಧಾಭಕ್ತಿಪ್ರಶಾಂತಾ-ಶ್ರದ್ಧಾ-ಫಲಾವಶ್ಯ ಭಾವನೆಯುಮದಿಂದ, ಭಕ್ತಿ-ಆರಾಧ್ಯತ್ವಜ್ಞಾನದಿಂದ, ಪ್ರಶಾಂತಾ-ಶಮದಮಾದಿಗುಣಗಳುಳ್ಳವಳಾಗಿ, ಹೃದಿ-ಮನಸ್ಸಿನಲ್ಲಿ, ರಘುತಿಲಕಂ-ರಘುವಂಶಕ್ಕೆ ತಿಲಕಪ್ರಾಯನಾದ ಶ್ರೀರಾಮನನ್ನು, ಭಾವಯಂತೀ-ಧ್ಯಾನಮಾಡುತ್ತಿರುವವಳಾಗಿ, ಗತಾಸುಃ-ಮೃತಳಾದವಳಾಗಿ, ಸ್ವರ್ಗಂ-ಸ್ವರ್ಗವನ್ನು, ಗತ್ವಾ-ಹೊಂದಿ, ದಶರಥಸಹಿತಾ-ದಶರಥನೊಡನೆ ಕೂಡಿದವಳಾಗಿ, ಸ್ಫುರಂತೀ-ಹೊಳೆಯುತಿರುವವಳಾಗಿ, ಮೋದಮಾನಾ-ಸಂತೋಷಯುಕ್ತಳಾಗಿ, ಅವತಸ್ಥೇ-ನಿಂತಳು, ಅತಿವಿಮಲಮತಿಃ-ಅತಿ-ಬಹಳವಾಗಿ, ವಿಮಲ-ನಿರ್ಮಲವಾದ, ಮತಿಃ-ಬುದ್ಧಿಯುಳ್ಳ, ಲಕ್ಷ್ಮಣಸ್ಯ-ಲಕ್ಷ್ಮಣನ, ಮಾತಾಪಿ-ತಾಯಿಯಾದ ಸುಮಿತ್ರಾದೇವಿಯೂ ಕೂಡ, ಭರ್ತುಃ-ಗಂಡನಾದ ದಶರಥರಾಯನ, ಸಮೀಪಂ-ಸಮೀಪವನ್ನು, ಪ್ರಾಪ-ಹೊಂದಿದಳು ... ॥೮೪॥

## ಶ್ರೀಮದಧ್ಯಾತ್ಮರಾಮಾಯಣೇ ಉಮಾಮಹೇಶ್ವರಸಂವಾದೇ ಸಪ್ತಮಸ್ಸರ್ಗಃ.

### ಶ್ರೀ ಮಹಾದೇವ ಉವಾಚ— ಈಶ್ವರನು ಹೇಳುತ್ತಾನೆ.

ಮೂ॥ ಅಥಕಾಲೇಗತೇಕಸ್ಮಿನ್ಭರತೋಭೀಮವಿಕ್ರಮಃ । ಯುಧಾಜಿತಾಮಾತುಲೇನಾಹ್ವಾಹೂ
ತೋಗಾತ್ಸಸೈನಿಕಃ ॥ ... ... ... ॥೧॥

ಟೀ॥ ಅಥ-ಬಳಿಕ, ಕಸ್ಮಿನ್ಕಾಲೇ-ಕೆಲವುಕಾಲವು, ಗತೇಸತಿ-ಕಳೆದಂಥಾದ್ದಾಗಲಾಗಿ, ಭೀಮವಿಕ್ರಮಃ-ಮಹಾಪರಾಕ್ರಮಶಾಲಿಯಾದ, ಭರತಃ-ಭರತನು, ಮಾತುಲೇನ-ಸೋದರಮಾವನಾದ, ಯುಧಾಜಿತಾ-ಯುಧಾಜಿತ್ತಿನಿಂದ, ಆಹೂತಃ-ಕರೆಯಲ್ಪಟ್ಟವನಾಗಿ, ಸಸೈನಿಕಃ-ಚತುರಂಗಬಲದಿಂದಕೂಡಿದವನಾಗಿ,ಅಗಾತ್-ಹೊರಟುಹೋದನು॥

ಮೂ॥ ರಾಮಾಜ್ಞಯಾಗತಸ್ತತ್ರಹತ್ವಾಗಂಧರ್ವನಾಯಕಾನ್ ॥ ತಿಸ್ರಃಕೋಟೀಃಪುರೇದ್ವೇ
ತುನಿವೇಶ್ಯರಘುನಂದನಃ ॥ ಪುಷ್ಕರಂಪುಷ್ಕರಾವತ್ಯಾಂತಕ್ಷಂತಕ್ಷಶಿಲಾಹ್ವಯೇ । ಅಭಿಷಿಚ್ಯಸುತೌ
ತತ್ರಧನಧಾನ್ಯಸುಹೃದ್ವೃತೌ ॥ ... ... ॥೨॥

ಟೀ॥ ರಾಮಸ್ಯ-ಶ್ರೀರಾಮನ, ಆಜ್ಞಯಾ-ಆಜ್ಞೆಯಿಂದ, ಗತಃ-ಹೋದಂಥಾ, ರಘುನಂದನಃ-ರಘುಕುಲಾನಂದಕರನಾದ ಭರತನು, ತತ್ರ-ಆಗಂಧರ್ವದೇಶದಲ್ಲಿ, ತಿಸ್ರಃ

ಕೋಟೀಃ-ಮೂರುಕೋಟಿಸಂಖ್ಯೆಯುಳ್ಳ, ಗಂಧರ್ವನಾಯಕಾರ್ನ್-ಆ ಗಂಧರ್ವನಾಯಕರನ್ನು, ಹತ್ವಾ-ಹೊಡೆದು, ದ್ವೇಪುರೀ-ಎರಡುಪಟ್ಟಣಗಳನ್ನು, ನಿವೇಶ್ಯ-ಪ್ರತಿಷ್ಠೆಮಾಡಿ, ಪುಷ್ಕರಾವತ್ಯಾಂ-ಪುಷ್ಕರಾವತಿಎಂಬ ಪಟ್ಟಣದಲ್ಲಿ, ಪುಷ್ಕರಂ-ಪುಷ್ಕರನೆಂಬಮಗನನ್ನು, ತಕ್ಷಶಿಲಾಹ್ವಯೇ-ತಕ್ಷಶಿಲಾಯೆಂಬ ಹೆಸರುಳ್ಳ, ಪಟ್ಟಣದಲ್ಲಿ, ತಕ್ಷಂ-ತಕ್ಷನೆಂಬ ಮಗನನ್ನು, ಧನಧಾನ್ಯಸಮೃದ್ಧ್ಯೌ-ಧನದಿಂದಲೂ, ಧಾನ್ಯದಿಂದಲೂ, ಸ್ನೇಹಿತರಿಂದಲೂ, ಕೂಡಿಕೊಂಡಿರುವ, ಸುತೌ-ಕುವರರನ್ನು, ತತ್ರ-ಆ ಪಟ್ಟಣಗಳಲ್ಲಿ, ಅಭಿಷಿಚ್ಯ-ಅಭಿಷೇಕಮಾಡಿ ... ... ||೩||

ಮೂ॥ ಪುನರಾಗತ್ಯಭರತೋರಾಮಸೇವಾಪರೋಭವತ್ ॥ ತತಃಪ್ರೀತೋರಘುಶ್ರೇಷ್ಠೋಲ
ಕ್ಷ್ಮಣಂಪ್ರಾಹಸಾದರಂ ॥ ... ... ||೪||

ಟೀ॥ ಭರತಃ-ಭರತನು, ಪುನಃ-ಮತ್ತು, ಆಗತ್ಯ-ಬಂದು, ರಾಮಸೇವಾಪರಃ-ಶ್ರೀರಾಮನಸೇವೆಯಲ್ಲಿ ಆಸಕ್ತನು, ಅಭವತ್-ಆದನು, ತತಃ-ಅನಂತರದಲ್ಲಿ, ರಘುಶ್ರೇಷ್ಠಃ-ಶ್ರೀರಾಮನು, ಪ್ರೀತಃ-ಸಂತೋಷಗೊಂಡವನಾಗಿ, ಸಾದರಂ-ಆದರಣೆಯಿಂದ ಕೂಡಿಕೊಂಡಂತೆ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಪ್ರಾಹ-ಹೇಳಿದನು||

ಮೂ॥ ಉಭೌಕುಮಾರೌಸೌಮಿತ್ರೇಗೃಹೀತ್ವಾಪಶ್ಚಿಮಾಂದಿಶಂ।ತತ್ರಭಿಲ್ಲಾನ್ವಿನಿರ್ಜಿತ್ಯದು
ಷ್ಟಾನ್ಸರ್ವಾಪಕಾರಿಣಃ ॥ ... ... ||೫||

ಟೀ॥ ಹೇಸೌಮಿತ್ರೇ-ಎಲೈಲಕ್ಷ್ಮಣಸ್ವಾಮಿಯೆ, ಉಭೌಕುಮಾರೌ-ಇಬ್ಬರುಮಕ್ಕಳನ್ನು, ಗೃಹೀತ್ವಾ-ಕರೆದುಕೊಂಡು, ಪಶ್ಚಿಮಾಂದಿಶಂ-ಪಶ್ಚಿಮದಿಕ್ಕಿನಂಕುರಿತು, ಯಾಹಿ-ಹೋಗುತ್ತಿರುವಲ್ಲಿ, ದುಷ್ಟಾನ್-ದುಷ್ಟರಾದ, ಸರ್ವಾಪಕಾರಿಣಃ-ಸಮಸ್ತಜನಗಳಗೂ ಅಪಕಾರಿಗಳಾದ, ಭಿಲ್ಲಾನ್-ಭಿಲ್ಲರನ್ನು, ವಿನಿರ್ಜಿತ್ಯ-ಜಯಿಸಿ ||೫||

ಮೂ॥ ಅಂಗದಶ್ಚಿತ್ರಕೇತುಶ್ಚಮಹಾಸತ್ವಪರಾಕ್ರಮೌ । ದ್ವಯೋರ್ದ್ವೇನಗರೇಕೃತ್ವಾಗಜಾ
ಶ್ವಧನರತ್ನಕೈಃ । ಅಭಿಷಿಚ್ಯಸುತೌತತ್ರಶೀಘ್ರಮಾಗಚ್ಛಮಾಂಪುನಃ ... ||೬||

ಟೀ॥ ಅಂಗದಃ-ಅಂಗದನು, ಚಿತ್ರಕೇತುಶ್ಚ-ಚಿತ್ರಕೇತುವು, ಮಹಾಸತ್ವಪರಾಕ್ರಮೌ-ಮಹಾಸಾಮರ್ಥ್ಯವು ಪರಾಕ್ರಮವುಳ್ಳವರು, ಅನಯೋರ್ದ್ವಯೋಃ-ಇವರಿಬ್ಬರಿಗುನ್ನು, ಗಜಾಶ್ವಧನರತ್ನಕೈಃ-ಆನೆಗಳಿಂದಲೂ, ಕುದುರೆಗಳಿಂದಲೂ, ಧನದಿಂದಲೂ, ರತ್ನಗಳಿಂದಲೂ, ಉಪಲಕ್ಷಿತೇ-ಕೂಡಿಕೊಂಡಿರುವ, ದ್ವೇನಗರೀ-ಎರಡುಪಟ್ಟಣಗಳನ್ನು, ಕೃತ್ವಾ-ಮಾಡಿ, ತತ್ರ-ಆ ಪಟ್ಟಣಗಳಲ್ಲಿ, ಸುತೌ-ಮಕ್ಕಳನ್ನು, ಅಭಿಷಿಚ್ಯ-ಪಟ್ಟಾಭಿಷೇಕಮಾಡಿ, ಶೀಘ್ರಂ-ಜಾಗ್ರತೆಯಾಗಿ, ಮಾಂ-ನನ್ನನ್ನು ಕುರಿತು, ಪುನಃ-ಮತ್ತು, ಆಗಚ್ಛ-ಬಾರಯ್ಯಾ, ಇತಿ-ಇಂತೆಂದು, ಪ್ರಾಹ-ಹೇಳಿದನು. ... ... ||೬೫||

ಮೂ॥ ರಾಮಸ್ಯಾಜ್ಞಾಂಪುರಸ್ಕೃತ್ಯಗಜಾಶ್ವಬಲವಾಹನೈಃ । ಗತ್ವಾಹತ್ವಾರಿಪೂನ್ಸರ್ವಾನ್

ಸ್ಥಾಪಯಿತ್ವಾಕುಮಾರಕೌ ॥ ಸೌಮಿತ್ರಿಃಪುನರಾಗತ್ಯರಾಮಸೇವಾಪರೋಭವತ್ ॥೮॥

ಟೀ॥ ಸೌಮಿತ್ರಿಃ-ಲಕ್ಷ್ಮಣಸ್ವಾಮಿಯು, ರಾಮಸ್ಯ-ಶ್ರೀರಾಮನ, ಆಜ್ಞಾಂ-ಅಜ್ಞೆಯನ್ನು, ಪುರಸ್ಕೃತ್ಯ-ಮುಂದೆಮಾಡಿ, ಗಜಾಶ್ವಬಲವಾಹನೈಃ-ಆನೆಗಳೂ ಕುದುರೆಗಳೂ, ಕಾಲುಬಲವೂ, ವಾಹನಗಳೂ ಉಳ್ಳವನಾಗಿ, ಗತ್ವಾ-ಪೋಗಿ, ಸರ್ವಾನ್-ಸಮಸ್ತರಾದ, ರಿಪೂನ್-ಶತ್ರುಗಳನ್ನು, ಹತ್ವಾ-ಕೊಂದು, ಕುಮಾರಕೌ-ಅಂಗದ ಚಿತ್ರಕೇತುಗಳೆಂಬ ಕುಮರರನ್ನು, ಸ್ಥಾಪಯಿತ್ವಾ-ಪಟ್ಟಾಭಿಷೇಕಮಾಡಿ, ಪುನಃ-ಮತ್ತು, ಆಗತ್ಯ-ಬಂದು, ರಾಮಸೇವಾಪರಃ-ರಾಮ-ಶ್ರೀರಾಮನ, ಸೇವಾ-ಸೇವೆಯಲ್ಲಿ, ಪರಃ- ಆಸಕ್ತನು, ಅಭವತ್-ಆದನು. ... ... ... ॥೮॥

ಮೂ॥ ತತಸ್ತು ಕಾಲೇಮಹತೀಪ್ರಯಾತೇರಾಮಂಸದಾಧರ್ಮಪಥೇಸ್ಥಿತಂಹರಿಂ । ದ್ರಷ್ಟುಂಸಮಾ

ಗಾದೃಷಿವೇಷಧಾರೀಕಾಲಸ್ತತೋಲಕ್ಷ್ಮಣಮಿತ್ಯುವಾಚ ... ॥೯॥

ಟೀ॥ ತತಃ-ಬಳಿಕ, ಮಹತೀ-ಬಹಳವಾದ, ಕಾಲೇತು-ಕಾಲವಾದರೆ, ಪ್ರಯಾತೇಸತಿ-ಕಳೆಯುತ್ತಿರಲಿಕಾಗಿ, ಸದಾ-ನಿರಂತರವು, ಧರ್ಮಪಥೇ-ಧರ್ಮಮಾರ್ಗದಲ್ಲಿ, ಸ್ಥಿತಂ-ಯಿರುತ್ತಿರುವ, ಹರಿಂ-ಶ್ರೀ ಮಹಾವಿಷ್ಣುಸ್ವರೂಪನಾದ, ರಾಮಂ-ಶ್ರೀರಾಮನನ್ನು, ದ್ರಷ್ಟುಂ-ನೋಡುವದಕ್ಕೋಸುಗ, ಕಾಲಃ-ಯಮನು, ಋಷಿವೇಷಧಾರೀ-ಋಷಿ-ಋಷಿಯ, ವೇಷ-ವೇಷವನ್ನು, ಧಾರೀ-ಧರಿಸಿದವನಾಗಿ, ಸಮಾಗಾತ್-ಬಂದನು, ತತಃ-ಬಳಿಕ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಇತಿ-ಈ ಪರಿಯಾಗಿ, ಉವಾಚ-ಪೇಳಿದನು. ... ... ... ॥೯॥

ಮೂ ॥ ನಿವೇದಯಸ್ವಾತಿಬಲಸ್ಯದೂತಂಮಾಂದ್ರಷ್ಟುಕಾಮಂಪುರುಷೋತ್ತಮಾಯ । ರಾ

ಮಾಯವಿಜ್ಞಾಪನಮಸ್ತಿತಸ್ಯಮಹರ್ಷಿಮುಖ್ಯಸ್ಯಚಿರಾಯಧೀಮನ್ ... ॥೧೦॥

ಟೀ ॥ ಧೀಮನ್-ಎಲೈ ಬುದ್ಧಿವಂತನೆ, ಅತಿಬಲಸ್ಯ-ಅತಿಸಾಮರ್ಥ್ಯವುಳ್ಳ, ಮಹರ್ಷಿಮುಖ್ಯಸ್ಯ-ಮಹರ್ಷಿಗಳೊಳಗೆ ಶ್ರೇಷ್ಠನಾದವನಿಗೆ, ದೂತಂ- ದೂತನಾದ, ದ್ರಷ್ಟುಕಾಮಂ-ನೋಡಲಿಚ್ಛೆಯುಳ್ಳ, ಮಾಂ-ನನ್ನನ್ನು, ಪುರುಷೋತ್ತಮಾಯ-ಪುರುಷಶ್ರೇಷ್ಠನಾದ, ರಾಮಾಯ-ಶ್ರೀರಾಮನಿಗೋಸ್ಕರ, ನಿವೇದಯಸ್ವ-ತಿಳಿಸು, ಚಿರಾಯ-ಬಹುಕಾಲಕ್ಕೋಸ್ಕರ, ವಿಜ್ಞಾಪನಂ-ತಿಳಿಸತಕ್ಕದ್ದು, ಅಸ್ತಿ-ಇದೆ, ಇತಿ-ಇಂತೆಂದು, ಉವಾಚ-ಪೇಳಿದನು ... ... ॥೧೦॥

ಮೂ॥ ತಸ್ಯತದ್ವಚನಂಶ್ರುತ್ವಾಸೌಮಿತ್ರಿಃತ್ವರಯಾನ್ವಿತಃ । ಆಚಚಕ್ಷೇಥರಾಮಾಯಸಸಂ
ಪ್ರಾಪ್ತಂತಪೋಧನಂ ... ... ॥೧೧॥

ಟೀ॥ ಸಸೌಮಿತ್ರಿಃ-ಆ ಲಕ್ಷ್ಮಣಸ್ವಾಮಿಯು, ತಸ್ಯ-ಆ ಋಷಿವೇಷಧಾರಿಯಾದ ಯಮನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ತ್ವರಯಾ-ವೇಗದಿಂದ, ಅನ್ವಿತಃ-ಕೂಡಿಕೊಂಡವನಾಗಿ, ಅಥ-ಬಳಿಕ, ರಾಮಾಯ-ಶ್ರೀರಾಮನಿಗೋಸುಗ, ತಪೋಧನಂ-ಋಷಿಯನ್ನು, ಸಂಪ್ರಾಪ್ತಂ-ಬಂದವನನ್ನಾಗಿ, ಆಚಚಕ್ಷೇ-ಹೇಳಿದನು ॥೧೧॥

ಮೂ॥ ಏವಂಬ್ರುವಂತಂಪ್ರೋವಾಚಲಕ್ಷ್ಮಣಂರಾಘವೋವಚಃ। ಶೀಘ್ರಂಪ್ರವೇಶ್ಯತಾಂತಾತಮು
ನಿಸ್ಸತ್ಕಾರಪೂರ್ವಕಂ ... ... ॥೧೨॥

ಟೀ॥ ರಾಘವಃ-ಶ್ರೀರಾಮನು, ಏವಂ-ಈ ಪರಿಯಾಗಿ, ಬ್ರುವಂತಂ-ಹೇಳುತಿರುವ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಹೇತಾತ-ಎಲೈ ತಂದೆಯೇ, ಮುನಿಃ- ಋಷಿಯು, ಸತ್ಕಾರಪೂರ್ವಕಂ-ಪೂಜಾಪುರಸ್ಸರವಾಗಿ,ಶೀಘ್ರಂ-ಜಾಗ್ರತೆಯಾಗಿ, ಪ್ರವೇಶ್ಯತಾಂ-ಪ್ರವೇಶಿಗಲ್ಪಡಲಿ,ಇತಿ-ಇಂತೆಂದು, ವಚಃ-ಮಾತನ್ನು, ಪ್ರೋವಾಚ-ಹೇಳಿದನು॥

ಮೂ॥ ಲಕ್ಷ್ಮಣಸ್ತುತಥೇತ್ಯುಕ್ತ್ವಾಪ್ರಾವೇಶಯತತಾಪಸಂ । ಸ್ವತೇಜಸಾಜ್ವಲಂತಂತಂ
ಘೃತಸಿಕ್ತಂಯಥಾನಲಂ ... ... ॥೧೩॥

ಟೀ॥ ಲಕ್ಷ್ಮಣಸ್ತು-ಲಕ್ಷ್ಮಣನಾದರೆ, ತಥೇತಿ-ಹಾಗೆಆಗಲೆಂದು, ಉಕ್ತ್ವಾ-ಹೇಳಿ, ಘೃತಸಿಕ್ತಂ-ತುಪ್ಪದಿಂ ನೆನಿಸಲ್ಪಟ್ಟ, ಅನಲಂಯಥಾ-ಅಗ್ನಿಯಂತೆ, ಸ್ವತೇಜಸಾ-ತನ್ನ ತೇಜಸ್ಸಿನಿಂದ, ಜ್ವಲಂತಂ-ಹೊಳೆಯುತಿರುವ, ತಂತಾಪಸಂ-ಆ ಋಷಿಯನ್ನು, ಪ್ರವೇಶಯತ-ಪ್ರವೇಶಮಾಡಿಸಿದನು. ॥೧೩॥

ಮೂ॥ ಸೋಭಿಗಮ್ಯರಘುಶ್ರೇಷ್ಠಂದೀಪ್ಯಮಾನಸ್ಸ್ವತೇಜಸಾ। ಮುನಿರ್ಮಧುರವಾಕ್ಯೇನವರ್ಧ
ಸ್ವೇತ್ಯಾಹರಾಘವಂ ... ... ॥೧೪॥

ಟೀ॥ ಸ್ವತೇಜಸಾ-ತನ್ನ ತೇಜಸ್ಸಿನಿಂದ, ದೀಪ್ಯಮಾನಃ-ಹೊಳೆಯುತಿರುವ, ಸಮುನಿಃ-ಆ ಋಷಿಯು, ರಘುಶ್ರೇಷ್ಠಂ-ರಘುವಂಶದಲ್ಲಿ ಶ್ರೇಷ್ಠನಾದ, ರಾಘವಂ- ಶ್ರೀರಾಮನಂ ಕುರಿತು, ಅಭಿಗಮ್ಯ-ಎದುರಾಗಿಬಂದು, ವರ್ಧಸ್ವೇತಿ-ವೃದ್ಧಿ ಹೊಂದೆಂದು, ಮಧುರವಾಕ್ಯೇನ-ಮನೋಹರವಾದ ಮಾತಿನಿಂದ, ಆಹ-ಹೇಳಿದನು ॥೧೪॥

ಮೂ|| ತಸ್ಮೈಸಮುನಯೇರಾಮಃಪೂಜಾಂಕೃತ್ವಾಯಥಾವಿಧಿ । ಪೃಷ್ಟ್ವಾನಾಮಯಮವ್ಯ
ಗ್ರೋರಾಮಃಪೃಷ್ಟೋಥತೇನಸಃ. ... ... ||೧೫||

ಟೀ|| ಅಥ-ಬಳಿಕ, ಸರಾಮಃ-ಆ ಶ್ರೀರಾಮನು, ಅವ್ಯಗ್ರಃ-ಸಾವಕಾಶವುಳ್ಳವನಾಗಿ, ತಸ್ಮೈಮುನಯೇ-ಆ ಋಷಿಗೋಸುಗ, ಪೂಜಾಂ-ಪೂಜೆಯನ್ನು, ಯಥಾವಿಧಿ-ಶಾಸ್ತ್ರೋಕ್ತ ಪ್ರಕಾರವಾಗಿ, ಕೃತ್ವಾ-ಮಾಡಿ, ಅಥ-ಬಳಿಕ, ತೇನ-ಆ ಋಷಿಯಿಂದ, ಅನಾಮಯಂ-ಕುಶಲವನ್ನು, ಪೃಷ್ಟಃ-ಕೇಳಲ್ಪಟ್ಟವನಾಗಿ, ಸರಾಮಃ- ಆ ಶ್ರೀರಾಮನು, ಅನಾಮಯಂ-ಆರೋಗ್ಯವನ್ನು, ಪೃಷ್ಟ್ವಾ-ಕೇಳಿ, ಪ್ರೋವಾಚ-ಮಾತನಾಡಿದನು. ||೧೫||

ಮೂ|| ದಿವ್ಯಾಸನೇಸಮಾಸೀನೋರಾಮಃಪ್ರೋವಾಚತಾಪಸಂ। ಯದರ್ಥಮಾಗತೋಸಿತ್ವಮಿ
ಹತತ್ಪ್ರಾಪಯಸ್ವಮೆ ... ... ||೧೬||

ಟೀ|| ದಿವ್ಯಾಸನೇ-ದೇವತಾಸಂಬಂಧವಾದ ಸಿಹ್ಮಾಸನದಲ್ಲಿ, ಸಮಾಸೀನಃ-ಕುಳಿತುಕೊಂಡಿರುವವನಾದ, ರಾಮಃ-ಶ್ರೀರಾಮನು, ತಾಪಸಂ- ಋಷಿಯಂಕುರಿತು, ಯದರ್ಥಂ-ಯಾವ ನಿಮಿತ್ತವಾಗಿ, ಆಗತಃ-ಬಂದವನು, ಅಸಿ-ಆದೆಯೋ, ಇಹ-ಈಗ, ಮೆ-ನನಿಗೆ, ತತ್-ಆ ಸ್ವಾಮಿವಾಕ್ಯವನ್ನು, ಪ್ರಾಪಯಸ್ವ-ಹೊಂದಿಸು ||೧೬||

ಮೂ || ವಾಕ್ಯೇನಚೋದಿತಸ್ತೇನರಾಮೇಣಾಹಮುನಿರ್ವಚಃ । ದ್ವಂದ್ವಮೇವಪ್ರಯೋಕ್ತವ್ಯ
ಮನಾಲಕ್ಷ್ಯಂತುತದ್ವಚಃ ... ... ||೧೭||

ಟೀ|| ತೇನರಾಮೇಣ-ಆ ಶ್ರೀರಾಮನಿಂದ, ವಾಕ್ಯೇನ-ಮಾತಿನಿಂದ, ಚೋದಿತಃ-ಪ್ರೇರಿಸಲ್ಪಟ್ಟ, ಮುನಿಃ-ಋಷಿಯು, ತದ್ವಚಃ-ಆ ನಮ್ಮಸ್ವಾಮಿಯಮಾತು, ದ್ವಂದ್ವಮೇವ- ಇಬ್ಬರಲ್ಲಿಯೇ, ಪ್ರಯೋಕ್ತವ್ಯಂ-ಹೇಳತಕ್ಕದ್ದು, ಅನಾಲಕ್ಷ್ಯಂ-ಮೂರನೇಪುರುಷನಿಂದ ನೋಡತಕ್ಕದ್ದಲ್ಲಾ, ಇತಿ-ಇಂತೆಂಬ, ವಚಃ-ಮಾತನ್ನು, ಆಹ-ಹೇಳಿದನು ||

ಮೂ|| ನಾನ್ಯೇನಚ್ಛ್ರೋತವ್ಯಂನಸ್ಥಾತವ್ಯಂಚಕಸ್ಯಚಿತ । ಶೃಣುಯಾದ್ವಾನಿರೀಕ್ಷೇದ್ವಾ
ಯಸ್ಸವಧ್ಯಸ್ತ್ವಯಾಪ್ರಭೊ ... ... ||೧೮||

ಟೀ|| ಏತತ್-ಈ ಮಾತು, ಅನೇನ-ಮತ್ತೊಬ್ಬನಿಂದ, ನಶ್ರೋತವ್ಯಂ-ಕೇಳತಕ್ಕದ್ದಲ್ಲಾ, ಕಸ್ಯಚಿತ್-ಯಾರಿಂದಲೂ, ನಸ್ಥಾತವ್ಯಂ-ಇರತಕ್ಕದ್ದಲ್ಲಾ, ಯಃ- ಯಾ

ಪೇನು, ಶೃಣುಯಾವ್ವಾ-ಕೇಳುತ್ತಾನೋ, ಸಿರೀಕ್ಷೇದ್ವಾ-ನೋಡಿದರೂ ಸರಿಯೆ, ಹೆಪ್ರಭೋ- ಎಲೈ ಸ್ವಾಮಿಯೇ, ಸಃ-ಆ ಪುರುಷನು, ತ್ವಯಾ-ನಿನ್ನಿಂದ, ವಧ್ಯಃ-ವಧಿಸಲ್ಪಡತಕ್ಕವನು. ... ... ... ... ॥೧೮॥

ಮೂ॥ ತಥೇತಿಚಪ್ರತಿಜ್ಞಾಯರಾಮೋಲಕ್ಷ್ಮಣಮಬ್ರವೀತ । ತಿಷ್ಠತ್ವಂದ್ವಾರಿಸೌಮಿತ್ರೆ
ನಾಯಾತ್ವತ್ರಜನೋರಹಃ ... ... ॥೧೯॥

ಟೀ॥ ರಾಮಃ-ಶ್ರೀರಾಮನು, ತಥೇತಿ-ಹಾಗೆ ಸರಿ ಎಂದು, ಪ್ರತಿಜ್ಞಾಯ-ಪ್ರತಿಜ್ಞೆಮಾಡಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯಂಕುರಿತು, ಅಬ್ರವೀತ್-ನುಡಿದನು, ಹೆ ಸೌಮಿತ್ರೇ-ಎಲೈ ಲಕ್ಷ್ಮಣನೆ, ತ್ವಂ-ನೀನು, ದ್ವಾರಿ-ಬಾಗಿಲಲ್ಲಿ, ತಿಷ್ಠ-ನಿಂತಿರು, ಅತ್ರ-ಇಲ್ಲಿ, ರಹಃ-ರಹಸ್ಯಸ್ಥಳವನ್ನು ಕುರಿತು, ಜನಃ-ಜನವು, ನಾಯಾತು-ಬರಬಾರದು॥

ಮೂ॥ ಯದ್ವಾಗಚ್ಛತಿಕೋವಾಪಿಸವಧ್ಯೋಮೆನಸಂಶಯಃ॥

ಟೀ॥ ಕೋವಾ-ಯಾವ್ವನಾದರೂ, ಆಗಚ್ಛತಿಯದಿ-ಬಂದವನಾದರೆ, ಮೆ-ನನಗೆ, ಸಃ-ಆ ಪುರುಷನು, ವಧ್ಯಃ-ವಧಿಸತಕ್ಕವನು, ನಸಂಶಯಃ-ಸಂಶಯವಿಲ್ಲಾ - ಇತಿ-ಇಂತೆಂದು, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಉವಾಚ-ಪೇಳಿದನು ... ... ॥೧೯॥

ಮೂ॥ ತತಃಪ್ರಾಹಮುನಿಂರಾಮೋಯೇನವಾತ್ವಂವಿಸರ್ಜಿತಃ । ಯತ್ತೆಮನೀಷಿತಂವಾಕ್ಯಂ
ತದ್ವದಸ್ವಮಮಾಗ್ರತಃ ... ... ॥೨೦॥

ಟೀ॥ ತತಃ-ಬಳಿಕ, ರಾಮಃ-ಶ್ರೀರಾಮನು, ಮುನಿಂ-ಋಷಿಯಂ ಕುರಿತು, ಯೇನವಾ-ಯಾರಿಂದ, ತ್ವಂ-ನೀನು, ವಿಸರ್ಜಿತಃ-ಕಳುಹಿಸಲ್ಪಟ್ಟೆ, ಯತ್- ಯಾವ, ತೆ-ನಿನಗೆ,ಮನೀಷಿತಂ-ಇಷ್ಟವಾದ, ವಾಕ್ಯಂ-ಮಾತೋ, ತತ್-ಆ ಮಾತನ್ನು, ಮಮ-ನನ್ನ, ಅಗ್ರತಃ-ಮುಂದುಗಡೆ, ವದಸ್ವ-ಪೇಳು, ಇತಿ-ಇಂತೆಂದು, ಪ್ರಾಹ-ಪೇಳಿದನು॥

ಮೂ॥ ತತಃಪ್ರಾಹಮುನಿರ್ವಾಕ್ಯಂಶೃಣುರಾಮಯಥಾತಥಂ । ಬ್ರಹ್ಮಣಾಪ್ರೇಷಿತೋಸ್ಮೀಶ
ಕಾರ್ಯಾರ್ಥೇತೆಂತಿಕಂಪ್ರಭೊ ... ... ॥೨೧॥

ಟೀ॥ ತತಃ-ಬಳಿಕ, ಮುನಿಃ-ಋಷಿಯು, ವಾಕ್ಯಂ-ಮಾತನ್ನು, ಪ್ರಾಹ-ಪೇಳಿದನು, ಹೆರಾಮ-ಎಲೈ ಶ್ರೀರಾಮನೆ, ಯಥಾತಥಂ-ಯಥಾರ್ಥವಾಗಿ, ಶೃಣು - ಕೇಳು, ಹೆಈಶ-ಎಲೈ ನಿಯಾಮಕನೆ, ಹೆ ಪ್ರಭೋ-ಎಲೈ ಸ್ವಾಮಿಯೇ, ತೆ-ನಿನ್ನ, ಅಂತಿಕಂ-ಸಮೀಪವಂಕುರಿತು, ಕಾರ್ಯಾರ್ಥೇ-ಒಂದುಕಾರ್ಯನಿಮಿತ್ತವಾಗಿ, ಬ್ರಹ್ಮಣಾ- ಬ್ರಹ್ಮದೇವರಿಂದ, ಪ್ರೇಷಿತಃ-ಕಳುಹಿಸಲ್ಪಟ್ಟವನು, ಅಸ್ಮಿ-ಆದೆನು. ... ... ॥೨೧॥

ಮೂ॥ ಅಹಂಹಿಪೂರ್ವಜೋದೇವತವಪುತ್ರಃಪರಂತಪ । ಮಾಯಾಸಂಗಮಜೋವೀರಕಾಲ
ಸ್ಸರ್ವಹರಸ್ಮೃತಃ ... ... ||೧೧½||

ಟೀ॥ ಹೇವೀರ-ಎಲೈ ಸ್ವಾಮಿಯೆ, ಹೇಪರಂತಪ-ಎಲೈ ಶತ್ರುಸಂಹಾರಕನೇ, ಹೇವೀರ-ಎಲೈಶೂರನೆ, ಅಹಂಹಿ-ನಾನಾದರೆ, ಮಾಯಾಸಂಗಮಜಃ-ಮಾಯಾಸಂಗಮದಿಂದ ಹುಟ್ಟಿದ, ತವ-ನಿನಗೆ, ಪೂರ್ವಜಃಪುತ್ರಃ-ದೊಡ್ಡಮಗನಾದ, ಸರ್ವಹರಃ-ಸಮಸ್ತವನ್ನು ನಾಶಗೊಳಿಸುತ್ತಿರುವ, ಕಾಲಃ-ಕಾಲಪುರುಷನಾಗಿ, ಸ್ಮೃತಃ-ಹೇಳಲ್ಪಟ್ಟವನು ॥

ಮೂ॥ ಬ್ರಹ್ಮಾತ್ವಾಮಾಹಭಗವಾನ್ಸರ್ವದೇವರ್ಷಿಪೂಜಿತಃ । ರಕ್ಷಿತುಂಸ್ವರ್ಗಲೋಕಸ್ಯಸ
ಮಯಸ್ತೇಮಹಾಮತೇ ... ... ||೧೩½||

ಟೀ॥ ಭಗವಾನ್-ಪೂಜ್ಯನಾದ, ಸರ್ವದೇವರ್ಷಿಪೂಜಿತಃ-ಸಮಸ್ತರಾದ ದೇವತೆಗಳಿಂದಲೂ ಋಷಿಗಳಿಂದಲೂ ಪೂಜಿಸಲ್ಪಟ್ಟ, ಬ್ರಹ್ಮಾ-ಬ್ರಹ್ಮದೇವರು, ತ್ವಾಂ-ನಿನ್ನನ್ನು ಕುರಿತು, ಆಹ-ಹೇಳಿದನು,ಹೇಮಹಾಮತೇ-ಎಲೈಬುದ್ಧಿಶಾಲಿಯೆ, ಸ್ವರ್ಗಲೋಕಸ್ಯ-ಸ್ವರ್ಗಲೋಕವನ್ನು,ರಕ್ಷಿತುಂ-ಸಂರಕ್ಷಿಸುವದಕ್ಕೋಸ್ಕರ,ತೇ-ನಿನಗೆ, ಸಮಯಃ-ಸಮಯವು.

ಮೂ॥ ಪುರಾತ್ವಮೇಕಏವಾಸೀಃಲೋಕಾನ್ಸಂಹೃತ್ಯಮಾಯಯಾ। ಭಾರ್ಯಯಾಸಹಿತಸ್ತ್ವಂ
ಮಾಮಾದೌಪುತ್ರಮಜೀಜನಃ ... ... ||೧೪½||

ಟೀ॥ ಪುರಾ-ಸೃಷ್ಟಿಗಿಂತಲೂ ಪೂರ್ವದಲ್ಲಿ, ಮಾಯಯಾ-ಮಾಯೆಯಿಂದ, ಲೋಕಾನ್-ಲೋಕಗಳನ್ನು, ಸಂಹೃತ್ಯ-ಉಪಸಂಹರಿಸಿಕೊಂಡು, ತ್ವಂ-ನೀನು, ಏಕಏವ-ಒಬ್ಬನೆ, ಆಸೀಃ-ಆಗಿದ್ದೆ, ಆದೌ-ಸೃಷ್ಟಿಯಾದಿಯಲ್ಲಿ, ತ್ವಂ-ನೀನು, ಭಾರ್ಯಯಾ-ಹೆಂಡತಿಯಾದಮಾಯೆಯಿಂದ, ಸಹಿತಃ-ಕೂಡಿದಂಥಾವನಾಗಿ, ಪುತ್ರಂ-ಮಗನಾದ, ಮಾಂ-ನನ್ನನ್ನು, ಅಜೀಜನಃ-ಹುಟ್ಟಿಸಿದೆ, .. .. ... ||೧೪½||

ಮೂ॥ ತಥಾಭೋಗವತಂನಾಗಂಅನಂತಮುದಕೇಶಯಂ।ಮಾಯಯಾಜನಯಿತ್ವಾತ್ವಂದ್ವೌ
ಸಸತ್ವೌಮಹಾಬಲೌ ||೧೫½|| ಮಧುಕೈಟಭಕೌದೈತ್ಯೌಹತ್ವಾಮೇದೋಸ್ಥಿಸಂಚಯಂ ||೧೬||
ಇಮಾಂಪರ್ವತಸಂಬದ್ಧಾಂಮೇದಿನೀಂಪುರುಷರ್ಷಭ ||೧೬½||

ಟೀ॥ ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ತಥಾ-ಹಾಗೆಯೆ, ಭೋಗವತಂ-ಶೇಷನೆಂಬ, ಉದಕೇಶಯಂ-ಉದಕದಲ್ಲಿ ಮಲಗಿರುವ, ಅನಂತಂ-ನಾಶವಿಲ್ಲದಿರುವ,

ನಾಗಂ-ಸರ್ವವನ್ನು, ಮಾಯಯಾ-ಮಾಯೆಯಿಂದ, ತ್ವಂ-ನೀನು, ಜನಯಿತ್ವಾ-ಹುಟ್ಟಿಸಿ, ಸತ್ತ್ವೌ-ಪರಾಕ್ರಮದಿಂದೊಡಗೂಡಿದ, ಮಹಾಬಲೌ - ಮಹಾಬಲಿಷ್ಠರಾದ, ಮಧುಕೈಟಭೌ-ಮಧುಕೈಟಭರೆಂಬ, ದೈತ್ಯೌ-ರಾಕ್ಷಸರನ್ನು, ಹತ್ವಾ-ಕೊಂದು, ಮೇದಃ-ಆ ರಾಕ್ಷಸರಮೇದಸ್ಸನ್ನು, ಅಸ್ಥಿಸಂಚಯಂ-ಎಲುಗಳ ಸಮುದಾಯವನ್ನು, ಪರ್ವತಸಂಬದ್ಧಾಂ-ಬೆಟ್ಟಗಳಿಂದ ಕಟ್ಟಲ್ಪಟ್ಟ, ಇಮಾಂಮೇದಿನೀಂ-ಈ ಭೂಮಿಯನ್ನಾಗಿ, ನಿರ್ಮಿತವಾನ್-ನಿರ್ಮಿಸಿದೆ ||೧೬||

ಮೂ॥ ಪದ್ಮೇದಿವ್ಯಾರ್ಕಸಂಕಾಶೇನಾಭ್ಯಾಮುತ್ಪಾದ್ಯಮಾಮಪಿ । ಮಾಂವಿಧಾಯಪ್ರಜಾ
ಧ್ಯಕ್ಷಂಮಯಿಸರ್ವಂನ್ಯವೇದಯತ ... ... ||೧೭||

ಟೀ॥ ನಾಭ್ಯಾಂ-ನಾಭಿಪ್ರದೇಶದಲ್ಲಿ, ದಿವ್ಯಾರ್ಕಸಂಕಾಶೇ-ದಿವ್ಯ-ಮನೋಹರವಾದ, ಅರ್ಕಸಂಕಾಶೇ-ಸೂರ್ಯನಿಗೆ ಸಮಾನವಾದ, ಪದ್ಮೇ-ಕಮಲದಲ್ಲಿ, ಮಾಂ- ನನ್ನನ್ನು, ಉತ್ಪಾದ್ಯ-ಹುಟ್ಟಿಸಿ, ಮಾಮಪಿ-ನನ್ನನ್ನೂ ಕೂಡ, ಪ್ರಜಾಧ್ಯಕ್ಷಂ-ಪ್ರಜೆಗಳಿಗೆಲ್ಲಾ ನಾಥನನ್ನಾಗಿ, ವಿಧಾಯ-ಮಾಡಿ, ಭವಾನ್-ನೀನು, ಮಯಿ-ನನ್ನಲ್ಲಿ, ಸರ್ವಂ-ಉತ್ಪತ್ತಿಪಾಲಕನಾದ ಸರ್ವಕಾರ್ಯವನ್ನು, ನ್ಯವೇದಯತ್-ಒಪ್ಪಿಸಿದೆ. ... ... ||೧೮||

ಮೂ॥ ಸೋಹಂಸಂಯುಕ್ತಸಂಭಾರಃತ್ವಾಮವೋಚಂಜಗತ್ಪತೇ ||೧೮||

ಟೀ॥ ಹೇ ಜಗತ್ಪತೇ-ಎಲೈ ಜಗನ್ನಿಯಾಮಕನೇ, ಸೋಹಂ-ಆ ಈನಾನು, ಸಂಯುಕ್ತಸಂಭಾರಃ-ವಹಿಸಲ್ಪಟ್ಟ ಜಗದ್ಭಾರವುಳ್ಳವನಾಗಿ, ತ್ವಾಂ-ನಿನ್ನನ್ನು ಕುರಿತು, ಅವೋಚಂ-ಹೇಳಿದೆನು. .. ... ... ||೧೯||

ಮೂ॥ ರಕ್ಷಾಂವಿಧತ್ಸ್ವಭೂತೇಭ್ಯೋಯೇಮೇವೀರ್ಯಾಪಹಾರಿಣಃ । ತತಸ್ತ್ವಂಕಶ್ಯಪಾಜ್ಜಾ
ತೋವಿಷ್ಣುರ್ವಾಮನರೂಪಧೃಕ್ ॥ ಹೃತವಾನಸಿಭೂಭಾರಂವಧಾದ್ರಕ್ಷೋಗಣಸ್ಯಚ । ಸರ್ವಾ
ಸೂತ್ಸಾರ್ಯಮಾಣಾಸುಪ್ರಜಾಸುಧರಣೀಧರ ... ... ||೨೦||

ಟೀ॥ ಹೇ ಧರಣೀಧರ-ಎಲೈಭೂಮಿಯಂಧ್ರುತ್ತವನೇ, ಯೇ-ಯಾರುಗಳು, ಮೇ-ನನ್ನ, ವೀರ್ಯಾಪಹಾರಿಣಃ- ಶಕ್ತಿಯನ್ನು ಅಪಹರಿಸುವರೋ, ತೇಭ್ಯಃ- ಅಂಥಾ, ಭೂತೇಭ್ಯಃ-ದುಷ್ಟಭೂತಗಳಿಂದ, ರಕ್ಷಾಂ-ರಕ್ಷಣೆಯನ್ನು, ವಿಧತ್ಸ್ವ-ಮಾಡು, ಇತಿ-ಇಂತೆಂದು, ತ್ವಾಂ-ನಿನ್ನನ್ನು ಕುರಿತು, ಅವೋಚಂ-ಹೇಳಿದೆನು, ತತಃ-ಬಳಿಕ, ವಿಷ್ಣುಃ-ವ್ಯಾಪಕಚೈತನ್ಯರೂಪನಾದ, ತ್ವಂ-ನೀನು, ವಾಮನರೂಪಧೃಕ್-ವಾಮನಾವತಾರವನ್ನು ವಹಿಸಿದವನಾಗಿ, ಕಶ್ಯಪಾತ್-ಕಶ್ಯಪಮಹಷಿಯದೆಸೆಯಿಂದ, ಜಾತಃ- ಹುಟ್ಟಿದವ

ನಾಗಿ, ಸರ್ವಾಸುಪ್ರಜಾಸು-ಸಮಸ್ತಪ್ರಜೆಗಳು, ಉತ್ಸಾರ್ಯಮಾಣಾಸು-ಮೂಲೋತ್ಪಾಟನಮಾಡಲ್ಪಟ್ಟವರಾಗಲಾಗಿ, ರಕ್ಷೋಗಣಸ್ಯಚ-ರಕ್ಕಸರ ಸಮುದಾಯದ, ವಧಾತ್-ಸಂಹಾರದ ದೆಸೆಯಿಂದ, ಭೂಭಾರಂ-ಭೂಭಾರವನ್ನು, ಹೃತವಾ-ಅಪಹರಿಸಿದಂಥಾವನು, ಅಸಿ-ಆದೆ. ॥೨೦॥

ಮೂ॥ ರಾವಣಸ್ಯವಧಾಕಾಂಕ್ಷೀಮರ್ತ್ಯಲೋಕಮುಪಾಗತಃ ॥ ದಶವರ್ಷಸಹಸ್ರಾಣಿದಶವ
ರ್ಷಶತಾನಿಚ ॥೨೧॥ ಕೃತ್ವಾವಾಸಸ್ಯಸಮಯಂತ್ರಿದಶೇಷ್ವಾತ್ಮನಃಪುರಾ ॥೨೧½॥

ಟೀ॥ ರಾವಣಸ್ಯ-ರಾವಣಾಸುರನ, ವಧಾಕಾಂಕ್ಷೀ-ಸಂಹಾರವನ್ನಪೇಕ್ಷಿಸಿದಂಥಾವನಾಗಿ, ಪುರಾ-ಪೂರ್ವದಲ್ಲಿ, ಆತ್ಮನಃ-ತನಿಗೆ, ತ್ರಿದಶೇಷು-ದೇವತೆಗಳಲ್ಲಿ, ವಾಸಸ್ಯ-ಭೂಲೋಕವಾಸಕ್ಕೆ, ದಶವರ್ಷಸಹಸ್ರಾಣಿ-ಹತ್ತುಸಹಸ್ರವರುಷಗಳು, ದಶವರ್ಷಶತಾನಿಚ-ಮತ್ತು ಸಾವಿರವರುಷಗಳು, ಸಮಯಂ-ಶಪಥವನ್ನು, ಕೃತ್ವಾ-ಮಾಡಿ, ಮರ್ತ್ಯಲೋಕಂ-ಮನುಷ್ಯಲೋಕವಂಕುರಿತು, ಉಪಾಗತಃ-ಬಂದವನಾದೆ ... ... ॥೨೧½॥

ಮೂ॥ ಸತೇಮನೋರಥಃಪೂರ್ಣಃಪೂರ್ಣೇಚಾಯುಷಿತೇನೃಷು । ಕಾಲಸ್ತಾಪಸರೂಪೇಣತ್ವ
ತ್ಸಮೀಪಮುಪಾಗಮಂ ... ... ॥೨೨॥

ಟೀ॥ ತೇ-ನಿನಗೆ, ಸಮನೋರಥಃ-ಆ ಮನೋರಥವು, ಪೂರ್ಣಃ-ಸಫಲವಾಯಿತು, ತೇ-ನಿನಿಗೆ, ನೃಷು-ಮನುಷ್ಯಲೋಕದಲ್ಲಿ, ಆಯುಷಿ-ಹನ್ನೊಂದುಸಾವಿರ ರೂಪವಾದ ಆಯುಸ್ಸು, ಪೂರ್ಣೇಚಸತಿ-ಸಂಪೂರ್ಣವಾದದ್ದಾಗುತಿರಲೀಕಾಗಿ, ಕಾಲಃ-ಕಾಲಸ್ವರೂಪನಾದ ನಾನು, ತ್ವತ್ಸಮೀಪಂ-ನಿನ್ನ ಸಮೀಪವಂಕುರಿತು, ತಾಪಸರೂಪೇಣ-ಋಷಿವೇಷದಿಂದ, ಉಪಾಗಮಂ-ಬಂದೆನು. ... ... ... ॥೨೨½॥

ಮೂ॥ ತತೋಭೂಯಶ್ಚತೇಬುದ್ಧಿಃಯದಿರಾಜ್ಯಮುಪಾಸಿತುಂ ॥ ತತ್ತಥಾಭವಭದ್ರಂತೇಏವ
ಮಾಹಪಿತಾಮಹಃ ... ... ॥೨೩½॥

ಟೀ॥ ತತಃ-ಆ ಕಾರಣದದೆಸೆಯಿಂದ, ತೇ-ನಿನಿಗೆ, ರಾಜ್ಯಂ-ರಾಜ್ಯಭಾರವನ್ನು, ಉಪಾಸಿತುಂ-ವಹಿಸುವದಕ್ಕೋಸುಗ, ಭೂಯಃ-ಮತ್ತು, ಬುದ್ಧಿಃ-ಮತಿಯು, ಅಸ್ತಿಯದಿ-ಇದ್ದದ್ದೇ ಆದರೆ, ತೇ-ನಿನಿಗೆ, ಭದ್ರಂ-ಮಂಗಳವು, ಅಸ್ತು-ಆಗಲೀ, ತತ್ತಥಾ-ಅದೇಪ್ರಕಾರವೆ, ಭವ-ಭೂಲೋಕದಲ್ಲಿಯೆ ಯಿರು ... ॥೨೩½॥

ಮೂ॥ ಯದಿತೇಗಮನೇಬುದ್ಧಿರ್ದೇವಲೋಕಂಜಿತೇಂದ್ರಿಯ । ಸನಾಥಾವಿಷ್ಣುನಾದೇವಾಃಭವಂ
ತುವಿಗತಜ್ವರಾಃ ... ... ... ॥೨೪॥

ಟೀ॥ ಹೆ ಜಿತೇಂದ್ರಿಯ-ಎಲೈ ಜೈಸಲ್ಪಟ್ಟ ಯಿಂದ್ರಿಯವ್ಯಾಪಾರವುಳ್ಳವನೇ, ತೇ-ನಿನಿಗೆ, ದೇವಲೋಕಂ-ದೇವಲೋಕವಂಕುರಿತು,ಗಮನೇ-ಪ್ರಯಾಣದಲ್ಲಿ, ಬುದ್ಧಿರ್ಯದಿ-ಬುದ್ಧಿಯುಂಟಾದ್ದೇ ಆದರೆ, ವಿಷ್ಣುನಾ-ವಿಷ್ಣುಸ್ವರೂಪನಾದ ನಿನ್ನಿಂದ, ದೇವಾಃ-ದೇವತೆಗಳು, ಸನಾಥಾಃ-ಸ್ವಾಮಿಯಿಂದೊಡಗೂಡಿದವರಾಗಿ, ವಿಗತಜ್ವರಾಃ-ಹೋಗಲಾಡಿಸಿದ ತಾಪಮುಳ್ಳವರಾಗಿ, ಭವಂತು-ಯಿರಲೀ, ಏವಂ-ಈಪರಿಯಾಗಿ, ಪಿತಾಮಹಃ-ಚತುರ್ಮುಖಬ್ರಹ್ಮನು, ಆಹ-ಹೇಳಿದನು. ॥೨೪॥

ಮೂ॥ ಚತುರ್ಮುಖಸ್ಯತದ್ವಾಕ್ಯಂಶ್ರುತ್ವಾಕಾಲೇನಭಾಷಿತಂ ॥ ಹರ್ಷರಾಮಸ್ತದಾವಾಕ್ಯಂ
ಕೃತ್ಸ್ನಸ್ಯಾಂತಕಮಬ್ರವೀತ್ ... ... ॥೨೫॥

ಟೀ॥ ತದಾ-ಆ ಕಾಲದಲ್ಲಿ, ರಾಮಃ-ಶ್ರೀರಾಮನು, ಕಾಲೇನ-ಯಮನಿಂದ, ಭಾಷಿತಂ-ನುಡಿಯಲ್ಪಟ್ಟ, ಚತುರ್ಮುಖಸ್ಯ-ಬ್ರಹ್ಮನ, ತದ್ವಾಕ್ಯಂ-ಆಮಾತನ್ನು, ಶ್ರುತ್ವಾ-ಕೇಳಿ, ಹರ್ಷ-ಸಂತೋಷವನ್ನುಳ್ಳವನಾಗಿ, ಕೃತ್ಸ್ನಸ್ಯ-ಸಮಸ್ತಪ್ರಪಂಚಕ್ಕೆ, ಅಂತಕಂ-ನಾಶಕರನಾದ ಯಮನನ್ನುಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು. ॥೨೫॥

ಮೂ॥ ಶ್ರುತಂತವವಚೋಮೇದ್ಯಮಮಾಪೀಷ್ಟಕರಂತುತತ್ ॥ ಸಂತೋಷಃಪರಮೋಜ್ಞೇಯಸ್ತ್ವ
ದಾಗಮನಕಾರಣಾತ್ ... ... ॥೨೬॥

ಟೀ॥ ಮೇ-ನನ್ನಿಂದ, ತವ-ನಿನ್ನ, ವಚಃ-ಮಾತು, ಶ್ರುತಂ-ಕೇಳಲ್ಪಟ್ಟಿತು, ಅದ್ಯ-ಈಗ, ಮಮಾಪಿ-ನನಿಗೂನು, ತತ್-ಆ ದೇವಲೋಕಗಮನವು, ಇಷ್ಟಕರಂ-ಬಹಳಯಿಷ್ಟವಾದದ್ದು, ತ್ವದಾಗಮನಕಾರಣಾತ್-ನಿನ್ನ ಆ ಗಮನನಿಮಿತ್ತದ ದೆಸೆಯಿಂದ, ಪರಮಃ-ಉತ್ಕೃಷ್ಟವಾದ, ಸಂತೋಷಃ-ಸಂತೋಷವು, ಜ್ಞೇಯಃ-ತಿಳಿದುಕೊಳ್ಳತಕ್ಕದ್ದು. ... ... ... ॥೨೬॥

ಮೂ॥ ತ್ರಯಾಣಾಮಪಿಲೋಕಾನಾಂಕಾರ್ಯಾರ್ಥಂಮಮಸಂಭವ॥ಭದ್ರಂತೇಸ್ತುಗಮಿಷ್ಯಾ
ಮಿಯತಏವಾಹಮಾಗತಃ ... ... ॥೨೭॥

ಟೀ॥ ತ್ರಯಾಣಾಂ-ಮೂರಾದ, ಲೋಕಾನಾಮಪಿ-ಲೋಕಗಳಿಗೂ, ಕಾರ್ಯಾರ್ಥಂ-ಪ್ರಯೋಜನನಿಮಿತ್ತವಾಗಿ, ಮಮ-ನನ್ನ, ಸಂಭವಃ-ಉತ್ಪತ್ತಿಯು, ತೇ-ನಿನಿಗೆ,

ಭದ್ರಂ-ಶುಭವು, ಅಸ್ತು-ಆಗಲೀ, ಅಹಂ-ನಾನು, ಯತೆಏವ-ಯಲ್ಲಿಂದಲೆ, ಆಗತಃ-ಬಂದೆನೋ, ತತಃ-ಅಲ್ಲಿಗೆ, ಆಗಮಿಷ್ಯಾಮಿ-ಬರುವೆನು. ... ||೩೮||

ಮೂ|| ಮನೋರಥಸ್ತು ಸಂಪ್ರಾಪ್ತೋ ನಮೇತಾಸ್ತಿ ವಿಚಾರಣಾ । ಮತ್ಸೇವಕಾನಾಂದೇವಾನಾಂ
ಸರ್ವಕಾರ್ಯೆಷುವೈಮಯಾ ॥ ಸ್ಥಾತವ್ಯಂಮಾಯಯಾಪುತ್ರ ಯಥಾಚಾಹಪ್ರಜಾಪತಿಃ ||೩೯||

ಟೀ|| ಮನೋರಥಸ್ತು-ಸಂಕಲ್ಪಗಳಾದರೆ, ಸಂಪ್ರಾಪ್ತಃ-ಹೊಂದಲ್ಪಟ್ಟಿತು, ಅತ್ರ-ಈ ಲೋಕದಲ್ಲಿ, ಮೇ-ನನಗೆ, ವಿಚಾರಣಾ-ವಿಚಾರಣಾಂಶಯು, ನಾಸ್ತಿ-ಇಲ್ಲ, ಹೇಪುತ್ರ-ಎಲೈಮಗನೆ, ಮಯಾ-ನನ್ನಿಂದ, ಮತ್ಸೇವಕಾನಾಂ-ನನ್ನಲ್ಲಿ ಭಕ್ತರಾದ, ದೇವಾನಾಂ-ದೇವತೆಗಳ, ಸರ್ವಕಾರ್ಯೆಷು- ಸಮಸ್ತಕಾರ್ಯಗಳಲ್ಲಿಯೂ, ಮಾಯಯಾ- ಪ್ರಕೃತಿಯಿಂದ, ಪ್ರಜಾಪತಿಃ-ಬ್ರಹ್ಮನು, ಯಥಾ-ಹ್ಯಾಗೆ, ಆಹ-ನುಡಿದಿರುವನೊ, ತಥಾ-ಹಾಗೆಯೇ, ಸ್ಥಾತವ್ಯಂ-ಇರತಕ್ಕದ್ದು. .... ||೩೯||

ಮೂ|| ಏವಂತಯೋಃಕಥಯತೋಃದುರ್ವಾಸಾಮುನಿರಭ್ಯಗಾತ್ । ರಾಜದ್ವಾರಂರಾಘವಸ್ಯ
ದರ್ಶನಾಪೇಕ್ಷಯಾದೃತಂ ... ... ||೪೦||

ಟೀ|| ಏವಂ-ಈಪರಿಯಾಗಿ, ತಯೋಃ-ಆ ಯಮ ಶ್ರೀರಾಮರು, ಕಥಯತೋಸ್ಸತೋಃ-ಮಾತುಗಳಾಡುವರಾಗುತಿರಲೀಕಾಗಿ, ದೂರ್ವಾಸಾಃ-ದೂರ್ವಾಸನೆಂಬ, ಮುನಿಃ-ಋಷಿಯು, ರಾಘವಸ್ಯ-ಶ್ರೀರಾಮನ, ದರ್ಶನಾಪೇಕ್ಷಯಾ-ದರ್ಶನದಲ್ಲಿ ಅಪೇಕ್ಷೆಯಿಂದ, ದೃತಂ-ಶೀಘ್ರವಾಗಿ, ರಾಜದ್ವಾರಂ-ಅರಮನೆಬಾಗಿಲನ್ನು ಕುರುತು, ಅಭ್ಯಗಾತ್-ಬಂದನು ... ... ... ||೪೦||

ಮೂ|| ಮುನಿರ್ಲಕ್ಷ್ಮಣಮಾಸಾದ್ಯದುರ್ವಾಸಾವಾಕ್ಯಮಬ್ರವೀತ್।ಶೀಘ್ರಂದರ್ಶಯರಾಮಂ
ಮೇಕಾರ್ಯಂಮತ್ಯಂತಮಾಹಿತಂ ... ... ||೪೧||

ಟೀ|| ದುರ್ವಾಸಾಃ-ದುರ್ವಾಸನೆಂಬಋಷಿಯು, ಲಕ್ಷ್ಮಣಂ-ಲಕ್ಷ್ಮಣನನ್ನು, ಆಸಾದ್ಯ-ಹೊಂದಿ, ರಾಮಂ-ಶ್ರೀರಾಮನನ್ನು, ಮೇ-ನನಗೆ, ಶೀಘ್ರಂ-ಜಾಗ್ರತೆಯಾಗಿ, ದರ್ಶಯ-ತೋರಿಸು, ಮೇ-ನನಗೆ, ಅತ್ಯಂತಂ-ಬಹಳವಾಗಿ, ಆಹಿತಂ – ಸಂಪಾದಿಸತಕ್ಕ, ಕಾರ್ಯಂ-ಕಾರ್ಯವು, ಅಸ್ತಿ – ಇಧೆ, ಇತಿ-ಇಂತೆಂದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು. ... ... ... ||೪೧||

ಮೂ|| ತಚ್ಛೃತ್ವಾಪ್ರಾಹಸೌಮಿತ್ರಿರ್ಮುನಿಂಜ್ವಲನತೇಜಸಂ॥ರಾಮೇಣಕಾರ್ಯಕಿಂತೇದ್ಯಕಿಂತೇ
ಭೀಷ್ಟಂಕರೋಮ್ಯಹಂ ... ... ||೪೨||

ಟೀ॥ ಸೌಮಿತ್ರಿಃ-ಲಕ್ಷ್ಮಣನು, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಜ್ವಲನತೇಜಸಂ-ಜ್ವಲನ-ಅಗ್ನಿಯ, ತೇಜಸಂ-ಪ್ರಕಾಶದಂತೆಪ್ರಕಾಶವುಳ್ಳ, ಮುನಿಂ-ಋಷಿಯಂಕುರಿತು, ತೇ-ನಿನಿಗೆ, ರಾಮೇಣ-ಶ್ರೀರಾಮನಿಂದ, ಕಾರ್ಯಂ-ಕಾರ್ಯವು, ಕಿಂ-ಯೇನು, ತೇ-ನಿನಿಗೆ, ಅಭೀಷ್ಟ-ಯಿಚ್ಛಯಿದ್ದದ್ದು, ಕಿಂ-ಯೇನು, ತತ್-ಆ ಕಾರ್ಯವನ್ನು, ಅದ್ಯ-ಈಗಲೇ, ಅಹಂ-ನಾನು, ಕರೋಮಿ-ಮಾಡುವೆನು. ... ... ... ॥೪೨॥

ಮೂ॥ ರಾಜಾಕಾರ್ಯಾಂತರೆವ್ಯಗ್ರೋಮುಹೂರ್ತಂಸಂಪ್ರತೀಕ್ಷ್ಯತಾಂ । ತಚ್ಛೃತ್ವಾಕ್ರೋಧಸಂತಪ್ತೋಮುನಿಸ್ಸೌಮಿತ್ರಿಮಬ್ರವೀತ ... ... ॥೪೩॥

ಟೀ॥ ರಾಜಾ-ಅರಸು, ಕಾರ್ಯಾಂತರೆ-ಮತ್ತೊಂದುವ್ಯಾಪಾರದಲ್ಲಿ, ವ್ಯಗ್ರಃ-ಆಸಕ್ತಚಿತ್ತನಾಗಿಧಾನೆ, ಮಹೂರ್ತಂ-ಎರಡುಘಳಿಗೆಕಾಲವು, ಸಂಪ್ರತೀಕ್ಷ್ಯತಾಂ-ನಿರೀಕ್ಷಿಸಲ್ಪಡಲೀ, ತತ್-ಆ ಲಕ್ಷ್ಮಣವಚನವನ್ನು, ಶ್ರುತ್ವಾ-ಕೇಳಿ, ಮುನಿಃ-ದುರ್ವಾಸಋಷಿಯು, ಕ್ರೋಧಸಂತಪ್ತಃ-ಕ್ರೋಧ-ಕೋಪದಿಂದ, ಸಂತಪ್ತಃ-ಪರಿತಪಿಸುತಿರುವನಾಗಿ, ಸೌಮಿತ್ರಿಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀತ್-ನುಡಿದನು ... ... ॥೪೩॥

ಮೂ॥ ಅಸ್ಮಿನ್ ಕ್ಷಣೇತುಸೌಮಿತ್ರೆನದರ್ಶಯಸಿಚೇದ್ವಿಭುಂ । ರಾಮಂಸವಿಷಯಂವಂಶಂಭಸ್ಮೀಕುರ್ಯಾನ್ನಸಂಶಯಃ ... ... ॥೪೪॥

ಟೀ॥ ಹೆಸೌಮಿತ್ರೇ-ಎಲೈ ಲಕ್ಷ್ಮಣಸ್ವಾಮಿಯೆ, ಅಸ್ಮಿನ್ ಕ್ಷಣೇ-ಈ ಕ್ಷಣದಲ್ಲ, ಪ್ರಭುಂ-ಧೊರೆಯಾದ, ರಾಮಂ-ಶ್ರೀರಾಮನನ್ನು, ನದರ್ಶಯಸಿಚೇತ್-ತೋರಿಸದೆಹೋದರೆ, ಸವಿಷಯಂ-ದೇಶಸಹಿತವಾಗಿ, ವಂಶಂ-ವಂಶವನ್ನು, ಭಸ್ಮೀಕುರ್ಯಾಂ-ಭಸ್ಮವಾಗಿ ಮಾಡುತ್ತೇನೆ, ನಸಂಶಯಃ-ಸಂಶಯುವಿಲ್ಲಾ. ... ॥೪೪॥

ಮೂ॥ ಶ್ರುತ್ವಾತದ್ವಚನಂಘೋರಮೃಷೆರ್ದುರ್ವಾಸಸೋಭೃಶಂ । ಸ್ವರೂಪಂತಸ್ಯವಾಕ್ಯಸ್ಯಚಿಂತಯಿತ್ವಾಸಲಕ್ಷ್ಮಣಃ ... ... ॥೪೫॥

ಟೀ॥ ಸಲಕ್ಷ್ಮಣಃ-ಆ ಲಕ್ಷ್ಮಣನು, ಭೃಶಂ-ಬಹಳವಾಗಿ, ಘೋರಂ-ಭಯಂಕರವಾದ, ದುರ್ವಾಸಸಃ-ದುರ್ವಾಸನೆಂಬ, ಋಷೇಃ-ಋಷಿಯ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ತಸ್ಯವಾಕ್ಯಸ್ಯ-ಆ ವಾಕ್ಯದ, ಸ್ವರೂಪಂ-ವಾಚ್ಯಾರ್ಥವನ್ನು, ವ್ಯಂಗ್ಯಾರ್ಥವನ್ನು, ಚಿಂತಯಿತ್ವಾ-ಆಲೋಚಿಸಿ. ... ॥೪೫॥

